

ಕರ್ತವ್ಯ ಪ್ರಜ್ಞೆಯನ್ನು ಮರೆತು ಸ್ವಾರ್ಥಕ್ಕಾಗಿ ಕುರ್ಚಿಗಾಗಿ ದೇಶದ ಸಂಪತ್ತನ್ನು ನಿರಂತರ ಲಪಟಾಯಿಸುತ್ತಿರುವ ಧೂರ್ತ ರಾಜಕಾರಣಿಗಳಿಂದಾಗಲಿ, ಭ್ರಷ್ಠ ಅಧಿಕಾರಿಗಳಿಂದಾಗಲಿ ರಾಷ್ಟ್ರೋಧ್ಧಾರ ಸಾಧ್ಯವಿಲ್ಲ. ಯಾವುದೇ ಹುದ್ದೆಯಿರಲಿ ಹಳ್ಳಿಗಳ ಮತ್ತು ಸಾಮಾನ್ಯ ಸಮಾಜದ ಏಳ್ಗೆಗಾಗಿ ಪ್ರಾಮಾಣಿಕತೆಯಿಂದ ದುಡಿದ ಶ್ರೀ ಕೆ.ಸಿ.ಪುಟ್ಟನರಸಯ್ಯನವರಂತ ಅಜ್ಞಾತ ಧುರೀಣರಿಂದ ದೇಶ ಪ್ರೇಮಿಗಳಿಂದ ಮಾತ್ರ ಸಾಧ್ಯ. ಅಂಥವರಿಂದಲೇ ಇನ್ನೂ ಈ ದೇಶ ಜೀವಂತವಾಗಿ ಉಳಿದಿರುವುದು. ಇವರು ಸರ್ಕಾರಿ ಹುದ್ದೆಯಿಂದ ನಿವೃತ್ತಿಯಾಗಿದ್ದರೂ ಸಮಾಜ ಸೇವೆಯಿಂದ ನಿವೃತ್ತರಾಗಿಲ್ಲ. ಆಗಬಾರದು, ಎಲ್ಲಿಯವರೆಗೆ ಈ ದೇಶ ಭ್ರಷ್ಟಾಚಾರದಿಂದ ವ್ಯಾಪ್ತವಾಗಿ, ಜನ ಕಂಗಾಲಾಗಿ ಕಣ್‌ಕಣ್ ಬಿಡುತ್ತದೆಯೋ ಅಲ್ಲಿಯ ತನಕ ಇಂಥ ಜನಸೇವಕರು ಕೊನೆಯುಸಿರಿರುವ ತನಕ ದುಡಿದರೆ ಮಾತ್ರ ದೇಶ ಉಳಿಯಬಹುದು.

ಯಾವಾಗಲೂ ಸತ್‌ಶಕ್ತಿಗಳಿಗಿಂತ ಅಸತ್ ಶಕ್ತಿಗಳ ಆರ್ಭಟವೇ ಹೆಚ್ಚು. ಈ ಅಸಮತೋಲನ ತೊಲಗಿಸಿದಾಗ ಮಾತ್ರ ಲೋಕಕ್ಷೇಮಸಾಧ್ಯ. ಈ ಅಸಮತೋಲನ ನಿವಾರಣೆಗಾಗಿ ಶ್ರೀ ಕೆ.ಸಿ.ಪುಟ್ಟನರಸಯ್ಯನವರಂತವರು ವಿಶ್ರಾಂತಿಯನ್ನಪೇಕ್ಷಿಸದೆ, ಶ್ರಮ ಜೀವನವನ್ನು ಲೆಕ್ಕಿಸದೆ ಮುಂದಿನ ಪೀಳಿಗೆಗೆ ಮಾರ್ಗ ದರ್ಶಕರಾಗಬೇಕಾಗಿದೆ.

■ ಡಾ||ದೇ.ಜವರೇಗೌಡ

# ಕೃತಾರ್ಥ

ಸಂಪಾದಕರು

ಡಾ|| ಸಾ. ಶಿ. ಮರುಳಯ್ಯ



ಪ್ರಕಾಶಕರು

ಕೆ. ಸಿ. ಪುಟ್ಟನರಸಯ್ಯ ಅಭಿನಂದನ ಸಮಿತಿ

172, ಮೊದಲನೇ ಮಹಡಿ, ಒಂದನೇ ಮುಖ್ಯರಸ್ತೆ, ಶೇಷಾದ್ರಿಪುರಂ

ಬೆಂಗಳೂರು–560 020

KRUTARTHA, a felicitation volume, Presented to Sri K. C. Puttanarasaiah, edited by Dr. S. S. Marulaiah, Published by Sri K. C. Puttanarasaiah Abhinandana Samiti, 172, I Main, Seshadripuram, Bangalore-20 ; No. of Pages 352+xvi ;

Price : Rs. 60/-

First Impression : 1993



ಬೆಲೆ : ಅರವತ್ತು ರೂಪಾಯಿಗಳು



ವರ್ಣಶಿಲ್ಪಿ : ಸುಧಾಕರ ದರ್ಭೆ

ಮುದ್ರಕರು :

ನೇತ್ರಾ ಪ್ರಿಂಟರ್ಸ್
ಚಾಮರಾಜಪೇಟೆ, ಬೆಂಗಳೂರು-560 018

4411

# ಕೆ. ಸಿ. ಪುಟ್ಟನರಸಯ್ಯ ಅಭಿನಂದನ ಸಮಿತಿ

172, ಮೊದಲನೇ ಮಹಡಿ, 1ನೇ ಮುಖ್ಯರಸ್ತೆ, ಶೇಷಾದ್ರಿಪುರಂ,
ಬೆಂಗಳೂರು-560 020

ಗೌರವಾಧ್ಯಕ್ಷರು :

ಶ್ರೀ ಕೆ. ಎಂ. ನಂಜಪ್ಪ

ಕಾರ್ಯಾಧ್ಯಕ್ಷರು :

ಶ್ರೀ ಜಿ. ಕೆ. ಶ್ರೀನಿವಾಸಯ್ಯ

ಸ್ವಾಗತಾಧ್ಯಕ್ಷರುಗಳು :

ಶ್ರೀ ಡಬ್ಲ್ಯು. ಎಚ್. ಹನುಮಂತಪ್ಪ
ಶ್ರೀ ಟಿ. ವಿ. ಮಾರುತಿ

ಉಪಾಧ್ಯಕ್ಷರುಗಳು :

ಶ್ರೀ ಕೆ. ಮುದ್ದಯ್ಯ
ಶ್ರೀ ಎನ್. ಆರ್. ಪಂಡಿತಾರಾಧ್ಯ
ಶ್ರೀ ಎನ್. ಎಂ. ಕೆ. ಸೋಗಿ
ಶ್ರೀ ಚಂದ್ರಶೇಖರ ರಾಜು ಎ. ಸಿ.
ಶ್ರೀ ಎಚ್. ಎನ್. ಮುದ್ದುಕೃಷ್ಣ
ಶ್ರೀ ಡಬ್ಲ್ಯು. ಪಿ. ಶಿವಕುಮಾರ್
ಶ್ರೀ ವಿ. ನಾರಾಯಣಸ್ವಾಮಿ
ಶ್ರೀ ಎಸ್. ವಿ. ಕೆ. ರಾಜನ್
ದೀನಬಂಧು ವಿ. ಆರ್. ನಾಯ್ಡು
ಶ್ರೀ ಎಂ. ಹನುಮಂತಯ್ಯ
ಶ್ರೀ ಎ. ಆರ್. ಆಚಾರ್ಯ
ಶ್ರೀ ಎಚ್. ದಾಸಪ್ಪ
ಶ್ರೀ ಮಾಸ್ತಿ ಚಂದ್ರಶೇಖರ್
ಶ್ರೀ ಪಿ. ಎನ್. ರಾಮಚಂದ್ರ
ಶ್ರೀ ರಾಮಚಂದ್ರೇಗೌಡ
ಶ್ರೀಮತಿ ಸಿ. ಪಿ. ಸರೋಜಾ ನಂಜಪ್ಪ
ಡಾ|| ಕೆಂಪಯ್ಯ
ಶ್ರೀ ಪಿ. ಆರ್. ಶ್ರೀರಂಗಯ್ಯ
ಶ್ರೀ ಜಿ. ಎಸ್. ಸೋಮಶೇಖರ್
ಶ್ರೀ ಜಿ. ತೋಟದಪ್ಪ
ಶ್ರೀ ಎಚ್. ಎಸ್. ರೇಣುಕಾ ಪ್ರಸಾದ್
ಶ್ರೀ ಡಬ್ಲ್ಯು. ಎಚ್. ಪುಟ್ಟಯ್ಯ
ಶ್ರೀ ಎಲ್. ಕೃಷ್ಣಮೂರ್ತಿ
ಡಾ|| ಎಸ್. ಜಿ. ಚಂದ್ರ
ಶ್ರೀ ಸಿ. ಪಿ. ಮೂಡಲಗಿರಿಯಪ್ಪ
ಶ್ರೀ ಎಸ್. ಸುರೇಂದ್ರ
ಶ್ರೀ ಎಚ್. ನರಸಿಂಹಯ್ಯ

ಕೋಶಾಧ್ಯಕ್ಷರು :

ಶ್ರೀ ಜಿ. ಎಸ್. ವೆಂಕಟರಾಜು

ಗೌ॥ ಕಾರ್ಯದರ್ಶಿ :

ಪ್ರೊ॥ ಕೆ. ಇ. ರಾಧಾಕೃಷ್ಣ

ಪ್ರಧಾನ ಕಾರ್ಯದರ್ಶಿ :

ಶ್ರೀ ಎಂ. ಶ್ರೀರಾಮಯ್ಯ

ಕಾರ್ಯದರ್ಶಿಗಳು :

ಶ್ರೀ ಎನ್. ಬೈರೇಗೌಡ
ಶ್ರೀ ಎಚ್. ಎನ್. ಶಿವಕುಮಾರ ಆರಾಧ್ಯ
ಶ್ರೀ ಎಂ. ಗೋಪಾಲಕೃಷ್ಣ
ಶ್ರೀ. ಎಂ. ಗುರುರಾಜ್

'ಕೃತಾರ್ಥ'

ಅಭಿನಂದನ ಗ್ರಂಥ ಸಂಪಾದಕ ಮಂಡಳಿ :

ಡಾ॥ ಸಾ. ಶಿ. ಮರುಳಯ್ಯ
ಶ್ರೀ ಅನ್ನದಾನಯ್ಯ ಪುರಾಣಿಕ
ಶ್ರೀ ಸಿ. ಕೆ. ಪರಶುರಾಮಯ್ಯ
ಡಾ॥ ಬಿ. ಎಸ್. ಸ್ವಾಮಿ
ಶ್ರೀ ಆರ್. ಬಸವರಾಜ್
ಶ್ರೀಮತಿ ಪ್ರೇಮಾ ಭಟ್
ಶ್ರೀಮತಿ ಜಯಮ್ಮ ಕರಿಯಣ್ಣ
ವಿದುಷಿ ಬಿ. ಎಸ್. ಚಂದ್ರಕಲಾ
ಡಾ॥ ಶಾಲಿನಿಪ್ರಭು
ಶ್ರೀ ಸ್ವಪ್ರಭಾನಂದ ಶರ್ಮ
ಶ್ರೀ ಕೆ. ಪಿ. ಮನೋಹರಯ್ಯ

'ಸಾರ್ಥಕ'

ನೆನಪಿನ ಸಂಚಿಕೆ ಸಂಪಾದಕ ಮಂಡಳಿ

ಡಾ॥ ನರಹಳ್ಳಿ ಬಾಲಸುಬ್ರಹ್ಮಣ್ಯ
ಶ್ರೀ ಟಿ. ಆರ್. ಮಹಾದೇವಯ್ಯ
ಶ್ರೀ ಹೀ. ಚಿ. ಶಾಂತವೀರಯ್ಯ
ಶ್ರೀ ಕೆ. ಪಿ. ಶಿವಲಿಂಗಯ್ಯ
ಶ್ರೀ ದೊಡ್ಡರಂಗೇಗೌಡ
ಶ್ರೀ ಎನ್. ಗೀತಾಚಾರ್ಯ

# ಕಾರ್ಯಾಧ್ಯಕ್ಷರ ನುಡಿ

ನನ್ನ ಹಿರಿಯಣ್ಣನವರಾದ ಶ್ರೀ ಜಿ. ಕೆ. ಚಿಕ್ಕನರಸಿಂಹಯ್ಯನವರು ಈ ದಿವಸ ಜೀವಂತರಾಗಿ ಇದ್ದ ಪಕ್ಷದಲ್ಲಿ ಅವರಿಗೂ ಸಹ 81 ವರ್ಷಗಳು ಆಗಿರುತ್ತಿತ್ತು. ಆದರೆ ದೈವನಿಯಾಮಕ ಅವರು ನಮ್ಮ ಮಧ್ಯೆ ಈ ದಿನ ಇಲ್ಲ. ತೆರವಾದ ಆ ಜಾಗವನ್ನು ನನ್ನ ಹಿರಿಯಣ್ಣನವರೇ ಆದ ಶ್ರೀ ಕೆ. ಸಿ. ಪುಟ್ಟನರಸಯ್ಯನವರು ತುಂಬಿಸಿಕೊಟ್ಟಿರುತ್ತಾರೆ. ನನ್ನ ಆರಾಧ್ಯ ದೈವ, ಕುಲದೈವ ಸಹ ಭಕ್ತ ಆಂಜನೇಯ ಮತ್ತು ಲಕ್ಷ್ಮೀನರಸಿಂಹಸ್ವಾಮಿ ದೇವರುಗಳು. ಶ್ರೀಮಾನ್ ಕೆ. ಸಿ. ಪುಟ್ಟನರಸಯ್ಯನವರಿಗೂ ಅದೇ ದೇವರುಗಳೇ ಆರಾಧ್ಯ ಕುಲದೈವಗಳು.

ಶ್ರೀಮಾನ್ ಕೆ. ಸಿ. ಪುಟ್ಟನರಸಯ್ಯನವರು ಮೈಸೂರು ಸಂಸ್ಥಾನದ ರಾಜರ್ಷಿ ಶ್ರೀ ಕೃಷ್ಣರಾಜ ಒಡೆಯರ್ ಮತ್ತು ಶ್ರೀ ಜಯಚಾಮರಾಜ ಒಡೆಯರ್‌ರವರ ಆಡಳಿತದ ಅವಧಿಯಲ್ಲಿ ಅಂದರೆ ನಮ್ಮ ಹಳೆಯ ಮೈಸೂರು ಸಂಸ್ಥಾನದ ಸುವರ್ಣ ಯುಗದ ಕಾಲದಲ್ಲಿ ಸರಕಾರಿ ಹುದ್ದೆಗೆ ನೇಮಕವಾಗಿ, ಕ್ರಮೇಣ ಉನ್ನತ ಸ್ಥಾನಕ್ಕೆ ಏರಿದವರು. ಆಗಿನ ಕಾಲದ ಅತ್ಯಂತ ಚಾಣಾಕ್ಷರಾದ ಸರ್. ಮಿರ್ಜಾ ಇಸ್ಮಾಯಿಲ್, ಶ್ರೀಮಾನ್ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್, ಶ್ರೀಮಾನ್ ನ್ಯಾಯಮೂರ್ತಿ ಮಾಧವರಾವ್ ಇವರುಗಳ ಆಡಳಿತ ದಕ್ಷತೆ, ಪ್ರಾಮಾಣಿಕ ದಕ್ಷತೆ ಮತ್ತು ಸಂಸ್ಥಾನದ ಉನ್ನತಿಗಾಗಿ ಅಹೋರಾತ್ರಿ ಚಿಂತಿಸುತ್ತಿದ್ದ ಸಮಯ. ಅಂತಹ ಕಾಲದಲ್ಲಿ ನಮ್ಮ ಕೆ. ಸಿ. ಪುಟ್ಟನರಸಯ್ಯನವರು ತಮ್ಮ ಸತ್ಯ, ನಿಷ್ಠೆ, ಸತ್ಯಸಂಧತೆ ಹಾಗೂ ಆಡಳಿತ ದಕ್ಷತೆಗಳನ್ನು ಪ್ರದರ್ಶಿಸಿ ಮುಂದೆ ಬಂದವರು.

ಅವರು ಸರ್ಕಾರಿ ನೌಕರಿಯಿಂದ ನಿವೃತ್ತಿಯಾದ ಸಮಯ ನಮ್ಮ ಅದೃಷ್ಟ ಕೂಡಿಬಂತು. ನಮ್ಮ ಶಿಕ್ಷಣ ಸಂಸ್ಥೆಯಲ್ಲಿ ಅವರನ್ನು ಕಾರ್ಯದರ್ಶಿಯನ್ನಾಗಿ ಚುನಾಯಿಸಬೇಕೆಂದು ನಿರ್ಧರಿಸಿದೆವು. ನಾವುಗಳು ಶ್ರೀಮಾನ್ ಕೆ. ಸಿ. ಪುಟ್ಟನರಸಯ್ಯನವರನ್ನು 1975ರಲ್ಲಿ ಆ ಸ್ಥಾನಕ್ಕೆ ಸ್ವಾಗತಿಸಿದೆವು. ಅದೂ ಸಹ ದೈವನಿಯಾಮಕವೇ. ಪ್ರಯುಕ್ತ ಅವರು ಸುಮಾರು 25 ವರ್ಷಗಳಿಂದ ಅಹೋರಾತ್ರಿ ನಮ್ಮ ಶಿಕ್ಷಣ ಸಂಸ್ಥೆಗಾಗಿ ತ್ರಿಕರಣ ಶುದ್ಧಿಯಿಂದ ದುಡಿದಿರುತ್ತಾರೆ. ಅದಕ್ಕಿಂತ ಹೆಚ್ಚಾಗಿ ಅವರಿಗೆ ದೇವರು ಪೂರ್ಣ ಆರೋಗ್ಯ, ಜ್ಞಾಪಕ ಶಕ್ತಿ ಮತ್ತು ಲವಲವಿಕೆಯನ್ನು ಪೂರ್ಣ ಪ್ರಮಾಣದಲ್ಲಿ ಕೊಟ್ಟಿರುತ್ತಾನೆ. ಅದು ನಮ್ಮ ಸಂಸ್ಥೆಯ ಭಾಗ್ಯವಿಶೇಷ.

ಇನ್ನು ಮುಂದೆಯೂ ಇವರ ಸೇವೆಯನ್ನು ಪೂರ್ಣವಾಗಿ ನಮ್ಮ ಸಂಸ್ಥೆಯು ಪಡೆದುಕೊಳ್ಳುವಂತೆ ಭಗವಂತನಲ್ಲಿ ಅನನ್ಯ ಭಾವದಿಂದ ಪ್ರಾರ್ಥಿಸುತ್ತೇವೆ.

ಈ ಸಮಯದಲ್ಲಿ ಅವರ ಸೇವೆಯನ್ನು ನೆನೆದು ಅವರೇ ಬರೆದಿರುವ ಆತ್ಮಚರಿತ್ರೆ ಮತ್ತು ಮೌಲಿಕ ಹಾಗೂ ಸಂಶೋಧನಾತ್ಮಕ ಲೇಖನಗಳ ಒಂದು ಸಂಭಾವನಾ ಗ್ರಂಥವನ್ನು **'ಕೃತಾರ್ಥ'** ಎಂಬ ಹೆಸರಿನಲ್ಲಿ ಹೊರ ತರುತ್ತಿದ್ದೇವೆ.

ಈ ದಿವಸ ಪರಮಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಸ್ವಾಮಿಗಳವರು, ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು ಮತ್ತು ಕನ್ನಡಮ್ಮನ ವರಪುತ್ರ ದೇ. ಜವರೇಗೌಡರವರ ಸಮ್ಮುಖದಲ್ಲಿ ಸಿದ್ಧಪಡಿಸಿರುವ **'ಕೃತಾರ್ಥ'** ಗೌರವ ಗ್ರಂಥವನ್ನು ಅರ್ಪಿಸಿ ಕೃತಾರ್ಥರಾಗುತ್ತಿದ್ದೇವೆ.

ನಮ್ಮ ಕೋರಿಕೆಗೆ ಓಗೊಟ್ಟು ಇಂದು ಸನ್ಮಾನ ಸ್ವೀಕರಿಸುತ್ತಿರುವ ಶ್ರೀ. ಕೆ. ಸಿ. ಪುಟ್ಟನರಸಯ್ಯನವರಿಗೆ, ನನ್ನನ್ನು ಸಮಾರಂಭದ ಕಾರ್ಯಾಧ್ಯಕ್ಷನನ್ನಾಗಿ ಮಾಡಿ ಮನ್ನಣೆಯ ಮಣೆ ಇತ್ತ ಅಭಿನಂದನ ಸಮಿತಿಯ ಅಧ್ಯಕ್ಷರು, ಕಾರ್ಯದರ್ಶಿಗಳು ಹಾಗೂ ಸಮಸ್ತ ಸನ್ಮಾನ್ಯ ಸದಸ್ಯರಿಗೆ ಅನಂತಾನಂತ ಪ್ರಣಾಮಗಳು.

೨೩-೯-೧೯೯೩ ಜಿ. ಕೆ. ಶ್ರೀನಿವಾಸಯ್ಯ

# ಸಂಪಾದಕರ ಮಾತು

ಮಮತೆಯೇ ಮೂರ್ತಿವೆತ್ತಂತಿರುವ ಶ್ರೀ ಕೊಡಿಗೇಹಳ್ಳಿ ಚಿಕ್ಕಣ್ಣ ಪುಟ್ಟನರಸಯ್ಯ ಇವರಿಗೆ ಇದೀಗ ಎಂಬತ್ತೊಂದು. ವ್ಯಕ್ತಿಯ ಜೀವನದಲ್ಲಿ ಅರವತ್ತು ಒಂದು ವಿಶಿಷ್ಟ ಘಟ್ಟ. ಅದನ್ನು ಷಷ್ಟ್ಯಬ್ಧಿ ಸಮಾರಂಭದ ಮೂಲಕ ಆಚರಿಸಿ ಆನಂದಿಸಿದರೆ, ಎಂಬತ್ತರ ಘಟ್ಟವನ್ನು ಅಮೃತೋತ್ಸವವೆಂದು ಅದ್ದೂರಿಯಿಂದ ಆಚರಿಸುವುದು ರೂಢಿ. ಇಂತಹ ಅಮೃತಸ್ಯಂದಿಯೂ ಆಪ್ಯಾಯನಕಾರಿಯೂ ಆದ ಆನಂದದ ಎಂಬತ್ತೊಂದರ ಹುಟ್ಟುಹಬ್ಬ ಅಥವಾ ಅಮೃತೋತ್ಸವವನ್ನು ಆಚರಿಸುವ ಭಾಗ್ಯವನ್ನು ಕರುಣಿಸಿದ್ದಾರೆ ನಮ್ಮೆಲ್ಲರ ಹಿರಿಯ ಅಣ್ಣ ಶ್ರೀ ಪುಟ್ಟನರಸಯ್ಯನವರು. ಇದನ್ನು ಸುಂದರವಾಗಿ ಅರ್ಥಪೂರ್ಣವಾಗಿ ಆಚರಿಸಬೇಕೆಂದು ಅವರ ಅಭಿಮಾನಿಗಳು ಹಿತ ಚಿಂತಕರು ಶ್ರೇಯೋಭಿಲಾಷಿಗಳು ಬಂಧು ಬಾಂಧವರು ಎಲ್ಲರೂ ಆಲೋಚಿಸಿ ಒಂದು ಸಮಾಲೋಚನ ಸಭೆ ಕರೆದರು. ಆ ಸಭೆಯು ಬೆಂಗಳೂರು ನಗರದ ಪಿತಾಮಹ ಭೀಷ್ಮ ಶ್ರೀ ಕೆ. ಎಂ. ನಂಜಪ್ಪನವರ ಅಧ್ಯಕ್ಷತೆಯಲ್ಲಿ ನಡೆದು ಅಭಿನಂದನ ಸಮಿತಿಯೊಂದನ್ನು ರಚಿಸಿತು. ಆ ಸಮಿತಿಯು ಅಕ್ಟೋಬರ್ ೧೦, ೧೯೯೩ ರಂದು ಶ್ರೀ ಕೆ. ಸಿ. ಪುಟ್ಟನರಸಯ್ಯನವರನ್ನು ಅಭಿನಂದಿಸಲು ತೀರ್ಮಾನಿಸಿ ಸಂದರ್ಭದ ಸುಸ್ಮೃತಿಯ ಕುರುಹಾಗಿ ಒಂದು ಔಚಿತ್ಯಪೂರ್ಣ ಅಭಿನಂದನ ಗ್ರಂಥವನ್ನು ಹೊರ ತರಲು ಆಲೋಚಿಸಿತು. ಕೃತಿಯೊಂದನ್ನು ಸಿದ್ಧಪಡಿಸುವ ಜವಾಬ್ದಾರಿಯನ್ನು ನನ್ನ ಹೆಗಲ ಮೇಲಿರಿಸಿ, ನನಗೆ ಸೇವೆಗೊಂದು ಅವಕಾಶ ಕಲ್ಪಿಸಿತು. ನಾನದನ್ನು ಸಂತೋಷ ದಿಂದಲೇ ಸ್ವಾಗತಿಸಿದೆ. ಶ್ರಮಪಟ್ಟು ಲೇಖನಗಳನ್ನು ನಾಡಿನ ಅನೇಕ ವಿದ್ವನ್ಮಣಿಗಳಿಂದ ಬೇಡಿ ಪಡೆದು ತಂದು ಈ ಬೃಹತ್ ಗ್ರಂಥವನ್ನು ಸಿದ್ಧಪಡಿಸಿದೆ. ಇದರಲ್ಲಿ ನನಗೆ ತೃಪ್ತಿ ಇದೆ, ಆನಂದ ಇದೆ.

ನಾನು ಪುಟ್ಟನರಸಯ್ಯನವರನ್ನು ಮೊದಲು ಕಂಡದ್ದು ೧೯೫೭ರ ಡಿಸೆಂಬರ್ ತಿಂಗಳು, ಚಿಕ್ಕನಾಯಕನಹಳ್ಳಿ ತಾಲ್ಲೂಕು ಶ್ರೀಮತ್ ಕುಪ್ಪೂರು ಗದ್ದಿಗೆ ಮಠದ ಜಾತ್ರೆಯಲ್ಲಿ. ಜಾತ್ರೆಯ ಅಂಗವಾಗಿ ಹಲವು ಬಗೆಯ ಸಾಂಸ್ಕೃತಿಕ ಕಾರ್ಯಕ್ರಮ ಗಳನ್ನು ಏರ್ಪಡಿಸಿದ್ದರು. ಅಂದಿನ ಗಣ್ಯ ಅತಿಥಿ ತಾಲ್ಲೂಕಿನ ಅಮಲ್ದಾರರಾಗಿ ಹೊಸದಾಗಿ ಬಂದಿದ್ದ ಶ್ರೀಮಾನ್ ಕೆ. ಸಿ. ಪುಟ್ಟನರಸಯ್ಯನವರು. ಅಂದು ನನ್ನ ಚೊಚ್ಚಲ ಕೃತಿ ಅಂದರೆ, ಮೊದಲ ಕವನ ಸಂಕಲನ 'ಶಿವತಾಂಡವ'ದ

ಬಿಡುಗಡೆ. ಬಿಡುಗಡೆ ಮಾಡಿದವರು ಶ್ರೀಮಾನ್ ಕೆ. ಸಿ. ಪುಟ್ಟನರಸಯ್ಯನವರು. ನಾನಿನ್ನೂ ಮೊದಲನೇ ಬಿ.ಎ. (ಆನರ್ಸ್) ತರಗತಿಯಲ್ಲಿ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಓದುತ್ತಿದ್ದೆ. ಪುಟ್ಟನರಸಯ್ಯನವರಿಗೆ ನನ್ನನ್ನು, ನನ್ನ ಕೃತಿಯನ್ನು ನೋಡಿ ಎಣೆ ಇಲ್ಲದ ಆನಂದ. "ಮಹಾಕವಿ ಕುವೆಂಪುರವರ ಮೆಚ್ಚಿನ ಶಿಷ್ಯ ಮರುಳಯ್ಯ ಈ ಚಿಕ್ಕವಯಸ್ಸಿನಲ್ಲಿ ಇಂತಹ ಉತ್ತಮ ಭಾವಗೀತ ಸಂಕಲನವನ್ನು ಹೊರತರುತ್ತಿರುವುದು ನಮಗೆಲ್ಲ ಹೆಮ್ಮೆ ತರುವ ವಿಷಯ. ಈತನ ಭವಿಷ್ಯ ಉಜ್ವಲವಾಗಲಿ" ಎಂದೆಲ್ಲ ಹರಸಿ ಹಾರೈಸಿದರು. ಅವರ ಆಶೀರ್ವಾದದಿಂದ ನಾನು ಸಾಹಿತ್ಯ ಕ್ಷೇತ್ರದಲ್ಲಿ ಕೈಲಾದಷ್ಟು ಕೃಷಿ ಮಾಡಿದೆ. ನನ್ನ ಚೊಚ್ಚಿಲ ಗ್ರಂಥವನ್ನು ಬಿಡುಗಡೆ ಮಾಡಿದ ಶ್ರೀ ಪುಟ್ಟನರಸಯ್ಯನವರಿಗೆ ಇಂದಿಗೆ ಎಂಬತ್ತೊಂದು. ನನ್ನ ಪುಸ್ತಕಗಳ ಸಂಖ್ಯೆಯೂ ಇಂದಿಗೆ ಎಂಬತ್ತೊಂದು ! ಇದು ಹಿರಿಯರಾದ ಶ್ರೀ ಪುಟ್ಟನರಸಯ್ಯನವರ ಆಶೀರ್ವಾದದ ಫಲ ಎಂದು ಹೇಳಿಕೊಳ್ಳಲು ಹೆಮ್ಮೆ ಎನಿಸಿದೆ.

ಅಧಿಕಾರ ಸ್ವೇಚ್ಛಾಚಾರದ ವೇದಿಕೆ ಅಲ್ಲ ; ಸೇವೆಯ ಕರ್ಮಭೂಮಿ. ಇದನ್ನರಿತು ನಡೆಯುವವರು ಕೆಲವೇ ಜನ. ಅಂತಹವರ ವಿರಳ ಪಂಕ್ತಿಯಲ್ಲಿ ಶ್ರೀಮಾನ್ ಪುಟ್ಟನರಸಯ್ಯನವರದು ಬಹು ದೊಡ್ಡ ಹೆಸರು. ಅವರು ಅಧಿಕಾರದಲ್ಲಿದ್ದಾಗ ಇಲ್ಲದಿದ್ದಾಗ, ಅಂದಿಗೆ, ಇಂದಿಗೆ ಎಂದೆಂದಿಗೆ—ಹಸಿದವರಿಗೆ ಅನ್ನವಾಗಿದ್ದಾರೆ, ದೀನರಿಗೆ ದಯೆಯಾಗಿದ್ದಾರೆ, ನೊಂದೆದೆಗೆ ಸೊದೆಯಾಗಿದ್ದಾರೆ. ಇದು ಅಭಿಮಾನದ ಅಥವಾ ಉತ್ಪ್ರೇಕ್ಷೆಯ ನುಡಿ ಅಲ್ಲ. ಅವರಿಂದ ಉಪಕೃತವಾದ ನೂರಾರು ಸಾವಿರಾರು ಜನರ ಬದುಕನ್ನು ನಿದರ್ಶನವಾಗಿ ಕೊಡಬಲ್ಲೆ. ಉದಾಹರಣೆಗೆ ಒಂದು ; ಅದು ನನ್ನ ಬೀಗರಿಗೆ ಸಂಬಂಧಿಸಿದ್ದು. ನನ್ನ ಪೂಜ್ಯ ಮಾವನವರು ಕುಪ್ಪೂರು ಗದ್ದಿಗೆ ಮಠದ ಏಜೆಂಟರು. ಅವರದಾಗಿ ತಾಳಿ ಅಗಲ ಆಸ್ತಿ ಇರಲಿಲ್ಲ. ಪುಟ್ಟನರಸಯ್ಯನವರು ಚಿಕ್ಕನಾಯಕನಹಳ್ಳಿಯಲ್ಲಿ ಅಮಲ್ದಾರರಾಗಿದ್ದಾಗ ಕುಪ್ಪೂರು ಗದ್ದಿಗೆ ಮಠಕ್ಕೆ ಭೇಟಿ ಕೊಟ್ಟರು. ಕಿರು ಆತಿಥ್ಯ ಆಯಿತು. ಆ ಮಾತು ಈ ಮಾತು ಬಂದು ನಮ್ಮ ಮಾವನವರ ಪೂರ್ವಾಪರ ವಿಚಾರಿಸಿದರು. ಅವರಿಗೆ ನಾಲ್ಕು ಗಂಡು, ಐದು ಹೆಣ್ಣು. ಮಠದಲ್ಲಿ ಬರೀ ಉಂಬಳ, ಸಂಬಳವಿಲ್ಲದ ಸೇವೆ. ಇದನ್ನು ಕಂಡ ಪುಟ್ಟನರಸಯ್ಯನವರಿಗೆ ನಮ್ಮ ಮಾವನವರ ಮೇಲೆ ಕನಿಕರ ಹುಟ್ಟಿತು. "ನೋಡಿ ರುದ್ರಯ್ಯನವರೆ, ನೀವು ದಯವಿಟ್ಟು ಈ ಅರ್ಜಿಗೆ ಸಹಿ ಹಾಕಿ. ನಿಮ್ಮ ಹತ್ತಿರದಲ್ಲಿರುವ ಹೆಸರಹಳ್ಳಿ ಬಳಿ ಹತ್ತು ಎಕರೆ ಸರ್ಕಾರಿ ಜಮೀನಿದೆ. ಅದನ್ನು ದರಖಾಸ್ತಿನಲ್ಲಿ ನಿಮಗೆ ಮಾಡಿಕೊಡುತ್ತೇನೆ. ಎಕರೆಗೆ ಹತ್ತು ರೂಪಾಯಿ ಕಿಮ್ಮತ್ತು ಕಟ್ಟಬೇಕು. ಹತ್ತು ಎಕರೆಗೆ ಒಂದು ನೂರು ರೂಪಾಯಿ. ದಯವಿಟ್ಟು ಕಟ್ಟಿ. ಇದು ನಿರ್ವಿಕಲ್ಪ ಸಮಾಧಿಯಲ್ಲಿರುವ ಕ್ಷೇತ್ರನಾಥ ಶ್ರೀ ಗುರು

ಮರುಳುಸಿದ್ಧೇಶ್ವರರಿಗೆ ನಾನು ಸಲ್ಲಿಸಿದ ಸೇವೆ ಎಂದು ಭಾವಿಸುತ್ತೇನೆ. ಈ ಮಠದ ಅಧಿಪತಿಗಳಾದ ಪರಮಪೂಜ್ಯರಾದ ಷ॥ ಬ್ರ॥ ಶ್ರೀ ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರಿಗೆ ನನ್ನ ಕೃತಜ್ಞತೆಯ ಕಾಣಿಕೆ ಎಂದು ಭಾವಿಸುತ್ತೇನೆ. ನೀವು ದಯವಿಟ್ಟು ಒಂದು ನೂರು ರೂಪಾಯಿಗಳನ್ನು ಹೇಗಾದರೂ ಮಾಡಿ ಕಟ್ಟಿ. ಪೂಜ್ಯ ಸ್ವಾಮೀಜಿಯವರನ್ನು ಕೇಳಿ. ಅವರು ಕೊಡದಿದ್ದರೆ ನನ್ನನ್ನು ಚಿಕ್ಕನಾಯ್ಕನ ಹಳ್ಳಿಗೆ ಬಂದು ಕಚೇರಿಯಲ್ಲಿ ಕಾಣಿ. ಸೂಕ್ತ ವ್ಯವಸ್ಥೆ ಮಾಡುತ್ತೇನೆ."

ಹೀಗೆ ಆಶ್ವಾಸನೆ ಇತ್ತರು ಶ್ರೀ ಪುಟ್ಟನರಸಯ್ಯನವರು. ಇದು ಬರಿಯ ಬಾಯ ಮಾತಲ್ಲ ಕಾರ್ಯತಃ ಮಾಡಿಯೂ ತೋರಿದರು. ನಮ್ಮ ಮಾವನವರ ಬಳಿ ಹಣ ಇರಲಿಲ್ಲ. ಪೂಜ್ಯ ಸ್ವಾಮೀಜಿಯವರು ಹಿಮವತ್ಕೇದಾರಕ್ಕೆ ಪ್ರವಾಸ ಹೋಗಿದ್ದರು. ಇಲ್ಲಿ ಹತ್ತು ಎಕರೆ ಫಲವತ್ತಾದ ಖಂಡವಾದ ಭೂಮಿಯ ಮೇಲೆ ನೂರೆಂಟು ಜನರ ಕಣ್ಣುಗಳು ಬಿದ್ದುವು. ಇದನ್ನರಿತ ಪುಟ್ಟನರಸಯ್ಯನವರು ಯಾರನ್ನೂ ಕೇಳದೆ, ಯಾರಿಗೂ ಕೇಳದೆ, ಯಾರಿಗೂ ಹೇಳದೆ ತಾವೇ ಒಂದು ನೂರು ರೂಪಾಯಿಗಳನ್ನು ಮಠದ ಏಜೆಂಟ್ ರುದ್ರಯ್ಯನವರ ಹೆಸರಿನಲ್ಲಿ ಖಜಾನೆಗೆ ಜಮಾ ಮಾಡಿ, ಅರ್ಜಿಯನ್ನು ಶಿಫಾರಸು ಮೂಲಕ ಮೇಲಕ್ಕೆ ಕಳುಹಿಸಿ, ಕೆಲವೇ ತಿಂಗಳುಗಳಲ್ಲಿ ಮಂಜೂರು ಚೀಟಿಯನ್ನು ಶ್ರೀ ರುದ್ರಯ್ಯನವರಿಗೆ ಕಳುಹಿಸಿ ಕೊಟ್ಟೇಬಿಟ್ಟರು. ಅವರಿತ್ತ ಆ ನೆಲ ಇಂದು ನಾಲ್ಕು ನೂರು ತೆಂಗಿನ ಮರಗಳುಳ್ಳ ಸೊಂಪಾದ ತೋಟವಾಗಿದೆ. ಶ್ರೀ ರುದ್ರಯ್ಯನವರ ಬಾಳಿಗೊಂದು ಆಸರೆಯಾಯಿತು. ಅವರು ದಿವಂಗತರಾದ ಮೇಲೆ ಅವರ ನಾಲ್ವರು ಮಕ್ಕಳು ಆ ಫಲ ಅನುಭವಿಸು ತ್ತಿದ್ದಾರೆ. ತಾವು ತಿನ್ನುವ ಪ್ರತಿ ತುತ್ತಿನಲ್ಲೂ ಶ್ರೀಮಾನ್ ಪುಟ್ಟನರಸಯ್ಯನವರ ಸ್ಮರಣೆ ಇರುತ್ತದೆ.

ಶ್ರೀ ಪುಟ್ಟನರಸಯ್ಯನವರು ಎಂಬತ್ತು ವಸಂತಗಳನ್ನು ಕಂಡು ಎಂಬತ್ತೊಂದಕ್ಕೆ ಕಾಲಿರಿಸುತ್ತಿದ್ದಾರೆ. ಬದುಕಿನುದ್ದಕ್ಕೂ ಅವರು ಎಲ್ಲೆಡೆಯೂ ಹಚ್ಚ ಹಸುರಿನ ಪಚ್ಚೆ ವಿತಾನದ ವಸಂತಗಳನ್ನೇ ಕಂಡರೆಂಬ ಅಭಿಪ್ರಾಯವಿಲ್ಲ. ಅವುಗಳ ಜೊತೆ ಜೊತೆಯಲ್ಲೇ ಗ್ರೀಷ್ಮಗಳನ್ನೂ ಗ್ರಹಿಸಿದ್ದಾರೆ ! ಬೇವು ಬೆಲ್ಲಗಳು ಸಹಜವಾಗಿ ಸಮಾನವಾಗಿದ್ದರೇನೇ ಅದು ಪೂರ್ಣ ಜೀವನ ಎನ್ನಿಸಿಕೊಳ್ಳುವುದು. ಅಂತಹ ಬಾಳಿನ ಜೀವರಸವನ್ನು ಸಮಪಾಲಾಗಿ ಸ್ವೀಕರಿಸಿ ಬೆಳೆದ ಚೇತನ ಶ್ರೀಮಾನ್ ಪುಟ್ಟನರಸಯ್ಯನವರದು. ಅವರು ತಮ್ಮ ಬದುಕಿನಲ್ಲಿ ಎಂದೆಂದಿಗೂ ಚೈತನ್ಯದ ಚೆಲುಮೆಯಾಗಿ, ಬೆಳೆದು ಬೆಳಕಾದವರು. ಅವರು ತಮ್ಮದೇ ಆದ ವಿಶಿಷ್ಟ ರೂಪದ ಸುಂದರ ಬದುಕು ಬದುಕಿ, ಅನ್ಯರಿಗೂ ಬದುಕು ಕೊಟ್ಟವರು. ಇವರು ನೂರ್ಕಾಲ ನಮ್ಮೊಡನಿರಲಿ, ನಮ್ಮೆಲ್ಲರನ್ನೂ ಆಶೀರ್ವದಿಸಲಿ ಎಂದು ಜಗನ್ಮಾತೆಯನ್ನು ಅನನ್ಯಭಾವದಿಂದ ಪ್ರಾರ್ಥಿಸಿಕೊಳ್ಳುತ್ತೇನೆ. ಅಂತೆಯೇ ಪುಟ್ಟನರಸಯ್ಯನವರ ಧರ್ಮಪತ್ನಿಯವರು ಶ್ರೀಮತಿ ಮೀನಾಕ್ಷಮ್ಮನವರು.

ಈ ತಾಯಿ ಸಾಕ್ಷಾತ್ ಅನ್ನಪೂರ್ಣೆ. 'ಪ್ರತಿಯೊಬ್ಬ ಪುರುಷನ ಪ್ರಗತಿಯ ಹಿಂದೆ ಓರ್ವ ಸ್ತ್ರೀ ಇರುತ್ತಾಳೆ' ಎಂಬ ನಾಣ್ಣುಡಿಗೆ ನಿದರ್ಶನವಾಗಿದ್ದಾರೆ ಶ್ರೀಮತಿ ಮೀನಾಕ್ಷಮ್ಮನವರು. ಇವರ ಪಾತಿವ್ರತ್ಯ, ವ್ರತ, ತಪಸ್ಸು ಪುಟ್ಟನರಸಯ್ಯನವರಿಗೆ ಶಕ್ತಿ ಸತ್ವಗಳನ್ನು ತುಂಬಿವೆ. ಈ ತಾಯಿಯ ಕುಂಕುಮ ಸೌಭಾಗ್ಯ ಚಿರಾಯುವಾಗಲಿ ಎಂದು ಹಾರೈಸುತ್ತೇನೆ.

ಇಂದು ಎಂಬತ್ತೊಂದರ ಅಮೃತ ಮಹೋತ್ಸವವನ್ನು ನೆರವೇರಿಸುತ್ತಿರುವ ನಮಗೆ ಶತಮಾನೋತ್ಸವವನ್ನು ಮಾಡುವ ಪುಣ್ಯಾವಕಾಶವನ್ನು ನಮ್ಮ ಹಿರಿಯಣ್ಣ ಶ್ರೀ ಪುಟ್ಟನರಸಯ್ಯನವರು ಕರುಣಿಸಲಿ, ಅದನ್ನು ಅನುಗ್ರಹಿಸಿ ಆಶೀರ್ವದಿಸಲಿ ಎಂದು ಜಗನ್ಮಾತೆಯನ್ನು ಪ್ರಾರ್ಥಿಸಿಕೊಳ್ಳುತ್ತೇನೆ.

ಶ್ರೀ ಪುಟ್ಟನರಸಯ್ಯನವರಂತಹ ವಿಶಿಷ್ಟ ಹಾಗೂ ವಿಶುದ್ಧಮನಸ್ಕರನ್ನು ಗೌರವಿಸುವುದು ನಮ್ಮ ಗೌರವವನ್ನು ನಾವೇ ಹೆಚ್ಚಿಸಿಕೊಂಡಂತೆ. ಇಂತಹ ಸ್ತುತ್ಯ ಕಾರ್ಯಕ್ರಮವನ್ನು ಆಲೋಚಿಸಿ ಹಮ್ಮಿಕೊಂಡ ಅಭಿನಂದನ ಸಮಿತಿಯವರು ನಿಜಕ್ಕೂ ಅಭಿನಂದನಾರ್ಹರು. ಶ್ರೀಮಾನ್ ಕೆ. ಎಂ. ನಂಜಪ್ಪನವರ ಭುಜಬಲವಾಗಿ ಸಹಕರಿಸುತ್ತಿರುವ ಶ್ರೀ ಜಿ. ಕೆ. ಶ್ರೀನಿವಾಸಯ್ಯನವರು, ಶ್ರೀ ಡಬ್ಲ್ಯು. ಹೆಚ್. ಹನುಮಂತಪ್ಪನವರು, ಶ್ರೀ ಟಿ. ವಿ. ಮಾರುತಿಯವರು ಇನ್ನೂ ಮೊದಲಾದವರ ಶುಭಕಾಮನೆಗಳು ನಮಗೆ ಶಕ್ತಿ ಸ್ಫೂರ್ತಿ ಎಲ್ಲ ಕೊಟ್ಟಿವೆ, ಕೊಡುತ್ತಿವೆ. ಅವು ಅನಂತವಾಗಲಿ ಎಂದು ಆಶಿಸುತ್ತೇನೆ.

ಲೇಖನಗಳನ್ನು ಕೊಟ್ಟು ಸಹಕರಿಸಿದ ಎಲ್ಲ ಬರಹಗಾರ ಬಂಧು ಭಗಿನಿಯರಿಗೆ, ಸಕಾಲದಲ್ಲಿ ಸಂದೇಶಗಳನ್ನಿತ್ತ ಹಿರಿಯರಿಗೆ ಪೂಜ್ಯರಿಗೆ ಸಕಲ ಸತ್ ಚೇತನಗಳಿಗೆ ಸಹಸ್ರ ಸಹಸ್ರ ಪ್ರಣಾಮಗಳು.

ನನ್ನೊಡನೆ ತುಂಬಾ ಸಹಕರಿಸಿದವರು ಮಿತ್ರರಾದ ಶ್ರೀ ಎಂ. ಶ್ರೀರಾಮಯ್ಯನವರು. ಇವರು ನನ್ನ ತಮ್ಮನಲ್ಲದೆ ಬೇರೆ ಅಲ್ಲ ಎಂಬ ಭಾವನೆ ನನ್ನದು. ನನಗೆ ಬೆಂಬಲಿಗರಾಗಿ ನಿಂತವರು ಸಂಪಾದಕ ಮಂಡಳಿಯ ಸದಸ್ಯರು. ಅಂದವಾಗಿ ಮುದ್ರಿಸಿ ಕೊಟ್ಟವರು ನೇತ್ರಾ ಪ್ರಿಂಟರ್ಸ್‌ನ ಶ್ರೀ ಪಟುನಿಧರ್ಮಯ್ಯ ಮತ್ತು ಶ್ರೀ ವೈ. ಎಂ. ರಾಜುರವರು, ವರ್ಣಶಿಲ್ಪಿ ಶ್ರೀ ಸುಧಾಕರ ದರ್ಭೆ, ನನ್ನನ್ನು ಕೇಳಿದೆಡೆಗೆ ಕರೆದೊಯ್ದ ಮಿತ್ರ ಸಿ. ನಾಗರಾಜ್—ಇವರೆಲ್ಲರಿಗೂ ನನ್ನ ಕೃತಜ್ಞತೆಗಳು.

ರಾಗಿಣಿ
೧-೧೦-೧೯೯೬

**ಸಾ. ಶಿ. ಮರುಳಯ್ಯ**

ಚಿಟ್ಟೆಡಕೆ ಚಿಗುರೆಲೆಯು ಪುಟ್ಟ ಬಾಳೆಯುಹಣ್ಣು
ಕಟ್ಟಕ್ಕರ ಉಡುಗೊರೆ ಸಲಿಸಿ ಹರಸೇವು
ಪುಟ್ಟನರಸಣ್ಣ ನೂರ್ಕಾಲ ಇರಲೆಂದು ||

ಅಣ್ಣ ಪುಟ್ಟನರಸಯ್ಯನವರ

ಅಮೃತೋತ್ಸವ ಸಂದರ್ಭದ ಸುಸ್ಮೃತಿಯ ಕುರುಹಾಗಿ

– ಈ ಉಡುಗೊರೆ –

# ಪರಿವಿಡಿ

## III ಅನುರಕ್ತಿ :

## IV ಅನುಬಂಧ :







ದಿ॥ ಶ್ರೀ ಚಿಕ್ಕಣ್ಣನವರು

(ಕೆ. ಸಿ. ಪುಟ್ಟನರಸಯ್ಯನವರ ತಂದೆ)



ದಿ॥ ಶ್ರೀಮತಿ ಬೈರಮ್ಮನವರು

(ಕೆ. ಸಿ. ಪುಟ್ಟನರಸಯ್ಯನವರ ತಾಯಿ)



ಸೋದರಮಾವ: ದಿ|| ಲಿಂಗಣ್ಣನವರು



ದಿ|| ಮರಿಯಮ್ಮನವರು

(ಕೆ. ಸಿ. ಪುಟ್ಟನರಸಯ್ಯನವರ ಸಹೋದರಿ)



ದಿ|| ಮಲ್ಲಮ್ಮನವರು
(ಕೆ. ಸಿ. ಪುಟ್ಟನರಸಯ್ಯನವರ ಧರ್ಮಪತ್ನಿ)



ದಿ|| ಕೆ. ಎಲ್. ಪುಟ್ಟಯ್ಯನವರು
(ಮೊದಲನೆ ಅಳಿಯ)



ದಿ|| ಶ್ರೀ ಕೆ. ಪಿ. ಹನುಮಂತಯ್ಯನವರು

(ಕೆ. ಪಿ. ಪುಟ್ಟನರಸಯ್ಯನವರ ಅಣ್ಣ)



ಪರಮಪೂಜ್ಯ ಚಂದ್ರಶೇಖರ ಸ್ವಾಮಿಗಳೊಂದಿಗೆ

(ಕುಪ್ಪೂರು ಗದ್ದೆಯ ಮಠ, ಚಿಕ್ಕನಾಯಕನ ಹಳ್ಳಿ)



ಶ್ರೀ ಕೆ. ಸಿ. ಪುಟ್ಟನರಸಯ್ಯ ದಂಪತಿಗಳು



ಕುಟುಂಬ ಪ್ರೇಮಿ ಪುಟ್ಟನರಸಯ್ಯನವರು



ಶಿರೋಮಣಿ ಪ್ರಶಸ್ತಿ ಸ್ವೀಕಾರ



ಕರ್ನಾಟಕ ರತ್ನ, ಪದ್ಮಶ್ರೀ ಡಾ. ರಾಜ್‌ಕುಮಾರ್ ಅವರೊಂದಿಗೆ



ಜ್ಞಾನಪೀಠ ಪ್ರಶಸ್ತಿ ವಿಜೇತ ಕನ್ನಡ ಸಾಹಿತ್ಯ ಲೋಕದ ದಿಗ್ಗಜ ಡಾ. ಶಿವರಾಮಕಾರಂತರೊಂದಿಗೆ



ಚಟುವಟಿಕೆಯ ಕೇಂದ್ರ ಬಿಂದು ಶ್ರೀ ಜಿ. ಕೆ. ಶ್ರೀನಿವಾಸಯ್ಯ ಅವರೊಂದಿಗೆ ಚರ್ಚೆಯಲ್ಲಿ



ಸಮಾಲೋಚನೆಯ ಸಂದರ್ಭದಲ್ಲಿ




ಶಿಕ್ಷಣ ಸಚಿವ ಶ್ರೀ ಎಸ್. ಎಂ. ಯಾಹ್ಯಾ ಮತ್ತು ಡಾ. ಯು. ಆರ್. ಅನಂತಮೂರ್ತಿಯವರೊಂದಿಗ



ಕ್ರಿಯಾಶೀಲ ಕಿರಿಯರೊಂದಿಗೆ



ಕೃತಾರ್ಥ ಅಭಿನಂದನ ಗ್ರಂಥದ ಸಂಪಾದಕರಾದ ಡಾ. ಸಾ. ಶಿ. ಮರುಳಯ್ಯನವರೊಂದಿಗೆ



ಪದ್ಮಶ್ರೀ ಡಾ. ಎಂ. ಸಿ. ಮೋದಿಯವರೊಂದಿಗೆ



ಹುಟ್ಟೂರಿನಲ್ಲಿ ಕಟ್ಟಿಸಿದ ದೇವಸ್ಥಾನ



ಹುಟ್ಟೂರಿನಲ್ಲಿ ಕಟ್ಟಿಸಿದ ದೇವಸ್ಥಾನ



ಈ ನೆಲದ ಮಗ ನಾನು



ನನ್ನೂರು ನನ್ನ ಜನವೆಂದರೆ ಅಮಿತ ಪ್ರೀತಿ



ವ್ಯವಸಾಯದ ಬಗ್ಗೆ ಚಿಂತನೆ, ಸಮಾಲೋಚನೆ




ತಮ್ಮ ಗ್ರಾಮದಲ್ಲಿ ಯುವಕರಿಗೆ, ರೈತರಿಗೆ, ಉತ್ಸಾಹ ತುಂಬಿ ಸಂಘಟಿಸುತ್ತಿರುವುದು



ತಮ್ಮ ಗ್ರಾಮದ ಯುವಕ ರೈತ ಸಂಘದವರಿಂದ ಸನ್ಮಾನ



ತುಂಬು ಸಂಸಾರಿ ಪುಟ್ಟನರಸಯ್ಯನವರು



1967-68 ರಲ್ಲಿ M.A.S. ಅಸೋಸಿಯೇಷನ್ ನ ಕಾರ್ಯದರ್ಶಿಯಾಗಿದ್ದಾಗ

# ನಾನು ಮತ್ತು ನನ್ನ ಊರು

ಕೊಡಿಗೇಹಳ್ಳಿ ಯಾವ ಭೂಪಟದಲ್ಲೂ ಕಾಣಸಿಗದ ಒಂದು ಸಣ್ಣಹಳ್ಳಿ. 'ದಕ್ಷಿಣ ಕಾಶಿ' ಎಂದು ಪ್ರಸಿದ್ಧವಾಗಿರುವ ಶಿವಗಂಗೆಯ ನೈರುತ್ಯದಲ್ಲಿ ತನ್ನ ಪಾಡಿಗೆ ತಾನಿದೆ. ಇಲ್ಲಿಂದ ಈ ಬೆಟ್ಟ ಮಲಗಿರುವ ಬಸವಣ್ಣನಂತೆ ಕಂಗೊಳಿಸುತ್ತದೆ. ಇದೇ ಬೆಟ್ಟ ಪಶ್ಚಿಮಕ್ಕೆ ಲಿಂಗಾಕಾರವಾಗಿ ಉತ್ತರಕ್ಕೆ ವಿಘ್ನೇಶ್ವರಾಕಾರವಾಗಿ ಮತ್ತು ದಕ್ಷಿಣಕ್ಕೆ ಸರ್ಪಾಕಾರವಾಗಿಯೂ ಕಾಣುವಂತಹ ಪ್ರಕೃತಿ ವೈಚಿತ್ರ್ಯವನ್ನು ಗಳಿಸಿದೆ. ಇದೊಂದು ಪುಣ್ಯ ಕ್ಷೇತ್ರ. ಗಂಗಾಧರೇಶ್ವರನ ಸನ್ನಿಧಿ ; ಈ ಪುಣ್ಯ ಭೂಮಿಯ ತಪ್ಪಲಿನಲ್ಲೂ ಕೊಡಿಗೇಹಳ್ಳಿ ಇಲ್ಲ. ಹಳ್ಳಿಯ ಆಸುಪಾಸಿನಲ್ಲಿ ಎಲ್ಲೂ ಯಾವ ಗುರುತಿಸುವ ಪವಿತ್ರ ಸ್ಥಳ ಇಲ್ಲ. ಈ ಗ್ರಾಮದ ಪಶ್ಚಿಮಕ್ಕೆ "ಮಣಿಪುರ" ಎಂಬ ಒಂದು ರಾಜ್ಯವಿತ್ತಂತೆ. ಅದೇ ಈಗಿನ ಮಣ್ಣೆ ಗಂಗರ ರಾಜಧಾನಿಯಾಗಿತ್ತು. ಗಂಗರು ಮೊದಲು ಕುಳವಾಲಪುರ (ಕೋಲಾರ) ಅನಂತರ ಮಣ್ಣೆ ತದನಂತರ ತಲಕಾಡುಗಳನ್ನು ತಮ್ಮ ರಾಜಧಾನಿ ಗಳನ್ನಾಗಿಸಿಕೊಂಡರು. "ಮಣ್ಣೆ" ಈ ಪಟ್ಟಣ ನಾಶವಾಗಿರಬಹುದು. ಕಾರಣ ಆ ಊರಿನ ಬೂದಿಮಣ್ಣು ಬೆಳೆಗೆ ಬಹಳ ಪ್ರಸಿದ್ಧವಾದದು. ಪಕ್ಕದ ಹಳ್ಳಿ ಯವರೆಲ್ಲಾ ಅದನ್ನೇ ಗೊಬ್ಬರವಾಗಿ ಬಹಳ ವರ್ಷಗಳು ಉಪಯೋಗಿಸಿದ್ದುಂಟು. ನಾನು ಕೂಡ ಚಿಕ್ಕಂದಿನಲ್ಲಿ ಅಲ್ಲಿಂದ ಎತ್ತಿನ ಗಾಡಿಗಳಲ್ಲಿ ಆ ಮಣ್ಣನ್ನು ನಮ್ಮ ಹೊಲಕ್ಕೆ ಹೊಡೆದಿರುತ್ತೇನೆ. ಬೆಳೆ ಹುಲುಸಾಗಿ ಚೆನ್ನಾಗಿ ಬರುತ್ತಿತ್ತು. ಈಗ ಅದೂ ನಿಂತೂ ಹೋಗಿದೆ. ಮಣ್ಣೆಯ ಬೂದಿ ಗೊಬ್ಬರಕ್ಕಿಂತಲೂ ಉತ್ತಮ ಎಂದು ಈಗಲೂ ಹೇಳು ತ್ತಾರೆ. ಪೂರ್ವಕ್ಕೆ ಸುಮಾರು ಹನ್ನೆರಡು ಕಿಲೋಮೀಟರ್ ದೂರದಲ್ಲಿ 'ಹುಲು ಕಡಿ ಬೆಟ್ಟವಿದೆ. ಹಿಂದೆ ಇಲ್ಲೊಂದು ಋಷಿಗಳ ಆಶ್ರಮವಿತ್ತೆನ್ನುತ್ತಾರೆ. ರಾಜರುಗಳ ಪಾಳೇ ಪಟ್ಟು, ಕೋಟೆ ಕೊತ್ತಲ ಇತ್ತೆನ್ನುತ್ತಾರೆ. ಈಗ ಏನೂ ಇಲ್ಲ, ವೀರಭದ್ರ ದೇವಾಲಯ ಒಂದನ್ನು ಬಿಟ್ಟರೆ. ಈ ಊರಿನ ಹತ್ತಿರದಲ್ಲೇ ಹುಲಿಕುಂಟೆ ಎಂಬ ಊರಿದೆ ಬೇಟೆರಾಯ ಸ್ವಾಮಿಯ ದೇವಾಲಯವಿದೆ. ವರ್ಷಕ್ಕೊಮ್ಮೆ 'ದೊಡ್ಡ ಬೇಟೆ' ಆಗುತ್ತದೆ. ಹತ್ತಾರು ಹಳ್ಳಿಗಳಿಂದ ಕೊಡ್ಲಿ, ದೊಣ್ಣೆ ಹಿಡಿದ ಜನ ತಮ್ಮ ತಮ್ಮ ಊರಿನ ಬೇಟೆನಾಯಿಗಳ ಜೊತೆ ಬೇಟೆಯಾಡಿಕೊಂಡು ಬಂದು ಜನ ಹತ್ತಿರದ ಒಂದು ಮಂಟಪದ ಬಯಲಲ್ಲಿ ಸೇರುತ್ತಾರೆ. ಹುಲಿಕುಂಟೆಯಿಂದ 'ಬೇಟೆರಾಯ' (ರಂಗನಾಥಸ್ವಾಮಿ) ಬರುತ್ತಾನೆ. ದಿನ ಪೂರ್ತಿ ಜಾತ್ರೆ ನಡೆಯುತ್ತದೆ. ಪ್ರತಿಯೊಂದು ಹಳ್ಳಿಯಿಂದಲೂ ಗಾಡಿಯಲ್ಲಿ ತಂದು ಜನರು ಪಾನಕ ಪನಿವಾರ ನಡೆಸುತ್ತಾರೆ. ನನ್ನ ಚಿಕ್ಕಂದಿನಲ್ಲಿ ಅದ್ದೂರಿಯಾಗಿ ನಡೆಯುತ್ತಿದ್ದ ಜಾತ್ರೆ ಈಗ ಸಾಧಾರಣವಾಗಿ ನಡೆಯುತ್ತಿದೆ.

ಇವುಗಳ ಜೊತೆಗೆ ಕೊಡಿಗೇಹಳ್ಳಿಯ ನಂಟು ಅಷ್ಟಕಷ್ಟೆ. ಈ ಊರಿಗೆ ಬಸ್ಸಿನ ಸೌಕರ್ಯವೂ ಇಲ್ಲ. ರೈಲಿನ ಸೌಕರ್ಯವೂ ಅಷ್ಟೆ. ದೊಡ್ಡಬೆಲೆಯಲ್ಲಿ ರೈಲು ಇಳಿದು 3 ಕಿ.ಮೀ. ನಡೆಯಬೇಕು. ಹುಲಿಕುಂಟೆಯಲ್ಲಿ ಬಸ್ಸು ಇಳಿದು ಮೂರು ಕಿ.ಮೀ. ನಡೆದು ಬರಬೇಕು. ಒಂದು ಸಣ್ಣ ಪ್ರೈಮರಿ ಸ್ಕೂಲು ಮಾತ್ರ ಇದೆ. ಮಾಧ್ಯಮಿಕ ಶಾಲೆಗೆ ಹೋಗಬೇಕಾದರೆ ಏಳು ಕಿಲೋಮೀಟರ್ ದೊಡ್ಡಬೆಲೆ ಹುಲಿಕುಂಟೆ ಗ್ರಾಮ ಹಾದು ಹೋಗಬೇಕು. ಹೀಗೆ ಏನೇನೂ ಸೌಕರ್ಯವಿಲ್ಲದ ಒಂದು ಕುಗ್ರಾಮ ಕೊಡಿಗೇಹಳ್ಳಿ. ಆದರೂ ಇಲ್ಲಿ ಜನ ಬದುಕುತ್ತಾರೆ, ಬಾಳುತ್ತಾರೆ, ಬಾನೆತ್ತರಕ್ಕೆ ಬೆಳೆಯುತ್ತಾರೆ ಅಲ್ಲವೆ?

ಇದು ನನ್ನೂರು. ನನ್ನ ನೆಚ್ಚಿನ ಊರು. ನನ್ನನ್ನು ಬದುಕಿಸಿದ ಊರು, ನಾನು ಆಟವಾಡಿದ ಬೆಳೆದ ಊರು. ನನಗೆ ತಂದೆ ತಾಯಿ, ಬಂಧು–ಬಳಗ, ಸ್ನೇಹಿತ ಪರಿಚಿತರನ್ನು ಕೊಟ್ಟ ಊರು. ಅಲ್ಲಿ ಬೆಳೆದ ಅನ್ನ ತಿಂದಿದ್ದೇನೆ, ಗಾಳಿ ಸೇವಿಸಿದ್ದೇನೆ. ನೀರು ಕುಡಿದಿದ್ದೇನೆ. ಇದು ಎಷ್ಟೇ ಕುಗ್ರಾಮವಾದರೂ ನನಗೆ ಸುಂದರ ತಾಣ, ಸುಖದ ಗಣಿ. ಇಲ್ಲಿಯ ನೆಲ–ಜಲ, ಮರ–ಗಿಡ, ಹೂವು–ಹಣ್ಣು, ಪಕ್ಷಿ–ಪ್ರಾಣಿಗಳನ್ನು ಪರಿಚಯಿಸಿ ನೂರಾರು ಭಾವನೆಗಳನ್ನು, ಕನಸುಗಳನ್ನು, ಬಣ್ಣಗಳನ್ನು ಮೂಡಿಸಿದ ಈ ಹಳ್ಳಿ, ಕೊಡಿಗೇಹಳ್ಳಿ ನನ್ನ ಹೆಮ್ಮೆಯ ತವರು. ಯಾರಿಗೆ ಆಗಲಿ "ಹುಟ್ಟಿದ ಊರು ಜನ್ಮ ಕೊಟ್ಟ ತಾಯಿ ತುಂಬಾ ಪವಿತ್ರ. ಅವನ್ನು ಸದಾ ನನ್ನ ಗಮನದಲ್ಲಿಟ್ಟುಕೊಂಡು ನನ್ನ ಜೀವನ ಸಾಗಿಸುತ್ತಿದ್ದೇನೆ.

ಈ ನನ್ನೂರಿನ ಜೀವಾಳ ಒಂದು ಹಳ್ಳ. ಈಗ ಅದು ಒಂದು ಕೆರೆಯಾಗಿದೆ. ಒಂದು ಹದ ಮಳೆ ಬಿದ್ದರೆ ಸಾಕು ತುಂಬುತ್ತದೆ. ಹಾಗೆಯೇ ಇನ್ನೊಮ್ಮೆ ಮಳೆ ಬರುವ ಹೊತ್ತಿಗೆ ಬರಿದಾಗಿರುತ್ತದೆ. ಈ ಹಳ್ಳದ ತಪ್ಪಲಿನಲ್ಲೇ ನಮ್ಮ ಹಳ್ಳಿಯ ರೈತರೆಲ್ಲರೂ ಬೆಳೆ ಬೆಳೆಯುತ್ತಾರೆ. ಇದು ನಮ್ಮೂರಿನ ಜೀವ ನದಿ. ನೀರಿನೊಂದಿಗೆ ಮರಳೂ ಹರಿದು ಬಂದು ಪಡ ಬಹಳ ಬೇಗ ಕೋಡಿಯಾಗುತ್ತದೆ. ತುಂಬಿದ ಕೆರೆ ಬೇಗ ಬೇಗ ಬರಿದಾಗುತ್ತಿದ್ದರೂ ಈ ಕೆರೆ ಬತ್ತಿರುವುದನ್ನು ನಾನು ನೋಡಿಲ್ಲ. ಈ ಕೆರೆಯ ತಪ್ಪಲಿನಲ್ಲಿ ಸದಾ ಹಸಿರಿನ ಬಯಲಿರುತ್ತದೆ. ಹೀಗಿದ್ದರೂ ಯಾವತ್ತು ನಮ್ಮೂರಿನ ಜನ ಭತ್ತದ ಬೆಳೆಯನ್ನು ಕಳೆದುಕೊಂಡಿಲ್ಲ.

ನಮ್ಮೂರು ಯಾವುದೇ ಹೊರಗಿನ ಜನ ಸಂಪರ್ಕವಿಲ್ಲದ ಹಳ್ಳಿಯಾದ್ದರಿಂದಲೋ ಏನೋ ಹಳ್ಳಿಯ ಹೆಣ್ಣು ಮಕ್ಕಳು ಹೂವು ಮುಡಿಯುತ್ತಿರಲಿಲ್ಲ ; ಹೌದು. ನನಗೂ ಇದು ಆಶ್ಚರ್ಯ, ಆದರೆ ಬಾಲ್ಯದಲ್ಲಿ ನಾನಿದನ್ನು ಕಂಡಿದ್ದೇನೆ. ಅಪ್ಪಿತಪ್ಪಿ ಹೂ ಮುಡಿದರೆ ಅವರನ್ನು ಹಿರಿಯರು ಹಂಗಿಸುತ್ತಿದ್ದರು, ಬಜಾರಿ ಎಂದು ಹೀಯಾಳಿಸುತ್ತಿದ್ದರು. ಅದು ಈಗ ಇಲ್ಲ. ಎಲ್ಲರೂ ದುಡಿಯುವ ರೈತರ ಮಕ್ಕಳಾಗಿದ್ದರು. ಗಂಡಸರಿಗೆ ಸರಿಸಮನಾಗಿ ತಾವು ದುಡಿದು ವ್ಯವಸಾಯದಲ್ಲಿ ತೊಡಗುತ್ತಿದ್ದರು. ಇಂಥ ಗರತಿಯರು

'ಗರತಿಯ ಹಾಡು'ಗಳನ್ನು ನಾನು ಹೊಲ-ಗದ್ದೆಗಳ ಬದುಗಳ ಮೇಲೆ ಆಲಿಸಿದ ಆ ದಿನಗಳನ್ನು ಆಗಾಗ್ಗೆ ನೆನಪಿಸಿಕೊಳ್ಳುತ್ತಿರುತ್ತೇನೆ.

ನಮ್ಮ ಊರು ಚಿಕ್ಕದಾದರೂ ಬೆಳೆಯುವ ಬಯಲು ದೊಡ್ಡದು, ಬೆಳೆಯುವ ಜನ ದೊಡ್ಡವರು. ಊರು ಸದಾ ಹಸುರಿನ ನೆಲೆಯಾಗಿ, ತಂಪಾಗಿ ಇರುತ್ತಿತ್ತು. ರಸ್ತೆಯಿಂದ ಊರಿನ ಕಡೆ ನಡೆದು ಹೋಗುವಾಗ ಅತ್ತ ಇತ್ತ ತೊನೆಯುವ ಹೊಲಗದ್ದೆಗಳು, ತೋಟ ಕಣ್ಣಿಗೆ ಆನಂದವನ್ನು ತರುತ್ತವೆ. ಎತ್ತರವಾಗಿ ಬೆಳೆದು ನಿಂತಿರುವ ಗಿಡ-ಮರ ತಣ್ಣನೆಯ ಗಾಳಿಯನ್ನು ಹೊತ್ತು ತರುತ್ತವೆ.

'ದೇವರಿಲ್ಲದ ಊರಿಲ್ಲ' ಎಂಬ ಮಾತಿದೆ. ನಮ್ಮೂರೂ ಅದಕ್ಕೆ ಹೊರತಲ್ಲ. ಪುರಾತನ ಆಂಜನೇಯಸ್ವಾಮಿಯ ದೇವಾಲಯ ಒಂದಿದೆ. ಈ ದೇವರ ಅಭಯ ಹಸ್ತ ನಮ್ಮೂರಿನ ಜನರ ಮೇಲಿದೆ ಎಂದೇ ನಮ್ಮೂರಿನ ನಂಬಿಕೆ. ಭಯ ಭಕ್ತಿಯಿಂದ ಜನ ದೇವರಿಗೆ ನಡೆದುಕೊಳ್ಳುತ್ತಾರೆ. ಯಾವುದೇ ಮೊದಲ ಬೆಳೆಯಾದರೂ ಅದರ ಒಂದು ಪಾಲು ದೇವರಿಗೆ ಸಲ್ಲುತ್ತಿರುತ್ತದೆ. ಹಬ್ಬ ಹರಿದಿನಗಳಂದು ದೇವತಾರಾಧನೆಯಲ್ಲಿ ತೊಡಗಿ ತಮ್ಮ ಭಕ್ತಿಯನ್ನು ವ್ಯಕ್ತಪಡಿಸುತ್ತಾರೆ. 'ಕಾಯುವವನು ದೇವನಿದ್ದಾನೆ' ಎಂದು ಕೈಕಟ್ಟಿ ಕೂರುವವರಲ್ಲ ನನ್ನೂರಿನ ಜನ, ಸೋಮಾರಿಗಳಲ್ಲ. ಕಷ್ಟಪಟ್ಟು ಬೆವರು ಸುರಿಸಿ ದುಡಿಯುತ್ತಾರೆ. ಆದರೂ ನನ್ನೂರು ಶ್ರೀಮಂತರೂರಲ್ಲ, ನನ್ನೂರಿನಲ್ಲಿ ಶ್ರೀಮಂತರಿಲ್ಲ.

ಈ ನನ್ನೂರಿನಲ್ಲಿ ಒಂದೇ ಒಂದು ದೊಡ್ಡ ಮನೆಯಿತ್ತು, ಅದನ್ನು 'ಯಜಮಾನಪ್ಪನವರ ಮನೆ' ಎಂದು ಕರೆಯುತ್ತಿದ್ದರು. ಈ ಯಜಮಾನಪ್ಪನವರೇ ನನ್ನ ತಂದೆ ಚಿಕ್ಕಣ್ಣನವರು. ಚಿಕ್ಕಣ್ಣ ಹೆಸರಿನಲ್ಲಿ ಮಾತ್ರ ಚಿಕ್ಕಣ್ಣನವರೇ ಹೊರತು, ಎತ್ತರದಲ್ಲಿ ಗಾತ್ರದಲ್ಲಿ ತೂಕದಲ್ಲಿ ದೊಡ್ಡಣ್ಣನವರೇ : ತೂಕ ಎನ್ನುವಾಗ ದೇಹದ ತೂಕವೊಂದೇ ಅಲ್ಲ, 'ಇವನು ಬಹಳ ತೂಕದ ಮನುಷ್ಯ' ಎನ್ನುತ್ತಾರಲ್ಲ ಅಂತಹ ತೂಕ. ನಮ್ಮೂರಲ್ಲೆ ಏಕೆ ಸುತ್ತಮುತ್ತಲ ಊರುಗಳಲ್ಲೂ ಯಾವುದೇ ಬಗೆಯ ನ್ಯಾಯವಾದರೂ ಈ ಯಜಮಾನಪ್ಪನವರದ್ದೆ ಕೊನೆಯ ತೂಕ. ಇಂಥ ತೂಕದ ಮನೆಯಲ್ಲಿ ನಾನು ಹುಟ್ಟಿದ್ದೆಂದರೆ ಯಾರಿಗೆ ತಾನೇ ಹೆಮ್ಮೆಯೆನಿಸುವುದಿಲ್ಲ ?

ನಮ್ಮ ತಾತ ಪುಟ್ಟಯ್ಯನವರಿಗೆ ನಮ್ಮ ತಂದೆ ಚಿಕ್ಕಣ ಒಬ್ಬರೇ ಮಗ. ಆದರೂ ನಮ್ಮದೇನೂ ಸಣ್ಣ ಮನೆಯಲ್ಲ. ನಮ್ಮ ತಂದೆಯ ಕುಟುಂಬದಲ್ಲಿ ಸುಮಾರು ನಲವತ್ತು ಐವತ್ತು ಜನ ಬಾಳಿ ಬದುಕಿದ್ದಾರೆ. ಇತರರ ಮನೆಗಳಲ್ಲಿ ಹಬ್ಬ-ಹರಿದಿನಗಳಂದು ಮಾತ್ರ ಜನ ಜಂಗುಳಿಯಿರುತ್ತದೆಂದು ಕೇಳಿದ್ದೇನೆ. ಆದರೆ ನಮ್ಮ ಮನೆಯಲ್ಲಿ ಪ್ರತಿದಿನವೂ ಜನ ಜಂಗುಳಿಯೇ ಇದ್ದುದನ್ನು ನಾನು ಕಂಡಿದ್ದೇನೆ. ಮನೆಯವರೆಲ್ಲ ಒಟ್ಟಿಗೆ ಊಟಕ್ಕೆ ಕುಳಿತರೆಂದರೆ ಐವತ್ತು ಎಲೆಗೇನೂ ಕಡಿಮೆಯಿರುತ್ತಿರಲಿಲ್ಲ. ಈ ದೊಡ್ಡ ಮನೆಯ ಅವಿಭಕ್ತ ಕುಟುಂಬದ ಇತರ ಸದಸ್ಯರೆಂದರೆ ನಮ್ಮ ಸೋದರ ಸಂಬಂಧಿಗಳೇ ಅಲ್ಲ, ಮಾವ, ಭಾವ, ಮೈದುನಂದಿರ ಸಂಬಂಧಿಗಳು. ಇದು ನಮ್ಮ ಮನೆಯ ವೈಶಿಷ್ಟ್ಯ.

ನಮ್ಮ ತಂದೆ ಚಿಕ್ಕಣ್ಣನವರಿಗೆ ನಾವು ಮೂರು ಜನ ಗಂಡು ಮಕ್ಕಳು ಮತ್ತು ನಮ್ಮ ಅಕ್ಕ ಮರಿಯಮ್ಮ, ನಾನು ಮಧ್ಯಮ, ಅಣ್ಣ ಹನುಮಂತಯ್ಯ, ತಮ್ಮ ಹೆಂಜೇರಪ್ಪ. ಅಕ್ಕನ ಗಂಡ ಲಿಂಗಣ್ಣ ನಮ್ಮ ಸೋದರ ಮಾವ, ತಾಯಿ ಬೈರಮ್ಮ ನವರ ತಮ್ಮ. ಇನ್ನೊಬ್ಬರು ಸೋದರ ಮಾವಂದಿರಾದ ತಿಮ್ಮಬೈರಣ್ಣ ಅವರ ಇಬ್ಬರು ಹೆಂಡತಿಯರು, ಮಕ್ಕಳು ಮತ್ತು ಕರಿಯಣ್ಣ ಇವರ ಮೂವರು ಹೆಂಡಂದಿರು ಮತ್ತು ಮಗಳು ಹಾಗೂ ನಮ್ಮ ತಂದೆಯ ಸೋದರ ಸಂಬಂಧಿಗಳಾದ ಕೂನಯ್ಯ, ಮುದ್ದಯ್ಯ, ರಂಗಣ್ಣ ಕಾಳಣ್ಣ ಮತ್ತು ಇವರುಗಳ ಸಂಸಾರ. ಹೀಗೆ ಎಂಟು ಹತ್ತು ಸಂಸಾರಗಳು, ಒಟ್ಟಿಗೆ ಇದ್ದು ಮಕ್ಕಳು ಮರಿಗಳು ಒಟ್ಟಿಗೆ ಬದುಕುತ್ತಿದ್ದ ಈ ದೊಡ್ಡ ಮನೆಯಲ್ಲಿ ನಾನು ಕಳೆದ ಬದುಕು ಒಂದು ಸುಂದರ ಅನುಭವ. ಈ ಮನೆಯಲ್ಲಿ ದೊಡ್ಡವರದ್ದು ಒಂದು ಲೋಕವಾದರೆ ಮಕ್ಕಳದ್ದು ಇನ್ನೊಂದು ಲೋಕ. ನಾನು ಈ ಎರಡು ಲೋಕ ಗಳಲ್ಲೂ ಕಾಲ ಕಳೆದಿದ್ದೇನಾದರೂ ಮಕ್ಕಳ ಲೋಕದ ಅನುಭವ ಅನನ್ಯವಾದದ್ದು, ಕುಣಿದದ್ದೇನು, ಕುಪ್ಪಳಿಸಿದ್ದೇನು, ಅತ್ತದ್ದೇನು, ನಕ್ಕದ್ದೇನು, ಒಂದೇ ಎರಡೇ ನೂರಾರು ಚಿತ್ರಗಳು ಮೂಡುತ್ತವೆ. ನಾನು ಊರಿನ ಎಲ್ಲಾ ಹುಡುಗರ ಜೊತೆಯಲ್ಲಿ ಹೆಚ್ಚಾಗಿ ಬೆರೆತು ಆಟವಾಡುತ್ತಿದ್ದೆ. ಈಗಲೂ ನನ್ನ ವಯಸ್ಸಿನ ಜನ 7-8 ಜನಗಳಿದ್ದಾರೆ. ನನ್ನ ಮೇಲೆ ಎಲ್ಲಿಲ್ಲದ ಪ್ರೀತಿ ವಿಶ್ವಾಸ ಇಟ್ಟಿದ್ದಾರೆ. ತಮ್ಮ ಅಭಿಮಾನವನ್ನು ತೋರುತ್ತಿ ದ್ದಾರೆ. ಇದು ನನ್ನ ಸೌಭಾಗ್ಯ.

ದೊಡ್ಡ ಮನೆಗೆ ತಕ್ಕಂತೆ ದೊಡ್ಡ ದುಡಿಮೆಯೂ ಇತ್ತು. ಮನೆಮಂದಿಯೆಲ್ಲ ಕೆಲಸಮಾಡಿದರೂ ಸಾಕಾಗದೆ ಪ್ರತಿದಿನ ಹತ್ತಿಪ್ಪತ್ತು ಆಳುಗಳೂ ಕೆಲಸ ಮಾಡುವಷ್ಟು ಬೇಸಾಯವಿತ್ತು. ಸುಮಾರು ನೂರು ಎಕರೆಯಷ್ಟು ಹೊಲ, ಹದಿನೈದು ಇಪ್ಪತ್ತು ಎಕರೆಯಷ್ಟು ಗದ್ದೆ ಐದಾರು ಎಕರೆ ಅಡಕೆ ಮತ್ತು ಎಲೆ ತೋಟದ ಒಡೆತನ ಈ ದೊಡ್ಡ ಮನೆಯದಾಗಿತ್ತು. ಮನೆಯಲ್ಲೇ ಇದ್ದ ಏಳೆಂಟು, 'ಆರು' ಗಳನ್ನು ಕಟ್ಟಿ ಭಾರಿ ಮಟ್ಟ ದಲ್ಲಿ ದವಸಧಾನ್ಯಗಳನ್ನು ಬೆಳೆಯುತ್ತಿದ್ದರು. ಪ್ರತಿ ಸುಗ್ಗಿಯಲ್ಲೂ ಸುಮಾರು ನಾಲ್ಕು ನೂರು ಪಲ್ಲದಷ್ಟು ಧಾನ್ಯಗಳ ರಾಶಿ ಬೀಳುತ್ತಿತ್ತು. ಕಣದಲ್ಲಿ ಪಲ್ಲದಷ್ಟು ದಾನ ಧರ್ಮ. ನಮ್ಮೂರಲ್ಲಿ ದೊಡ್ಡ ಮನೆಯದ್ದೇ ದೊಡ್ಡ 'ಕಣ'. ಒಂದೇ ಕಡೆ ಕಣ ಮಾಡುವುದು ಸಾಧ್ಯವಾಗುತ್ತಿರಲಿಲ್ಲವಾದ್ದರಿಂದ ಎರಡು ಕಡೆ ಮಾಡುತ್ತಿದ್ದರು. ಗುಂಡಿಗದ್ದೆಯ ಹೊಲದಲ್ಲೂ ಒಂದು ಕಣವಾದರೆ ಇಸವನಹಳ್ಳಿ ತಿಮ್ಮಪ್ಪನವರ ಹೊಲದಲ್ಲಿ ಇನ್ನೊಂದು. ಎರಡೂ ಕಣಗಳ ಬಣವೆಗಳನ್ನು ಒಟ್ಟಿಗೆ ಸೇರಿಸಿದರೆ ಸುಮಾರು ಒಂದು ಫರ್ಲಾಂಗಿ ನಷ್ಟು ಉದ್ದವಾಗುತ್ತಿತ್ತು. ಮಕ್ಕಳ ಲೋಕದ ನಮಗೆ ಬಣವೆ ಸುತ್ತುವುದೇ ಒಂದು ಆಟ. ಬಣವೆ ಸುತ್ತುತ್ತಾ ಆಟ ಆಡುತ್ತಾ ಖುಷಿ ಪಟ್ಟ ಆ ದಿನಗಳದ್ದೇ ಒಂದು ಕಾಲ. ಅದು ಈಗ ಎಲ್ಲಿ ಬರಬೇಕು !

ದೊಡ್ಡ ಮನೆ ಹೆಸರಿಗೆ ತಕ್ಕಂತೆಯೇ ದೊಡ್ಡ ಮನೆಯಾಗಿತ್ತು. ಸುಮಾರು 2 ಎಕರೆಯಷ್ಟು ವಿಸ್ತಾರವಾದ ಜಾಗದಲ್ಲಿ ಮನೆ ಹಬ್ಬಿತ್ತು. ವಾಸದ ಮನೆಗಿಂತ ದೊಡ್ಡದಾಗಿ ದೊಡ್ಡಿ, ಕೊಟ್ಟಿಗೆಗಳಿದ್ದವು. ಸುಮಾರು ಐನೂರು ಆರುನೂರು ಕುರಿ ಮೇಕೆಗಳು, ಐವತ್ತು ಅರವತ್ತು ಹಸು, ಕರು, ಎಮ್ಮೆಗಳಿದ್ದವು. ಮನೆಯಲ್ಲಿ ಸದಾ ಏಳೆಂಟು ರಾಸುಗಳ ಕರಾವು ನಡೆಯುತ್ತಿತ್ತು. ಮನೆ ಮಂದಿಗೆಲ್ಲ ಸಾಕಾಗುವಷ್ಟು ಹಾಲು, ಮೊಸರು ಮಜ್ಜಿಗೆ, ತುಪ್ಪ, ಬೆಣ್ಣೆ ಈ ಕರಾವಿನಿಂದ ಬರುತ್ತಿತ್ತು. ಮನೆಯಲ್ಲಿ ದಿನಾ ತುಪ್ಪ ಕಾಯಿಸುತ್ತಿದ್ದುದರಿಂದ ತುಪ್ಪದ ವಾಸನೆಯಿಂದ ಮನೆಯೆಲ್ಲ ಘಮಘಮಿಸುತ್ತಿತ್ತು. ಅದರಲ್ಲೂ ನಮ್ಮ ತಾಯಿ ಭೈರಮ್ಮ ತುಪ್ಪ ಕಾಯಿಸುತ್ತಿದ್ದರೆಂದರೆ, ಅದರ ಘಮಲೇ ಹೇರೆ. ಹೊರಗಿನಿಂದ ಬಂದವರು 'ಭೈರಮ್ಮ ತುಪ್ಪ ಕಾಯಿಸುತ್ತಿದ್ದಾಳೋ' ಎಂದು ಕೇಳುವಷ್ಟರ ಮಟ್ಟಿಗೆ ಇರುತ್ತಿತ್ತು. ಅವ್ವ ಕಾಯಿಸುತ್ತಿದ್ದ ತುಪ್ಪದಲ್ಲಿರುತ್ತಿದ್ದ ಆ ಬನಿ ಆ ತನಿ ಬೇರೆ ಯಾರು ಕಾಯಿಸುತ್ತಿದ್ದರೂ ಬರುತ್ತಿರಲಿಲ್ಲ. ನಮ್ಮ ಮನೆಯವರು ಎಂದೂ ಹಾಲು ಮೊಸರು ತುಪ್ಪ ಮಾರಿದವರಲ್ಲ. ಎಲ್ಲವನ್ನೂ ನಾವೇ ಉಪಯೋಗಿಸುತ್ತಿದ್ದೆವು.

ಮನೆಯ ವ್ಯವಸಾಯದ ಕೆಲಸವನ್ನೆಲ್ಲ ನಮ್ಮ ಸೋದರ ಮಾವಂದಿರೇ ನೋಡಿಕೊಳ್ಳುತ್ತಿದ್ದರು. ಅದರಲ್ಲೂ ದೊಡ್ಡಮಾವ ಬೈರಣ್ಣ ವ್ಯವಸಾಯದಲ್ಲಿ ತುಂಬಾ ನಿಪುಣ. ಸುತ್ತಮುತ್ತಲ ಹಳ್ಳಿಗಳಲ್ಲೆಲ್ಲ ಅವರ 'ಆರಂಬ' ಹೆಸರು ಮಾಡಿತ್ತು. ಅನೇಕರು ಬಂದು ವ್ಯವಸಾಯದ ಬಗ್ಗೆ ತಿಮ್ಮಭೈರಣ್ಣನ ಸಲಹೆಗಳನ್ನು ಕೇಳುತ್ತಲೇ ಇರುತ್ತಿದ್ದರು. ನನ್ನ ಮಾವಂದಿರಾದಿಯಾಗಿ ತಂದೆತಾಯಿ ಯಾರೂ ವಿದ್ಯಾವಂತರಾಗಿರಲಿಲ್ಲ. ಆದರೆ ವ್ಯವಸಾಯದ ವ್ಯವಹಾರದ ವಿದ್ಯೆ ಅವರುಗಳಿಗೆ ಕರಗತವಾಗಿತ್ತು. ಅವರಿಂದ ನಾವು ಕಲಿಯಬೇಕು. ಅವರ ಅನುಭವ ವಿದ್ಯೆಯ ಮುಂದೆ ನಮ್ಮ ಕಲಿಕೆಯ ವಿದ್ಯೆ ಏನೇನೂ ತರವಲ್ಲದ್ದು. ಇಂದು ಕಲಿತವರಿಗಿರುವಂತೆ ಸ್ವಾರ್ಥ, ಮೋಸ, ವಂಚನೆ ಕಪಟ, ಅಸೂಯೆ ಇತ್ಯಾದಿ ಯಾವ ರಾಗಭಾವಗಳೂ ಅವರಿಗಿರಲಿಲ್ಲ. ಸುಳ್ಳು, ವಂಚನೆ ಎಂದರೆ ಏನೆಂಬುದರ ಅರಿವಿಲ್ಲದಂತೆ ಕಷ್ಟಪಟ್ಟು ದುಡಿಯುತ್ತಿದ್ದರು. ಹಂಚಿಕೊಂಡು ತಿನ್ನುತ್ತಿದ್ದರು ಒಂದೇ ತಟ್ಟೆಯಲ್ಲಿ ಊಟಮಾಡುತ್ತಿದ್ದರು. ಎಲ್ಲರೂ ಒಂದೇ ಎಂಬ ಭಾವನೆಯಿಂದ ಒಂದು ಅವಿಭಕ್ತ ಕುಟುಂಬದ ಮನೆಯವರಾಗಿ ನಡೆಯುತ್ತಿದ್ದರು. ಅಂಥ ವಿಶ್ವಾಸ, ನಂಬಿಕೆ, ಬಾಂಧವ್ಯ ಇಂದು ಹುಡುಕಿದರೂ ಸಿಗುವುದಿಲ್ಲ.

ತಂದೆ ಚಿಕ್ಕಣ್ಣ ಮನೆಯ ಹೊರಗಷ್ಟೇ ಯಜಮಾನಪ್ಪನಾಗಿರಲಿಲ್ಲ, ಒಳಗೂ ಯಜಮಾನಪ್ಪನಾಗಿದ್ದರು. ಮಾವಂದಿರೆಲ್ಲ ಒಡೆತನವನ್ನು ಚಿಕ್ಕಣ್ಣನಿಗೇ ಬಿಟ್ಟು ಅವರು ಹೇಳಿದಂತೆ ಕೇಳುತ್ತಿದ್ದರು. 'ಮಾವ' ಎನ್ನುತ್ತ ತಂದೆಯೋಪಾದಿಯಲ್ಲಿ ಕಾಣುತ್ತಿದ್ದರು. ಊರಿನ ಮಧ್ಯೆ ಇದ್ದ ಒಂದು ಗೋಣಿಮರದ ನೆರಳೇ ಊರಿನ ಪಂಚಾಯಿತಿ ಕಟ್ಟೆ. ಸುತ್ತಲಿನ ಯಾವುದೇ ಊರಿನ ರೀತಿಯ ಜಗಳ, ನ್ಯಾಯ, ಭಾಗ ಇತ್ಯಾದಿ ಏನೇ

ಇದ್ದರೂ ಈ ಗೋಣಿಮರದ ನೆರಳಿನಲ್ಲೇ ತೀರ್ಮಾನ. ಯಜಮಾನಪ್ಪನ ಮಾತೇ ಕೊನೆ. ಇವರ ತೀರ್ಮಾನಕ್ಕೆ ಉಭಯಸ್ತರೂ ತಲೆಬಾಗುತ್ತಿದ್ದರು. ಹಾಗೆ ನ್ಯಾಯಯುತವಾದ ಸರ್ವ ಸಮ್ಮತವಾದ ತೀರ್ಮಾನವನ್ನು ನಮ್ಮ ತಂದೆ ಕೊಡುತ್ತಿದ್ದರು.

ಈ ಯಜಮಾನಪ್ಪನ ಯಜಮಾನಿಕೆಗೆ ತಕ್ಕಂತೆ, ಕೈಗಳಲ್ಲಿ ಚಿನ್ನದ ಕಪ್ಪ, ಕಿವಿಗಳಲ್ಲಿ ಮುರ ಮತ್ತು ಯಾವಾಗಲೂ ತೊಡುತ್ತಿದ್ದ ಜಡಾವು ಇವುಗಳೆಲ್ಲ ಒಂದು ರೀತಿಯ ಗತ್ತನ್ನು, ಕಳೆಯನ್ನು ತಂದು ಕೊಟ್ಟಿದ್ದವು. ಈ ವೇಷದಲ್ಲಿ ಚಿಕ್ಕಣ್ಣ ಸದಾ 'ದೊಡ್ಡಣ್ಣ'ನಾಗಿ ಕಾಣುತ್ತಿದ್ದರು. ಕಂಡವರು ಕೂಡಲೆ ಎದ್ದು ಕೈ ಮುಗಿಯು ತ್ತಿದ್ದರು. ಇದಕ್ಕೆ ಶೋಭೆಯಾಗಿ ಕೆಲವು ದೊಡ್ಡಗುಣಗಳೂ ಇದ್ದವು. ಚಿಕ್ಕಣ್ಣ ಉದಾರಿಗಳು. ಕೇಳಿದವರಿಗೆ ಇಲ್ಲ ಎನ್ನದೆ ಕೊಡುತ್ತಿದ್ದರು. ಪ್ರತಿ ನವರಾತ್ರಿಯಲ್ಲೂ 'ಹಗೇವು'ಗಳನ್ನು ತೆಗೆದು ಊರಿನವರಿಗೂ ಹಾಗೂ ಅಕ್ಕಪಕ್ಕದ ಊರಿನವರಿಗೆಲ್ಲಾ ದವಸಗಳನ್ನು ಅಳೆಯುತ್ತಿದ್ದರು. ಎಲ್ಲರನ್ನೂ ತುಂಬ ಪ್ರೀತಿ ವಿಶ್ವಾಸದಿಂದ, ಆತ್ಮೀಯತೆಯಿಂದ ಮಾತಾಡಿಸುತ್ತಿದ್ದರು. ಹಣದ, ಅಧಿಕಾರದ, ಶ್ರೀಮಂತಿಕೆಯ ಅಹಂಕಾರದ ಗತ್ತು ಹುಡುಕಿದರೂ ಸಿಗುತ್ತಿರಲಿಲ್ಲ. ತೀರ ಸರಳವಾಗಿ, ಸೌಜನ್ಯದಿಂದ ನಡೆದುಕೊಳ್ಳುತ್ತಿದ್ದರು. ಒಂದು ರೀತಿಯ ಧೀರೋದಾತ್ತ ವ್ಯಕ್ತಿತ್ವದ ಇವರ ನಡೆ ನುಡಿಗಳು ಜನರಿಂದ ಗೌರವ ಮರ್ಯಾದೆಗಳನ್ನು ಸಹಜವಾಗಿ ಪಡೆಯುತ್ತಿದ್ದವು. ಪ್ರತಿ ತಿಂಗಳೂ ತಪ್ಪಿದರೆ 2 ತಿಂಗಳಿಗೊಮ್ಮೆಯಾದರೂ ಸಾವಿರಾರು ಜನ ಹಳ್ಳಿಗರಿಗೆ ದಾಸೋಹ. ಮನೆಯಲ್ಲಿದ್ದ ಸ್ಥಳ ಸಾಲದೆ ಮಾಳಿಗೆ ಮನೆಗಳ ಮೇಲೆ ಊಟ.

ಯಜಮಾನಪ್ಪನವರಿಗೆ ತಕ್ಕ 'ಯಜಮಾನಮ್ಮ' ನಮ್ಮ ತಾಯಿ ಭೈರಮ್ಮ. ಸದಾ ಮನೆಯ ಹಿತವನ್ನೇ ಬಯಸುತ್ತ ಪತಿಗೆ ತಕ್ಕಂತೆ ನಡೆದುಕೊಳ್ಳುತ್ತ ದೊಡ್ಡಮನೆ ಯಲ್ಲಿ ಯಾವ ಕುಂದು ಕೊರತೆಯೂ ಕಾಣದಂತೆ ಎಲ್ಲರಿಗೂ ಒಪ್ಪಿಗೆಯಾಗುವಂತೆ ಎಲ್ಲರನ್ನೂ ತಾಯಿ ಎನಿಸಿಕೊಂಡು ಕುಟುಂಬವನ್ನು ನಡೆಸಿಕೊಂಡು ಹೋಗುತ್ತಿದ್ದರು. ಮನೆಯಲ್ಲಿದ್ದ ನಾದಿನಿಯರ ಕೈಲಿ ಮನೆಯ ಹೊರ ಒಳ ಕೆಲಸಗಳನ್ನೆಲ್ಲ ಅಚ್ಚುಕಟ್ಟಾಗಿ ಮಾಡಿಸುತ್ತಾ, ಮನೆಯಲ್ಲಿ ಸದಾ ಗೃಹಲಕ್ಷ್ಮಿಯಂತೆ ಇರುತ್ತಿದ್ದರು. ಅಷ್ಟು ದೊಡ್ಡ ಮನೆಯಾದರೂ ಯಾವಾಗಲೂ ಒಪ್ಪ ಓರಣವಾಗಿ ಇರುತ್ತಿತ್ತು. ತಾಯಿ ಭೈರಮ್ಮ ಕೊಡುಗೈದಾನಿ. ಒಂದು ಕಟ್ಟು ವೀಳ್ಯದೆಲೆ, ಅರ್ಧಸೇರು ಅಡಕೆ, ಸುಣ್ಣದ ಡಬ್ಬಿ ಇರುತ್ತಿದ್ದ ಒಂದು ಅಡಕೆ ಚೀಲ ಅವ್ವನ ಕೈಲಿ ಯಾವಾಗಲೂ ಇರುತ್ತಿತ್ತು. ಅಷ್ಟನ್ನೂ ಅವ್ವನೇ ಹಾಕುವುದಕ್ಕಲ್ಲ, ಕೇಳಿದವರಿಗೆಲ್ಲ ಇಲ್ಲ ಎನ್ನದೆ ಕೊಡುವುದಕ್ಕಾಗಿ.

ಆಗಿನ ಕಾಲದಲ್ಲಿ ಓದುವಷ್ಟು ಈಗಿನಷ್ಟು ಸುಲಭವಾಗಿರಲಿಲ್ಲ. ಓದುವುದೆಂದರೆ ಬಹು ಪ್ರಯಾಸದ ಕೆಲಸ. ನಾಲ್ಕೈದು ಮೈಲಿ ಪ್ರತಿ ದಿನ ನಡೆಯಬೇಕು. ವಾರ ಗಟ್ಟಲೆ ಬೇರೆಯವರ ಮನೆಯಲ್ಲಿ ಇರಬೇಕು. ಆಟ, ಊಟಗಳನ್ನು ಸರಿಯಾಗಿ ನಡೆಸ ಲಾಗುತ್ತಿರಲಿಲ್ಲ. ಇಷ್ಟು ಪ್ರಯಾಸದ ಓದಿಗಿಂತ ಮನೆಯಲ್ಲೇ ಇದ್ದುಕೊಂಡು

ಹೊರಗಡೆಯುವರೊಂದಿಗೆ ಆಡಿಕೊಂಡು ಆಗಾಗ್ಗೆ ಅದು–ಇದು ತಿಂದುಕೊಂಡು ಸಣ್ಣ–ಪುಟ್ಟ ಕೈಗೆ ಬಂದ, ಆವರಿವರು ಹೇಳಿದ ಕೆಲಸ ಮಾಡಿಕೊಂಡು ಇರುವುದೇ ಇಷ್ಟವೆನಿಸುತ್ತಿತ್ತು. ನಾನು ಈ ಗುಂಪಿಗೆ ಸೇರಿದವನು. ನನಗಂತೂ ಓದಿಗಿಂತ ಬೇಸಾಯವೇ ಹೆಚ್ಚು ಇಷ್ಟವಾಗಿತ್ತು. ಆದರೂ ಬಲಫಂತಕ್ಕೆ ಶಾಲೆಗೆ ಸೇರಿಸಿದ್ದರು. ಊರಿನಲ್ಲಿ ಪ್ರಾಥಮಿಕ ಶಾಲೆ ಮಾತ್ರ ಇತ್ತು. ಅದಕ್ಕೆ ತೂಬಗೆರೆ ಗಂಗಾಧರಯ್ಯರೆಂಬುವರೇ ಉಪಧ್ಯಾಯರು. ಅವರೇ ನನ್ನ ಪ್ರಥಮ ಗುರುಗಳು, ಅವರು ನಮ್ಮ ಊರಿನಲ್ಲೇ ಇದ್ದು ವಾರಕ್ಕೊಂದಾವರ್ತಿ ಅವರ ಸ್ವಂತ ಸ್ಥಳವಾದ ತೂಬುಗೆರೆಗೆ ಹೋಗುತ್ತಿದ್ದರು. ಅವರಿಗೆ ನನ್ನ ಮೇಲೆ ಎಲ್ಲಿಲ್ಲದ ಪ್ರೀತಿ. ರಾತ್ರಿ ಹಗಲೆನ್ನದೆ ಯಾವಾಗಲೂ ತುಂಬಾ ಶ್ರದ್ಧೆ ವಹಿಸಿ ಪಾಠ ಮಾಡುತ್ತಿದ್ದರು. ಊರಿನಿಂದ ಬಂದರೆ ಬರಿ ಕೈಯಲ್ಲಿ ಎಂದೂ ಬಂದವರಲ್ಲ. ಚಕ್ಕಲಿ, ಕೋಡುಬಳೆ ಯಾವಾಗಲೂ ಇರುತ್ತಿತ್ತು. ತಿನ್ನಲಿಕ್ಕೆ ನಮಗೆಲ್ಲಾ ಉದಾರವಾಗಿ ಕೊಡುತ್ತಿದ್ದರು.

ಊರಿಗೆ ದಕ್ಷಿಣದಲ್ಲಿ ಕಾರೆಹಳ್ಳಿ ಎಂಬ ಊರಿದೆ. ಆ ಊರಿನ ಪಕ್ಕದಲ್ಲೇ ಇದ್ದ ಕಾರೇಹಳ್ಳಿ ಪಾಳ್ಯದಲ್ಲಿ ನಮ್ಮ ಕುಟುಂಬದ ಬಂಧುಗಳಾದ ನಾಗಪ್ಪ, ದಾಸಪ್ಪ, ಚಿನ್ನಪ್ಪ ಅವರುಗಳ ಮನೆಯಿತ್ತು. ಅವರಿಗೂ ನಮಗೂ ತುಂಬಾ ಆತ್ಮೀಯತೆ, ಒಂದೇ ಮನೆಯವರಂತೆ ನಡೆದುಕೊಳ್ಳುತ್ತಿದ್ದರು. ನಾವೇ ಅವರು ಅವರೇ ನಾವು ಎಂಬುವ ಮಟ್ಟಿಗೆ ಇತ್ತು ನಮ್ಮ ಬಾಂಧವ್ಯ. ನಮ್ಮ ಅಪ್ಪನನ್ನು ಕೇಳದೆ ಅವರು ಯಾವ ವ್ಯವಹಾರಕ್ಕೂ ಕೈ ಹಾಕುತ್ತಿರಲಿಲ್ಲ. ಅವರ ಮೊಮ್ಮಗನಾದ ಮುದ್ದಣ್ಣನವರೇ ಈಗ ನನ್ನ ಬೀಗರಾಗಿದ್ದಾರೆ. ನನ್ನನ್ನು ಅಲ್ಲಿ ಇರಲು ವ್ಯವಸ್ಥೆ ಮಾಡಿ ಅಲ್ಲಿಂದ ಪತ್ತಿರದಲ್ಲಿ ಇದ್ದ ತ್ಯಾಮಗೊಂಡ್ಲುವಿನ ಸರ್ಕಾರಿ ಪ್ರಾಥಮಿಕ ಶಾಲೆಗೆ ಸೇರಿಸಿದ್ದರು. ವಾರವೆಲ್ಲ ಪಾಳ್ಯದಲ್ಲಿ ಶಾಲೆಗೆ ಹೋಗಿ ಬಂದು ಶನಿವಾರ ಅರ್ಧದಿನದ ಶಾಲೆ ಮುಗಿದ ಕೂಡಲೆ ನಮ್ಮೂರಿಗೆ ಬಂದು ಬಿಡುತ್ತಿದ್ದೆ. ಮತ್ತೆ ಸೋಮವಾರ ನೇರ ಶಾಲೆಗೆ ಹೋಗುತ್ತಿದ್ದೆ. ಶಾಲೆಗೆ ಹೋಗುತ್ತಿದ್ದೆನಷ್ಟೆ. ಯಾವತ್ತು ಕೆರೆಯ ಅಂಗಳದಲ್ಲಿ ಒಂದು ಸ್ಥಳದಲ್ಲಿ ಕುಳಿತು ಗಣಪತಿಯನ್ನು ಸ್ತುತಿಸಿ ಅವನಿಗೆ ಪ್ರಾರ್ಥಿಸದೆ ಶಾಲೆಗೆ ಹೋದವನಲ್ಲ. ಆದರೆ ನನ್ನ ಮನಸ್ಸೆಲ್ಲ ಊರಲ್ಲೇ ಇರುತ್ತಿತ್ತು. ಬಿಡುವಿನ ವೇಳೆಯನ್ನೆಲ್ಲ ಊರಲ್ಲೇ ಕಳೆಯುತ್ತಿದ್ದೆ. ಅಪ್ಪ–ಮಾವಂದಿರೊಂದಿಗೆ ಕೆಲಸ ಮಾಡುವುದು ಹುಡುಗರೊಂದಿಗೆ ಆಟವಾಡುವುದೆಂದರೆ ನನಗೆ ತುಂಬ ಇಷ್ಟವಾಗಿತ್ತು. ಅಪ್ಪ ನಮ್ಮೂರ ಕೆರೆಯ ಕಂಟ್ರಾಕ್ಟ್ 1928 ರಲ್ಲಿ ತೆಗೆದುಕೊಂಡು ಏರಿ ಕಟ್ಟಿಸುವಾಗ ಊರಿಗೆ ನಾನೇ ಗೌಡನೆಂಬಂತೆ ಬೀಗುತ್ತಿದ್ದೆ. ಹಾಗೆಯೇ ತಿಮ್ಮಭೈರಣ್ಣ ಮಾವನಿಗೆ ಖಾಯಿಲೆ ಬಂದಾಗ ಅಪ್ಪ 'ಅಂಜನೆಯ'ನಂತಿದ್ದ ಭಾವಮೈದ ಹೀಗಾದನಲ್ಲ ಎಂದು ಊಟ ನಿದ್ರೆ ಬಿಟ್ಟು ಕೊರಗುವಾಗ, ಅವರಿವರ ಮುಂದೆ ಹೀಗೆ ಮರುಗುವಾಗ ನಾನೂ ಸಪ್ಪಗಾಗುತ್ತಿದ್ದೆ. ಏನೇ ಆದರೂ ಮನಸೆ ಓಡಿಸಿತು, ಶಾಲೆ ಬಿಡಲಿಲ್ಲ.

ನನ್ನನ್ನು ಅಲ್ಲಿಗೆ ಸೇರಿಸುವ ಕಾಲಕ್ಕಾಗಲಿ ನನಗೆ ಹೆಚ್ಚು ವಯಸ್ಸಾಗಿದ್ದ ಕಾರಣವೋ ಅಥವಾ ಅಲ್ಲಿಯ ಮುಖ್ಯೋಪಾಧ್ಯಾಯರು ತುಂಬ ಒಳ್ಳೆಯವರಾದ ಕಾರಣವೋ ಅಂತೂ ನನ್ನನ್ನು ನೇರ ಎರಡನೇ ಫಾರಂಗೇ ಸೇರಿಸಿಕೊಂಡರು. ನನಗೆ ಪ್ರತಿನಿತ್ಯ ಪಾಳ್ಯದಿಂದ ಶಾಲೆಗೆ ಹೋಗಿಬರುವುದರಲ್ಲೇ ಸಮಯ ಕಳೆಯುತ್ತಿತ್ತು. ಇವುಗಳ ಮಧ್ಯೆ ಏನು ಓದುತ್ತಿದ್ದೆನೋ ಗೊತ್ತಿಲ್ಲ. ಹಾಗೂ ಹೀಗೂ ಎರಡು ವರ್ಷ ಕಳೆಯಿತು. ಮೂರನೇ ಫಾರಂನ ಪರೀಕ್ಷೆಗೆ ಅಂದರೆ ಆಗಿನ ಇಂಗ್ಲೀಷ್ ಲೋಯರ್ ಸೆಕೆಂಡರಿ ಪರೀಕ್ಷೆ, ದೊಡ್ಡಬಳ್ಳಾಪುರ ಸೆಂಟರ್ ಆಗಿತ್ತು. 1926ನೇ ಇಸವಿಯಲ್ಲಿ ಈ ಪರೀಕ್ಷೆ ಬರೆದೆ. ಆದರೆ ಪಾಸಾಗಲಿಲ್ಲ. ನಾನು ಫೇಲಾದ ಕಾರಣ ಮನೆಯಲ್ಲಿ ದೊಡ್ಡ ಸಭೆಯೇ ನಡೆಯಿತು. ಆ ಸಭೆಯ ಮುಖ್ಯ ಚರ್ಚೆ ಮುಂದಕ್ಕೆ ನಾನು ಓದಬೇಕೋ ಬೇಡವೋ ಎಂಬುದು. ಈ ಸಭೆಗೆ ಪ್ರಾಥಮಿಕ ಶಾಲೆಯಲ್ಲಿ ನನಗೆ ಉಪಾಧ್ಯಾಯರಾಗಿದ್ದ ಶ್ರೀ ಗಂಗಾಧರಯ್ಯನವರು ಬಂದಿದ್ದರು. ನಮ್ಮ ತಂದೆಯವರ ಮತ ಮಗ ಓದುವುದು ಬೇಡ ಪಾಪ ಕಷ್ಟಪಡುತ್ತದೆ. ಹೊತ್ತಿಗೆ ಸರಿಯಾಗಿ ಊಟವಿರುವುದಿಲ್ಲ. ಸೊರಗುತ್ತದೆ, ಮನೆಯಲ್ಲೇ ಬೇಕಾದಷ್ಟು ಕೆಲಸವಿದೆ. ನಮ್ಮೊಂದಿಗೆ ವ್ಯವಸಾಯ ಮಾಡಿಕೊಂಡಿರಲಿ. ಅದೇ ಸಾಕು, ಓದಿ ಏನು ಮಾಡಬೇಕಾಗಿದೆ ಎಂಬುದು.

ಆದರೆ ನನ್ನ ಮಾವಂದಿರಿಗೆ ಅದು ಇಷ್ಟವಿಲ್ಲ. ಕೆಲಸಕ್ಕೇನು ನಾವಿದ್ದೇವೆ, ಇನ್ನೂ ಅನೇಕ ಹುಡುಗರಿದ್ದಾರೆ. ಎಲ್ಲರೂ ಇಲ್ಲಿಯೇ ಏಕೆ ಕೊಳೆಯಬೇಕು. ಮಗು ಓದಲಿ ಎಂದು ಆಸೆ. ಅದನ್ನು ಸಭೆಯಲ್ಲಿ ಹೇಳಿದರು. ಮಾವನವರ ಈ ಅಭಿಪ್ರಾಯವನ್ನು ಮೇಷ್ಟರೂ ಅನುಮೋದಿಸಿದರು. ಹುಡುಗ ಓದುತ್ತಾನೆ ನಾಲ್ಕು ಅಕ್ಷರ ಕಲಿತಿದ್ದಾನೆ; ಚೆನ್ನಾಗಿ ಓದಿಸಿ ಎಂದರು. ಸರಿ ಮುಂದಕ್ಕೆ ಓದಿಸುವುದು ಎಂದಾಯಿತು. ಎಲ್ಲಿ ಎಂಬ ಪ್ರಶ್ನೆ ಬಂದಾಗ ಸಭೆಯಲ್ಲೇ ಇದ್ದ ನನ್ನ ಅಣ್ಣ ಹನುಮಂತಯ್ಯ ಎಲ್ಲಿ ಏಕೆ ಬಿಡುತ್ತೀರಿ ? ನಾನು ಕರೆದುಕೊಂಡು ಹೋಗುತ್ತೇನೆ. ಬೆಂಗಳೂರಿನಲ್ಲೇ ಓದಲಿ ಎಂದರು. ಅಣ್ಣ ಆ ವೇಳೆಗಾಗಲೇ ಬೆಂಗಳೂರಲ್ಲಿದ್ದು ಎಂಟರೆನ್ಸ್‌ಗೆ ಕುಳಿತಿದ್ದರು.

ಅಂತೂ ನನ್ನನ್ನು ಓದುವುದಕ್ಕಾಗಿ ಬೆಂಗಳೂರಿಗೆ ಸಾಗಹಾಕುವ ತೀರ್ಮಾನವನ್ನು ಈ ಮಹತ್ತರ ಸಭೆಯಲ್ಲಿ ತೆಗೆದುಕೊಂಡರು. ನನಗೆ ಮನದಲ್ಲೇ ಅಳುಕು, ಹೇಗೂ ಫೇಲಾದ್ದರಿಂದ ಸದ್ಯ ಇನ್ನು ಶಾಲೆಗೆ ಹೋಗುವುದು ತಪ್ಪಿತಲ್ಲ ಎಂದು ಖುಷಿಯಿಂದ ಇದ್ದರೆ; ಈ ಸಭೆಯಲ್ಲಿ ಬೇರೆಯ ತೀರ್ಮಾನವಾದದ್ದೇ. ಅದು ಮನಸ್ಸಿಗೆ ಸಮಾಧಾನ ತಂದಿರಲಿಲ್ಲ. ತಲೆಗೆ ಹತ್ತದ ಓದಿಗೆ ಮತ್ತೆ ಕಷ್ಟಪಡಬೇಕಲ್ಲ ಎಂದು ಚಿಂತೆಯಾಯಿತು. ಹಳ್ಳಿಯನ್ನು ಹಳ್ಳಿಯ ಗೆಳೆಯರನ್ನು, ಅಪ್ಪ ಅಮ್ಮನನ್ನು ಬಿಟ್ಟುಹೋಗಬೇಕಲ್ಲ ಎಂದು ಬೇಸರವಾಯಿತು. ಆಗಾಗ್ಗೆ ರಜಾ ದಿನಗಳಲ್ಲಾದರೂ ಕುರಿ, ಮೇಕೆ, ದನಗಳನ್ನು ಮೇಯಿಸಲು ದಿಣ್ಣೆಗೆ ಹೋಗುತ್ತಿದ್ದುದು ತಪ್ಪುತ್ತದೆ. ಕಪಿಲೆಯಿಂದ ಕಬ್ಬಿನ ತೋಟಕ್ಕೆ ನೀರು ಕಟ್ಟುವುದು, ನೀರಿನಲ್ಲಿ ಆಟವಾಡುವುದು ತಪ್ಪುತ್ತದೆ, ಗಿಡಪಟ್ಟಿಗೆ ಹೋಗಿ ಕಟ್ಟಿಗೆ

ತರುತ್ತ ಆಟ ಆಡುವುದು ಕೇಕೆ ಹಾಕುವುದು ತಪ್ಪುತ್ತದೆ ಎಂದೆಲ್ಲ ಚಿಂತೆಗಿಟ್ಟುಕೊಂಡಿತ್ತು. ಮಾವಂದಿರ ಜೊತೆಸೇರಿ ಬೇಸಾಯದ ಕೆಲಸ ಮಾಡಲಾಗುವುದಿಲ್ಲ. ಗೆಳೆಯರೊಂದಿಗೆ ಹೊಲದಲ್ಲಿ, ಕಣದಲ್ಲಿ, ಬಯಲಲ್ಲಿ ಆಟ ಆಡಲಾಗುವುದಿಲ್ಲ ಎನಿಸಿದಾಗ ನನಗೆ ಓದು ಒಂದು ಶಾಪವೇನೋ ಎನಿಸುತ್ತಿತ್ತು. ಇದನ್ನೆಲ್ಲ ಬಿಟ್ಟು ಬರೀ ಓದುವುದು ಹೇಗಪ್ಪಾ, ಇಂಥ ಓದು ಏಕಪ್ಪಾ ಎನಿಸುತ್ತಿತ್ತು. ಏನು ಅನ್ನಿಸಿದರೆ ಏನು ಪ್ರಯೋಜನ ! ನನ್ನ ಮಾತನ್ನು ಕೇಳುವವರು ಯಾರು ? ಗಂಟು–ಮೂಟೆ ಕಟ್ಟಿಕೊಂಡು ಅಣ್ಣನೊಂದಿಗೆ ಬೆಂಗಳೂರು ಕಡೆ ಹೋಗುವುದನ್ನು ಬಿಟ್ಟು ಬೇರೇನನ್ನೂ ಮಾಡುವಂತಿರಲಿಲ್ಲ.

ಅಣ್ಣ ಹನುಮಂತಯ್ಯನ ಜೊತೆ ಓದುವುದಕ್ಕೆ ಬೆಂಗಳೂರಿಗೆ ಹೋದಾಗ ನನಗೆ ಸುಮಾರು ಹದಿಮೂರು ವರ್ಷವಿರಬಹುದು. ನನ್ನನ್ನು ಮೊದಲು ಅಣ್ಣ ಸುಲ್ತಾನ್ ಪೇಟೆಯ ಸ್ಕೂಲಿಗೆ ಸೇರಿಸಿದರು. ಅಲ್ಲಿ ಎಂಟು–ಹತ್ತು ದಿನಗಳು ಕಳೆಯುತ್ತಿದ್ದಂತೆಯೆ ಮಾಮೂಲು ಪೇಟೆಯ ಮಿಡಲ್ ಸ್ಕೂಲಿಗೆ ಸೇರಿಸಿದರು. ಅಲ್ಲೂ ಅಷ್ಟೇ, ಅಲ್ಲಿಂದ ಕೋಟೆ ಸ್ಕೂಲಿಗೆ ಸೇರಿಸಿದರು. ಒಂದೇ ತಿಂಗಳಲ್ಲಿ ಮೂರು ಶಾಲೆಗಳನ್ನು ಬದಲಾಯಿಸಬೇಕಾಯಿತು. ಏಕೆಂದು ನನಗೆ ಗೊತ್ತಿಲ್ಲ. ಬಹುಶಃ ಅಷ್ಟು ಚೆನ್ನಾಗಿ ನಾನು ಓದುತ್ತಿದ್ದೆನೇನೋ ! ನನ್ನ ಬುದ್ಧಿವಂತಿಕೆಗೆ ಶಾಲೆಗಳ ಮಟ್ಟವೇ ಸರಿಹೊಂದಿಲ್ಲದಿದ್ದಿರಬಹುದು.

ಅಣ್ಣ ಬೆಂಗಳೂರಿನಲ್ಲಿದ್ದದ್ದು ಅರಳೆಪೇಟೆಯ ಹಟ್ಟಿಮಾರಮ್ಮನ ಗುಡಿ ಬೀದಿಯಲ್ಲಿ. ಅಲ್ಲಿ ನಮ್ಮೂರಿನವರೇ ಆದ ಶ್ರೀ ಹನುಮನರಸಯ್ಯ ಹಾಗೂ ತಿಮ್ಮಕ್ಕನವರ ಮನೆಯಿತ್ತು. ಅಲ್ಲಿ ಅವರೊಂದಿಗೆ ನಾನೂ ಇದ್ದೆ. ಮತ್ತೆ ನನ್ನ ಶಾಲೆ ಬದಲಾಯಿತು. ನನ್ನ ಓದಿನ ಬಗ್ಗೆ ಹೆಚ್ಚು ಮುತವರ್ಜಿ ವಹಿಸುತ್ತಿದ್ದ ಅಣ್ಣ ನನ್ನನ್ನು ಕಂಟೋನ್ಮೆಂಟ್‌ನಲ್ಲಿರುವ ಆರ್.ಬಿ.ಎ.ಎನ್.ಎಂ.ಎಸ್. ಶಾಲೆಗೆ ನಾಲ್ಕನೇ ಫಾರಂಗೆ ಸೇರಿಸಿದರು. ಆಗಿನ ನಾಲ್ಕನೇ ಫಾರಂ ಎಂದರೆ ಈಗಿನ ಹೈಸ್ಕೂಲ್ ಎಂಟನೇ ತರಗತಿ.

ಆ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದ ರಘುನಾಥರಾವ್ ಅವರ ಮನೆ ದತ್ತಾತ್ರೇಯ ದೇವಸ್ಥಾನದ ಬಳಿ ಇತ್ತು. ಅದೇ ಶಾಲೆಯಲ್ಲಿ ನಮ್ಮೂರಿನ ಹತ್ತಿರದಲ್ಲಿರುವ ದೊಡ್ಡಬೆಲೆಯವರಾದ ಶ್ರೀ ಕೃಷ್ಣಮೂರ್ತಾಚಾರ್ ಅವರು ಕನ್ನಡ ಪಂಡಿತರಾಗಿದ್ದರು. ಅಣ್ಣ ಈ ಕಾರಣದಿಂದಲೇ ನನ್ನನ್ನು ಆ ಶಾಲೆಗೆ ಸೇರಿಸಿದ್ದರೆಂದು ತೋರುತ್ತದೆ. ಅವರೊಂದಿಗೆ ಅಣ್ಣ ಮಾತನಾಡಿ ಮುಖ್ಯೋಪಾಧ್ಯಾಯರ ಮನೆಗೆ ಕರೆದುಕೊಂಡು ಹೋಗಿ ಶಿಫಾರಸ್ಸು ಮಾಡಿಸಿ ನನ್ನನ್ನು ನಾಲ್ಕನೇ ಫಾರಂಗೆ ಸೇರಿಸಿದ್ದರು.

ಈ ಮಧ್ಯೆ ಅಣ್ಣ ಹನುಮಂತಯ್ಯನಿಗೆ ಕಂಟ್ರೋಲರ್ ಕಛೇರಿಯಲ್ಲಿ ತಿಂಗಳಿಗೆ ಮೂವತ್ತು ರೂಪಾಯಿ ಸಂಬಳದ ಗುಮಾಸ್ತೆ ಕೆಲಸ ಸಿಕ್ಕಿ ಅಣ್ಣ ಓದುವುದನ್ನು ನಿಲ್ಲಿಸಿ ಕೆಲಸಕ್ಕೆ ಹೋಗುತ್ತಿದ್ದರು. ನನ್ನ ಜೊತೆಯಲ್ಲಿ ನಮ್ಮ ಮನೆಯಲ್ಲೇ ಇದ್ದುಕೊಂಡು ನಮ್ಮ ಗ್ರಾಮದವನೇ ಆದ ಕರಿಹನುಮಯ್ಯ ಎಂಬುವವನೂ ಓದುತ್ತಿದ್ದನು. ನಾನು ಪ್ರತಿನಿತ್ಯ ಅರಳೇಪೇಟೆಯಿಂದ ಕಂಟೋನ್ಮೆಂಟಿನ ಶಾಲೆಗೆ ನಡೆದೇ ಹೋಗುತ್ತಿದ್ದೆ.

ಈಗಿನಂತೆ ಬೆಂಗಳೂರು ಆಗ ಇಷ್ಟೊಂದು ಬೆಳೆದಿರಲಿಲ್ಲವಾದ್ದರಿಂದ ರಸ್ತೆಗಳಲ್ಲೇ ಸುತ್ತಿ ಬಳಸಿ ಹೋಗಬೇಕಾಗಿರಲಿಲ್ಲ. ನೇರ ಕಾಲು ದಾರಿಯಿರುತ್ತಿತ್ತು. ಕಬ್ಬನ್ ಪಾರ್ಕ್ ಪೆರೇಡ್ ಗ್ರೌಂಡ್‌ಗಳ ಮೂಲಕ ಪ್ರತಿನಿತ್ಯ ಓಡಾಡುತ್ತಿದ್ದೆ. ಊರಿನಲ್ಲಿ ಕೇವಲ ಎರಡು ಮೂರು ಮೈಲಿ ನಡೆಯುತ್ತಿದ್ದರೆ ಬೆಂಗಳೂರಿನಲ್ಲಿ ಸುಮಾರು ಎಂಟು ಮೈಲಿಯಷ್ಟು ದೂರ ಶಾಲೆಗಾಗಿ ನಡೆಯಬೇಕಾಯಿತು. ಬೆಳಗ್ಗೆ ಎಂಟು ಗಂಟೆಗೆ ಹೊರಟರೆ ಸಂಜೆ ಆರು ಗಂಟೆಗೆ ನಾನು ಮನೆ ಸೇರುತ್ತಿದ್ದುದು. ಈ ಮಧ್ಯೆ ತಿಂಡಿ ತೀರ್ಥ ಏನೂ ಇರುತ್ತಿರಲಿಲ್ಲ. ತಿನ್ನಲು ಕೈಲಿ ಕಾಸು ಇರುತ್ತಿರಲಿಲ್ಲ. ಹೇಗೋ ನಾಲ್ಕನೇ ಫಾರಂ ಪಾಸಾಯಿತು.

ಐದನೇ ಫಾರಂಗೆ ಮತ್ತೆ ಶಾಲೆಯನ್ನು ಬದಲಾಯಿಸಿದರು. ವೆಸ್ಲೈನ್ ಹೈಸ್ಕೂಲಿಗೆ (ಈಗಿನ ಮಿಷನ್ ಸ್ಕೂಲ್) ಸೇರಿಸಿದರು. ನಾನು ಈ ಶಾಲೆಗೆ ಸೇರಿದಾಗ ಸುಮಾರು 1929–30ನೇ ಇಸವಿ ಇರಬಹುದು. ಈ ಶಾಲೆಯ ಪ್ರಿನ್ಸಿಪಾಲರಾಗಿದ್ದವರು ಲಿಂಡ್ಸೆ ಎನ್ನುವವರು. ಈ ಶಾಲೆಯಲ್ಲಿ ಗುಮಾಸ್ತರಾಗಿ ಕೆಲಸ ಮಾಡುತ್ತಿದ್ದ ಶ್ರೀ ಶಂಕರಪ್ಪನವರ ಮೂಲಕ ಈ ಶಾಲೆಗೆ ನನ್ನನ್ನು ಸೇರಿಸಲು ಸಾಧ್ಯವಾಯಿತು. ವ್ಯವಸಾಯದಿಂದ ವಿಮುಖನಾಗಿ, ಬೇರೆ ಯಾವುದೇ ಇತರ ದೃಷ್ಟಿಗಳಿಲ್ಲದೆ ಜೊತೆಗೆ ನಾನೂ ಕಷ್ಟಪಟ್ಟು, ನನ್ನಣ್ಣನೂ ನನಗಾಗಿ ಕಷ್ಟಪಡುತ್ತಿರುವುದು ಇವುಗಳೆಲ್ಲದರಿಂದ ಮನಸ್ಸು ಓದಿನತ್ತ, ಅನಿವಾರ್ಯವಾಗಿ ಪಾಲಿ ಬೇಸಾಯದ ಹುಚ್ಚಿನಿಂದ ಬಿಡುಗಡೆ ಪಡೆದಂತಾಯಿತು. ಈ ಶಾಲೆಯಲ್ಲೂ ಒಳ್ಳೆಯ ಆಸಕ್ತಿ ಕೆರಳಿಸುವ ಉಪಾಧ್ಯಾಯರುಗಳು ದೊರೆತರು. ಗಣಿತದ ಶ್ರೀ ವೆಂಕಟರಾವ್, ಚರಿತ್ರೆಯ ಶ್ರೀ ವೈದ್ಯನಾಥನ್ ಭೂಗೋಳದ ವೆಂಕಟರಾವ್, ಫಿಸಿಕ್ಸ್‌ನ ರಾಜಣ್ಣ ಮುಂತಾದದವರಿಂದ ನಾನು ಹೆಚ್ಚು ಕಲಿತೆ ಎಂದೇ ಹೇಳಬೇಕು. ಓದಿನ ಕಡೆ ಆಸಕ್ತಿಯೂ ಹುಟ್ಟಿದ್ದರಿಂದ ಕಷ್ಟಪಟ್ಟು ಚೆನ್ನಾಗಿ ಓದಬೇಕು ಎನ್ನಿಸಿತು. ಈ ಶಾಲೆಗೆ ಸೇರಿದ್ದರಿಂದ ಓಡಾಡುವುದು ಸ್ವಲ್ಪ ಕಡಮೆಯಾಗಿ ಸಮಯವೂ ಸಿಕ್ಕುತ್ತಿದ್ದರಿಂದ ಹೆಚ್ಚು ಹೆಚ್ಚು ಶ್ರದ್ಧೆಯಿಂದ ಓದತೊಡಗಿದೆ.

ನನ್ನ ಓದೆಲ್ಲ ಹೆಚ್ಚಾಗಿ ಮನೆಯಿಂದ ಹೊರಗಡೆಯೇ ನಡೆಯುತ್ತಿತ್ತು. ಶಾಲೆಯಿಂದ ಬಂದ ಕೂಡಲೆ ಅಲ್ಲಿಂದಲೇ ನೇರವಾಗಿ ಸಾರ್ವಜನಿಕ ಗ್ರಂಥಾಲಯಕ್ಕೋ, ಕಬ್ಬನ್‌ಪಾರ್ಕಿಗೋ, ಲಾಲ್‌ಬಾಗಿಗೋ ಹೋಗಿ ಕತ್ತಲಾಗುವವರೆಗೆ ಅಲ್ಲೇ ಓದಿ–ಬರೆದುಕೊಂಡು ಮನೆಗೆ ಬರುತ್ತಿದ್ದೆ. ಏಕೆಂದರೆ ಮನೆಯಲ್ಲಿ ಓದುವಂತಹ ವಾತಾವರಣ ಇರಲಿಲ್ಲ. ಮನೆ ಎಂದರೆ ಅದು ಒಂದು ಕೊಠಡಿಯಷ್ಟು ಮಾತ್ರ. ಅಂಥ ಹತ್ತಾರು ಮನೆಗಳ ವಠಾರ ಅದು. ಎರಡೂ ಕಡೆ ಮನೆಗಳು, ನಡುವೆ ಓಡಾಟಕ್ಕೆ ದಾರಿ. ಆಗ ಈಗಿನಂತೆ ಒಳಚರಂಡಿ ವ್ಯವಸ್ಥೆ ಇಲ್ಲದ್ದರಿಂದ ಅಥವಾ ಎಲ್ಲ ಕಡೆಯೂ ಇಲ್ಲದ್ದರಿಂದ ನಾವಿದ್ದ ಮನೆಗೂ ಇರಲಿಲ್ಲ. ಬಾಗಿಲಿಗೆ ನೇರವಾಗಿ ಮನೆಯ ಹಿಂಭಾಗದಲ್ಲಿ ಚರಂಡಿಯು ನೀರು ಕಕ್ಕಸಿನ ನೀರು ಎಲ್ಲ ಒಟ್ಟಿಗೇ ಹರಿಯುತ್ತಿತ್ತು. ಕಕ್ಕಸ್ಸು ಸಹ ಈ ಚರಂಡಿಯ

ಮಧ್ಯದಲ್ಲಿಯೇ ಇತ್ತು. ಆಗಾಗ್ಗೆ ಅದನ್ನು ಹೊತ್ತು ಹೊರಗೆ ಹಾಕುತ್ತಿದ್ದರು. ಆ ವಠಾರದಲ್ಲಿ ಓಡಾಡಬೇಕಾದರೆ ಮೂಗು ಬಾಯಿ ಮುಚ್ಚಿಕೊಂಡು ಓಡಾಡಬೇಕಾಗುತ್ತಿತ್ತು. ಇಂಥ ವಾತಾವರಣದಲ್ಲಿ ನಾನು ಓದಬೇಕಾಯಿತು. ಇದನ್ನು ನೆನೆಸಿಕೊಂಡಾಗ ರಾಷ್ಟ್ರಕವಿ ಕುವೆಂಪು ಅವರು ತಮ್ಮ ನೆನಪಿನ ದೋಣಿಯಲ್ಲಿ ಬರೆದುಕೊಂಡಿರುವ ಅವರು ಓದಲು ಕುಪ್ಪಳಿಯಿಂದ ಮೈಸೂರಿಗೆ ಬಂದು ನೆಲೆಸಿದಾಗ ಇದ್ದ ಹೋಟೇಲಿನ ಇಂಥದೇ ಚಿತ್ರ ನೆನಪಿಗೆ ಬರುತ್ತದೆ. ಈ ವಾತಾವರಣವೂ ನನ್ನ ಮನಸ್ಸಿನಲ್ಲಿ ಓದುವುದಕ್ಕೆ ಒತ್ತಾಸೆಯನ್ನು ಮೂಡಿಸಿತು ಎಂದು ಅಂದುಕೊಂಡಿದ್ದೇನೆ.

ಬಹುಶಃ ನಾನು ಊರಲ್ಲಿ ಇದ್ದಿದ್ದರೆ ಇಂಥ ಕಷ್ಟದ ಕಾರ್ಪಣ್ಯದ ಅನುಭವವಾಗುತ್ತಿರಲಿಲ್ಲ. ಓದಿನ ಮಹತ್ವ ಗೊತ್ತಾಗುತ್ತಿರಲಿಲ್ಲ. ಸುಖದ ನೆಮ್ಮದಿಯ ಆ ವಾತಾವರಣದಲ್ಲಿ ಓದುವ ಮನಸ್ಸು ಮೂಡುತ್ತಿರಲಿಲ್ಲ ಎನಿಸುತ್ತದೆ. ಇದೇ ವಾತಾವರಣದಲ್ಲಿ ಓದಿ ಕೆಲಸಕ್ಕೆ ಸೇರಿರುವ ನನ್ನ ಪ್ರೀತಿಯ ಅಣ್ಣ ನನಗಾಗಿ ನನ್ನ ಓದಿಗಾಗಿ ಎಷ್ಟು ಕಷ್ಟಪಡುತ್ತಿದ್ದಾನೆ ಎಂಬುದೂ ನನ್ನನ್ನೂ ಹೆಚ್ಚು ಹೆಚ್ಚು ಓದುವಂತೆ ಮಾಡಿತು.

ಐದನೇ ಫಾರಂ ಕೂಡ ಪಾಸಾಗಿ ನಾನು ಆರನೇ ಫಾರಂಗೆ (ಅಂದರೆ ಈಗಿನ ಎಸ್. ಎಸ್. ಎಲ್. ಸಿ.) ಬಂದೆ. ಶಾಲೆಯ ಗುಮಾಸ್ತರಾಗಿದ್ದ ಶ್ರೀ ಶಂಕರಪ್ಪನವರು ಒಂದು ದಿನ ನನ್ನನ್ನು ಕರೆದು ಪುಟ್ಟಸರಸಯ್ಯ ಎಲ್ಲಿ ನಿನ್ನ ಟಿ.ಸಿ.ಯಲ್ಲಿ ಹುಟ್ಟಿದ ದಿನಾಂಕ ಬರೆದಿಲ್ಲ? ನಿನ್ನ ಹುಟ್ಟಿದ ದಿನಾಂಕ ಯಾವುದು ? ಎಂದು ಕೇಳಿದರು. ನಾನು ಊರಿಗೆ ಹೋಗಿ ತಂದು ಕೊಡುತ್ತೇನೆಂದು ಹೇಳಿದೆನಾದರೂ ನನಗೆ ವಾಸ್ತವವಾಗಿ ಆ ಬಗ್ಗೆ ತಿಳುವಳಿಕೆಯೇ ಇರಲಿಲ್ಲ. ಅಣ್ಣನಾದಿಯಾಗಿ ಊರಿನಲ್ಲಿ ಎಲ್ಲರನ್ನೂ ವಿಚಾರಿಸಲಾಗಿ ಯಾರಿಂದಲೂ ನನ್ನ ಹುಟ್ಟಿದ ದಿನಾಂಕ ತಿಳಿಯಲಿಲ್ಲ. ತ್ಯಾಮಗೊಂಡ್ಲು ಮಿಡಲ್ ಶಾಲೆಯಲ್ಲೂ ಇರಲಿಲ್ಲ. ನಾನು ಹುಟ್ಟಿದ್ದಾಗ ತಂದೆಯವರು ಬರೆಸಿದ್ದ ನೆನಪಿನ ಮೇಲೆ ಮನೆಯೆಲ್ಲ ಹುಡುಕಿದಾಗ ದಿನಾಂಕದ ಭಾಗ ಹರಿದು ಹೋಗಿದ್ದ ಅರ್ಧ ಜಾತಕ ಮಾತ್ರ ಸಿಕ್ಕಿತು. ಅದನ್ನೂ ಸಹ ನನ್ನ 20ನೆಯ ವಯಸ್ಸಿನವರೆಗೆ ಬರೆದಿದ್ದರು. ಮುಂದು ವರಿಸಿರಲಿಲ್ಲ. ಅದನ್ನೂ ಬರೆದಿದ್ದ ನಮ್ಮೂರಿನವರೇ ಆದ ಭದ್ರಾಚಾರ್ ಅವರೂ ನಾಪತ್ತೆಯಾಗಿದ್ದರು. ಕೊನೆಗೂ ನನ್ನ ಹುಟ್ಟಿದ ದಿನಾಂಕ ನನಗೆ ಸಿಗಲಿಲ್ಲ. ಹಾಗೆಂದೇ ಶಂಕರಯ್ಯನವರಿಗೆ ಹೇಳುವಂತಿಲ್ಲ : ಒಂದು ದಿನಾಂಕ ಕೊಡಲೇ ಬೇಕು. ಕೊನೆಗೆ ಮನೆಯವರು ಹೇಳಿದ ಅಂದಾಜಿನ ಮೇಲೆ ಯುಗಾದಿ ಹಬ್ಬದ ದಿನವಾದ ಮಾರ್ಚ್ 24-3-1914 ಎಂದು ತಿಳಿಸಿದೆ. ಅದನ್ನೇ ದಾಖಲಿಸಿಕೊಂಡರು. ಇಂದಿಗೂ ನನ್ನ ಅಧಿಕೃತ ಹುಟ್ಟಿದ ದಿನಾಂಕ ಇದೇ.

ಕುತೂಹಲದಿಂದ ನಿವೃತ್ತಿಯಾಗುವ ಸಮಯದಲ್ಲಿ ಈ ಬಗ್ಗೆ ಪರಿಶೋಧನೆ ನಡೆಸಿದಾಗ ತಾಲ್ಲೂಕು ಕಚೇರಿಯಲ್ಲಿನ ದಾಖಲೆಯೊಂದು ಸಿಕ್ಕಿ ಅದರಲ್ಲಿ 8-6-1913

ಎಂದು ದೊರಕಿತಾದರೂ ಇದು ಅನಧಿಕೃತ ದಾಖಲೆಯಾಯಿತು. ಅಧಿಕೃತ ದಾಖಲೆಯೆ ಅನಧಿಕೃತವಾಗಿ, ಅನಧಿಕೃತ ದಾಖಲೆಯೇ ಅಧಿಕೃತವಾದ ನನ್ನ ಹುಟ್ಟಿದ ದಿನಾಂಕದ ಈ ವಿಚಿತ್ರಕ್ಕೆ ಏನು ಹೇಳಲಿ ?

ಆರನೇ ಫಾರಂನಲ್ಲೂ (ಎಸ್. ಎಸ್. ಎಲ್. ಸಿ.ಯಲ್ಲಿ) ನಾನು ಮೊದಲ ಬಾರಿಗೇ (1913ನೇ ವರ್ಷ) ತೇರ್ಗಡೆಯಾದೆ. ಇದರಿಂದ ಸಂತೋಷಗೊಂಡ ಅಣ್ಣ ನನ್ನನ್ನು ಮುಂದಕ್ಕೆ ಓದಲು ಪ್ರೋತ್ಸಾಹಿಸಿದರು. ನನಗೂ ಓದುವ ಹುರುಪು ಈಗಾಗಲೇ ಬಂದಿತ್ತು. ಊರಿನಲ್ಲೂ ನನ್ನ ಓದನ್ನು ತಡೆಯುವಂಥ ವಾತಾವರಣ ಇರಲಿಲ್ಲ. ತಂದೆ ಚಿಕ್ಕಣ್ಣನವರಿಗೂ ತಾಯಿ ಭೈರಮ್ಮನವರಿಗೂ ಮಗ ಚೆನ್ನಾಗಿ ಓದುತ್ತಿದ್ದ ಬಗ್ಗೆ ಅಭಿಮಾನ ಮೂಡಿತ್ತು. ಹೀಗಾಗಿ ನಾನು 'ಇಂಟರ್' ಓದಲು ಮುಂದಾದೆ.

1931ರಲ್ಲಿ ಇಂಟರ್‌ಮೀಡಿಯಟ್ ಕಾಲೇಜನ್ನು ಸೇರಿದೆ. ನನ್ನ ಓದಿನ ಉತ್ಸಾಹ ಇಲ್ಲಿ ಇನ್ನಷ್ಟು ಗರಿಗೆದರಿತು. ಅತ್ಯುತ್ತಮ ಅಧ್ಯಾಪಕರ ತಂಡವೇ ಅಲ್ಲಿತ್ತು. ಕೆಲವೇ ದಿನಗಳ ತರಗತಿಗಳನ್ನು ಕೇಳಿದೊಡನೆಯೇ ಘಟಾನುಘಟಿಗಳು, ಪಂಡಿತೋತ್ತಮರುಗಳ ಶಿಷ್ಯನಾಗಿದ್ದೇನೆಂಬ ಹೆಮ್ಮೆ ಬಂದಿತು. 'ಗುರುಗಳು' ಎಂದರೆ ಹೀಗಿರಬೇಕು ಎನ್ನುವಂಥ ಆದರ್ಶ ಗುರುಗಳು ಅಲ್ಲಿದ್ದರು. ಪ್ರಸಿದ್ಧ ಸಾಹಿತಿ–ವಿದ್ವಾಂಸರೂ ಕನ್ನಡದ ದಿಗ್ಗಜರೂ ಆಗಿದ್ದ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು, ವಿ. ಸೀತಾರಾಮಯ್ಯನವರು, ಎಂ. ವಿ. ಕೃಷ್ಣರಾವ್, ತಿರುಮಲೈ, ಪ್ರಣತಾರ್ಥಿಹರನ್ ಮುಂತಾದ ಮಹಾಮಹೋಪಾಧ್ಯಾಯರುಗಳ ಸೊಗಸಾದ ಪಾಠಗಳನ್ನು ಕೇಳುವುದೇ ಒಂದು ಸುಯೋಗವಾಗಿತ್ತು. ಇತಿಹಾಸ ಮತ್ತು ತರ್ಕಶಾಸ್ತ್ರವನ್ನು ನಾನು ವಿಶೇಷ ವಿಷಯವಾಗಿ ತೆಗೆದುಕೊಂಡು ಓದುತ್ತಿದ್ದೆ. ನನ್ನ ಇಂಟರ್ ವಿದ್ಯಾಭ್ಯಾಸ ತುಂಬ ತೃಪ್ತಿಕರವಾಗಿ ಸಾಗುತ್ತಿತ್ತು.

ಅವರೆ ಊರಲ್ಲಿ ಒಂದರ ಮೇಲೊಂದು ದುರ್ಘಟನೆಗಳು ಜರುಗಿ ಮನಸ್ಸನ್ನು ಘಾಸಿಗೊಳಿಸಿದವು. ಸಾವಿನ ಮೇಲೆ ಸಾವೆಂಬಂತೆ ಒಂದೇ ವರ್ಷದಲ್ಲಿ ಹಲವಾರು ಘಟನೆಗಳು ಸಂಭವಿಸಿದವು. ಮೊದಲಿಗೆ ನಮ್ಮ ತಾಯಿಯ ತಾಯಿ ತಿಮ್ಮಕ್ಕಜ್ಜಿ ದೈವಾಧೀನರಾದರು. ಕೆಲ ದಿನಗಳಲ್ಲೇ ಕರಿಯಣ್ಣ ಮಾವನ ಹೆಂಡತಿ ತೀರಿಕೊಂಡರು. ತಂದೆಯವರು ಮಕ್ಕಳಪಾಲನೆ ಪೋಷಣೆಗೆ ಇನ್ನೊಂದು ಲಗ್ನ ಮಾಡಿಸಿದರಾದರೂ ಆಕೆಯೂ ಕೆಲವೇ ತಿಂಗಳುಗಳಲ್ಲಿ ಅಸುನೀಗಿದರು. ಇವರ ಹಿಂದೆಯೇ ಕರಿಯಣ್ಣ ಮಾವನೂ ತೀರಿಕೊಂಡರು. ತಿಮ್ಮಭೈರಣ್ಣನವರ ಹೆಂಡತಿ ದೊಡ್ಡತ್ತೆ ಅಕ್ಕಯ್ಯಮ್ಮನೂ ಕಾಲವಾದರು.

ಈ ಎಲ್ಲ ಘಟನೆಗಳಿಂದ ಯಾರಿಗೆ ತಾನೆ ಆಘಾತವಾಗುವುದಿಲ್ಲ. ಇವನ್ನೆಲ್ಲ ಸಹಿಸಿದ ತಂದೆ ಚಿಕ್ಕಣ್ಣನವರೂ ಸ್ವಲ್ಪ ದಿನಗಳಲ್ಲೇ ಅಸ್ವಸ್ಥರಾದರು. ಹಾಸಿಗೆ ಹಿಡಿದರು.

ನಾನು ಸೀನಿಯರ್ ಇಂಟರ್‌ನಲ್ಲಿದ್ದೆ. ಆ ವರ್ಷ (1932) ನಮಗೆ ರಾಘವಾಂಕನ 'ಹರಿಶ್ಚಂದ್ರ ಕಾವ್ಯ' ಇತ್ತು. ಅಪ್ಪನ ಹಾಸಿಗೆಯ ಪಕ್ಕದಲ್ಲಿ ಕುಳಿತು ಆ ಪದ್ಯಗಳನ್ನು

ಸರಾಗವಾಗಿ ಓದುತ್ತಿದ್ದೆ. ಅಪ್ಪ ತುಂಬ ಇಷ್ಟಪಟ್ಟು ಆಲಿಸುತ್ತಿದ್ದರು. ಸಂಜೆ ಸಮಯ ಹೊಂಗೆ ಎಣ್ಣೆ ದೀಪದ ಬೆಳಕಿನಲ್ಲಿ ನಾನು ಓದುತ್ತಿದ್ದ ಕಾವ್ಯಭಾಗಗಳನ್ನು ತಂದೆಯಾದಿಯಾಗಿ ಎಲ್ಲರೂ ಆಸಕ್ತಿಯಿಂದ ಕೇಳುತ್ತಿದ್ದರು.

ನಂದಗೋಕುಲದಂತಿದ್ದ ದೊಡ್ಡಮನೆಯಲ್ಲಿ ಮೇಲಿಂದ ಮೇಲೆ ದುರ್ಘಟನೆಗಳು ಸಂಭವಿಸಿದ್ದನ್ನು ನೋಡಿ ಊರವರು ಮರುಗಿದರು. ಈ ಮನೆಯಲ್ಲಿ ಏನೋ ದೋಷವಿರಬೇಕೆಂದು ಮಾತಾಡತೊಡಗಿದರು. ಈ ಮಾತು ಅಪ್ಪನ ಕಿವಿಗೂ ಬಿತ್ತು. ಅವರಿಗೂ ಇರಬಹುದೆನಿಸಿರಬೇಕು, ಮನೆಯನ್ನು ಬಿಡಲು ತೀರ್ಮಾನಿಸಿದರು. ಕೆಲಕಾಲದ ಮಟ್ಟಿಗಾದರೂ ಬಿಡುವ ಬಗ್ಗೆ ಮಾವಂದಿರೂ ಒಪ್ಪಿ ಮನೆ ಬಿಟ್ಟು ನಮ್ಮ ಬಂಧುಗಳಾದ ಕೊನಯ್ಯನವರು ಗೋಣಿಪುರದ ಹತ್ತಿರ ಕಟ್ಟಿಸಿದ ಮನೆಗೆ ಹೋಗಿ ಸೇರಿಕೊಂಡೆವು.

ದೊಡ್ಡಮನೆಯಲ್ಲಿದ್ದ ನಮಗೆ ಈ ಸಣ್ಣ ಮನೆ ಸಾಕಾಗಲಿಲ್ಲ. ವಾಸಕ್ಕೆ ದನ–ಕುರಿಗಳಿಗೆ ಯಾವುದಕ್ಕೂ ಕಿರಿದಾಯಿತು. ಆದರೂ ಅದರ ಪಕ್ಕದಲ್ಲೇ ನಮ್ಮದೇ ಹೆಂಚಿನ ಮನೆಯಿದ್ದುದರಿಂದ ಹೊಂದಿಸಿಕೊಂಡರು. ಅಂಗಳ ದೊಡ್ಡದಾಗಿದ್ದರೂ ಮನೆ ಚಿಕ್ಕದಾಗಿತ್ತು. ಹೆಂಚಿನ ಮನೆಯನ್ನು ಕುರಿ–ದನಗಳನ್ನು ಕಟ್ಟಲು ಬಳಸಿಕೊಂಡು ಅದರ ಮುಂಭಾಗದಲ್ಲಿದ್ದ ನಮ್ಮ ಇನ್ನೊಂದು ಸಣ್ಣ ಮನೆಯನ್ನು, ಅಂಗಡಿ ಮನೆಯನ್ನು ಬಳಸಿಕೊಂಡು ಮಹಡಿ ಮನೆಬಿಟ್ಟು ಮಾಳಿಗೆ ಮನೆಯಲ್ಲಿ ಸಂಸಾರ ಹೂಡಿದರು. ಈ ಹೊಸ ಮನೆಯಲ್ಲಿ ಸ್ವಲ್ಪ ದಿನಗಳವರೆಗೆ ಶಮನಗೊಂಡಿದ್ದ ತಂದೆಯವರ ಖಾಯಿಲೆ ಮತ್ತೆ ಉಲ್ಬಣಾವಸ್ಥೆಗೆ ತಿರುಗಿತು.

1933 ನಾನು ಸೀನಿಯರ್ ಇಂಟರ್ ಪರೀಕ್ಷೆ ಕಟ್ಟಿದ್ದೆ. ಮಾರ್ಚ್ ಅಥವಾ ಏಪ್ರಿಲ್‌ನಲ್ಲಿ ಪರೀಕ್ಷೆ ಇತ್ತು. ಶ್ರದ್ಧೆಯಿಂದ ಕಷ್ಟಪಟ್ಟು ಓದುತ್ತಿದ್ದೆ. ಊರಿಂದ ತಂದೆಯವರ ಖಾಯಿಲೆಯ ಸುದ್ದಿ ಬಂತು. ದೌಡಾಯಿಸಿದೆ. 8–10 ದಿನಗಳವರೆಗೆ ಅಲ್ಲೇ ಉಳಿದೆ. ದಿನೇ ದಿನೇ ಖಾಯಿಲೆ ಜಾಸ್ತಿಯಾಗುತ್ತಿತ್ತು. ವಿವಿಧ ರೀತಿಯ ಔಷಧೋಪಚಾರಗಳಾದವು. ಯಾರು ಏನು ಹೇಳಿದರು ಅದನ್ನು ಕೂಡಲೆ ಮಾಡಿಸುತ್ತಿದ್ದೆವು. ದೊಡ್ಡಬಳ್ಳಾಪುರ ತಾಲ್ಲೂಕಿನ ಪುಟ್ಟೇನಹಳ್ಳಿಯ ಆಯುರ್ವೇದ ವೈದ್ಯರಾದ ವೀರಪ್ಪನವರು ಒಂದೆರಡು ತಿಂಗಳಿಂದ ನಮ್ಮ ಮನೆಯಲ್ಲೇ ಇದ್ದು ವೈದ್ಯೋಪಚಾರ ಮಾಡುತ್ತಿದ್ದರು. ತ್ಯಾಮಗೊಂಡ್ಲುವಿನ ಒಬ್ಬ ವೈದ್ಯೆ ಮುಂದೆ ಬಂದಳಾದರೂ ಆಕೆಯಿಂದಲೂ ಸಾಧ್ಯವಾಗಲಿಲ್ಲ. ಜ್ವರದ ತಾಪ ದಿನೇ ದಿನೇ ಏರುತ್ತಲೇ ಇತ್ತು. ಆಗ ಅಲೋಪತಿ ವೈದ್ಯ ಅಷ್ಟು ಪ್ರಚಾರಕ್ಕೆ ಬಂದಿರಲಿಲ್ಲ.

ಒಂದು ರಾತ್ರಿ ನಾನು ಅಂಗಡಿ ಮನೆಯಲ್ಲಿ ಮಲಗಿದ್ದೆ. ಹೊಲ ಉತ್ತು ಬಂದು ನಾನು ಗಾಢ ನಿದ್ರೆಯಲ್ಲಿದ್ದೆ. ಅತ್ತಿಗೆಯವರು ಬಂದು ತಾತ ಹೇಗೇಗೋ ಆಡುತ್ತಿದ್ದಾರೆ; ನೋಡಪ್ಪ ಎಂದು ಎಬ್ಬಿಸಿದರು. ಕೂಡಲೆ ಧಾವಿಸಿದೆ. ಒಂದು ದಿಂಬಿಗೆ ಆಶ್ರಯಿಸಿ ಗೋಡೆಗೆ ಆತುಕೊಂಡು ಮಲಗಿ ಸಂಕಟಪಡುತ್ತಿದ್ದ ಅಪ್ಪ ನಿಸ್ತೇಜರಾಗಿ

ದ್ದರು. ಆ ಸಂಕಟದ ನಡುವೆಯೂ 'ಓಂ ನಮಃ ಶಿವಾಯ' ಎಂಬ ಶಿವಮಂತ್ರವನ್ನು ಪಠಿಸುತ್ತಿದ್ದರು. ನಮ್ಮನ್ನು ನೋಡು ನೋಡುತ್ತಲೇ ಕಣ್ಣುಮುಚ್ಚಿದವರು ; ಮತ್ತೆ ತೆರೆಯಲೇ ಇಲ್ಲ. ಅವರ ಆತ್ಮ ಪಂಚ ಭೂತಗಳಲ್ಲಿ ಸೇರಿ ಹೋಯ್ತು. 'ಶರಣರ ಪರೀಕ್ಷೆ ಮರಣದಲ್ಲಿ' ಎಂಬಂತೆ ಸಾವಿನಲ್ಲೂ ಧೀರೋತ್ತತೆಯನ್ನು ಮೆರೆದ ಅಪ್ಪನ ಸಾವು ನಿಜಕ್ಕೂ ಒಳ್ಳೆಯ ಸಾವು.

ದೊಡ್ಡ ಮನೆಯ ಯಜಮಾನಪ್ಪನವರನ್ನು ಕಳೆದುಕೊಂಡು ನಾವೆಲ್ಲ ನಿಜಕ್ಕೂ ಅನಾಥರಾದೆವು ; ಮಾವಂದಿರಿಗಂತೂ ದಿಕ್ಕೇ ತೋಚದಾಯಿತು. ಹೊಸದಾಗಿ ಸೇರಿಕೊಂಡಿದ್ದ ಕೊಸಯ್ಯನವರ ಮನೆಯನ್ನು ಸಹ ತಂದೆಯವರ ಸಾವಿನ ಹಿನ್ನೆಲೆಯಲ್ಲಿ ಬಿಡಬೇಕಾಗಿ ಬಂತು. ಮಾವನವರು ಮತ್ತು ತಾಯಿ ಭೈರಮ್ಮ ಮನೆ ಬಿಡುವ ನಿರ್ಧಾರಕ್ಕೆ ಬಂದರು. ಬಂಧು-ಬಳಗ, ನೆರೆ-ಹೊರೆಯ ಎಲ್ಲರೂ ಮನೆ ಬಿಡುವುದೊಳ್ಳೆಯದೆಂದೇ ಹೇಳತೊಡಗಿದರು.

ಮಾವಂದಿರು, ಬಂಧುಗಳು, ಜ್ಞಾನಿಗಳು, ಹೀಗೆ ಅನೇಕರು ಊರನ್ನೇ ಬಿಟ್ಟು ಊರಿನ ಉತ್ತರಕ್ಕಿರುವ ತಮ್ಮ ತಮ್ಮ ಹೊಲಗಳಲ್ಲಿ ಮನೆಗಳನ್ನು ಕಟ್ಟಿ ಅಲ್ಲಿಗೆ ಹೋಗುವುದೆಂದು ತೀರ್ಮಾನಿಸಿ ಕಾರ್ಯಪ್ರವೃತ್ತರಾದರು. ಶೀಘ್ರ ಶೀಘ್ರವಾಗಿ ಮನೆಗಳು ಎದ್ದವು, ಹೊಸ ಮನೆಗಳಿಗೆ ಸಂಸಾರಗಳನ್ನು ಸ್ಥಳಾಂತರಿಸಿದರು. ಹತ್ತಾರು ಮನೆಗಳು ಅಲ್ಲಿ ಇದ್ದುದರಿಂದ ಅದೂ ಒಂದು ಊರೆನಿಸಿತು. ಅದನ್ನು ಜನ 'ಕೊಡಿಗೇಹಳ್ಳಿ ಹೊಸಪಾಳ್ಯ' ಎಂದು ಕರೆದರು. ಹೊಸಪಾಳ್ಯ ಎಂದೇ ಜನರಲ್ಲಿ ಉಳಿಯಿತು. ಹೊಸಪಾಳ್ಯ ಇಂದು ಒಂದು ಮುಜರೆ ಗ್ರಾಮವಾಗಿದೆ. ಸ್ವತಂತ್ರ ಊರು ಎನ್ನುವಷ್ಟರ ಮಟ್ಟಿಗೆ ಬೆಳೆದಿದೆ.

ಸಾಮಾನ್ಯವಾಗಿ ಊರುಗಳು ಹುಟ್ಟುವುದೇ ಹೀಗೆ. ಮೊದಲು ಕೆಲವರು ವಾಸಿಸಲು ಹೋಗುತ್ತಾರೆ. ಅನಂತರ ಅವರ ಬಂಧು-ಬಳಗ, ಬೇಕಾದವರು, ವಿವಿಧ ವೃತ್ತಿಯವರು ಹೀಗೆ ಮನೆಗಳಾಗುತ್ತವೆ. ಅದಕ್ಕೊಂದು ಹೆಸರುಬೇಕು. ಎಲ್ಲಿಗೆ ಹೋಗಿದ್ದಾರೆಂದು ಹೇಳಲು ಗುರುತು ಬೇಕು. ಅದಕ್ಕೆ ಆ ಸ್ಥಳದ ಪ್ರಾದೇಶಿಕ ವೈಶಿಷ್ಟ್ಯವೋ ಆ ಊರಿಗೆ ಬಂದ ಮೊದಲಿಗರ ಹೆಸರೇ ಊರಿನ ಹೆಸರಾಗುತ್ತದೆ. ಕೊಡಿಗೇಹಳ್ಳಿ ಹೆಸರು ಊರಿನಲ್ಲಿ ಮೊದಲು ಸಂಸಾರ ಹೂಡಿದ ಕೊಡಗಯ್ಯನಿಂದ ಬಂದಿರಬಹುದೆನೋ.

ಹೊಸಪಾಳ್ಯದಂಥ ಊರನ್ನು ನಿರ್ಮಿಸಲು ದೊಡ್ಡ ಮನೆಯ ಕುಟುಂಬ ಕಾರಣವಾಗಿ ಇತಿಹಾಸ ಸೃಷ್ಟಿಸಿರುವುದು ಸೋಜಿಗವೇ ಸರಿ.

# ಸರ್ಕಾರಿ ಸೇವೆಗಳು

ನಾನು 1933ರಲ್ಲಿ ಇಂಟರ್ ಮೀಡಿಯೆಟ್ ಮುಗಿಸಿ ಮುಂದೆ ಹೆಚ್ಚಿನ ವಿದ್ಯಾಭ್ಯಾಸ ಮಾಡಬೇಕೆಂದಿದ್ದೆ. ಅದೇ ಸಮಯದಲ್ಲಿ ರೆವಿನ್ಯೂ ಕಮೀಷನ್ ಆಫೀಸಿಗೆ 20 ಜನ ಪ್ರೊಬೇಷನರಿ ರೆವಿನ್ಯೂ ಇನ್ಸ್‌ಪೆಕ್ಟರ್‌ಗಳನ್ನು ನೇಮಿಸಿಕೊಳ್ಳಲು ಸರ್ಕಾರದಿಂದ ಪ್ರಕಟನೆ ಬಂದಿರುತ್ತದೆಂದು ನಮ್ಮ ಅಣ್ಣನವರು ನೋಟಿಫಿಕೇಷನನ್ನು ನನಗೆ ತೋರಿಸಿದರು. ಈ ಹುದ್ದೆಗೆ ಕನಿಷ್ಠ ವಿದ್ಯಾರ್ಹತೆ ಸೀನಿಯರ್ ಇಂಟರ್‌ಮೀಡಿಯೆಟ್ ಎಂದಿತ್ತು. ಆಗ ತಾನೇ ನಾನು ಇಂಟರ್‌ಮೀಡಿಯೆಟ್ ಪಾಸ್ ಮಾಡಿದ್ದೆ. ನನ್ನ ಅಣ್ಣನ ಆದೇಶದಂತೆ ಕೂಡಲೆ ನಾನು ಅರ್ಜಿ ಸಲ್ಲಿಸಿದೆ. ನನ್ನ ಅಣ್ಣನಿಗೆ ಬರುತ್ತಿದ್ದ 30 ರೂಪಾಯಿ ಸಂಬಳದಲ್ಲಿ ಜೀವನ ನಡೆಸುವುದು ಸಾಧ್ಯವಾಗುವುದಿಲ್ಲವೆಂಬ ಸಂಶಯದಿಂದ ನಾನು ಕೆಲಸಕ್ಕೆ ಸೇರಲು ತೀರ್ಮಾನಿಸಿದೆ. ಆಗ ರೆವಿನ್ಯೂ ಇನ್ಸ್‌ಪೆಕ್ತರ್ ಹುದ್ದೆಗೆ ಸುಮಾರು 170 ಜನಗಳು ಅರ್ಜಿ ಸಲ್ಲಿಸಿದ್ದರು. ಅವರುಗಳಲ್ಲಿ ಎಲ್ಲರೂ ಬಿ.ಎ. ಮತ್ತು ಎಂ.ಎ. ಪದವೀಧರರೆ ನಾನೊಬ್ಬನು ಮಾತ್ರ ಮಿನಿಮಂ ಅರ್ಹತೆ ಇದ್ದವನು. ಇಂಟರ್ ಮೀಡಿಯೆಟ್ ಮಾಡಿದ್ದ ನಮ್ಮ ಜನಾಂಗದವರೇ ಆದ ಶ್ರೀ ಮರುಳಪ್ಪನವರು ಒಬ್ಬರು ಎಂ.ಎ. ಪದವಿಧರರು ಸಹ ಅರ್ಜಿ ಸಲ್ಲಿಸಿದ್ದರು. ನನಗೂ ಇಂಟರ್‌ವ್ಯೂ ಬಂತು ಇಂಟರ್‌ವ್ಯೂಗೆ ಹಾಜರಾದೆ. ಆಯ್ಕೆ ಸಮಿತಿಯವರು ಯಾವುದೋ ಪ್ರಶ್ನೆ ಕೇಳಿದರು. ನಾನು ಉತ್ತರಿಸಿದೆ. ಅದು ನನಗೆ ಜ್ಞಾಪಕವಿಲ್ಲ. ನನ್ನನ್ನು ಆ ಹುದ್ದೆಗೆ ಆಯ್ಕೆ ಮಾಡಲಿಲ್ಲ. ನಮ್ಮ ಜನಾಂಗದವರೇ ಆಗಿದ್ದ ಎಂ.ಎ. ಪಾಸ್ ಮಾಡಿದ್ದ ಕೆ. ಎಂ. ಮರುಳಪ್ಪನವರನ್ನೇ ಆಯ್ಕೆ ಮಾಡಿದರು. ಇತರ 19 ಜನರ ಆಯ್ಕೆಯೂ ಆಯಿತು. ಆಯ್ಕೆ ಪಟ್ಟಿಯನ್ನು ಪ್ರಕಟಿಸಿದರು. ಅನಂತರ ಆಯ್ಕೆಯಾಗಿದ್ದ ಶ್ರೀ ಕೆ. ಮರುಳಪ್ಪನವರಿಗೆ ಅಕಾರ ಕಛೇರಿಯಲ್ಲಿ ಹೆಚ್ಚಿನ ದರ್ಜೆಯ ಹುದ್ದೆ ಸಿಕ್ಕಿದ ಕಾರಣ ರೆವಿನ್ಯೂ ಇನ್ಸ್‌ಪೆಕ್ಟರ್ ಹುದ್ದೆಗೆ ಸೇರದೆ ರಾಜೀನಾಮೆ ಕೊಟ್ಟರು. ಆ ವಿಷಯವನ್ನು ನಮ್ಮ ಅಣ್ಣನವರು ನನಗೆ ತಿಳಿಸಿದರು. ನಾವು ಮತ್ತೊಮ್ಮೆ ಈ ಹುದ್ದೆಗೆ ಸತತ ಪ್ರಯತ್ನ ಪಡೆಯಬೇಕಾಯಿತು. ಆದರೆ ನನ್ನ ಮೇಲೆ ನಮ್ಮ ಜನಾಂಗದವರಾದ ಇತರೆ 3 ಜನ ಬಿ.ಎ. ಪಾಸ್ ಮಾಡಿರುವ ಅಭ್ಯರ್ಥಿಗಳಿರುವಾಗ ನನಗೆ ಆಗಲೂ ಕೆಲಸ ಸಿಗುವುದೇ ಅನುಮಾನವಿತ್ತು. ಅನಂತರ ನಮ್ಮ ಮನೆಯ ಹಿತೈಷಿಗಳಾಗಿದ್ದ, ಹಾಗೂ ಬಂಧುಗಳಂತಿದ್ದ, ಆಗ ಮೊದಲನೇ ಕೌನ್ಸಿಲರ್ ಆಗಿದ್ದ ಶ್ರೀ ಮಾರ್ಥ ಸಾಹೇಬರವರ ಕಚೇರಿಯಲ್ಲಿ ಕೆಲಸ ಮಾಡುತ್ತಿದ್ದ ಶ್ರೀ ಲಿಂಗಯ್ಯನವರ ಮೂಲಕ ಪ್ರಯತ್ನ ಪಡುತ್ತೇನೆಂದು ನನ್ನ ಅಣ್ಣ ತಿಳಿಸಿದರು. ಅಂತೂ ಕಡೆಯಲ್ಲಿ ಅವರ ಶ್ರದ್ಧಾಪೂರ್ವಕ ಪ್ರಯತ್ನದಿಂದಾಗಿ

ಹಾಗೂ ದೈವಬಲದಿಂದ ರೆವಿನ್ಯೂ ಇನ್ಸ್‌ಪೆಕ್ಟರ್ ಹುದ್ದೆಯು ನನಗೆ ದೊರಕಿತು. 20 ರೆವಿನ್ಯೂ ಇನ್ಸ್‌ಪೆಕ್ಟರ್‌ಗಳ ಪೈಕಿ 19 ಜನರು ಎಂ.ಎ. ಅಥವಾ ಬಿ.ಎ. ಪದವೀಧರರು ನಾನೊಬ್ಬನೇ ಇಂಟರ್ ಮೀಡಿಯೆಟ್ ಪಾಸು ಮಾಡಿದ್ದವನು.

ರೆವಿನ್ಯೂ ಕಮೀಷನ್‌ರವರ ಆಪ್ತ ಸಹಾಯಕರಾಗಿದ್ದ ಶ್ರೀ ಹಸನ್ ಷರೀಫ್ ರವರು ನಾನು ಪ್ರಥಮ ಬಾರಿಗೆ ಈ ಕೆಲಸಕ್ಕೆ ಸೇರಿದಾಗ ತುಂಬಾ ಸಹಾಯ ಮಾಡಿದರು. ಅವರನ್ನು ಈಗಲೂ ಸಹ ನಾನು ಸ್ಮರಿಸುತ್ತೇನೆ. 1933 ನೇ ಅಕ್ಟೋಬರ್ ತಿಂಗಳಲ್ಲಿ ನಾನು ಪ್ರೊಬೇಷನರಿ ರೆವಿನ್ಯೂ ಇನ್ಸ್‌ಪೆಕ್ಟರ್‌ರಾಗಿ ಕೆಲಸಕ್ಕೆ ಹಾಜರಾದೆ. ಆಗ ನನಗೆ 19 ವರ್ಷಗಳಾಗಿತ್ತು. 13 ತಿಂಗಳ ರೆವಿನ್ಯೂ ಇನ್ಸ್‌ಪೆಕ್ಟರ್ ತರಬೇತಿಯನ್ನು ಯಶಸ್ವಿಯಾಗಿ ಮುಗಿಸಿದೆ. ತರಬೇತಿ ಸಮಯದಲ್ಲಿ ಇಂಜಿನಿಯರಿಂಗ್ ಸರ್ವೆ, ತಾಲ್ಲೂಕು ಕಚೇರಿ ಹೋಬಳಿ ತರಬೇತಿಗಳನ್ನು ಪಡೆದೆ. ತರಬೇತಿ ಮುಗಿದ ಕೂಡಲೆ ನನ್ನನ್ನು ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕು ಐ.ಡಿ. ಹಳ್ಳಿ ಹೋಬಳಿಗೆ ರೆವೆನ್ಯೂ ಇನ್ಸ್‌ಪೆಕ್ಟರ್ ಆಗಿ ನೇಮಕ ಮಾಡಿದರು. ಅಲ್ಲಿ ನಾನು 1934ನೇ ಡಿಸೆಂಬರ್ 18ನೇ ತಾರೀಖು ಚಾರ್ಜ್ ವಹಿಸಿಕೊಂಡೆ. ಆಗ ಮಧುಗಿರಿ ತಾಲ್ಲೂಕಿನಲ್ಲಿ ಶ್ರಿ ಆರ್. ಜಿ. ರಿಗೋ ಎಂಬುವರು ಅಮಲ್ದಾರ್ ಆಗಿದ್ದರು. ನಿರಂಜನರಾಜೇ ಅರಸ್ ಅವರು ಸಬ್ ಡಿವಿಜನ್ ಆಫೀಸರ್ ಆಗಿದ್ದರು. ಅಬ್ದುಲ್ ಖಾದರ್ ಎಂಬುವರು ಡೆಪ್ಯೂಟಿ ಕಮೀಷನರ್ ಆಗಿದ್ದರು. ನಾನು ಮೊದಲು ಅಮಲ್ದಾರ್‌ರವರ ಕಛೇರಿಗೆ ಹೋಗಿ ಅವರನ್ನು ಭೇಟಿಮಾಡಿ ಅವರ ಆಶೀರ್ವಾದವನ್ನು ಪಡೆದೆ. ಅನಂತರ ಮಧುಗಿರಿಯಲ್ಲಿ ಆಗ ಖ್ಯಾತ ವಕೀಲರಾಗಿದ್ದ ನಮ್ಮ ಬಂಧುಗಳಾದ ಶ್ರೀ ಹೆಂಚೇರಪ್ಪನವರನ್ನು ನೋಡಿ ಅವರಿಗೆ ನನ್ನ ವಂದನೆಗಳನ್ನು ಸಲ್ಲಿಸಿ ನಾನು ಮತ್ತು ನನ್ನ ಜೊತೆಯಲ್ಲಿ ನನ್ನ ಸಹಾಯಕ್ಕಾಗಿ ಬಂದಿದ್ದ ನನ್ನ ಸೋದರ ಸಂಬಂಧಿ ಕಾರೇಹಳ್ಳಿಯ ದಾಸಪ್ಪನವರ ಮಗ ಶ್ರೀ ಭೈರಪ್ಪನವರ ಜೊತೆಯಲ್ಲಿ ಕಾಲು ನಡಿಗೆಯಲ್ಲಿ ಸುಮಾರು 18 ಮೈಲು ದೂರದಲ್ಲಿದ್ದ ಐ.ಡಿ. ಹಳ್ಳಿಗೆ ನಡೆದವು ರಾತ್ರಿ ವೇಳೆ ತುಂಬಾ ಕತ್ತಲು ; ದಾರಿಯೂ ಗೊತ್ತಿರಲಿಲ್ಲ ನಡೆದು ನಡೆದು ಸಾಕಾಗಿ ಕಡೆಗೆ ರಾತ್ರಿ 1 ಗಂಟೆಯ ವೇಳೆಗೆ ಐ.ಡಿ. ಹಳ್ಳಿ ಸೇರಿದೆವು. ಆಗ ಐ.ಡಿ. ಹಳ್ಳಿಗೆ ಬಸ್ಸಿನ ಸೌಕರ್ಯವಿರಲಿಲ್ಲ. ಆ ವೇಳೆಯಲ್ಲಿ ಶ್ಯಾನುಭೋಗರ ಮನೆಯನ್ನು ವಿಚಾರಿಸಿ ಅವರ ಮನೆಗೆ ಹೋದೆವು. ಅವರು ಆ ಹೊತ್ತಿನಲ್ಲಿ ನಮಗೆ ಆತಿಥ್ಯವನ್ನು ಮಾಡಿ ಊಟ ಉಪಚಾರ ಮಾಡಿದರು. ಆ ರಾತ್ರಿ ಅವರ ಮನೆಯಲ್ಲೇ ಉಳಿದುಕೊಂಡಿದ್ದೆವು.

ಐ.ಡಿ. ಹಳ್ಳಿ ಗ್ರಾಮವು ಬಹಳ ಬಲಹೀಡಿತವಾದ ಸ್ಥಳ. ಶೇಕಡ 75 ರಿಂದ 80 ಜನ. ಕಡು ಬಡವರು. ಸಕಾಲಕ್ಕೆ ಮಳೆ ಬೆಳೆಗಳು ಆಗುತ್ತಿರಲಿಲ್ಲ. ಅಲ್ಲಿಯ ಜನಗಳಿಗೆ ಅಷ್ಟೇನು ನಾಗರಿಕತೆ ತಿಳಿದಿರಲಿಲ್ಲ. ಎಲ್ಲೊ ಸ್ವಲ್ಪ ಬತ್ತ, ಮೆಣಸಿನ

ಕಾಯಿ, ಕಡಲೆಕಾಯಿ ಮಾತ್ರ ಬೆಳೆಯುತ್ತಿದ್ದರು. ಆಗಿನ ಕಾಲದಲ್ಲಿ ಹೆಚ್ಚು ಹೆಚ್ಚು ರೆವಿನ್ಯೂ ವಸೂಲಿ ಮಾಡುತ್ತಿದ್ದ ರೆವಿನ್ಯೂ ಇನ್ಸ್‌ಪೆಕ್ಟರ್‌ಗಳಿಗೆ ಬಹಳ ಗೌರವ ಪ್ರಾಶಸ್ತ್ಯ ಸಿಗುತ್ತಿತ್ತು.

ನಾನೂ ಕೂಡ ರೆವಿನ್ಯೂ ವಸೂಲಿಯನ್ನು ಬಹಳ ಶ್ರದ್ಧೆಯಿಂದ ಮಾಡುತ್ತಿದ್ದೆ. ಜನರು ಬಡತನದಿಂದ ಹೊಟ್ಟೆಪಾಡಿಗಾಗಿ ಪರದಾಡುತ್ತಿದ್ದರು. ಕಂದಾಯವನ್ನು ಕಟ್ಟಲು ಸಾಮರ್ಥ್ಯವಿರುತ್ತಿರಲಿಲ್ಲ. ನಾನು ಹೋದ ಮೂರೇ ತಿಂಗಳಲ್ಲಿ ಸುಮಾರು 200 ಜನ ಕಂದಾಯ ಬಾಕಿ ಉಳಿಸಿಕೊಂಡಿದ್ದವರ ಮೇಲೆ ಹರಾಜು ಇಸ್ತಿಹಾರ್ ಹೊರಡಿಸಿದೆ. ಆದರೆ ಹರಾಜಿಗೆ ಯಾರೂ ಬರುತ್ತಿರಲಿಲ್ಲ. ಕಂದಾಯವು ವಸೂಲಾಗಲಿಲ್ಲ. ಖಾತೆಗಳಲ್ಲಿ 'ಫಡ' ಜಮೀನು ಎಂದು ಬರೆಯಬೇಕಾಯ್ತು. ಇದೇ ರೀತಿ ಆ ಹೋಬಳಿಯ ಸುಮಾರು 35 ಗ್ರಾಮಗಳ ಸ್ಥಿತಿಯೂ ಹೀಗೆಯೇ ಇತ್ತು. ಇದನ್ನು ನೋಡಿದ ನಮ್ಮ ಸಾಹೇಬರಿಗೆ ಆಶ್ಚರ್ಯವಾಗಿ ಐ.ಡಿ. ಹಳ್ಳಿಗೆ ಕ್ಯಾಂಪ್ ಮಾಡಿದರು. ಕೊಂಬು ಕಹಳೆಯನ್ನು ಬಾರಿಸುತ್ತಾ ತಳಿರು ತೋರಣದಿಂದ ಸಿಂಗರಿಸಿ ಅವರನ್ನು ಊರಿಗೆ ಆದರದಿಂದ ತಾಲ್ಲೂಕು ಬಾರ್ಡರ್‌ನಿಂದಲೇ ಅಂದರೆ ಫುಲ್‌ಮಾಚಿ ಗ್ರಾಮದಿಂದ ಮೆರವಣಿಗೆಯಲ್ಲಿ ಬರಮಾಡಿಕೊಳ್ಳಲಾಯ್ತು. ಅಮಲ್ದಾರ್ ಸಾಹೇಬರ ಜೊತೆಯಲ್ಲಿ ಅವರ ಸಿಬ್ಬಂದಿ ಹಾಗೂ ನಾನು ಎಲ್ಲರೂ ಕಂದಾಯ ವಸೂಲಿಗೆ ಹೋದೆವು. ಯಾರೂ ಕಂದಾಯ ಕೊಡಲಿಲ್ಲ. ಪಟೇಲ್, ಶ್ಯಾನುಭೋಗರಿಗೆ ಹೇಳಿ ಅಲ್ಪಸ್ವಲ್ಪ ವಸೂಲಿ ಮಾಡಲು ಸಾಧ್ಯವಾಯ್ತು. ಕಡೆಯಲ್ಲಿ ಆ ಊರಿನ ಒಬ್ಬ ರೈತ ತಿಮ್ಮಾರೆಡ್ಡಿ ಎಂಬುವರ ಮನೆಗೆ ಹೋದಾಗ ಆತ ಊರಲ್ಲಿರಲಿಲ್ಲ. ಆ ಮನೆಯ ಸದಸ್ಯರು ಕಂದಾಯ ಬಾಕಿ ಕೊಡಲು ಮುಂದೆ ಬರಲಿಲ್ಲ. ಆಗ ಆ ಮನೆಯಲ್ಲಿದ್ದ ಒಂದು ಜೊತೆ ಎತ್ತುಗಳನ್ನು ಜಫ್ತಿ ಮಾಡಿ ರಿಕಾರ್ಡ್ ಮಾಡಿದೆವು. ಆ ಎತ್ತುಗಳನ್ನು ಪಟೇಲ್ ನರಸಿಂಹರೆಡ್ಡಿಯವರ ಸುಬರ್ದಿಗೆ ವಹಿಸಿ ಷರಾ ಬರೆಸಿಕೊಂಡು ಬಂದೆವು. ಅನಂತರ ಮಾರನೆ ದಿನ ತಿಮ್ಮಾರೆಡ್ಡಿಯವರು ಜಫ್ತಿ ಮಾಡಿದ ರಾಸುಗಳನ್ನು ಪಟೇಲರ ವಶ ಕೊಡಲು ತಕರಾರು ಮಾಡಿದರು. ಜಫ್ತಿ ಮಾಡಿದ್ದ ಒಂದು ಜೊತೆ ಎತ್ತುಗಳನ್ನು ಬಲವಂತವಾಗಿ ಪಟೇಲ್ ಅವರಿಂದ ಕಿತ್ತುಕೊಂಡು ಹೋಗಿದ್ದರು. ನಾವು ಮತ್ತೊಮ್ಮೆ ಜಫ್ತಿ ಮಾಡಲು ಹೋದಾಗ ನಮ್ಮ ಮೇಲೆ ಸವಾಲು ಹಾಕಿದರು. ಆದರೆ ಪೊಲೀಸ್ ಸಿಬ್ಬಂದಿಯವರ ಸಹಕಾರ ಹಾಗೂ ಪಂಚಾಯ್ತಿಯ ಮಧ್ಯಸ್ತಿಕೆಯಿಂದಾಗಿ ಈತನ ಮೇಲೆ "Prohibiting the Govt: Service from discharging his duties" ಎಂಬ ನಿಯಮದ ಪ್ರಕಾರ ಕ್ರಮ ತೆಗೆದುಕೊಂಡು ಕ್ರಿಮಿನಲ್ ಕೇಸ್ ದಾಖಲು ಮಾಡಬೇಕಾಯ್ತು. ಇದಾದ ನಂತರ 1936ರಲ್ಲಿ ನನ್ನನ್ನು ಕೊರಟಗೆರೆ ತಾಲ್ಲೂಕು ಕೊಳಾಲ ಹೋಬಳಿಗೆ ವರ್ಗ ಮಾಡಿದರು. ಆಗಿನ ಅಮಲ್ದಾರ್ ಆಗಿದ್ದ ಶ್ರೀ ಮಲ್ಲರಾಜ ಅರಸ್ ಅವರನ್ನು ಕಂಡು ಆ ಹೋಬಳಿಯಲ್ಲಿ ಕೆಲಸಕ್ಕೆ ಹಾಜರಾದೆ. ಅವರ ಅಪ್ಪಣೆ ಪಡೆದು ಕೋಳಾಲದ ಹೋಬಳಿಗೆ

ಹೋಗಿ ಆಗಿನ ರೆವಿನ್ಯೂ ಇನ್‌ಸ್ಪೆಕ್ಟರ್ ಆಗಿದ್ದ ಶ್ರೀ ಶ್ರೀನಿವಾಸಮೂರ್ತಿ ಅವರಿಂದ ಛಾರ್ಜ್ ವಹಿಸಿಕೊಂಡೆ. ಕೊಳ್ಳಾಲದ ಪಕ್ಕದಲ್ಲಿರುವ ಪಾತಗಾನಹಳ್ಳಿ ಎಂಬ ಊರಿಗೆ ಹೋಗಿ ಆ ಊರಿನಲ್ಲೇ ಮನೆ ಮಾಡಿದೆ. ಕಾರಣ ಆ ಊರು ಕೊಳ್ಳಾಲ ಹೋಬಳಿಯ ಗ್ರಾಮಗಳಿಗೆ ಮಧ್ಯ ಸ್ಥಾನದಲ್ಲಿತ್ತು. ಶ್ರೀ ಶ್ರೀನಿವಾಸ ಮೂರ್ತಿಯವರು ಹಿಂದೆ ಮಾಡುತ್ತಿದ್ದ ಹಾಗೂ ನಾನು ಮುಂದೆ ಮಾಡಬೇಕಾದಂಥ ಕೆಲಸದ ವಿವರಗಳನ್ನು ಹಾಗೂ ಕೆಲವು ಖದೀಮ ಪಟೇಲರುಗಳ ಶ್ಯಾನುಭೋಗರುಗಳ ವಿಚಾರವನ್ನು ಕೂಲಂಕುಷವಾಗಿ ನನಗೆ ತಿಳಿಸಿದರು. ಕೊಳ್ಳಾಲ ಹೋಬಳಿ ಸುಮಾರು 60 ಗ್ರಾಮಗಳನ್ನು ಒಳಗೊಂಡ ಒಂದು ವಿಸ್ತಾರವಾದ ಹಿಂದುಳಿದ ಹೋಬಳಿ.

ನಾನು ಸುಮಾರು 15 ದಿವಸಗಳ ಕಾಲ ಎಲ್ಲಾ ಹಳ್ಳಿಗಳನ್ನು ಸೈಕಲ್‌ನಲ್ಲಿ ಸುತ್ತಾಡಿ ಪಟೇಲ್ ಶ್ಯಾನುಭೋಗರನ್ನು ಸಂದರ್ಶಿಸಿ ಎಲ್ಲಾ ಗ್ರಾಮ ಪಂಚಾಯಿತಿಗಳ ಕಂದಾಯದ ಬಾಕಿ ಪರಿಶೀಲಿಸಿದೆ. ಆಗಿನ ಕಾಲದಲ್ಲಿ ಸುಮಾರು 4 ಕೋಟಿ ವರಮಾನವಿದ್ದ 8 ಡಿಸ್ಟ್ರಿಕ್ಟ್ ಒಳಗೊಂಡ ಹಳೇ ಮೈಸೂರು ಪ್ರಾಂತ್ಯದ ಮುಕ್ಕಾಲು ಪಾಲು ಆದಾಯ ಬರೀ ಕಂದಾಯದ ರೂಪದಲ್ಲೇ ಬರಬೇಕಾಗಿತ್ತು. ಅದೇ ಆಗಿನ ಸರ್ಕಾರಕ್ಕೆ ಮುಖ್ಯ ವರಮಾನವಾಗಿತ್ತು. ಅದಕ್ಕಾಗಿ ಪ್ರತಿಯೊಬ್ಬ ರೆವಿನ್ಯೂ ಇನ್‌ಸ್ಪೆಕ್ಟರ್‌ಗೂ ಕಂದಾಯ ವಸೂಲು ಮಾಡುವುದು ಬಹು ಮುಖ್ಯ ಕೆಲಸವಾಗಿತ್ತು. ಹೆಚ್ಚು ಮುತುವರ್ಜಿಯಿಂದ ಶ್ರದ್ಧೆಯಿಂದ ಕಂದಾಯ ವಸೂಲಿ ಮಾಡಿದವರಿಗೆ ಸರ್ಕಾರದಿಂದ ಉತ್ತೇಜನ ಸಿಕ್ಕಿ ಸೂಕ್ತ ಬಡ್ತಿಯನ್ನು ಕೂಡ ಕೊಡುತ್ತಿದ್ದರು. ಸೇವಾ ಹಿರಿತನದ ಪಟ್ಟಿ ಇನ್ನೂ ಚಾಲ್ತಿಗೆ ಬಂದಿರಲಿಲ್ಲ. ಇದನ್ನು ಮನಗಂಡ ನಾನು ಕಂದಾಯ ವಸೂಲಿಯನ್ನು ದಕ್ಷತೆಯಿಂದ ಹಾಗೂ ಪ್ರಾಮಾಣಿಕತೆಯಿಂದ ವಸೂಲಿ ಮಾಡಿ ತಾಲ್ಲೂಕಿಗೆ ಮೊದಲನೆಯವನಾಗ ಬೇಕೆಂದು ತೀರ್ಮಾನ ಕೈಗೊಂಡೆ. ಅಲ್ಲದೆ ಪಂಚಾಯಿತಿ ಬಾಕಿ ವಸೂಲಿಯನ್ನು ಅಷ್ಟೇ ಶ್ರದ್ಧೆಯಿಂದ ವಸೂಲಿ ಮಾಡಿ ಬೇ ಬಾಕಿ ಮಾಡಬೇಕೆಂದು ಪಟೇಲ್ ಶ್ಯಾನುಭೋಗ ರುಗಳಿಗೆ ತಾಕೀತು ಮಾಡುತ್ತಿದ್ದೆ. ಆದರೆ ಆಗಿನ ಕಾಲದಲ್ಲಿ ಜನರ ಪರಿಸ್ಥಿತಿ ಅಷ್ಟೇನು ಪಸಂದಾಗಿರಲಿಲ್ಲ. ಬಲು ಬರಗಾಲ, ಸರ್ಕಾರದಿಂದ ತಕಾವಿ ಸಾಲ ಪಡೆದು ಕೆಲವರು ಜೀವನ ಸಾಗಿಸುತ್ತಿದ್ದರು. ದೈವವಶಾತ್ ನಾನು ಅಲ್ಲಿಗೆ ಹೋದ ವರ್ಷ ಮುಂಗಾರು ಚೆನ್ನಾಗಿ ನಡೆಸುತ್ತಿತ್ತು. ಜನರು ತಮ್ಮ ತಮ್ಮ ವ್ಯವಸಾಯವನ್ನು ಚೆನ್ನಾಗಿ ಮಾಡು ತ್ತಿದ್ದರು. ನಾನು ಬಹಳ ಯೋಚನೆ ಮಾಡಿದೆ ; ಅದೇನೆಂದರೆ, "ಒಂದು ಗ್ರಾಮದಿಂದ ಇನ್ನೊಂದು ಗ್ರಾಮಕ್ಕೆ ಹೋಗಲು ರಸ್ತೆ ಇರಲಿಲ್ಲ. ಹೀಗಾಗಿ ಊರಿಂದ ಊರಿಗೆ ಹಳ್ಳಿಯಿಂದ ಹಳ್ಳಿಗೆ ರಸ್ತೆ ಕೆಲಸಗಳನ್ನು ಪ್ರಾರಂಭಿಸಿದೆ. ರಸ್ತೆ ಕೆಲಸಕ್ಕೆ ಬರುವ ರೈತ ಜನರಿಗೆ ಅವರಿಗೆ ಕೊಡಬೇಕಾದ ಕೂಲಿಯಲ್ಲಿ ದಿನಕ್ಕೆ ಎಂಟಾಣೆಯಂತೆ ಅವರವರ ಕಂದಾಯದ ಬಾಕಿಗೆ ಜಮಾ ಮಾಡುವುದರ ಮೂಲಕ ರೈತರಿಂದ ಹಾಗೂ ಪಂಚಾಯ್ತಿ ಕಂದಾಯದ ಬಾಕಿಯನ್ನು ವಸೂಲು ಮಾಡಬಹುದೆಂದು ಒಂದು ದಿನ ಪಟೇಲರು

ಶ್ಯಾನುಭೋಗರನ್ನು ಕೊಳಾಲದಲ್ಲಿ ಸಭೆ ಸೇರಿಸಿ ವಿಚಾರ ವಿನಿಮಯ ನಡೆಸಿದೆ. ಎಲ್ಲರೂ ನನ್ನ ಅಭಿಪ್ರಾಯವನ್ನು ಸಂತೋಷದಿಂದ ಒಪ್ಪಿದರು. "ಒಂದೇ ಏಟಿಗೆ ಎರಡು ಹಕ್ಕಿಗಳನ್ನು ಹೊಡೆದಂತೆ" ಕೂಡಲೆ ಈ ಯೋಜನೆಯನ್ನು ಪ್ರಾರಂಭಿಸಿದೆ. ಮೊದಲಿಗೆ ಚಿನ್ನಹಳ್ಳಿ ಎಂಬ ಕುಗ್ರಾಮದಿಂದ ಮಾವತ್ತೂರು ರಸ್ತೆಗೆ ಮಣ್ಣಿನ ರಸ್ತೆಯ ಕೆಲಸ ಪ್ರಾರಂಭಿಸಿದೆ. ಈ ಹಳ್ಳಿಯಿಂದ ಮಾವತ್ತೂರು ರಸ್ತೆಗೆ ಸುಮಾರು 2 ಮೈಲು ಗಳ ದೂರ. ಒಂದು ನಕಾಶೆಯಲ್ಲಿ ಕಂಡಂತೆ 8 ಅಡಿ ಅಗಲದ ಕಾಲು ದಾರಿ ಇತ್ತು. ಕಾನೂನು ಪ್ರಕಾರವಾಗಿ 20 ಅಡಿ ರಸ್ತೆ ಮಾಡುವ ಅವಕಾಶವಿರಲಿಲ್ಲ. ರಸ್ತೆಯ ಪಕ್ಕದಲ್ಲಿದ್ದ ಜಮೀನುದಾರರನ್ನೆಲ್ಲಾ ಕರೆಸಿದೆ. ಅವರೆಲ್ಲರೂ ರಸ್ತೆಗೆ ಬೇಕಾಗುವಷ್ಟು ಮುಪ್ಪತ್ತಾಗಿ ಜಾಗ ಬಿಡಲು ಒಪ್ಪಿದರು. ಅಕ್ವಿಜಿಷನ್ ಕ್ರಮ ತೆಗೆದುಕೊಳ್ಳದೆ ರಸ್ತೆಯನ್ನು ಪ್ರಾರಂಭಿಸಿದೆ. ಅದರೆ ಗುಂಡಯ್ಯನೆಂಬ ಒಬ್ಬ ರೈತ ಮಾತ್ರ ಮಾವತ್ತೂರು ಬಳಿ ಕ್ರಾಸ್‌ನಲ್ಲಿ ಮನೆ ಕಟ್ಟಿಕೊಂಡು ವಾಸವಿದ್ದರು. ಅವರ ಮನೆಯ ಹತ್ತಿರವಿದ್ದ ಜಮೀನಿನಲ್ಲಿ ರಸ್ತೆಗೆ ಜಾಗ ಬಿಡಲು ತಕರಾರು ಮಾಡಿದರು. ಬಹಳ ವಿಧವಾಗಿ ಹೇಳಿದೆ. ಊರಿನವರೆಲ್ಲರಿಂದಲೂ ಹೇಳಿಸಿದೆ, ಕೇಳಲಿಲ್ಲ. ಕಡೆಗೆ ಚಿನ್ನಹಳ್ಳಿಯಿಂದ ರಸ್ತೆ ಕೆಲಸ ಪ್ರಾರಂಭಿಸಿದೆ. ಅವರ ಜಮೀನು ಹತ್ತಿರದಲ್ಲಿ ನಿಲ್ಲಿಸಿದೆ, ಆದರೂ ಆತ ರಸ್ತೆಗೆ ಜಾಗ ಬಿಡಲಿಲ್ಲ. ಕಡೆಗೆ ಅವರಿಗೇ ಅರಿವಾಗಿ ಇತ್ತ ಕಡೆ ಕಂದಾಯದ ಇಲಾಖೆ ಅತ್ತ ಕಡೆ ಊರಿನವರ ವಿರೋಧವನ್ನು ಕಟ್ಟಿಕೊಳ್ಳಲು ಸಾಧ್ಯವಾಗದೆ ನನ್ನ ಹತ್ತಿರ ಬಂದು ಸ್ವಾಮಿ ಆದದ್ದು ಆಗಿ ಹೋಯಿತು. ನಾನು ನನ್ನ ಜಮೀನಿನಲ್ಲಿ ರಸ್ತೆಗೆ ಜಾಗ ಬಿಡುತ್ತೇನೆ ರಸ್ತೆ ಮಾಡಿಸಿ ಎಂದು ಸಂತೋಷದಿಂದ ಹೇಳಿದ. ಆಗ ರಸ್ತೆಯನ್ನು ಪೂರೈಸಿದೆ. ಈ ರಸ್ತೆಯ ಕೆಲಸ ಮುಗಿದ ನಂತರ ಪಂಚಾಯ್ತಿ ಓವರ್‌ಸೀಯರ್ ಅವರಿಂದ ಈ ರಸ್ತೆಗೆ ತಗಲುವ ಖರ್ಚನ್ನು ಅಂದಾಜು ಮಾಡಿಸಿ ಪಂಚಾಯಿತಿ ಬಾಕಿಗೆ ಜಮಾ ಮಾಡಿಸಿ ರೈತರ ಕೂಲಿಯನ್ನು ಲೆಕ್ಕ ಹಾಕಿಸಿ ಅವರಿಂದ ಬರಬೇಕಾದ ಪಂಚಾಯಿತಿ ಕಂದಾಯದ ಬಾಕಿಗೂ ಜಮಾ ಮಾಡಿಸಿ ಇದರಿಂದ ರೈತರಿಗೆ ಉಪಯೋಗಿಸಲು ರಸ್ತೆಯಾಯಿತು. ಮತ್ತು ಪಂಚಾಯಿತಿ ಬಾಕಿಯೂ ತಗ್ಗಿತು. ಅನಂತರ ಹೀಗಾಗಿ ಮಾವತ್ತೂರು ರಸ್ತೆಯಿಂದ ತಿಮ್ಮಸಂದ್ರ, ಪಾತಗಾನಹಳ್ಳಿ ಮಾರ್ಗವಾಗಿ ವಜ್ಜನಗುರಿಕೆ, ದುಡ್ಡನಹಳ್ಳಿ, ಕರಿದುಗ್ಗನಹಳ್ಳಿ, ಎಲೆರಾಂಪುರ, ಇರ್ಕಸಂದ್ರ ಮಾರ್ಗವಾಗಿ ದುರ್ಗದ ನಾಗೇನಹಳ್ಳಿವರೆಗೂ ಹೀಗೆಯೇ ಮಣ್ಣು ರಸ್ತೆಯನ್ನು ಪ್ರಾರಂಭಮಾಡಿ ಮುಗಿಸಿದೆ. ಪಟೇಲರು ಅಥವಾ ಶ್ಯಾನುಭೋಗರು ಅಥವಾ ಆಯಾ ದಿನ ಕೆಲಸಕ್ಕೆ ಬಂದಿದ್ದ ರೈತರ ನಾಮಿನಲ್ ರೋಲು ಇಡಲು ವ್ಯವಸ್ಥೆಮಾಡಿದೆ. ಈ ರೀತಿ ಸುಮಾರು ಶೇಕಡ 90 ರಷ್ಟು ಪಂಚಾಯತ್ ಬಾಕಿ ವಸೂಲಿಯನ್ನು ತಗ್ಗಿಸಲಾಯ್ತು. ಈ ಕೆಲಸಗಳಿಗೆ ಸರ್ಕಾರದಿಂದ ಒಂದು ಬಿಲ್ಲೆಯನ್ನೂ ಸಹ ಸಹಾಯವಾಗಿ ಪಡೆಯಲಿಲ್ಲ. ರೈತರಿಗೂ ಸಹ ನೋವಾಗಲಿಲ್ಲ.. ಊರಿಂದೂರಿಗೆ ರಸ್ತೆಯೂ ಆಯ್ತು. ರಸ್ತೆ ಕೆಲಸಕ್ಕೆ ಬಂದ ರೈತರ ಪಂಚಾಯ್ತಿ ಬಾಕಿಯೂ ತಗ್ಗಿತು.

ಆಗಿನ ಕಾಲದಲ್ಲಿ ಫೆಬ್ರವರಿಯಿಂದ ಜೂನ್ 30 ರವರೆಗೂ 4 ಅಥವಾ 5 ಆಯಾಯ ಸಾಲಿನ ಕಂದಾಯ ವಸೂಲಿ ಮಾಡುವ ಅವಧಿಯಿತ್ತು. ಸುಮಾರು ಎಲ್ಲಾ ಗ್ರಾಮಗಳಿಗೂ ಸೈಕಲ್ ಮೇಲೆ ದಿನವೂ ಸುತ್ತುತ್ತಾ ಸುಸ್ತಿ ಬಾಕಿದಾರರನ್ನು ಕರೆಸಿ ನೋಟೀಸ್ ಜಾರಿ ಮಾಡುವುದು, ಕೆಲವು ಸಂದರ್ಭಗಳಲ್ಲಿ ಜಮೀನು ಹರಾಜು ಮಾಡುವುದು ಮತ್ತು ಕೆಲವು ಕುಳಗಳಿಂದ ಜಪ್ತಿ ಮಾಡುವುದರ ಮೂಲಕವು ಕಂದಾಯ ವಸೂಲಿ ಮಾಡುತ್ತಿದ್ದೆ. ಅಲ್ಲಿಂದ ಪಟೇಲ್ ಶ್ಯಾನುಭೋಗರು ಮಾಡಿದ್ದ ವಸೂಲಿಗಳನ್ನು ಚೆಕ್ ಮಾಡುತ್ತಾ ಅವರುಗಳಿಂದ ಸಾಧ್ಯವಾಗದೇ ಇದ್ದ ಕುಳಗಳನ್ನು ನಾನೆ ಕರೆಸಿ ಹೆದರಿಸಿ ಬೆದರಿಸಿ ಹೇಗೋ ಮಾಡಿ ವಸೂಲಿ ಮಾಡಿದ್ದರಿಂದ 1936 ನೇ ಇಸವಿಯಲ್ಲಿ ಇಡೀ ಹೋಬಳಿಗೆ ಕೇವಲ 200 ರಿಂದ 300 ರೂಪಾಯಿ ಕಂದಾಯ ಬಾಕಿ ಮಾತ್ರ ಉಳಿದಿತ್ತು. ಇದರಿಂದಾಗಿ ಆ ಸಾಲಿನಲ್ಲಿ ನಾನು ತಾಲ್ಲೂಕಿಗೆ ಬಾಕಿ ವಸೂಲಿಯಲ್ಲಿ ಪ್ರಥಮ ಸ್ಥಾನಗಳಿಸಿದೆ. ಅಷ್ಟೆ ಅಲ್ಲದೆ ರಿಕಾರ್ಡ್‌ಗಳನ್ನು ಸಹ ವಿಲೇವಾರಿ ಮಾಡುವುದನ್ನು ತ್ವರಿತಗೊಳಿಸಿದೆ. ಯಾವ ರಿಕಾರ್ಡನ್ನು ಒಂದು ವಾರದ ಮೇಲೆ ಇಟ್ಟುಕೊಳ್ಳುತ್ತಿರಲಿಲ್ಲ.

1937ನೇ ಜುಲೈ 2ನೇ ತಾರೀಖಿನಂದು ಜಿಲ್ಲೆಯ ಎಲ್ಲಾ ತಾಲ್ಲೂಕುಗಳ ವಸೂಲಿ ವಿಚಾರ ತಿಳಿದುಕೊಳ್ಳಲು ಕೊರಟಗೆರೆಯಿಂದಲೇ ತುಮಕೂರಿನ ಜಿಲ್ಲಾ ಕಚೇರಿಗೆ ಹೋದೆ. ಆ ವೇಳೆಗೆ ಜಿಲ್ಲೆಯ ಹತ್ತು ತಾಲ್ಲೂಕುಗಳ ಸ್ಪೆಷಲ್ ಡಿ ಸಿ ಬಿ ತಃಖ್ತೆಗಳು ಬಂದಿದ್ದವು. ಆ ಪ್ರಕಾರ ಎಲ್ಲಾ ತಾಲ್ಲೂಕುಗಳಲ್ಲೂ ಎಲ್ಲಾ ಹೋಬಳಿಗಳಲ್ಲಿ ಸಾವಿರಗಟ್ಟಲೆ ಕಂದಾಯ ಬಾಕಿ ಉಳಿದಿರುವುದು ತಿಳಿಯಿತು. ಆದರೆ ನನ್ನ ಹೋಬಳಿಯಲ್ಲಿ ಮಾತ್ರ ಕಂದಾಯ ಹಾಗೂ ಪಂಚಾಯ್ತಿ ಬಾಕಿ ಪೂರ್ಣವಾಗಿ ಬೇ ಬಾಕಿಯಾಗಿತ್ತು. ನಾನು ಆ ಸಾಲಿನಲ್ಲಿ ತುಮಕೂರು ಜಿಲ್ಲೆಗೆ ಕಂದಾಯ ವಸೂಲಿಯಲ್ಲಿ ಮೊದಲನೆಯವನಾಗಿದ್ದೆ. ಅಂದು ಸಾಯಂಕಾಲ ಪಾತಗಾನಹಳ್ಳಿಗೆ ಹೋಗದೆ ಕೊರಟಗೆರೆಗೆ ವಾಪಸ್ಸು ಬಂದೆ. ನಮ್ಮ ಹೋಬಳಿಯ ಡಿ.ಸಿ.ಬಿ. ಕ್ಲಾರ್ಕ್ ಶ್ಯಾಮರಾವ್‌ರವರಿಗೆ ಈ ವಸೂಲಿಯ ವಿಷಯ ತಿಳಿಸಿದೆ. ಅವರು ನನ್ನನ್ನು ಅಂದು ತಮ್ಮ ಮನೆಗೆ ಊಟಕ್ಕೆ ಆಹ್ವಾನಿಸಿದರು. ಜೊತೆಯಲ್ಲೇ ಊಟ ಮಾಡಿದೆವು. ಅಂದು ಅವರ ಮನೆಯಲ್ಲೇ ಮಲಗಲು ಹೇಳಿದರು. ಹೀಗೆ ರಾತ್ರಿ ವೇಳೆ ಮಾತನಾಡುತ್ತಾ ನಾನು ಈಗ 2ನೇ ಡಿವಿಜನ್ ಆರ್.ಐ. (40–10ರ ಗ್ರೇಡಿನಲ್ಲಿ) ಆಗಿ ಕೆಲಸಮಾಡುತ್ತಿದ್ದೇನಿ. ನನಗೆ 1ನೇ ದರ್ಜೆ ಆರ್.ಐ. ಹುದ್ದೆಗೆ ಅಂದರೆ ರೂ. 50-10ರ ಬಡ್ತಿ ಯಾವಾಗ ಸಿಕ್ಕಬಹುದು ಎಂದು ಕೇಳಿದೆ. ಅದಕ್ಕೆ ಅವರು ಪ್ರಯತ್ನ ಮಾಡಿ ನಿಮಗೆ ಸಿಕ್ಕೇ ಸಿಗುತ್ತೆ ಎಂದು ಹೇಳಿದರು. ಆದರೂ ಮುಂದೆ ಪ್ರಯೋಜನವಾಗುವುದಿಲ್ಲ. ನೀವು ಎಂದೂ ಅಮಲ್ದಾರರಾಗುವ ಅವಕಾಶವಿಲ್ಲವೆಂದು ತಿಳಿಸಿದರು. ಏಕೆ ? ಎಂದು ಕೇಳಿದೆ. ಅವರು ನನಗೆ ಹೇಳಿದರು. ಯಾರೇ ವ್ಯಕ್ತಿ ಅಮಲ್ದಾರ್ ಆಗ ಬೇಕಾದರೆ ಅತ ಕೊನೆಯ ಪಕ್ಷ ಪದವೀಧರನಾಗಿರಬೇಕು,

ಇಲ್ಲವಾದರೆ ಆ ಹುದ್ದೆಗೆ ಅವಕಾಶವಿಲ್ಲ ಎಂದರು. ಇನ್ನೂ ನೀವು ಆರ್. ಐ ಆಗಿ 20 ವರ್ಷಗಳ ಕಾಲ ಸೈಕಲ್ ತುಳಿಯುತ್ತಲೇ ಇರಬೇಕಾಗುತ್ತದೆ. ಇನ್ನೇನು ನೀವು ರಿಟೈರ್ಡ್ ಆಗುವಾಗ ಕಡೆಯಲ್ಲಿ 60-40-80ರ ದರ್ಜೆಯಲ್ಲಿ ಶಿರಸ್ತೇದಾರರಾಗಿ ನಿವೃತ್ತರಾಗ ಬಹುದು ಎಂದರು.

ಈ ವಿಚಾರ ಅವರು ಹೇಳಿದ್ದರಿಂದ ನನಗೆ ಗಾಬರಿಯಾಯಿತು. ಈ ವಿಚಾರ ನನಗೆ ಗೊತ್ತಿರಲಿಲ್ಲ. ಆ ರಾತ್ರಿಯೆಲ್ಲಾ ನಿದ್ರೆ ಬರಲಿಲ್ಲ. ಮಾರನೇ ದಿನ ಬೆಳಗ್ಗೆ ಅವರ ಸಲಹೆ ಕೇಳಿದೆ ಆಗ ಅವರು ಹೇಳಿದರು. ನಿಮ್ಮವರೇ ಆದ ರಂಗಮಲ್ಲಯ್ಯ ನವರು ಮಧುಗಿರಿಯಲ್ಲಿ ಸಬ್ ಡಿವಿಜನ್ ಆಫೀಸರ್ ಇದ್ದಾರೆ, ಅವರಲ್ಲಿ ಹೋಗಿ 21 ತಿಂಗಳ ಕಾಲಾ ರಜಾ ಮಂಜೂರು ಮಾಡಿಸಿಕೊಳ್ಳಲು, ಶಿಫಾರಸ್ಸನ್ನು ತೆಗೆದುಕೊಂಡು, ಡಿ.ಸಿ. ಸಾಹೇಬರಿಂದ 21 ತಿಂಗಳ ರಜಾ ಪಡೆದು ಮೈಸೂರಿಗೆ ಹೋಗಿ ಬಿ.ಎ. ಪದವಿ ಪಡೆದು ಬಂದರೆ ಒಳ್ಳೆಯದು. ಇದು ನಿಮ್ಮ ಭವಿಷ್ಯದ ದೃಷ್ಟಿಯಿಂದ ಹೇಳುತ್ತಿದ್ದೇನೆಂದು ಸೂಚಿಸಿದರು. ಈ ಮಹಾಶಯರನ್ನು ನಾನು ಇಂದಿಗೂ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ.

ನನ್ನ ಭಾಗ್ಯ 1936ನೇ ಡಿಸೆಂಬರ್‌ನಲ್ಲಿ ಕೊಳಾಲ ತಿಮ್ಮಸಂದ್ರದಲ್ಲಿ ನಡೆದ ಹುಜೂರ್ ಜಮಾ ಬಂದಿಗೆ ಬಂದಿದ್ದ ಸಬ್ ಡಿವಿಜನ್ ಆಫೀಸರ್ ಶ್ರೀ ರಂಗಮಲ್ಲಯ್ಯ ನವರು ನನ್ನ ಕೆಲಸವನ್ನು ಮೆಚ್ಚಿಕೊಂಡು ಹೋಗಿದ್ದರು. ಅವರನ್ನು ಕಾಣಲು ನಾನು ಕೂಡಲೇ ಅರ್ಜಿ ತಯಾರಿಸಿಕೊಂಡು ಹೋದೆ. ಮೊದಲು ಕೊರಟಗೆರೆ ಅಮಲ್ದಾರ್ ಮಲ್ಲರಾಜ ಅರಸ್ ಅವರನ್ನು ಕಂಡು ಅವರಿಂದ ಶಿಫಾರಸ್ ಮಾಡಿಸಿಕೊಂಡು ನಂತರ ಸಬ್ ಡಿವಿಜನ್ ಆಫೀಸರ್ ಕಛೇರಿಗೆ ಹೋದೆ. ಆ ಸಮಯದಲ್ಲಿ ಸಾಹೇಬರು ಪುರವಾರಕೆಗೆ ಇನ್ಸ್‌ಪೆಕ್ಷನ್‌ಗೆ ಹೋಗಿದ್ದರು. ರಾತ್ರಿ ಸುಮಾರು 10 ಗಂಟೆಗೆ ಬಂದರು. ನಾನು ಅಲ್ಲಿಯವರೆಗೂ ಕಾದಿದ್ದೆ. ಮನೆಯ ಒಳಗೆ ಹೋಗುವಾಗ ನಾನು ಅವರನ್ನು ನೋಡಿದೆ. ನನ್ನನ್ನು ಒಳಗೆ ಕರೆದು ವಿಚಾರವನ್ನು ಕೇಳಿದರು. ನಾನು ನನ್ನ ವಿಚಾರವನ್ನು ಸಾಂಗವಾಗಿ ವಿವರಿಸಿದೆ. ನನ್ನ ಅರ್ಜಿಯನ್ನು ಸಾಹೇಬರ ಮುಂದಿಟ್ಟೆ. ಅವರು ಅದನ್ನು ಕೂಡಲೇ ಡಿ.ಸಿ.ಯವರಿಗೆ ಶಿಫಾರಸ್ ಮಾಡಿ ನಾಳೆ ಬೆಳಗ್ಗೆಯೇ ಆಫೀಸಿಗೆ ಹೋಗಿ ನಂಬರ್ ಹಾಕಿಸಿಕೊಂಡು ಡಿ.ಸಿ.ಯವರನ್ನು ನೋಡಿ ಎಂದು ತಿಳಿಸಿದರು. ಮಾರನೇ ದಿನ ಬೆಳಗ್ಗೆಯೇ ಸುಮಾರು 10 ಗಂಟೆಯಲ್ಲಿ ಆಗಿನ ಡಿ.ಸಿ. ಸಾಹೇಬರಾಗಿದ್ದ ಶ್ರೀರಾಮ ಚಂದ್ರರಾವ್ ಅವರ ಬಂಗಲೆ ಬಳಿಗೆ ಹೋದೆ. ಅವರು ಅದೇ ವೇಳೆಗೆ ಬಾಜಭಜಂತ್ರಿಯೊಡನೆ ತಾಲ್ಲೂಕುಗಳಿಗೆ ಕುದುರೆಮೇಲೆ ಪ್ರಯಾಣ ಹೊರಟಿದ್ದರು. ನನ್ನನ್ನು ನೋಡಿ ಕರೆದರು. ವಿಚಾರ ಏನು ಎಂದು ಕೇಳಿದರು. ನಾನು ನನ್ನ ವಿಚಾರ ತಿಳಿಸಿದೆ. ಅವರ ಜೊತೆಯಲ್ಲಿ ಇದ್ದ ಡಿಸ್ಟ್ರಿಕ್ಟ್ ಶಿರಸ್ತೇದಾರ್‌ರನ್ನು ಕೇಳಿದರು ಮತ್ತು ಎಸ್ಟಾಬ್ಲಿಷ್ ಮೆಂಟ್ ಗುಮಾಸ್ತೆಯವರು ಸಹ ಅಲ್ಲೇ ಇದ್ದರು. ಇವರಿಗೆ ರಜಾ ಕೊಡಬಹುದೇ

ಎಂದು ಕೇಳಿದರು ; ಅದಕ್ಕವರು ಕೂಡಲೆ ಕೊಡಬಹುದು ಸಾರ್ ಎಂದು ತಿಳಿಸಿದರು. ಅದೇ ದಿನ ನನಗೆ ಸಾಹೇಬರು ರಜಾ ಮಂಜೂರು ಮಾಡಲು ಆದೇಶಿಸಿದರು. 6 ತಿಂಗಳ ಸಂಬಳ ಸಹಿತ, ಉಳಿದ 15 ತಿಂಗಳ ಸಂಬಳ ರಹಿತ ರಜಾ ಮಂಜೂರು ಮಾಡಲು ಆದೇಶಿಸಿದರು.

ನನಗೆ 1936 ರಲ್ಲಿ ಕೊಳಾಲ ಹೋಬಳಿಯಲ್ಲಿದ್ದಾಗಲೇ ನನ್ನ ಸೋದರಮಾವ ತಿಮ್ಮಭೈರಣ್ಣನವರ ಮಗಳಾದ ಮಲ್ಲಮ್ಮನನ್ನು ಕೊಟ್ಟು ಲಗ್ನವಾಗಿತ್ತು. ನಾನು ಕೂಡಲೆ ಊರಿಗೆ ಬಂದೆ. ನನ್ನ ಮಾತೃಶ್ರೀಯವರಿಗೂ ನಮ್ಮ ಮಾವನವರಿಗೂ ಹಾಗೂ ಬೆಂಗಳೂರಿನಲ್ಲಿದ್ದ ನನ್ನ ಪ್ರೀತಿಯ ಅಣ್ಣನವರಿಗೂ ಈ ವಿಚಾರ ತಿಳಿಸಿದೆ. ಅವರ ಆಶೀರ್ವಾದ ಪಡೆದು ಮೈಸೂರಿಗೆ ಹೋಗಲು ಅವಕಾಶ ಕೊಡಿ ಎಂದು ಕೇಳಿಕೊಂಡೆ. ಆದರೆ ಅವರಾರೂ ಇದಕ್ಕೆ ಒಪ್ಪಲಿಲ್ಲ. ಕಾರಣ ಇಷ್ಟೆ, ನಾನು ಅವರ ಮುಂದೆ ರೆವಿನ್ಯೂ ಇನ್ಸ್‌ಪೆಕ್ಟರಾಗಿ ಕೆಲಸ ಮಾಡಿದರೆ ಸಾಕು ಎಂಬ ತೃಪ್ತಿ. ಅವರಿಗೆ ನನ್ನ ಇನ್ನಾವ ವೈಭವವೇ ಆಗಲಿ ಅಥವಾ ನೋವು, ನಲಿವುಗಳು ಬೇಕಾಗಿರಲಿಲ್ಲ. ನನ್ನನ್ನು ಕಂಡರೆ ಅವರಿಗೆಲ್ಲಾ ಅಷ್ಟು ಪ್ರೀತಿ. ಆದರೆ ಅವರಿಗೆ ಸಮಾಧಾನ ಮಾಡಿ ನನ್ನ ಮುಂದಿನ ಎರಡು ವರ್ಷಗಳ ವಿದ್ಯಾಭ್ಯಾಸಕ್ಕೆ ನೀವು ಏನೂ ಖರ್ಚು ಮಾಡಬೇಕಾಗಿಲ್ಲವೆಂದು ತಿಳಿಸಿ ಬಹಳ ಕಷ್ಟದಿಂದ ಅವರನ್ನು ಒಪ್ಪಿಸಿದೆ. ಮಾರನೇ ದಿನವೇ ನಾನು ಪಾತಗಾನಹಳ್ಳಿಗೆ ಹೋಗಿ ನನ್ನ ಅತ್ತೆ ಸಿದ್ದಮ್ಮನವರನ್ನು ಕರೆದುಕೊಂಡು ನನ್ನ ಮನೆಯ ಎಲ್ಲಾ ಪಾತ್ರೆಸಾಮಾನುಗಳನ್ನು ನಮ್ಮ ಊರಿಗೆ ಸಾಗಿಸಿದೆ. ಕೊರಟಗೆರೆಗೆ ಹೋಗಿ ಅಮಲ್ದಾರ್ ಸಾಹೇಬರಿಗೂ ತಾಲ್ಲೂಕು ಕಚೇರಿಯ ಸಿಬ್ಬಂದಿ ವರ್ಗ ಮುಖ್ಯವಾಗಿ ನನಗೆ ಮಾರ್ಗದರ್ಶನ ಮಾಡಿದ ಶ್ಯಾಮರಾಯರಿಗೆ ಮತ್ತು ಇತರೆ ನನ್ನ ಸ್ನೇಹಿತರಿಗೆ ವಂದನೆಗಳನ್ನು ಸಲ್ಲಿಸಿ ಅವರ ಆಶೀರ್ವಾದ ಪಡೆದು ಬಸ್ಸಿನಲ್ಲಿ ಮೈಸೂರಿಗೆ ಆದಿಚುಂಚನಗಿರಿಯ ಮೂಲಕ ಹೋದೆ. ಬಸ್ಸಿನಲ್ಲೇ ಕುಳಿತು ಶ್ರೀ ಭೈರವೇಶ್ವರಸ್ವಾಮಿಗೆ ನನ್ನ ಭಕ್ತಿ ಪೂರ್ವಕ ಪ್ರಾರ್ಥನೆಯನ್ನು ಸಲ್ಲಿಸಿದೆ. ರಾತ್ರಿ 10 ಗಂಟೆಗೆ ಬಸ್ಸು ಮೈಸೂರು ತಲುಪಿತು.

ಆಗಿನ ಕಾಲದಲ್ಲಿ ಮೈಸೂರಿನಲ್ಲಿ ಮಾತ್ರ ಬಿ.ಎ. ಓದಲು ಅವಕಾಶವಿತ್ತು. ಬೆಂಗಳೂರಿನಲ್ಲಿ ಬಿ.ಎಸ್‌ಸಿ.ಗೆ ಮಾತ್ರ ಅವಕಾಶವಿತ್ತು. ಅದಕ್ಕಾಗಿ ಮೈಸೂರಿಗೆ ಹೋಗಲೇಬೇಕಾಯಿತು. ಮಾರನೇ ದಿನ ಬೆಳಗ್ಗೆ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಅರ್ಜಿಯನ್ನು ಸಲ್ಲಿಸಿದೆ. ಕಾಂಬಿನೇಷನ್ ಯಾವುದು ತೆಗೆದುಕೊಳ್ಳಬೇಕೆಂದು ತಿಳಿಯದೆ ಕೊನೆಗೆ ಹೆಚ್.ಇ.ಪಿ. ಕೇಳಿದೆ. ಕಾರಣ ಆಗ ಜಯಚಾಮರಾಜೇಂದ್ರ ಒಡೆಯರ್ ರವರೂ ಸಹ ಅದೇ ವೇಳೆಯಲ್ಲಿ ಆ ಕಾಲೇಜಿನಲ್ಲಿ ಹೆಚ್.ಇ.ಪಿ.ಯನ್ನು ಐಚ್ಛಿಕ ವಿಷಯವನ್ನಾಗಿ ತೆಗೆದುಕೊಂಡಿದ್ದರು. ನನಗೆ ಹೆಚ್.ಇ.ಪಿ. ಕೊಡಲು ಅವಕಾಶವಿರಲಿಲ್ಲ. ಕಾರಣ ನಾನು ಇಂಟರ್ ಮೀಡಿಯೆಟ್‌ನಲ್ಲಿ ಅಂದರೆ 1933ರಲ್ಲಿ ಲಾಜಿಕ್ ಓದಿದ್ದೆ.

ಆಗ ಇಂಟರ್ ಮೀಡಿಯೆಟ್‌ನಲ್ಲಿ ಎಕನಾಮಿಕ್ಸ್ ಇರಲಿಲ್ಲ. ಕಡೆಯಲ್ಲಿ ಅನಿವಾರ್ಯ ವಾಗಿ ಹೆಚ್.ಪಿ. ಜೊತೆಗೆ ಸರಿಯಾದ ವಿಷಯವಿಲ್ಲದ್ದರಿಂದ ಮೂರು ದಿನಗಳು ಸುಮ್ಮನೆ ಕಾಲ ಕಳೆದೆ. ಆದರೆ ನನ್ನ ಪುಣ್ಯ ಜುಲೈ 15ನೇ ತಾರೀಖು ಕಡೆಯ ದಿನವಾಗಿತ್ತು. ನನ್ನಂಥವರು 5ಜನ ಕಾಲೇಜಿಗೆ ಅರ್ಜಿ ಹಾಕಿ ಅವರಿಗೂ ಇದೇ ತೊಂದರೆಯಾಗಿ ದಿನವೂ ಕಾಲೇಜಿನ ಬಳಿ ಬಂದು ಸೀಟಿಗಾಗಿ ಪರದಾಡುತ್ತಿದ್ದರು. ಅವರುಗಳೆಂದರೆ ಮಲ್ಲನಗೌಡ, ಹುಚ್ಚೇಗೌಡ (ಪಟೇಲ್ ಟಿ. ಚೌಡಯ್ಯನವರ ಅಳಿಯ) ಲಿಂಗಯ್ಯ, ವೇದಾಂತ ಐಯ್ಯಂಗಾರ್, ಇವೆಲ್ಲರೂ ಸೇರಿ ಅಂದು ಆಗಿನ ಪ್ರಿನ್ಸಿಪಾಲರಾಗಿದ್ದ ಜೆ.ಸಿ. ರೋಲೋ ಅವರನ್ನು ನೋಡಿದೆವು. ಅವರು ಹೇಳಿದರು, "I am very sorry. There is no suitable combination for you at present in this college. But I will do something for you. Please see me tomorrow by this time" ಎಂದು.

ಮಾರನೇ ದಿನ ಬೆಳಗ್ಗೆ ನಾವೆಲ್ಲರೂ ಹೋಗಿ ಅವರನ್ನು ನೋಡಿದೆವು. ಆ ವೇಳೆಗಾಗಲೇ ಅವರು ಕಾಲೇಜಿನ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದ ಶ್ರೀ ವೆಂಕಣ್ಣಯ್ಯನವರನ್ನು ಕರೆಸಿ ಅವರಿಂದ ಪ್ರೊಪೋಸಲ್ ತೆಗೆದುಕೊಂಡು ಇತಿಹಾಸ, ರಾಜಕೀಯ ಶಾಸ್ತ್ರದ ಜೊತೆಗೆ ಕನ್ನಡವನ್ನು ಐಚ್ಛಿಕ ವಿಷಯವಾಗಿ ಕೊಡಬಹುದೆಂದು ಶಿಫಾರಸ್ಸು ತೆಗೆದುಕೊಂಡು (ಹೆಚ್.ಪಿ.ಕೆ.) ತಾವೇ ಖುದ್ದಾಗಿ ಸಮೀಪದಲ್ಲಿ ಇದ್ದ ಮೈಸೂರು ವಿಶ್ವವಿದ್ಯಾಲಯ ಕಚೇರಿಗೆ ಹೋಗಿ ಆಗಿನ ಉಪಕುಲಪತಿಗಳಾಗಿದ್ದ ಎನ್. ಎಸ್. ಸುಬ್ಬರಾಯರನ್ನು ಕಂಡು ಒಪ್ಪಿಗೆ ಪಡೆದು ಬಂದಿದ್ದರು. ಕೂಡಲೆ ನಮ್ಮನ್ನು ಕರೆದು ಹೆಚ್.ಕೆ.ಪಿ. ಕಾಂಬಿನೇಷನ್ ತೆಗೆದುಕೊಳ್ಳಲು ಸೂಚಿಸಿ ಪ್ರವೇಶಕ್ಕೆ ಅನುಕೂಲ ಮಾಡಿ ಕೊಟ್ಟದ್ದು ಅದು ಒಳ್ಳೆಯ ಕಾಲ. ಅಂಥ ಅಧಿಕಾರಿಗಳು ಈಗ ಬೆರಳೆಣಿಕೆಯಷ್ಟು ಸಿಕ್ಕಿಯಾರು. ಈಗಿನ ಕಾಲದಲ್ಲಿ ಅಷ್ಟು ಬೇಗ ಅದು ಸಾಧ್ಯವಾಗುತ್ತಿರಲಿಲ್ಲವೆಂದು ನಾನು ದೃಢವಾಗಿ ಹೇಳಬಲ್ಲೆ.

ನನಗೆ ಮಧುಗಿರಿಯಲ್ಲಿ ರೆವಿನ್ಯೂ ಇನ್ಸ್‌ಪೆಕ್ಟರ್ ಆಗಿದ್ದಾಗ ನನಗೆ ಸೂಕ್ತ ತರಬೇತಿ ನೀಡಿದ್ದ ಆಗಿನ ಅಮಲ್ದಾರ್ ಆಗಿದ್ದ ಶ್ರೀಮಾನ್ ಆರ್.ಜೆ. ರೀಗೋ ಮತ್ತು ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಶ್ರೀಮಾನ್ ಜೆ.ಸೆ. ರೋಲೋ ಈ ಮಹಾನುಭಾವರನ್ನು ಈ ವೇಳೆಯಲ್ಲಿ ಸ್ಮರಿಸಿಕೊಂಡು ಅವರಿಗೆ ತುಂಬಾ ವಂದನೆಗಳನ್ನು ಸಲ್ಲಿಸಲು ಇಚ್ಛಿಸುತ್ತೇನೆ.

ನಾನು ಮೈಸೂರಿನ ಕಾಲೇಜಿನಲ್ಲಿ ಓದುತ್ತಿದ್ದಾಗ ನಮ್ಮ ಜನಾಂಗದ ಶ್ರೀಮತಿ ಹಾಲಮ್ಮನವರ ಛತ್ರದಲ್ಲಿ ಉಳಿದುಕೊಳ್ಳಲು ಹಾಲಮ್ಮನವರ ಭಾವಮೈದ ಶ್ರೀ ನರಸಿಂಹಯ್ಯನವರನ್ನು ನೋಡಿದೆ. ಆಗಾಗಲೇ ಎಲ್ಲಾ ರೂಮುಗಳು ಭರ್ತಿಯಾಗಿದ್ದವು. ಕಡೆಯಲ್ಲಿ ಅವರು ದೊಡ್ಡ ಮನಸ್ಸು ಮಾಡಿ ತಮ್ಮ ಸ್ವಂತಕ್ಕಾಗಿ ಇಟ್ಟುಕೊಂಡಿದ್ದ

ರೂಮನ್ನೇ ನನಗೆ ಬಿಟ್ಟುಕೊಟ್ಟರು. ಅವರು ಈಗ ದಿವಂಗತರಾಗಿದ್ದಾರೆ. ಅವರಿಗೆ ನನ್ನ ಧನ್ಯವಾದಗಳು. ನಾನು ಅಲ್ಲಿ ಕಷ್ಟಪಟ್ಟು ಓದಿ ವ್ಯಾಸಂಗ ಮಾಡಿದೆ. ನಮ್ಮ ಜನಾಂಗದ ಹುಡುಗರು ಒಂಬತ್ತು ಜನ ನನ್ನ ಜೊತೆಯಲ್ಲಿ ಪದವಿ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದರು. ಅವರುಗಳೆಂದರೆ ಸೀತಾರಾಮಯ್ಯ, ಎಸ್. ಆರ್ ರಂಗಯ್ಯ, ಮುಸಿಯಪ್ಪ, (ಇವರು ಹಿಂದೆ ಮಂತ್ರಿಯಾಗಿದ್ದರು. ಈಗ ದಿವಂಗತರಾಗಿ ದ್ದಾರೆ) ಎಳನಾಡು ರಂಗಯ್ಯ, ಎಂ.ಲಕ್ಷ್ಮೀನರಸಪ್ಪ, ಮರುಳಪ್ಪ, ಜನ್ನಪ್ಪ ಇತ್ಯಾದಿ. ಇವರುಗಳ ಪರಿಚಯವಾಯ್ತು. ಆ ಸಾಲಿನಲ್ಲಿ ನಾನು ಇವರುಗಳೆಲ್ಲರಿಗಿಂತ ಹೆಚ್ಚಿಗೆ ಮಾರ್ಕ್ಸ್ ತೆಗೆದು ಮಾರನೆ ವರ್ಷ ಮೆರಿಟ್ ಸ್ಕಾಲರ್‌ಶಿಪ್ ಅನ್ನೂ ಸಹ ಪಡೆದೆ. ನಾನು ಇದಕ್ಕಾಗಿ ಯಾರನ್ನೂ ನೋಡಿ ಶಿಫಾರಸ್ ಮಾಡಿಸಿರಲಿಲ್ಲ. ಬರೀ ಅರ್ಜಿ ಯನ್ನು ಮಾತ್ರ ಸಲ್ಲಿಸಿದ್ದೆ ಅಷ್ಟೆ. ಇದು ನನಗೆ ಅರ್ಹತೆಯ ಮೇಲೆಯೇ ಬಂದಿದ್ದು. ಆದರೂ ನನ್ನ ಗೆಳೆಯರು ಕೆಲವರಿಗೆ ಅಸಮಾಧಾನವಾದುದು ಉಂಟು.

1930ನೇ ಇಸವಿಯಲ್ಲಿ ನನಗೆ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಐಚ್ಛಿಕ ಕನ್ನಡಕ್ಕಾಗಿ ಇಟ್ಟಿದ್ದ ಮೊದಲನೇ ಬಹುಮಾನ ಹಾಗೂ ಚಿನ್ನದ ಪದಕ ಹಾಗೂ ಪ್ರಶಸ್ತಿ ಪತ್ರ ದೊರಕಿತು. ಆ ಸಮಯದಲ್ಲಿ ಐಚ್ಛಿಕ ಕನ್ನಡದಲ್ಲಿ ನಾವು 5 ಜನ ಮಾತ್ರ ವಿದ್ಯಾರ್ಥಿಗಳು ಇದ್ದೆವು. ಪ್ರತಿ ಭಾನುವಾರವೂ ತೀ. ನಂ. ಶ್ರೀಯವರ ಮನೆಗೆ ಹೋಗಿ ಅವರ ಉಪನ್ಯಾಸವನ್ನು ಕೇಳುತ್ತಿದ್ದೆವು. ಅವರು ನಮಗೆ ಕಾಫಿ–ತಿಂಡಿ ಕೊಟ್ಟು ಯಾವ ಫಲಾಪೇಕ್ಷೆಯೂ ಇಲ್ಲದೆ ನಿಸ್ವಾರ್ಥ ಮನೋಭಾವದಿಂದ ಉಪನ್ಯಾಸ ಮಾಡುತ್ತಿದ್ದರು. ಆ ಸಮಯದಲ್ಲೇ ನನಗೆ ಹೆಚ್ಚಿಗೆ ಸಾಹಿತ್ಯದಲ್ಲಿ ಆಸಕ್ತಿ ಮೂಡಿದ್ದು. ಅವರು ನನಗೆ ದೊರಕಿದ್ದು ನನ್ನ ಭಾಗ್ಯ, ವಿಶೇಷವಾಗಿ ಶ್ರೀಮಾನ್ ಡಿ.ಎಲ್. ನರಸಿಂಹಾಚಾರ್, ಟಿ. ಎಸ್. ವೆಂಕಣ್ಣಯ್ಯ ಮತ್ತು ವರದಾಚಾರ್ ಅವರು ನನ್ನಲ್ಲಿ ಹೆಚ್ಚಿನ ಪ್ರೀತಿ ವಿಶ್ವಾಸವಿಟ್ಟಿದ್ದರು. ಅವರಲ್ಲೂ ಸಹ ನನಗೆ ಅಷ್ಟೇ ಭಕ್ತಿ ಗೌರವ ಗಳಿದ್ದವು. ನಾನು ಸೀನಿಯರ್ ಬಿ.ಎ. ಪರೀಕ್ಷೆಗೆ ಕುಳಿತಿದ್ದಾಗ ನಮ್ಮ ಕನ್ನಡ ಪ್ರಾಧ್ಯಾಪಕರಾಗಿದ್ದ ದೈವಾಂಶ ಸಂಭೂತರಾಗಿದ್ದ ಶ್ರೀ ಟಿ. ಎಸ್. ವೆಂಕಣ್ಣಯ್ಯನವರು ಬಳ್ಳಾರಿಯಲ್ಲಿ ನಡೆಯಬೇಕಾಗಿದ್ದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಹೋಗಿ ಕರ್ನಾಟಕ : ಕರ್ಣಾಟಕ (ನ–ಣ) ವಿಚಾರದಲ್ಲಿ ವಿವಾದ ಎದ್ದಿದ್ದ ವಿಚಾರ ಗೋಷ್ಠಿಯಲ್ಲಿ ಸಿಕ್ಕಿ ಹಾಕಿ ಕೊಂಡು ಆ ವಿವಾದವನ್ನು ಎಲ್ಲರಿಗೂ ಮೆಚ್ಚುವಂತೆ ಪರಿಹರಿಸಿ ಆ ದಿಸೆಯಿಂದ ಖಾಯಿಲೆಗೆ ತುತ್ತಾಗಿ ವಾಪಸ್ಸು ಮೈಸೂರಿಗೆ ಬಂದರು. ಅವರ ಖಾಯಿಲೆ ಉಲ್ಬಣಿಸಿ ಅಕಾಲ ಮರಣಕ್ಕೆ ತುತ್ತಾದರು. ಅವರ ಸಾವಿನ ನೋವನ್ನು ನಾನು ತಡೆಯಲಾಗಲಿಲ್ಲ. ಅಂತಹ ಅಪರೂಪದ ಹಾಗು ಪರಿಶುದ್ಧವಾದ ವ್ಯಕ್ತಿಯನ್ನು ಕಳೆದುಕೊಂಡು ಕಾಲೇಜಿನ ಅಧ್ಯಾಪಕ ವರ್ಗ ಮತ್ತು ವಿದ್ಯಾರ್ಥಿ ವೃಂದ ಬಹುವಾಗಿ ದುಃಖಿಸಿತು.

193೪ರಲ್ಲಿ ನಾನು ಬಿ.ಎ ಪರೀಕ್ಷೆ ಮುಗಿಸಿಕೊಂಡು ಬೆಂಗಳೂರಿನ ರೆವಿನ್ಯೂ

ಕಮೀಷನರ್ ಕಚೇರಿಗೆ ಹೋದೆ ; ಈ ಮಧ್ಯೆ ನಾನು ರಜಾದಲ್ಲಿರುವಾಗಲೇ ನನ್ನನ್ನು ತುಮಕೂರು ಜಿಲ್ಲೆಯಿಂದ ಚಿಕ್ಕಮಗಳೂರಿನ ಜಿಲ್ಲೆಯ ಕೊಪ್ಪ ತಾಲ್ಲೂಕಿಗೆ ರೆವಿನ್ಯೂ ಇನ್ಸ್‌ಪೆಕ್ಟರಾಗಿ ವರ್ಗಾಯಿಸಿದ್ದರು. ಆಗಿನ ರೆವಿನ್ಯೂ ಕಮೀಷನರ್ ಅವರ ಹೆಡ್ ಕ್ವಾರ್ಟರ್ಸ್ ಅಸಿಸ್ಟೆಂಟ್‌ರಾಗಿದ್ದ ಶ್ರೀ ಆನಂದತೀರ್ಥರನ್ನು ಮತ್ತು ನನಗೆ ಹಿಂದೆ ಪ್ರೊಬೇಷನರಿ ರೆವಿನ್ಯೂ ಇನ್ಸ್‌ಪೆಕ್ಟರ್ ಆಗಲು ಸಹಾಯ ಮಾಡಿದ್ದ ರೆವಿನ್ಯೂ ಕಮೀಷನರ್‌ರವರ ಆಪ್ತ ಸಹಾಯಕ ಶ್ರೀ ಹಸನ್ ಷರೀಫ್ ಅವರನ್ನು ಕೇಳಿಕೊಂಡೆ. ನನ್ನನ್ನು ಕೂಡಲೆ ಬೆಂಗಳೂರು ಜಿಲ್ಲೆಗೆ ವರ್ಗಮಾಡಿಕೊಟ್ಟರು. ಈ ಕೆಲಸ ಒಂದೇ ದಿನದಲ್ಲಿ ನಡೆಯಿತು. ಅಂಥ ಒಳ್ಳೆಯ ಕಾಲ ಅದು. ಆಗ ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕು ಮಧುರೆ ಹೋಬಳಿಗೆ ಆರ್.ಐ. ಆಗಿ ಬಂದೆ. ಕೂಡಲೆ ದೊಡ್ಡಬಳ್ಳಾಪುರಕ್ಕೆ ಹೋಗಿ ಅಲ್ಲಿನ ಅಮಲ್ದಾರ್ ಆಗಿದ್ದ ಶ್ರೀ ಬಿ. ನಾರಾಯಣಸ್ವಾಮಿ ಅವರನ್ನು ನೋಡಿ ಕೆಲಸಕ್ಕೆ ಹಾಜರಾದೆ. ಮಧುರೆ ಹೋಬಳಿ ಆರ್.ಐ. ಆಗಿದ್ದ ಶಫಿವುಲ್ಲಾ ಖಾನ್ ಅವರಿಂದ ಚಾರ್ಜ್ ತೆಗೆದುಕೊಂಡೆ. ಆದರೆ ಅವರು ತಾವಿದ್ದ ಮನೆ ಹಳೇ ಪೊಲೀಸ್ ಔಟ್‌ಪೋಸ್ಟ್ ಮನೆ. ತುಂಬಾ ಚಿಕ್ಕದು ಅಲ್ಲದೆ ಅವರು ಆ ಮನೆಯನ್ನು ಬಿಡಲು ಒಪ್ಪಲಿಲ್ಲ. ಅದನ್ನು ಬಿಟ್ಟರೆ ಬೇರೆ ಮನೆ ಇದ್ದುದು ಹಳೆಯ ಮುಸಫರ್ ಖಾನೆ ಪಕ್ಕದಲ್ಲೇ ಒಂದು ಅಡಿಗೆ ಮನೆ. ಆ ಮನೆಗೆ ಗೋಡೆ ಮತ್ತು ಸೂರು ಮಾತ್ರ ಭದ್ರವಾಗಿದ್ದು ಕಿಟಕಿ ಬಾಗಿಲುಗಳೆಲ್ಲವೂ ಮುರಿದುಹೋಗಿದ್ದವು. ಆದರೂ "ಎತ್ತಿಲ್ಲದವನಿಗೆ ಕೋಣನೇ ಸಂಜೀವ" ಎಂಬಂತೆ ಆ ಮನೆಯಲ್ಲಿ ಠಿಕಾಣಿ ಹಾಕಿದೆ. ಊರಿನಿಂದ ಬಂದಿದ್ದ ನನ್ನ ಬಂಧುವೊಬ್ಬರು ಈ ಮನೆಯಲ್ಲಿ ಅಡಿಗೆ ಮಾಡಿ ಇಡುತ್ತಿದ್ದರು. ಈ ಮುರುಕು ಬಂಗಲೆಯಲ್ಲಿ 2 ವರ್ಷಗಳು ಸುಖವಾಗಿ ಕರ್ತವ್ಯವೇ ದೇವರು ಎಂದು ಭಾವಿಸಿ ಕೆಲಸ ಮಾಡಿದೆ. ಅಲ್ಲಿಯೂ ಕೂಡ ಕಂದಾಯ ವಿಚಾರದಲ್ಲಿ ಕಡತಗಳ ವಿಲೇವಾರಿ ವಿಚಾರದಲ್ಲಿ ತುಂಬಾ ಶ್ರದ್ಧೆಯಿಂದ ಶ್ರಮವಹಿಸಿ ಕೆಲಸ ಮಾಡಿದೆ. ಈ ಹೋಬಳಿಯಲ್ಲಿ ಸುಮಾರು 36 ಗ್ರಾಮಗಳಿದ್ದವು. ಇಲ್ಲಿ ಒಳ್ಳೆಯ ಮಳೆ, ಬೆಳೆ ಆಗುತ್ತಿತ್ತು. ಎರಡು ವರ್ಷ ಕಾಲ ಇಲ್ಲಿ ಕೆಲಸ ಮಾಡಿದೆ. ವಸೂಲಿಯಲ್ಲಿ ಇಲ್ಲಿಯೂ ಕೂಡ ಜಿಲ್ಲೆಗೆ ನಾನೇ ಪ್ರಥಮವಾಗಿದ್ದೆ. ಜನ್ನಸಂದ್ರ ಗ್ರಾಮದ ಒಬ್ಬ ರೈತ 14 ರೂ. ಬಾಕಿಯನ್ನು 30ನೇ ಜೂನ್ ತಾರೀಖಿನವರೆಗೂ ಕೊಟ್ಟಿರಲಿಲ್ಲ. ನಾನೇ ಆ ಬಾಕಿಯನ್ನು ಕೈಯಿಂದ ಹಾಕಿ ಕಟ್ಟಿ ಹೋಬಳಿಯ ಕಂದಾಯವನ್ನು ಬೇ ಬಾಕಿ ಮಾಡಿದೆ. ಅನಂತರ ಪಟೇಲರು ಅವನಿಂದ ವಸೂಲಿಮಾಡಿ ಕೊಟ್ಟರು. ಇಲ್ಲಿ ಒಂದು ವಿಶೇಷ ಸಂಗತಿಯನ್ನು ನಿವೇದಿಸಿದರೆ ಅಪ್ರಕೃತವಾಗಲಾರದೆಂದು ಭಾವಿಸಿದ್ದೇನೆ. ಅಮಲ್ದಾರ್ ಸಾಹೇಬರವರು ಹಳ್ಳಿಗಳಿಗೆ ಬಂದು ನಮಗೆ ಸ್ವತಃ ಕುಮ್ಮಕ್ಕು ಕೊಡುವುದರ ಬದಲು ಹೆಡ್ ಕ್ವಾರ್ಟರ್ಸಿನಲ್ಲೇ ಕುಳಿತು ನಮಗೆ ಡಿ.ಓ. ಪತ್ರಗಳನ್ನು ಫೆಬ್ರವರಿಯಿಂದ ಹಿಡಿದು ಜೂನ್ ಅಖೈರುವರೆಗೂ ತಮ್ಮ ಸ್ವಂತ ಬರವಣಿಗೆಯಿಂದ ಬರೆಯುವುದರ ಮೂಲಕ

ಮತ್ತು ಅವರಲ್ಲಿ ಕೆಲಸ ಮಾಡುತ್ತಿದ್ದ 5 ಜನ ಶೇಕ್‌ದಾರರುಗಳಲ್ಲಿ ಕೆಲವರನ್ನು ಹೊಗಳಿ ಮತ್ತೆ ಕೆಲವರನ್ನು ತೆಗಳುವುದರ ಮೂಲಕ ಬಹಳ ಚಾಕಚಕ್ಯತೆಯಿಂದ ತಮ್ಮ ಕರ್ತವ್ಯ ನೆರವೇರಿಸುತ್ತಿದ್ದರು. ಆ ಕಾಗದಗಳನ್ನು ನೋಡಿದ ನಮಗೆ ಎಷ್ಟೋ ಸಂತೋಷವಾಗಿ ಮತ್ತು ಶ್ರದ್ಧಾ ಭಕ್ತಿಯಿಂದ ಕೆಲಸ ಮಾಡಬೇಕೆಂಬ ಹುಮ್ಮಸ್ಸು (Competitive Spirit) ಹುಟ್ಟುತ್ತಿತ್ತು.

1940ರಲ್ಲಿ ಇಲ್ಲಿ ಇರುವಾಗಲೆ ನಮ್ಮ ಕುಟುಂಬದಲ್ಲಿ ದೊಡ್ಡ ದುರ್ಘಟನೆ ನಡೆಯಿತು. ನನ್ನ ಪ್ರೀತಿಯ ಹಾಗೂ ನನ್ನ ಮೇಲೆ ಅಪಾರ ವಾತ್ಸಲ್ಯ ತೋರುತ್ತಿದ್ದ ಶ್ರೀ ಹನುಮಂತಯ್ಯನವರು ಶ್ರೀ ಕೃಷ್ಣರಾಜೇಂದ್ರ ಒಡೆಯರ್‌ರವರ ಪುಣ್ಯ ತಿಥಿಯ ದಿನದಂದೇ ಸುಮಾರು ಮಧ್ಯಾಹ್ನ 4 ಗಂಟೆಗೆ ಸರಿಯಾಗಿ ಟಿ. ಬಿ. ಕಾಯಿಲೆಯಿಂದ ನರಳುತ್ತಿದ್ದು ಮರಣ ಹೊಂದಿದ ಸಮಾಚಾರ ಬಂತು. ನಮ್ಮ ಊರು ಅಲ್ಲಿಗೆ ಸುಮಾರು 10–12 ಮೈಲು ದೂರವಿತ್ತು. ಕೂಡಲೇ ಹೋದೆ ಶವಸಂಸ್ಕಾರವನ್ನು ನಾನೇ ನೆರವೇರಿಸಿದೆ. ಅವರಿಗೆ ಮಕ್ಕಳು ಇರಲಿಲ್ಲ. ಇವರಿಗಾಗಿ ನಾನು ನಾಲ್ಕು ವರ್ಷ ಕಾಲ ಪಟ್ಟಶ್ರಮ ಅಷ್ಟಿಷ್ಟಲ್ಲ. ಮಧುರೆ ಹೋಬಳಿಯಲ್ಲಿ ನಾನು ವಾಸವಾಗಿದ್ದ ಗಾರ್ಡಿಗರ ಪಾಳ್ಯದಿಂದ ಮೈಸೂರಿನ ಸ್ಯಾನಿಟೋರಿಯಮ್ ಆಸ್ಪತ್ರೆಗೆ ವಾರಕ್ಕೆ ಎರಡು ಸಾರಿ ಹೋಗಿ ಬರುತ್ತಿದ್ದೆ. ನನಗೆ ತಂದೆಯಂತಿದ್ದ ಹಾಗೂ ನಯ ವಿನಯ ಸಂಪನ್ನ ರಾದ ಒಬ್ಬನೇ ಒಬ್ಬ ಅಣ್ಣನನ್ನು ನಾನು ಅಂದು ಕಳೆದುಕೊಂಡೆ. ನನ್ನ ತಮ್ಮ ಹೆಂಜೇರಪ್ಪನು ಇದಕ್ಕೂ ಮುಂಚೆ 10–15 ವರ್ಷಗಳ ಹಿಂದೆಯೇ ಪ್ಲೇಗಿನಿಂದ ತೀರಿ ಕೊಂಡಿದ್ದ.

1940ರಲ್ಲಿ ನನ್ನನ್ನು ದೊಡ್ಡಬಳ್ಳಾಪುರ ತಾಲ್ಲೂಕಿನ ತೂಬುಗೆರೆ ಹೋಬಳಿಗೆ ವರ್ಗ ಮಾಡಿದರು. ಆಗ ಟಿ. ಹೆಚ್. ಅಮೀರ್ ಅವರು ಅಲ್ಲಿ ಅಮಲ್ದಾರರಾಗಿದ್ದರು. ಅವರು ಮುಸ್ಲಿಂ ಅಧಿಕಾರಿಯಾಗಿದ್ದರೂ ಸಹ ಜಾತಿ, ಮತ ಭೇದವಿಲ್ಲದೆ ಗುಣಗ್ರಾಹಿ ನೀತಿವಂತರಾಗಿದ್ದರು. ಸುಸಂಸ್ಕೃತ ಸತ್ಪುರುಷರು. ಅವರೂ ಸಹ ಈ ದಿನ ದಿವಂಗತ ರಾಗಿದ್ದಾರೆ. ಆಗ ಅವರ ಶಿಫಾರಸ್ಸಿನಿಂದಲೇ ನಾನು ಶಿರಸ್ತೇದಾರನಾಗಲು ಅವಕಾಶ ಸಿಕ್ಕಿದ್ದು. ನಾನು ಶಿರಸ್ತೇದಾರನಾಗಿ ಬಡ್ತಿ ಪಡೆದಾಗ ಯೋಗ್ಯತೆ ಮತ್ತು ಪ್ರತಿಭೆಗೆ ಬಹಳ ಪುರಸ್ಕಾರವಿರುತ್ತಿತ್ತು. ಜಿಲ್ಲಾಧಿಕಾರಿಗಳಿಗೆ ಬಡ್ತಿ ಕೊಡುವ ಅಧಿಕಾರವಿರು ತ್ತಿತ್ತು. ಜ್ಯೇಷ್ಠತೆ ಆಧಾರವೊಂದೇ ಅಲ್ಲದೆ ಬಹು ಮುಖ್ಯವಾಗಿ ಅರ್ಹತೆಯನ್ನು ಪರಿಗಣಿಸಿ ಬಡ್ತಿ ಕೊಡುತ್ತಿದ್ದರು. ಇದನ್ನು ಈಗಾಗಲೇ ಸಾಕಷ್ಟು ಹೇಳಿದ್ದೇನೆ.

ಈ ಸಂದರ್ಭದಲ್ಲಿ ಒಂದು ಘಟನೆ ನಡೆಯಿತು. ತೂಬಗೆರೆ ಹೋಬಳಿಯಲ್ಲಿ ಒಂದು ಕುಗ್ರಾಮ. ಕೆಳಗಿನ ಜೋಗಾಹಳ್ಳಿ ಎಂದು ನನಗೆ ನೆನಪಿದೆ. ಶಿರಸ್ತೇದಾರರ ಕೆಲಸಕ್ಕೆ ಶಿಫಾರಸ್ಸು ಮಾಡಿಸಿಕೊಳ್ಳಲು ನಾನು ಈ ಅಮಲ್ದಾರರನ್ನು ಕಂಡಾಗ ಅವರು ಸಂತೋಷವಾಗಿ ಶಿಫಾರಸ್ಸು ಮಾಡುತ್ತೇನೆಂದು ಹೇಳಿದವರು ನನ್ನನ್ನು ಕುರಿತು

''Puttanarasaiah, have I not done some injustice to you'' ಎಂದರು. "ಏನೂ ಇಲ್ಲವಲ್ಲ ಸರ್" ಎಂದು ಹೇಳಿದೆ. ಅದಕ್ಕೆ ಅವರು ''Have I not fined you same time back about missing of a tree in a village'' ಅಂದರು. ಆಗ ನನಗೆ ಜ್ಞಾಪಕಕ್ಕೆ ಬಂತು. ತೂಬಗೆರೆ ಹೋಬಳಿಯ ಕೆಳಗಿನ ಜೋಗಾನ ಹಳ್ಳಿಯಲ್ಲಿ ಕೆಲವಾರು ತಿಂಗಳುಗಳ ಹಿಂದೆ ಒಂದು ಒಣಮರ ಹರಾಜಿಗೆ ಬಂದಿತ್ತು. ಅದರ ಬೆಲೆ ಸುಮಾರು 5–6 ರೂ. ಆಗಬಹುದು. ಅದಕ್ಕೆ ತಾಲ್ಲೂಕು ಆಫೀಸಿನಿಂದ ಹರಾಜು ಹಾಕಲು ಇಸ್ತಿಹಾರು ಬಂದಿತ್ತು. ಹರಾಜು ತಾರೀಖಿಗೆ ನಾನು ಹೋಗಿ ಹರಾಜು ಮಾಡಲು ಬೇರೆ ಅರ್ಜೆಂಟ್ ಕೆಲಸವಿದ್ದ ಕಾರಣ ಸಾಧ್ಯವಾಗಲಿಲ್ಲ. ಪುನಃ ದುಸರಾ ಹರಾಜಿಗೆ ತಾರೀಖು ಹಾಕಲು ರಿಪೋರ್ಟು ಬರೆದೆ. ಬೇರೆ ಹರಾಜು ತಾರೀಖನ್ನೂ ಕೊಟ್ಟರು. ಆ ದಿವಸ ನಾನು ಮರದ ಬಳಿ ಹೋದಾಗ ಅದು ನಾಪತ್ತೆಯಾಗಿತ್ತು. ಪಟೇಲ್ ಶ್ಯಾನು ಭೋಗರನ್ನೂ ವಿಚಾರಿಸಲಾಗಿ ಅವರು ಸಮಾಧಾನಕರವಾದ ಉತ್ತರವನ್ನು ಕೊಡಲಿಲ್ಲ. ಮರ ನಾಪತ್ತೆಯಾಗಿರುವುದರಿಂದ ಹರಾಜು ಮಾಡಲಾಗಲಿಲ್ಲವೆಂದು ಇದ್ದ ವಿಚಾರವನ್ನು ಅಮಲ್ದಾರ್‌ರವರಿಗೆ ರಿಪೋರ್ಟು ಕಳುಹಿಸಿದೆ. ಅದಕ್ಕೆ ಅವರು It is due to negligence and indifference of the R.I. the tree is lost. The R.I. is fined Rs. 10/– ಎಂದು ಆರ್ಡರ್ ಮಾಡಿ ಕಛೇರಿಗೆ ತರಲು ಕಳುಹಿಸಿದರು. ಆಫೀಸಿನವರು ಆ ತಿಂಗಳಿನಲ್ಲಿ 10 ರೂಪಾಯಿ ಜುಲ್ಮಾನೆಯನ್ನು ಹಿಡಿದು 40 ರೂಪಾಯಿ ಕೊಟ್ಟರು. ನಾನು ಇರುವ ವಿಚಾರವನ್ನು ಇದ್ದ ಹಾಗೆ ಬರೆದುದಕ್ಕೆ ನನಗೆ ಈ ಶಿಕ್ಷೆಯಾಯಿತು. ಆಗಲಿ ಅದು ದೈವೇಚ್ಛೆ ಎಂದು ತಿಳಿದುಕೊಂಡು ಸುಮ್ಮನಾಗಿದ್ದೆ. ಅದನ್ನು ಅಮಲ್ದಾರರು ಜ್ಞಾಪಕದಲ್ಲಿಟ್ಟುಕೊಂಡು ನನಗೆ ಎಚ್ಚರಿಸಿದರು. ಕೂಡಲೇ ಆ ರಿಕಾರ್ಡನ್ನು ತರುವಂತೆ ನನಗೆ ತಿಳಿಸಿದರು. ತಾಲ್ಲೂಕು ಕಚೇರಿಗೆ ಹೋಗಿ ತಂದು ಕೊಟ್ಟೆ. ಕೂಡಲೆ ಅವರು ''Fine is excused'' ಎಂದು ಬರೆದರು. ಅದು ಆಗಿನ ಅಧಿಕಾರಿಗೆ ನೀತಿ ನಿಯಮಗಳು ಇದ್ದುದಲ್ಲದೆ ಜಬರ್‌ದಸ್ತು ಇತ್ತು. ಅಷ್ಟೆ ಕ್ಷಮಾ ಗುಣವೂ ಇತ್ತು. ಇವೆರಡೂ ಗಾಡಿಯ ಎರಡು ಚಕ್ರಗಳಿದ್ದಂತೆ. "ಸಗ್ಗದಲ್ಲಾಡುವವರು ಇವರಿಬ್ಬರ ಕಣಾ : ಪ್ರಭುವಾಗಿಯೂ ಕ್ಷಮೆವೆರಸಿದವನು ; ದರಿದ್ರನಾಗಿಯೂ ದಾನಿಯಾಗಿಸುವನು" ಎಂಬ ಹಾಗೆ. ಈಗ ಎಲ್ಲಿ ಬರಬೇಕು ಅಂಥ ಅಧಿಕಾರಿಗಳು. ಈಗ ಬೆರಳೆಣಿಸುವಷ್ಟು ಸಿಕ್ಕುವುದಿಲ್ಲ. ಅಂತು ನನ್ನ ಸುದೈವ. ಜುಲ್ಮಾನೆಯನ್ನು ಕಟ್ಟಿ ಆಯಿತು. ಶಿರಸ್ತೇದಾರರನ್ನಾಗಿ ನನಗೆ ಬಡ್ತಿ ಕೊಡಬೇಕು ಎಂದು ಬರೆದು ಕೊಟ್ಟೂ ಆಯಿತು. ದೇವರ ದಯೆಯಿಂದ ಅವರ ಶಿಫಾರಸ್ಸಿನಿಂದ ನನಗೆ ಬಡ್ತಿಯೂ ದೊರೆಯಿತು.

ನನಗೆ ಹೋಬಳಿಯಲ್ಲಿ ಬಡವರಿಗೆ ಉಪಕಾರ ಮಾಡಲು ಒಳ್ಳೆಯ ಅವಕಾಶ ಸಿಕ್ಕಿತು. ಆ ವೇಳೆಗೆ ''Grow more Food'' ಎಂಬ ಹೊಸ ಯೋಜನೆ ಜಾರಿಗೆ ಬಂದಿತ್ತು. ಅಂದರೆ ಜಮೀನಿಲ್ಲದ ರೈತರಿಗೆ ಹೇಗಾದರೂ ಮಾಡಿ ಸರ್ಕಾರಿ ಜಮೀನಿನಲ್ಲಿ

ಏಕಸಾಲು, ಪಂಚಸಾಲು ಗುತ್ತಿಗೆ ಆಧಾರದ ಮೇಲೆ ಜಮೀನು ಕೊಡಬೇಕೆಂದು ಸರ್ಕಾರದಿಂದ ಸುತ್ತೋಲೆ ಬಂದಿತ್ತು. ಒಳ್ಳೆಯ ಅವಕಾಶ ಸಿಕ್ಕಿತಲ್ಲಾ ಎಂದು ಹೇಳಿ ಬಹಳ ಶ್ರದ್ಧೆಯಿಂದ ಸಾವಿರಾರು ಎಕರೆ ಬಯಲು ಗೋಮಾಳಗಳನ್ನು ನೂರಾರು ಬಡ ಜನರಿಗೆ ಕೊಡಲು ಏರ್ಪಾಟು ಮಾಡಿದೆ. ಈಚೀಚೆಗೆ ನಾನು ತಿಳಿದುಕೊಂಡಿದ್ದ ಹಾಗೆ ಆಗ ನಾನು ಕೊಟ್ಟಿದ್ದ ಜಮೀನು ಈಗ ಅವರುಗಳಿಗೆ ಖಾಯಂ ಮಂಜೂರಾತಿ ಆಗಿ ಅವರ ವಂಶ ಪಾರಂಪರ್ಯವಾಗಿ ಅನುಭವಿಸಿಕೊಂಡು ಬರುತ್ತಿದ್ದಾರಂತೆ. ಆ ಸಮಯದಲ್ಲಿ ನನಗೆ ಅನುಕೂಲವನ್ನು ಕಲ್ಪಿಸಿ ಸುತ್ತೋಲೆಯನ್ನು ಜಾರಿಗೆ ಕೊಡಲು ಅವಕಾಶ ಮಾಡಿಕೊಟ್ಟ ಶ್ರೀ ಟಿ. ಹೆಚ್. ಅಮೀರ್ ಸಾಹೇಬರಿಗೂ ನಾನು ಈ ವೇಳೆಯಲ್ಲಿ ನೆನಪಿಸಿಕೊಳ್ಳುತ್ತೇನೆ. ಇಲ್ಲಿ ನನಗೆ ಶ್ರೀಮಾನ್ ಬಿ.ಹೆಚ್. ನರಸಿಂಗ್ ಎಂಬುವ ಒಳ್ಳೆಯ ಸ್ನೇಹಿತರು ಇದ್ದರು. ಅವರು ನನಗೆ ತುಂಬಾ ಆತ್ಮೀಯರಾಗಿದ್ದರು. ಇವರು ದರಕಾಸ್ತು ಖಾತೆಯನ್ನು ನೋಡಿಕೊಳ್ಳುತ್ತಿದ್ದರು. ನಾನು ದೊಡ್ಡಬಳ್ಳಾಪುರಕ್ಕೆ ಹೋದಾಗಲೆಲ್ಲಾ ಅವರು ತಮ್ಮ ಮನೆಯಲ್ಲೇ ಇರಿಸಿಕೊಂಡು ಊಟ ವಗೈರೆ ಎಲ್ಲಕ್ಕೂ ಅವರೇ ಏರ್ಪಾಡು ಮಾಡುತ್ತಿದ್ದರು. ಅವರು ನನಗೆ ಒಳ್ಳೆಯ ಸಂಗಾತಿಯಾಗಿದ್ದರು. ಇವರನ್ನೂ ಸಹ ನಾನು ಸ್ಮರಿಸುತ್ತೇನೆ.

ಈ ತೂಬಗೆರೆ ಹೋಬಳಿಯಲ್ಲಿ ಘಾಟಿ ಸುಬ್ರಹ್ಮಣ್ಯಸ್ವಾಮಿಯ ದೇವಸ್ಥಾನವಿದ್ದು ಪ್ರತಿವರ್ಷವೂ ಸಾವಿರಾರು ರಾಸುಗಳ ಜಾತ್ರೆ ನಡೆಯುತ್ತಿತ್ತು. ಇದು ಹಳೇ ಮೈಸೂರಿನಲ್ಲಿಯೇ ಬಹು ದೊಡ್ಡದಾದ ಜಾತ್ರೆ. ರಥೋತ್ಸವ ಸಹ ನಡೆಯುತ್ತಿತ್ತು. ಆ ಸಮಯದಲ್ಲಿ ತಾಲ್ಲೂಕಿನಲ್ಲಿದ್ದ ಎಲ್ಲಾ ಶೇಖದಾರರುಗಳನ್ನು ಜಾತ್ರೆಯ ಡ್ಯೂಟಿ ಮಾಡಲು 10-15 ದಿನಗಳ ಕಾಲ ಅಲ್ಲಿಗೆ ನೇಮಿಸುತ್ತಿದ್ದರು. ಆ ಹೋಬಳಿಯಲ್ಲಿ ಸುಮಾರು 2 ವರ್ಷಗಳ ಕಾಲ ಶ್ರೀ ಸುಬ್ರಹ್ಮಣ್ಯಸ್ವಾಮಿಯವರ ಸೇವೆ ಮಾಡಲು ಅವಕಾಶ ಸಿಕ್ಕಿದ್ದು ನನ್ನ ಪುಣ್ಯವೆಂದು ಭಾವಿಸಿದ್ದೇನೆ.

ಈ ಹೋಬಳಿಯಲ್ಲಿಯೂ ಹಿಂದಿನಂತೆಯೇ ಕಂದಾಯದ ವಸೂಲಿಯನ್ನು ಶ್ರದ್ಧೆಯಿಂದ ಮಾಡುತ್ತಿದ್ದೆ. ಯಾರ್‍ಯಾರೋ ಆರ್.ಐ.ಗಳು ನನಗಿಂತ ಹೆಚ್ಚಿಗೆ ಕಂದಾಯ ವಸೂಲಿ ಮಾಡಲು ಸವಾಲು ಹಾಕಿದ್ದರು. ಆದರೆ ವಸೂಲಿಯಲ್ಲಿ ಯಾರೂ ನನ್ನನ್ನು ಮೀರಿಸಲು ಸಾಧ್ಯವಾಗಲಿಲ್ಲ. ಆ ಸಾಲಿನಲ್ಲಿಯೂ ನಾನೇ ಮೊದಲಿಗನಾದುದರಿಂದಲೂ ಮತ್ತು ದರಕಾಸ್ತು ಜಮೀನು ಕೊಟ್ಟು "ಗ್ರೋ ಮೋರ್ ಫುಡ್" ಯೋಜನೆಯಲ್ಲಿ ಹೆಚ್ಚಿಗೆ ಪ್ರಗತಿ ಸಾಧಿಸಿದ್ದರಿಂದ ನನಗೆ ಶಿರಸ್ತೇದಾರರಾಗಿ ಪ್ರಮೋಷನ್ ಕೊಡಲು ಶ್ರೀ ಹೆಚ್. ಅಮೀರ್‌ರವರು ಪ್ರಶಂಸಾರ್ಹವಾದ ಶಿಫಾರಸ್ಸನ್ನು ಮಾಡಿದ್ದರು ಎಂಬುದನ್ನು ಈ ಮೇಲೆ ತಿಳಿಸಿದ್ದೇನೆ. ಅವರ ಶಿಫಾರಸ್ಸಿನ ಮೇರೆಗೆ ಆಗಿನ ಡಿ.ಸಿ. ಸಾಹೇಬರಾಗಿದ್ದ ಶ್ರೀ ಎಸ್. ನಾರಾಯಣ್‌ರಾವ್‌ರವರು ಇದನ್ನು ಪರಿಗಣಿಸಿ ನನ್ನ ಎಲ್ಲಾ ಅರ್ಹತೆಗಳನ್ನೂ ಪರಿಶೀಲಿಸಿ ನನಗೆ ಶಿರಸ್ತೇದಾರನಾಗಿ ಬಡ್ತಿಕೊಡಲು

ಒಪ್ಪಿ ನನಗೆ ಬಡ್ತಿಗೆ ಶಿಫಾರಸ್ ಮಾಡಲು ಹೋಗಿದ್ದ ಶ್ರೀ ಡಬ್ಲ್ಯು. ಹೆಚ್. ಹನುಮಂತಪ್ಪ ಹಾಗೂ ಎಸ್. ಕೆ. ನರಸಿಂಹಯ್ಯ ಇವರುಗಳ ಮೂಲಕ ವಿಜಿಟಿಂಗ್ ಚೀಟಿಯ ಮೇಲೆಯೇ ಈ ರೀತಿ ಬರೆದು ಕಳುಹಿಸಿದ್ದರು. ಈಗಲೂ ಅದು ನನಗೆ ನೆನಪಿದೆ.

''Sri Puttanarasaiah is promoted as sheristedar and posted to Hoskote Taluk'' ಎಂದು ಬರೆದಿದ್ದರು. ಆ ಚೀಟಿಯನ್ನು ಹನುಮಂತಪ್ಪನವರು ನನ್ನ ಕೈಗೆ ಕೊಟ್ಟರು. ಆ ಚೀಟಿಯನ್ನು ಡಿ.ಸಿ. ಯವರ ಕಚೇರಿ ಡಿಸ್ಟ್ರಿಕ್ಟ್ ಶಿರಸ್ತೇದಾರ್ (ಅವರ ಹೆಸರು ನೆನಪಿಲ್ಲ) ಬಳಿ ತೋರಿಸಲಾಗಿ ಅವರು ಈ ಚೀಟಿಯನ್ನು ಎತ್ತಿ ಬಿಸಾಕಿದರು. ಅಲ್ಲದೆ ಕೋಪದಿಂದ ಆರ್ಡರ್ ಕಳುಹಿಸುವುದಿಲ್ಲ ಹೋಗಿ ಎಂದು ರೇಗಿದರು. ಆದರೆ ಜಿಲ್ಲಾಧಿಕಾರಿಗಳ ಆರ್ಡರ್ ಮೇಲೆ ವ್ಯತಿರಿಕ್ತವಾಗಿ ಅವರು ಏನೂ ಮಾಡಲು ಸಾಧ್ಯವಾಗಲಿಲ್ಲ. ಇದಾದ ಮೂರು ದಿನಗಳ ಮೇಲೆ ಪ್ರಮೋಷನ್ ಆರ್ಡರ್ ತಲುಪಿತು. ಹೊಸಕೋಟೆ ತಾಲ್ಲೂಕಿನಲ್ಲಿ ಶಿರಸ್ತೇದಾರನಾಗಿ ಎರಡೂವರೆ ತಿಂಗಳು ಕೆಲಸ ಮಾಡಿದೆ. 3 ತಿಂಗಳ ರಜಾ ಹೋಗಿದ್ದ ಶಿರಸ್ತೇದಾರ್ ಸುಬ್ರಹ್ಮಣ್ಯರವರು 15 ದಿನಗಳ ರಜಾ ಕ್ಯಾನ್ಸಲ್ ಮಾಡಿಕೊಂಡು ಮುಂಚೆಯೇ ವಾಪಸ್ಸು ಬಂದರು. ಅವರು ಬಂದ ಕೂಡಲೆ ನನ್ನನ್ನು ರಿವರ್ಟ್ ಮಾಡಿ ಆನೇಕಲ್ ತಾಲ್ಲೂಕು ಜಿಗಣಿ ಹೋಬಳಿಗೆ ರೆವಿನ್ಯೂ ಇನ್ಸ್‌ಪೆಕ್ಟರ್ ಆಗಿ ವರ್ಗ ಮಾಡಿದರು. ಕೆಲವೇ ದಿನಗಳಲ್ಲಿ ಡೆಪ್ಯೂಟಿ ಕಮೀಷನರ್ ಆಫೀಸಿಗೆ ಎರಡನೇ ಡಿವಿಜನ್ ಗುಮಾಸ್ತರಾಗಿ ವರ್ಗಮಾಡಿದರು. ಇದೆಲ್ಲವೂ ಆಗಿದ್ದು ಡಿಸ್ಟ್ರಿಕ್ ಶಿರಸ್ತೇದಾರರವರ ಕುಚೇಷ್ಟೆ ಎಂದು ಅನಂತರ ಗೊತ್ತಾಯಿತು. ಈ ವಿಚಾರವನ್ನು ಆಗಿನ ಆಸಿಸ್ಟೆಂಟ್ ಡೈರೆಕ್ಟರ್ ಆಫ್ ಫುಡ್ ಸಪ್ಲೈಸ್ ಶ್ರೀ ನಾರಾಯಣಸ್ವಾಮಿಯವರು ಹೇಗೋ ತಿಳಿದುಕೊಂಡು ಅವರು ನನ್ನನ್ನು ಆಹಾರ ಇಲಾಖೆಯ ಸ್ಪೆಷಲ್ ಶಿರಸ್ತೇದಾರರಾಗಿ ನೇಮಕ ಮಾಡುವಂತೆ ಮತ್ತು ಅದೇ ಸಂಬಳದ ಮೇಲೆ ವಿಶ್ವೇಶ್ವರಪುರದ "ಫುಡ್ ಇನ್ಸ್‌ಪೆಕ್ಟರ್" ಆಗಿ ಕೆಲಸ ಮಾಡಲು ಆಗಿನ ರೇಷನಿಂಗ್ ಅಧಿಕಾರಿಗಳಾಗಿದ್ದ ಶ್ರೀಮಾನ್ ಮಾಚಯ್ಯನವರ ಮೂಲಕ ಆಗಿನ ಡೆಪ್ಯೂಟಿ ಕಮೀಷನರ್ ರಣಜೋತ್‌ಸಿಂಗ್ ಅವರಿಗೆ ಶಿಫಾರಸ್ಸು ಮಾಡಿ ನೇಮಕ ಮಾಡಿಸಿ ಕೊಟ್ಟರು. ಅವರು ಮಾಡಿದ್ದ ಶಿಫಾರಸ್ಸು ಈಗಲೂ ನನ್ನ ಮನಸ್ಸಿನಲ್ಲಿದೆ. ಅದು ಹೀಗಿತ್ತು. Corruption is rampant in Bangalore city. It should be eradicated. It is only with this view I am recommending this youngman to be promoted as special sheristedar for food. ಅಂದೇ ನನಗೆ ಅವರ ಪ್ರಥಮ ಪರಿಚಯ. ಬೇರೆಯವರಿಂದ ನನ್ನ ಕೆಲಸದ ವಿಚಾರ ಹಾಗೂ ನನ್ನಂಥವರಿಗೆ ಡಿಸ್ಟ್ರಿಕ್ ಆಫೀಸಿನಲ್ಲಿ ಹೇಗೆ ಅನ್ಯಾಯವಾಗುತ್ತಿದೆ ಎಂದು ತಿಳಿದು ಅವರೇ ಸ್ವತಃ ಈ ರೀತಿಯಾಗಿ ನನಗೆ ಶಿಫಾರಸ್ಸು ಮಾಡಿದರೆಂದು ತಿಳಿಯಿತು. ಅವರು ಬರೆದ ರಿಪೋರ್ಟ್‌ನ್ನು ನನ್ನ ಕೈಗೆ ಕೊಟ್ಟು ನ್ಯಾಷನಲ್ ಕಾಲೇಜು ಬಳಿ ಡಿ.ಸಿ.

ರಣಜೋತ್‌ಸಿಂಗ್‌ರವರ ಮನೆ ಇದೆ ನೀವು ಅಲ್ಲಿರಿ; ನಾನು ಬರುತ್ತೇನೆ ಅಂತ ಹೇಳಿದರು. ಸುಮಾರು ಒಂದು ಗಂಟೆಯ ನಂತರ ಅಲ್ಲಿಗೆ ಬಂದು ಅವರೊಡನೆ ಮಾತನಾಡಿ ಅವರಿಂದ ಆರ್ಡರ್ ಬರೆಯಿಸಿ ಡಿ.ಸಿ.ಯವರ ಆಪ್ತ ಸಹಾಯಕರಾದ ವಾಮನಮೂರ್ತಿಯವರ ಕೈಲಿ ಟೈಪ್ ಮಾಡಿಸಿ ಆರ್ಡರಿಗೆ ಡೆಪ್ಯುಟಿ ಕಮೀಷನ್ ರವರ ರುಜು ಪಡೆದು ನನಗೆ ಕೊಡಿಸಿದರು. ಇವರು ಕಡೆಯಲ್ಲಿ ಕೋಲಾರದ ಜಿಲ್ಲಾಧಿಕಾರಿಗಳಾಗಿ, ಬೆಂಗಳೂರು ಡಿವಿಜನ್‌ನ ಡಿವಿಜನಲ್ ಕಮಿಷನರ್ ಆಗಿ, ಕರ್ನಾಟಕ ರಾಜ್ಯದ ಚೀಫ್ ಸೆಕ್ರೆಟರಿಯಾಗಿ ರಿಟೈರ್‌ರಾದರು. ಈಗ ದಿವಂಗತರಾಗಿದ್ದಾರೆ. ಅಂತಹ ಅಧಿಕಾರಿಗಳು ಸಿಕ್ಕುವುದು ಅಪರೂಪ. ಇದು ನನ್ನ ಸುಯೋಗ ಹಾಗೂ ದೈವಕೃಪೆ. ಅವರನ್ನು ನಾನು ಎಂದೆಂದಿಗೂ ಮರೆಯಲಾರೆ.

1943ನೇ ಇಸವಿ ಜನವರಿ 25ನೇ ತಾರೀಖು ಭಾರತದಲ್ಲೇ ಪ್ರಥಮವಾಗಿ ಆಗಿನ ಹಳೇ ಮೈಸೂರು ರಾಜ್ಯದ ಬೆಂಗಳೂರು ಸಿಟಿಯಲ್ಲಿ ಫುಡ್ ರೇಷನಿಂಗ್‌ನ್ನು ಪ್ರಾರಂಭಿಸಿದರು. ಶ್ರೀ ಮಾಚಯ್ಯನವರು ರೇಷನಿಂಗ್ ಆಫೀಸರ್‌ರಾಗಿದ್ದರು. ದಕ್ಷ ಹಾಗೂ ಪ್ರಾಮಾಣಿಕ ಅಧಿಕಾರಿಗಳು. ಆಗ ಸರ್ಕಾರಿ ನ್ಯಾಯಬೆಲೆ ಅಂಗಡಿಗಳು ಮಾತ್ರ ಇದ್ದವು, ಅವುಗಳನ್ನು ಸರ್ಕಾರವೇ ಅಧಿಕಾರಿಗಳಿಂದ ನಡೆಸುತ್ತಿತ್ತು. ವರ್ತಕರುಗಳಿಗೆ ಕೊಡುತ್ತಿರಲಿಲ್ಲ. ವಿಶ್ವೇಶ್ವರಪುರದ ಡಿವಿಜನ್‌ನಲ್ಲಿ ನಾನು ಫುಡ್ ಇನ್ಸ್‌ಪೆಕ್ಟರ್ ಆಗಿದ್ದೆ. ಈ ಡಿವಿಜನ್‌ನಲ್ಲೇ 12 ನ್ಯಾಯಬೆಲೆ ಸರ್ಕಾರಿ ಮಳಿಗೆಗಳಿದ್ದವು. ಗೋಡೌನ್‌ನಿಂದ ನಾವೇ ಲಾರಿಯಲ್ಲಿ ರೇಷನ್ ತಂದು ಖುದ್ದು ನಿಂತು ಮಳಿಗೆಗಳಲ್ಲಿ ಮಾರಾಟ ಮಾಡುತ್ತಿದ್ದೆವು. ಯಾವುದೇ ಮೋಸಕ್ಕೂ ಹಾಗೂ ಇತರೆ ದೂರು ತಕರಾರುಗಳಿಗೂ ಅವಕಾಶವೇ ಇರುತ್ತಿರಲಿಲ್ಲ. ಇದೇ ಕಾಲದಲ್ಲಿ ಬೆಂಗಳೂರು ಸಿಟಿಯಲ್ಲಿ ಫ್ಯುಯಲ್ ರೇಷನಿಂಗ್ ಜಾರಿಗೆ ಬಂದಿತು. ಶ್ರೀ ಮಾಚಯ್ಯನವರು Special Officer for Fuel supplies ಆಗಿ ನೇಮಕವಾದರು. ನನ್ನ ಕೆಲಸವನ್ನು ನೋಡಿ ಅನೇಕ ಬಾರಿ ತಮ್ಮ ಮೆಚ್ಚಿಗೆಯನ್ನು ಸೂಚಿಸಿದ್ದರು. ಅವರು ನನ್ನನ್ನು ಫ್ಯುಯಲ್ ಸಪ್ಲೈ ವಿಭಾಗಕ್ಕೆ ತೆಗೆದುಕೊಂಡರು. ಅಲ್ಲಿರುವಾಗ ನನಗೆ ಕೆಲಸದ ಒತ್ತಡದಿಂದ ಆಗಾಗ ಕಾಯಿಲೆಯಿಂದ ನರಳುತ್ತಿದ್ದು ರಕ್ತಹೀನತೆಯಿಂದ ತುಂಬಾ ನಿತ್ರಾಣದಿಂದಿರುತ್ತಿದ್ದೆ. ಬಸವನಗುಡಿ ಖಲೀಲ್ ಬಿಲ್ಡಿಂಗ್‌ನಲ್ಲಿ ಬಾಡಿಗೆ ಮನೆಯಲ್ಲಿ ವಾಸವಾಗಿದ್ದೆ. ಆದರೆ ಡಾಕ್ಟರ್‌ರವರು ಒಂದೆರಡು ತಿಂಗಳು ಸ್ಥಳ ಬದಲಾವಣೆಯಾದರೆ ನಿಮ್ಮ ಕಾಯಿಲೆಗೆ ಒಳ್ಳೆಯದು ಎಂದು ಸಲಹೆ ಮಾಡಿದರು. ಎರಡು ತಿಂಗಳು ರಜಾ ಪಡೆದು ನೆಲಮಂಗಲ ತಾಲ್ಲೂಕು ಎಲೆ ಕ್ಯಾತನಹಳ್ಳಿಯಲ್ಲಿದ್ದ ಆಸ್ಪತ್ರೆಗೆ ಸೇರಿಕೊಂಡೆ. ಆಗ ಅಲ್ಲಿ ಡಾ|| ಕೆಂಪಯ್ಯನವರು ನನ್ನನ್ನು ತುಂಬಾ ಆತ್ಮೀಯವಾಗಿ ನೋಡಿಕೊಂಡು ನನಗೆ ಸರಿಯಾದ ಚಿಕಿತ್ಸೆಯನ್ನು ಕೊಟ್ಟು ಕಾಯಿಲೆಯನ್ನೂ ಗುಣ ಮಾಡಿ ಕಳುಹಿಸಿಕೊಟ್ಟರು. ಅನಂತರ ನನಗೆ ಬಡ್ತಿ ಸಿಕ್ಕಿ ಎ.ಆರ್.ಓ. ಆಗಿ (ಅಸಿಸ್ಟೆಂಟ್ ರೇಷನಿಂಗ್ ಆಫೀಸರ್) ಮೈಸೂರಿಗೆ ವರ್ಗ ಮಾಡಿದರು. ಅಲ್ಲಿ ಒಂದು

ವರ್ಷ ಕಾಲ ಇದ್ದೆ. ಅನಂತರ ರಾಜ್ಯದಲ್ಲಿ ಸಾಕಷ್ಟು ಆಹಾರ ಉತ್ಪಾದನೆಯುಂಟಾಗಿ ಫುಡ್ ಇಲಾಖೆಯಲ್ಲಿನ ಕೆಲವು ಪೋಸ್ಟ್‌ಗಳನ್ನು ರದ್ದು ಮಾಡಿದರು. ಅಲ್ಲಿಂದ ನನ್ನನ್ನು ನನ್ನ ಕೋರಿಕೆಯ ಮೇಲೆ ರಾಮನಗರದ ಶಿರಸ್ತೇದಾರನಾಗಿ 1948ರಲ್ಲಿ ವರ್ಗ ಮಾಡಿದರು. ಆ ವರ್ಗಾವಣೆಗೂ ಹಿಂದೆ ನನಗೆ ಅಮಲ್ದಾರರಾಗಿದ್ದು ಆಗ ಡಿ. ಸಿ. ಯವರ ಹೆಡ್‌ಕ್ವಾರ್ಟರ್ಸ್ ಅಸಿಸ್ಟೆಂಟ್‌ರಾಗಿದ್ದ ಶ್ರೀ ಟಿ. ಹೆಚ್. ಅಮೀರ್‌ರವರೇ ಕಾರಣ. ಅಲ್ಲಿಯೂ ಒಂದು ವರ್ಷ ಕಾಲ ಕೆಲಸ ಮಾಡಿದೆ. ರಾಮನಗರಕ್ಕೆ ನಾನು ಶಿರಸ್ತೇದಾರನಾಗಿ ಹೋದ ಸುಮಾರು 3-4 ತಿಂಗಳುಗಳಲ್ಲೇ ನನ್ನ ಮಾತೃಶ್ರೀಯವರಾದ ಶ್ರೀಮತಿ ಬೈರಮ್ಮನವರು ಅನಾರೋಗ್ಯದಿಂದ ದೈವಾಧೀನರಾದರು. ನನ್ನ ತಾಯಿ ದಿವಂಗತರಾದಾಗ ಅವರಿಗೆ ಸುಮಾರು 70 ವರ್ಷಗಳಾಗಿತ್ತು. ಅಂತೂ ತಂದೆಯನ್ನು 1933ರಲ್ಲಿ ಕಳೆದುಕೊಂಡು ತಾಯಿಯನ್ನು 1948ರಲ್ಲಿ ಕಳೆದುಕೊಂಡು ತಬ್ಬಲಿಯಾದೆ. ತಂದೆಯಂತಿದ್ದ ಅಣ್ಣ 1940ರಲ್ಲಿ ದಿವಗಂತರಾಗಿದ್ದರು. ನನ್ನ ತಾಯಿಯ ಕೈಯಿಂದ ಸಾವಿರಾರು ಜನರಿಗೆ ದಾನಮಾಡಿಸಿದ ಧರ್ಮ 1933ರಲ್ಲಿ ನನ್ನ ತಾಯಿಯ ಕುಂಕುಮ ವನ್ನು ಕಾಯಲಿಲ್ಲ. ಹಲವಾರು ವರ್ಷಗಳ ಕಾಲ ತನ್ನ ಪತಿ ಮತ್ತು 40–50 ಜನರಿದ್ದ ಅವಿಭಕ್ತ ಕುಟುಂಬದೊಡನೆ ಸಹಭಾಗಿಯಾಗಿದ್ದ ಆ ತಾಯಿ ವಿಧವೆಯಾಗಬೇಕಾದುದ್ದು ಆಕೆಯ ಹಾಗೂ ನನ್ನ ದುರಾದೃಷ್ಟ. ಕೈ ನಡೆಯುವಾಗ ಸಹಸ್ರಾರು ಜನ ಬಡಬಗ್ಗರಿಗೆ ದಿಕ್ಕಿಲ್ಲದವರಿಗೆ ಅನ್ನ–ಬಟ್ಟೆಗಳನ್ನು ಇಟ್ಟು ಗಳಿಸಿದ ಪುಣ್ಯ ಎಲ್ಲಿಗೆ ಹೋಯಿತೋ. ದೊಡ್ಡ ಮನೆಯವರನ್ನೆಲ್ಲಾ ಬೆಳೆಸಿ ವಿದ್ಯಾವಂತರನ್ನಾಗಿ ಮಾಡಿ, ಮದುವೆಗಳನ್ನು ಮಾಡಿ ಅಷ್ಟು 50–60 ಜನಗಳಿದ್ದ ದೊಡ್ಡ ಸಂಸಾರವನ್ನು ನಡೆಸುತ್ತಿದ್ದ ನನ್ನ ತಾಯಿ ಗತಿಸಿದ ಮೇಲೆ ಆ ಹೊಣೆಯನ್ನು ನನ್ನ ಅಕ್ಕ ಮರಿಯಮ್ಮ ಹಾಗೂ ನನ್ನ ಸೋದರ ಮಾವಂದಿರುಗಳ ಹೆಗಲೇರಿತು.

ನಾನು ರಾಮನಗರದಲ್ಲಿರುವಾಗಲೆ ಬೆಂಗಳೂರಿನಲ್ಲಿ ಫುಡ್ ಇಲಾಖೆಯಲ್ಲಿ ಪುನಃ 2 ಅಸಿಸ್ಟೆಂಟ್ ರೇಷನಿಂಗ್ ಆಫೀಸರ್ ಹುದ್ದೆಗಳು ಸೃಷ್ಟಿಯಾಗಿರುವುದಾಗಿ ತಿಳಿಯಿತು. ಆಗ ಫುಡ್ ಇಲಾಖೆಯ ಡೈರೆಕ್ಟರಾಗಿದ್ದ ಶ್ರೀ ಗುರುದತ್‌ರವರ ಕಚೇರಿಯಲ್ಲಿ ಮೇನೇಜರ್ ಆಗಿದ್ದ ಶ್ರೀ ಸುಂದರರಾಜ ಐಯ್ಯಂಗಾರ್‌ರವರು ನನ್ನ ವಿಷಯವಾಗಿ ಡೈರಕ್ಟರವರಿಗೆ ಶಿಫಾರಸ್ಸು ಮಾಡಿ ಹಿಂದೆಯೇ ಫುಡ್‌ಡಿಪಾರ್ಟ್‌ಮೆಂಟ್ ಬಿಟ್ಟು ರೆವಿನ್ಯೂ ಇಲಾಖೆಗೆ ಹೋಗಿದ್ದ ನನಗೆ ಎ.ಆರ್.ಓ. ಆಗಿ ನೇಮಿಸುವುದರಲ್ಲಿ ನನಗೆ ಸಹಾಯಕ ರಾದರು. ಅವರ ಮುಂದೆ ಆಗಿನ ಅಹಾರ ಇಲಾಖೆಯ ನಿರ್ದೇಶಕರ ಕಚೇರಿಯ ಇಬ್ಬರು ಫುಡ್ ಅಸಿಸ್ಟೆಂಟ್‌ರವರ ಆಟ ಏನೂ ನಡೆಯಲಿಲ್ಲ. ನನಗೂ ಮತ್ತು ಐಯ್ಯಂಗಾರ್ಯರಿಗೂ ಪರಸ್ಪರ ಸೋದರ ಮನೋಭಾವವಿದ್ದು ನನ್ನಲ್ಲಿ ಅವರಿಗೆ ತುಂಬಾ ಪ್ರೀತಿ ವಿಶ್ವಾಸವಿತ್ತು. ಅವರು ಈ ದಿವಸ ದಿವಂಗತರಾಗಿದ್ದಾರೆ. ಅವರನ್ನು ನಾನು

ತುಂಬು ಹೃದಯದಿಂದ ನೆನೆಯುತ್ತೇನೆ. ನನ್ನನ್ನು ಮಲ್ಲೇಶ್ವರದ ವಿಭಾಗಕ್ಕೆ ಕಳುಹಿಸಿದರು. ಮಲ್ಲೇಶ್ವರದಲ್ಲಿ ಬೆಂಗಳೂರಿನ 9 ಡಿವಿಜನ್‌ಗಳ ಪೈಕಿ 1, 2, 3, ಮತ್ತು 9ನೇ ಡಿವಿಜನ್‌ಗಳು ನನ್ನ ಸರಹದ್ದಿನಲ್ಲಿತ್ತು. ನಾನು ಈ ರೇಂಜಿನಲ್ಲಿ ಸುಮಾರು 3 ವರ್ಷಗಳ ಕಾಲ ಎ.ಆರ್.ಓ. ಆಗಿ ಮಾಡಿದೆ. ಇಲ್ಲಿ ಕೆಲಸ ಮಾಡುತ್ತಿರುವಾಗ 1948ನೇ ಇಸವಿಯಲ್ಲಿ ನಮ್ಮ ಕಂದಾಯ ಇಲಾಖೆಯಲ್ಲಿ ಅಮಲ್ದಾರರವರ ಸೇವಾಹಿರಿತನದ ಪಟ್ಟಿಯು ತಯಾರಾಗಿದ್ದು ಅದರಲ್ಲಿ ಆಗಿನ ರೆವಿನ್ಯೂ ಮಂತ್ರಿಗಳಾಗಿದ್ದ ಶ್ರೀ ಅಪ್ಪಾಜಿ ಗೌಡರವರು ನನ್ನನ್ನು 35 ಜನರನ್ನೊಳಗೊಂಡ ಅಮಲ್ದಾರ್ ಲಿಸ್ಟಿಗೆ 19ನೆಯವನನ್ನಾಗಿ ಸೇರಿಸಿದ್ದರು.

1952ನೇ ಅಕ್ಟೋಬರ್ 25ರಲ್ಲಿ ನನಗೆ ಅಮಲ್ದಾರ್ ಆಗಿ ಬಡ್ತಿ ಸಿಕ್ಕಿ ಮೊದಲಿಗೆ ಹಾಸನ ಜಿಲ್ಲೆಯ ಹೊಳೆನರಸೀಪುರಕ್ಕೆ ಕಳುಹಿಸಿದರು. ಅಲ್ಲಿದ್ದ ಅಮಲ್ದಾರ್ ಆಗಿನ ಮಂತ್ರಿಗಳಾಗಿದ್ದ ಶ್ರೀ ಓ.ಎಸ್.ಎನ್. ಶರೀಫ್‌ರವರ ತಮ್ಮ. ಜಾಫರ್‌ಷರೀಫ್ ಇವರಿಂದ ಚಾರ್ಜ್ ತೆಗೆದುಕೊಂಡು ಸುಮಾರು ಎರಡು ತಿಂಗಳು ಅವಧಿ ಮಾತ್ರ ಇದ್ದೆ. ನಾನು ನನ್ನ ಕುಟುಂಬವನ್ನು ಅಲ್ಲಿಗೆ ಕರೆದುಕೊಂಡು ಹೋಗಿರಲಿಲ್ಲ. ಹೊಳೆನರಸೀಪುರದಲ್ಲಿ ಮೈಸೂರಿನ ಪ್ರಸಿದ್ಧ ವರ್ತಕರು ಹಾಗೂ ಮಹಾ ದಾನಿಗಳೂ ಆಗಿದ್ದ ಶ್ರೀ ಪುಟ್ಟಯ್ಯನವರು ಸ್ಥಾಪಿಸಿದ್ದ ಛತ್ರದಲ್ಲಿ ನನ್ನ ಅಧಿಕಾರಕ್ಕೆ ತಕ್ಕದಾದ ಒಳ್ಳೆಯ ರೂಮನ್ನು ಒದಗಿಸಿದ್ದರು. ಅಲ್ಲಿನ ಶಿರಸ್ತೇದಾರರು ಹಾಗೂ ಅವರ ಸಿಬ್ಬಂದಿಯವರ ಪ್ರಭಾವದಿಂದಾಗಿ ನನ್ನ ಸರ್ವಿಸ್‌ನಲ್ಲಿ ಮೊದಲನೆಯದಾಗಿ ಆ ತಾಲ್ಲೂಕಿನ ಹಳ್ಳಿ, ಮೈಸೂರು ಹೋಬಳಿಯ ತಾಲ್ಲೂಕು ಜಮಾ ಬಂದಿ ನಡೆಸಿದೆ. ಅನಂತರ ಹಾಸನದ ಸಬ್ ಡಿವಿಜನ್ ಅಧಿಕಾರಿಗಳಾದ ನಾಗಪ್ಪನವರು ನಡೆಸಿಕೊಟ್ಟ ಹುಜೂರ್‌ಟ್ರಜರಿ ಜಮಾ ಬಂದಿಯಲ್ಲಿ ಮೊದಲನೆಯ ಬಾರಿಗೆ ಭಾಗವಹಿಸಿದೆ. ಆ ತಾಲ್ಲೂಕಿನಲ್ಲಿ ಇನ್ನೂ ಹೆಚ್ಚಿಗೆ ಕೆಲಸಮಾಡಲು ಕಾಲಾವಕಾಶವಿರಲಿಲ್ಲವಾದ್ದರಿಂದ ಹೇಳಿಕೊಳ್ಳುವಂತಹ ಒಳ್ಳೆಯ ಕೆಲಸ ಮಾಡಲಾಗಲಿಲ್ಲ.

ಅನಂತರ ಹಿಂದಿನ ಅಮಲ್ದಾರ್‌ರವರು ಟ್ರೈನಿಂಗ್ ಮುಗಿಸಿಕೊಂಡು ವಾಪಸ್ ಬಂದು ಚಾರ್ಜ್ ತೆಗೆದುಕೊಂಡರು. ನನ್ನನ್ನು ಡಿಸೆಂಬರ್ 25ರ 1952ರಲ್ಲಿ ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿಗೆ ಅಮಲ್ದಾರರಾಗಿ ವರ್ಗಮಾಡಿದರು. ಅಲ್ಲಿದ್ದ ಅಮಲ್ದಾರ್ ಲಿಂಗಣ್ಣಯ್ಯವರನ್ನು ಬೇರೆ ಕಡೆಗೆ ವರ್ಗಾಯಿಸಿ ನನ್ನನ್ನು 1956ರ ವರೆಗೂ ಚಿಕ್ಕನಾಯಕನಹಳ್ಳಿಯ ಅಮಲ್ದಾರರಾಗಿ ಮುಂದುವರೆಸಿದರು. ಆ ಸಂದರ್ಭದಲ್ಲಿ ರಾಜ್ಯದಲ್ಲೆಲ್ಲಾ ಬರ ಪರಿಹಾರ ಕಾರ್ಯ ನಡೆಯುತ್ತಿತ್ತು. ಪ್ರತಿ ತಾಲ್ಲೂಕಿನಲ್ಲಿಯೂ ರಷ್ಯಾದಿಂದ ಬರುತ್ತಿದ್ದ ಗೋಧಿ ಸರಬರಾಜಾಗುತ್ತಿತ್ತು. ಹಣಕ್ಕೆ ಬದಲು ಈ ಗೋಧಿಯನ್ನು ಕೊಡುವುದರ ಮೂಲಕ ರಸ್ತೆ ಕೆಲಸಗಳು ಅನೇಕ ಗೋಕಟ್ಟೆಗಳ ನಿರ್ಮಾಣ ಮತ್ತು ಇತರೆ ದುರಸ್ತಿ ಕಾರ್ಯಗಳನ್ನು ಮಾಡಿಸಿದೆ. ಅಂದರೆ, ಕೂಲಿಗೆ ಬದಲಾಗಿ

ರೇಷನ್ ಕೊಡುತ್ತಿದ್ದೆ. ಆದರೆ ತಾಲ್ಲೂಕಿನಾದ್ಯಂತ ಕಂದಾಯದ ಬಾಕಿ ಬಹಳ ಜಾಸ್ತಿಯಿತ್ತು. ಪ್ರತಿಯೊಂದು ಹಳ್ಳಿಗೂ ಹೋಗಿ ಕಂದಾಯದ ಬಾಕಿ ಮತ್ತು ಪಂಚಾಯಿತಿ ಬಾಕಿ ಪಟ್ಟಿಯನ್ನು ಪರಿಶೀಲಿಸುತ್ತಿರುವಾಗ ನನಗೆ ಒಂದು ವಿಚಾರ ಗೋಚರವಾಯಿತು. ರೈತರು ಕೊಡಬೇಕಾದ ಕಂದಾಯದ ಬಾಕಿಯನ್ನು ಕೊಟ್ಟು ರಸೀದಿಯನ್ನು ಪಡೆದಿದ್ದರೂ ಸಹ ಪಟೇಲ ಶ್ಯಾನುಭೋಗರುಗಳು ಆ ಹಣವನ್ನು ಖಜಾನೆಗೆ ಜಮಾ ಮಾಡದೆ ಹಣ ಛಪಾವಣೆ ಮಾಡಿದ್ದರೆಂದು ಗೊತ್ತಾಯಿತು. ಈ ಬಾಕಿ ಒಂದೊಂದು ಫಿರ್ಕಾಕ್ಕೂ 4-5 ಸಾವಿರ ರೂಪಾಯಿಗಳನ್ನು ಮೀರಿಸಿತ್ತು.

ಅನಂತರ ಎಲ್ಲಾ ಪಟೇಲ ಶ್ಯಾನುಭೋಗರನ್ನು ಖಾತೆ ಖಿರ್ದು ಬಾಕಿಪಟ್ಟಿ ಸಮೇತ ತಾಲ್ಲೂಕು ಕಚೇರಿಗೆ ಬರಲು ತಿಳಿಸಿದೆ. ಎಲ್ಲಾ ಲೆಕ್ಕಗಳನ್ನು ಆಯಾ ಹೋಬಳಿಯ ಡಿ.ಸಿ.ಬಿ. ಗುಮಾಸ್ತರಿಂದ ಚೆಕ್ ಮಾಡಿಸಿದೆ. ಅನೇಕ ಖಾತೆಗಳಲ್ಲಿ ಭಾರಿ ಭಾರಿ ಹಣ ಬಾಕಿ ಇದ್ದು ಶ್ಯಾನುಭೋಗರುಗಳು ರೈತರಿಂದ ವಸೂಲಿಮಾಡಿ ತಾವು ದುರುಪಯೋಗ ಪಡಿಸಿದ್ದನ್ನು ಪತ್ತೆ ಮಾಡಿದೆವು. ರೈತರಿಂದ ಹಣ ಕಟ್ಟಿದ್ದಕ್ಕೆ ರಸೀದಿ ತರಿಸಿದೆವು. ಹಾಗೂ ಹೇಳಿಕೆಗಳನ್ನು ಪಡೆದೆವು. ಹೀಗೆ ಸುಮಾರು ದಬ್ಬೆಗಟ್ಟ, ನವಿಲೆ, ಸಿ.ಎಸ್. ಹಳ್ಳಿ ಕಸಬ ಎಲ್ಲಾ ಶ್ಯಾನುಭೋಗರಿಗೆ, ಫಿರ್ಕಾಗ್ರಾಮಗಳಿಂದ ಆಗಿನ ಕಾಲಕ್ಕೆ ಸುಮಾರು ಒಂದೂವರೆ ಲಕ್ಷ ರೂಪಾಯಿಗಳು ಛಪಾವಣೆಯಾಗಿದೆ ಎಂದು ಗೊತ್ತಾಯಿತು. ಪಟೇಲ್ ಶ್ಯಾನುಭೋಗರು ತಾವು ಹಣ ರೈತರಿಂದ ಪಡೆದು ಛಪಾವಣೆ ಮಾಡಿರುವುದು ನಿಜವೆಂದು ಹೇಳಿಕೆ ಕೊಟ್ಟರು. ಸಂಬಂಧಪಟ್ಟ ರೈತರೂ ಸಹ ಅದೇ ರೀತಿ ಹೇಳಿಕೆ ಕೊಟ್ಟರು. ಅಷ್ಟು ಮೊತ್ತವನ್ನು ಕೂಡಲೆ ಖಿರ್ದಿಗೆ ಬರೆಯಿಸಿ ಒಂದು ವಾರದೊಳಗಾಗಿ ಈ ಹಣವನ್ನು ಖಜಾನೆಗೆ ಜಮಾಮಾಡಬೇಕೆಂದು ತಾಕೀತು ಮಾಡಿ ತಗಾದೆ ನೋಟೀಸ್ ಜಾರಿ ಮಾಡಿಸಿದೆ. ಅನೇಕ ಪಟೇಲ್ ಶ್ಯಾನುಭೋಗರು ತಮ್ಮಲ್ಲಿದ್ದ ತೋಟ ತುಡಿಕೆಗಳನ್ನು ಮಾರಿ ಹಣವನ್ನು ಖಜಾನೆಗೆ ಕಟ್ಟಿದರು. ಹೀಗೆ ಗುದಸ್ತಾ ಬಾಕಿಯನ್ನೆಲ್ಲಾ ವಸೂಲಿ ಮಾಡಲಾಯ್ತು. ಅನಂತರ ಎಲ್ಲಾ ಪಟೇಲರು ಶ್ಯಾನುಭೋಗರನ್ನು ಆಯಾ ಹೋಬಳಿಯ ಹೆಡ್‌ಕ್ವಾರ್ಟರ್ಸ್‌ಗೆ ಬರುವಂತೆ ಹೇಳಿ ಪಂಚಾಯಿತಿ ಕಛೇರಿಯಲ್ಲಿ ಸಭೆ ಕರೆದು ನಾನು ಕಂದಾಯ ವಸೂಲಿಯಲ್ಲಿ ಬಹಳ ಕಟ್ಟುನಿಟ್ಟಾಗಿ ವರ್ತಿಸುತ್ತೇನೆ ಹಾಗೂ ಹಣ ಛಪಾವಣೆ ಮಾಡಿದವರ ಮೇಲೆ ಶಿಸ್ತಿನ ಕ್ರಮ ತೆಗೆದುಕೊಳ್ಳುತ್ತೇನೆಂದು ಬಹಳ ಕಟ್ಟುನಿಟ್ಟಾಗಿ ತಿಳಿಸಿದೆ. ಎಲ್ಲಾ ಪಟೇಲರು ಶ್ಯಾನುಭೋಗರು ಇದನ್ನು ತುಂಬಾ ಸಂತೋಷದಿಂದ ಒಪ್ಪಿಕೊಂಡರು. ನಾನೂ ಕೂಡ ಪ್ರತಿಯೊಂದು ಪ್ರಾಂತ್ಯಕ್ಕೂ ಭೇಟಿಕೊಟ್ಟು ಬಾಕಿ ಕೊಡಬೇಕಾಗಿದ್ದ ರೈತರನ್ನು ಕರೆಸಿ ಬೆದರಿಸಿ ಕಂದಾಯ ಕೊಡಲು ಹೇಳುತ್ತಿದ್ದೆ. ಆದರಿಂದಾಗಿ ಪಟೇಲ್ ಶ್ಯಾನುಭೋಗರುಗಳಿಗೆ ಅಮಲ್ದಾರರೇ ಖುದ್ದು ಬಂದು ವಸೂಲಿಯಲ್ಲಿ ತಮಗೆ ಸಹಾಯ ಮಾಡುತ್ತಾರಲ್ಲ ಅಂತ ಸಂತೋಷವಾಗುತ್ತಿತ್ತು. ಆಗ ಅವರೂ ಕೂಡ ಬಹಳ ಹುಮ್ಮಸ್ಸಿನಿಂದ ಬಾಕಿ ವಸೂಲಿಯನ್ನು ಮಾಡಿ ಮೊದಲನೇ

ವರ್ಷವೇ ಶೇಕಡ 98 ಬಾಕಿ ಪ್ರಗತಿಯನ್ನು ಸಾಧಿಸಿದೆ. ಆಗ ಟ್ರಜರಿಯೂ ಸಹ ಅಮಲ್ದಾರ್‌ರವರ ಅಧಿಕಾರದಲ್ಲಿತ್ತು. ಟ್ರಜರಿ ಶಿರಸ್ತೇದಾರ್‌ಗಳು ನನ್ನ ಅನುಮತಿ ಇಲ್ಲದೆ ಇನ್ನು ಮುಂದೆ ಯಾವ ಕಂದಾಯದ ಇರಸಾಲನ್ನು ನನ್ನ ಅಪ್ಪಣೆಯಿಲ್ಲದೆ ಪಟೇಲ್ ಶ್ಯಾನುಭೋಗರುಗಳಿಂದ ತೆಗೆದುಕೊಳ್ಳಕೂಡದೆಂದು ತಾಕೀತ್ ಮಾಡಿದೆ. ಆಗಿದ್ದ ಟ್ರಜರಿ ಶಿರಸ್ತೇದಾರ್ ಮುನಿಸ್ವಾಮಿ ನಾಯಕ್‌ರವರು ಅಷ್ಟೇ ವಿಧೇಯರಾಗಿ ಕೆಲಸಮಾಡಿ ನನ್ನೊಂದಿಗೆ ಯಾವಾಗಲೂ ಸಹಕರಿಸುತ್ತಿದ್ದರು. ತಾಲ್ಲೂಕು ಸಿಬ್ಬಂದಿ ವರ್ಗದವರೂ ಹಾಗೂ ರೆವಿನ್ಯೂ ಇನ್ಸ್‌ಪೆಕ್ಟರ್‌ರವರೂ ಸಹ ಅಷ್ಟೇ ವಿಧೇಯರಾಗಿದ್ದರು. ಸರ್ಕಾರಿ ಕೆಲಸಕಾರ್ಯಗಳನ್ನು ತುಂಬಾ ನಿಷ್ಠೆಯಿಂದ ನಡೆಸಿಕೊಂಡು ಹೋಗುತ್ತಿದ್ದರು. ಹೀಗಾಗಿ 1954 ರ ಜೂನ್ ಆಖೈರಿಗೆ ನನ್ನ ತಾಲ್ಲೂಕು ವಸೂಲಿಯಲ್ಲಿ ಜಿಲ್ಲೆಗೆ ಮೊದಲನೇ ಸ್ಥಾನ ಪಡೆಯಿತು. ಹೀಗೆಯೇ ನಾನು ಅಲ್ಲಿ ಇರುವವರೆಗೂ ನಮ್ಮ ತಾಲ್ಲೂಕಿನ ಕಂದಾಯದ ಬಾಕಿ ಪ್ರತಿ ವರ್ಷವೂ ಜಿಲ್ಲೆಗೇ ಮೊದಲನೇ ಸಾನ್ಥದಲ್ಲಿರುತ್ತಿತ್ತು. ಚಿಕ್ಕನಾಯಕನಹಳ್ಳಿಯಲ್ಲಿ ನಾನಿದ್ದ ಮೂರು ವರ್ಷಗಳ ಅವಧಿಯಲ್ಲಿ ಜಿಲ್ಲೆಯ ಆಗಿನ ಜಿಲ್ಲಾಧಿಕಾರಿಗಳಾಗಿದ್ದ ಶ್ರೀ ಎಲ್. ಮುನಿಸ್ವಾಮಿಯವರು ಎರಡು ಬಾರಿ ಹುಜೂರ್ ಜಮಾ ಬಂದಿಯನ್ನು ನಡೆಸಿದ್ದರು. ಅನೇಕ ದರಖಾಸ್ತು ಅರ್ಜಿಗಳನ್ನು ಹುಜೂರು ಜಮಾಬಂದಿ ವೇಳೆಯಲ್ಲೇ ವಿಲೇವಾರಿ ಮಾಡುವ ಏರ್ಪಾಟನ್ನು ಮಾಡುವ ಸಲಹೆಯನ್ನು ಅವರ ಮುಂದಿಟ್ಟೆ. ಅವರು ಅದನ್ನು ಬಹು ಸಂತೋಷದಿಂದ ಒಪ್ಪಿಕೊಂಡರು. ಅವುಗಳಲ್ಲಿ ಮುಖ್ಯವಾಗಿ ದರಖಾಸ್ತುದಾರರ ಅರ್ಜಿಗಳನ್ನು ಹುಜೂರ್ ಜಮಾ ಬಂದಿ ವೇಳೆಗೆ ಪಟೇಲ್ ಶ್ಯಾನುಭೋಗರ ಹಾಗೂ ರೈತರ ಸಮ್ಮುಖದಲ್ಲಿ ಕೂಗಿಸಿ ರೆವಿನ್ಯೂ ಮ್ಯಾನ್ಯುಯಲ್ ಪ್ರಕಾರ 100 ರಾಸುಗಳಿಗೆ 30 ಎಕರೆ ಜಮೀನು ಬಿಟ್ಟು ಉಳಿದ ಗೋಮಾಳದ ಜಮೀನನ್ನು ಸ್ವಂತ ಜಮೀನು ಇಲ್ಲದ ರೈತರಿಗೆ ಹಂಚುವ ವ್ಯವಸ್ಥೆ ಮಾಡುತ್ತಿದ್ದೆವು. ಜಮಾಬಂದಿ ವೇಳೆ ರೈತ ಅರ್ಜಿ ಕೊಟ್ಟಕೂಡಲೇ ಅಲ್ಲಿಯೇ ಇರುತ್ತಿದ್ದ ಪಟೇಲರು ಶ್ಯಾನುಭೋಗರುಗಳನ್ನು ವಿಚಾರಿಸಿ ಅವರುಗಳಿಂದ ಅಗತ್ಯವಾದ ಷರಾ ಪಡೆದು ಅಂದರೆ ಅರ್ಜಿದಾರರಿಗೆ ಜಮೀನು ಇದೆಯೋ ಇಲ್ಲವೊ ಮತ್ತು ಗೋಮಾಳ ಅಗತ್ಯಕ್ಕಿಂತ ಜಾಸ್ತಿ ಇದೆಯೋ ಅಥವಾ ಇಲ್ಲವೊ ವಿಚಾರಿಸಿ ಅಲ್ಲಿಯೇ ಹಾಜರಿರುತ್ತಿದ್ದ ರೆವಿನ್ಯೂ ಇನ್ಸ್‌ಪೆಕ್ಟರ್ ರಿಪೋರ್ಟ್ ಮತ್ತು ನನ್ನ ರಿಪೋರ್ಟ್ ಬರೆದು ಡಿ.ಸಿ. ಸಾಹೇಬರ ಮುಂದಿಟ್ಟು ರೈತರಿಗೆ ಜಮೀನು ಮಂಜೂರು ಮಾಡಿಸುತ್ತಿದ್ದೆ. ಡಿ.ಸಿ. ಸಾಹೇಬರು ಜಮೀನು ಮಂಜೂರು ಮಾಡಿದ ಅರ್ಜಿಯನ್ನೆಲ್ಲಾ ನನ್ನ ವಶಕ್ಕೆ ಕೊಟ್ಟು ಇದರಿಂದ ಸ್ಕೆಚ್ ಮುಹಜರು ತಯಾರಿಸಿ ರೈತರಿಗೆ ಸಾಗುವಳಿ ಚೀಟಿಗಳನ್ನು ಕೂಡಲೆ ಕೊಡುವಂತೆ ಅಪ್ಪಣೆ ಮಾಡುತ್ತಿದ್ದರು.

ಇದರಿಂದಾಗಿ ಜಿಲ್ಲಾಧಿಕಾರಿಗಳಿಗೆ ನನಗೆ ಹಾಗೂ ನೆರೆದಿದ್ದ ಶ್ಯಾನುಭೋಗ್, ಪಟೇಲ್‌ಗಳಿಗೆ ಹಾಗೂ ರೈತಾಪಿಜನರಿಗೂ ಸಂತೋಷವಾಗುತ್ತಿತ್ತು. ಇದರಿಂದ ಕೆಲವರಿಗೆ

ಅಲ್ಪಸ್ವಲ್ಪ ಅಂದರೆ ಈಗಾಗಲೇ ಜಮೀನಿರುವ ರೈತರಿಗೆ ಅಸಮಾಧಾನವಾಗಿದ್ದರೂ ಆಗಿರ ಬಹುದೆಂದು ಭಾವಿಸಿದ್ದೆನು. ಅಷ್ಟೇ ಅಲ್ಲದೆ ಇದೇ ಸಮಯದಲ್ಲಿ ಬೆಂಗಳೂರು ಮತ್ತು ಇತರೆ ಕಡೆಗಳಿಂದ ಗಮಕಿಗಳನ್ನು ಕರೆಸಿ ಹುಜೂರು ಜಮಾಬಂದಿ ವೇಳೆ ಸಾವಿರಾರು ಜನ ರೈತರು ಗ್ರಾಮಾಧಿಕಾರಿಗಳು ಸೇರಿದ ಕಡೆ ರಾಮಾಯಣ ಮತ್ತು ಭಾರತ ವಾಚನವನ್ನು ಏರ್ಪಾಡು ಮಾಡಿಸುತ್ತಿದ್ದೆ. ಇದರಿಂದಾಗಿ ಜಿಲ್ಲಾಧಿಕಾರಿಗಳಿಗೂ ಹೆಚ್ಚಿನ ಸಂತೋಷವಾಗು ತ್ತಿತ್ತು. ಈ ಏರ್ಪಾಡು ಎಲ್ಲಾ ಕಾಲದಲ್ಲೂ, ಎಲ್ಲಾ ಅಧಿಕಾರಿಗಳೂ ಅವಕಾಶ ಮಾಡಿ ಕೊಡುತ್ತಿರಲಿಲ್ಲ. ಅದಕ್ಕೆ ಮುನಿಸ್ವಾಮಿಯವರು ಮಾತ್ರ ಹೊರತು ಎಂದು ಧೈರ್ಯದಿಂದ ಹೇಳಬಲ್ಲೆ ಅಷ್ಟೆ. ಅವರು ದೈವ ಭಕ್ತರು ಮತ್ತು ಕರುಣಾಳುಗಳು. ಈ ಕೆಲಸ ಹುಜೂರು ಜಮಾ ಬಂದಿಗೆ ದಯಮಾಡಿಸಿದ್ದ ಅಧಿಕಾರಿಗಳ ಮರ್ಜಿಯ ಮೇಲೆ ನಡೆಯಬೇಕಾಗಿದ್ದು, ಜಿಲ್ಲಾಧಿಕಾರಿಗಳಾಗಿದ್ದ ಶ್ರೀ ಎಲ್. ಮುನಿಸ್ವಾಮಿಯವರು ಸಹೃದಯರು, ಸದ್ಗುಣ ಸಂಪನ್ನರು ಆಗಿದ್ದರಿಂದ ಈ ಏರ್ಪಾಡಿಗೆ ಅನುಮತಿ ಕೊಡುತ್ತಿದ್ದರು.

ಇದರಿಂದ ರೈತರು ಸತ್ಪ್ರಜೆಗಳಾಗಿ ಬಾಳಲು, ಸುಸಂಸ್ಕೃತರಾಗಲು ಅವಕಾಶ ವಿರುತ್ತಿತ್ತು. ಈ ಏರ್ಪಾಡಿನಿಂದ ರೈತರಿಗೆ ಆಗುತ್ತಿದ್ದ ಸಂತೋಷವನ್ನು ವರ್ಣಿಸಲು ನನ್ನ ಭಾಷೆ ಸಾಲದು. ಒಂದು ದಿನ ನಾನು ತಾಲ್ಲೂಕು ಕಚೇರಿಯಲ್ಲಿರಬೇಕಾದರೆ, ಆಗಿನ "Anti corruption" (ಲಂಚ ನಿರ್ಮೂಲನ) ಡೈರೆಕ್ಟರ್ ಆಗಿದ್ದ ಶ್ರೀ ಅಪ್ಪಾಜಿ ಗೌಡರವರು ತಮ್ಮ ಆಪ್ತ ಕಾರ್ಯದರ್ಶಿ ಚನ್ನವೀರಪ್ಪನರೊಡನೆ (ಇವರು ಮುಖ್ಯಮಂತ್ರಿ ಗಳಾಗಿದ್ದ ಶ್ರೀ ನಿಜಲಿಂಗಪ್ಪ ಹಾಗೂ ವೀರೇಂದ್ರ ಪಾಟೀಲರಿಗೆ ಆಪ್ತ ಸಹಾಯಕರಾಗಿದ್ದು ನಿವೃತ್ತರಾದರು) ಸುಮಾರು 12 ಗಂಟೆ ವೇಳೆಗೆ ನಮ್ಮ ಕಚೇರಿಗೆ ಅನಿರೀಕ್ಷಿತ ಭೇಟಿ ಕೊಟ್ಟರು. ಸುಮಾರು 2 ಗಂಟೆಯವರೆಗೂ ಆಫೀಸ್ ದಾಖಲೆಗಳನ್ನೆಲ್ಲಾ ಕೂಲಂಕುಷ ವಾಗಿ ತನಿಖೆ ಮಾಡಿದರು. ತಪಾಸಣೆ ಮಾಡಿದರು. ತಪಾಸಣೆ ಮುಗಿಸಿ ಹೋಗುವಾಗ ತಮ್ಮ ಸಂತೋಷವನ್ನು ವ್ಯಕ್ತಪಡಿಸಿ ಹೋದರು. ಅಲ್ಲದೆ, ಅವರ ಕಚೇರಿಯಿಂದ ತಮ್ಮ ಸಂತೋಷವನ್ನು ವ್ಯಕ್ತಪಡಿಸಿ ಪ್ರಶಂಸಾ ಪತ್ರವನ್ನು ಸಹ ಬರೆದರು. ಈಗಲೂ ಅದು ಕಚೇರಿಯ ಕಡತದಲ್ಲಿ ಇರಬಹುದು. ನಾನು ಯಾವಾಗಲಾದರೂ ಶ್ರೀ ಚನ್ನವೀರಪ್ಪ ನವರಿಗೆ ಸಿಕ್ಕಿದರೆ ಈಗಲೂ ಕೂಡ ನನ್ನನ್ನು "ಏನ್ರಿ ನೀವು ಅಪ್ಪಾಜಿಗೌಡರಿಂದಲೇ ಶಹಬಾಸ್‌ಗಿರಿ ಗಿಟ್ಟಿಸಿದಿರಲ್ರಿ" ಎಂದು ಹೇಳುತ್ತಾರೆ.

1954ರಲ್ಲಿ ನನ್ನ ಕುಟುಂಬದಲ್ಲಿ ಮತ್ತೊಂದು ತಿರುವು ನನ್ನ ಧರ್ಮ ಪತ್ನಿ ಯಾಗಿದ್ದ ಮಲ್ಲಮ್ಮನಿಗೆ ಕೀಲುನೋವಿನಿಂದಾಗಿ ನಡೆಯಲಾಗದೆ 3–4 ವರ್ಷಗಳ ಕಾಲ ಹಾಸಿಗೆ ಹಿಡಿದಿದ್ದರು. ಗೃಹೋಚಿತ ಸುಖಭೋಗಗಳಲ್ಲಿ ನನಗೆ ಅಷ್ಟೇನು ಆಸಕ್ತಿ ಇಲ್ಲದಿ ದ್ದರೂ ಅಸ್ವಸ್ಥ ಹೆಂಡತಿ, ಮೈನರ್ ಮಕ್ಕಳ ಪಾಲನೆಗಾಗಿ ಮನೆಗೆ ಬಂದ ಅತಿಥಿಗಳಿಗೆ ಹಾಗೂ ನೆಂಟರಿಷ್ಟರನ್ನು ಸತ್ಕರಿಸಲು ನೆರವಾಗಲು ಎರಡನೇ ಲಗ್ನವನ್ನು ಮಾಡಿಕೊಳ್ಳು ವಂತೆ ಖಾಯಿಲೆಯಿಂದಿದ್ದ ನನ್ನ ಧರ್ಮಪತ್ನಿಯೂ ಮತ್ತು ನನಗೆ ತಂದೆ ತಾಯಿಗಳಂತಿದ್ದ

ನನ್ನ ಅತ್ತೆ ಮಾವಂದಿರು ಮತ್ತು ನಮ್ಮ ಅವಿಭಕ್ತ ಕುಟುಂಬದ ಸದಸ್ಯರೆಲ್ಲರೂ ಸೇರಿದಂತೆ ನನ್ನ ಅನೇಕ ಹಿತೈಷಿ ಮಿತ್ರರು ಒತ್ತಾಯ ಮಾಡುತ್ತಿದ್ದರು. ಅದರಂತೆ ನನಗೆ 1954ರಲ್ಲಿ ಬೆಂಗಳೂರು ಸಮೀಪದಲ್ಲಿರುವ ಸಾರಕ್ಕಿ ಅಗ್ರಹಾರದಲ್ಲಿನ ಶ್ರೀ ವೆಂಕಟಶ್ಯಾಮಪ್ಪನವರ ಮಗಳು ಶ್ರೀಮತಿ ಮೀನಾಕ್ಷಮ್ಮನೊಂದಿಗೆ ಲಗ್ನವಾಯಿತು. ನಾನು ಈ ತಾಲ್ಲೂಕಿನಲ್ಲಿರುವಾಗ ಆಗಾಗ್ಗೆ ರಜತಾದ್ರಿಪುರದ ನನ್ನ ಮನೆಯ ದೇವರಾಗಿದ್ದ ಶ್ರೀ ಲಕ್ಷ್ಮೀನರಸಿಂಹಸ್ವಾಮಿಯವರ ದೇವಸ್ಥಾನಕ್ಕೆ ಹೋಗಿ ಸೇವೆ ಸಲ್ಲಿಸುವ ಭಾಗ್ಯ ದೊರಕಿತ್ತು. ಈ ದೇವಸ್ಥಾನವು ತಿಪಟೂರು ತಾಲ್ಲೂಕಿಗೆ ಸೇರಿದ್ದರೂ ಚಿಕ್ಕನಾಯಕನ ಹಳ್ಳಿಗೆ ಕೇವಲ 7-8, ಮೈಲು ಮಾತ್ರ ದೂರದಲ್ಲಿತ್ತು. ಆದರೆ ನಮ್ಮ ತಾಲ್ಲೂಕಿನ ಶ್ಯಾನುಭೋಗರಾಗಿದ್ದ ಶ್ರೀ ರಂಗಣ್ಣನವರು ಆ ದೇವಸ್ಥಾನದ ಕನ್‌ವೀನರ್ ಆಗಿದ್ದರು. ನಾನು ದೇವಸ್ಥಾನಕ್ಕೆ ಭೇಟಿಕೊಟ್ಟಾಗ ನನಗೆ ಎಲ್ಲಾ ಸೌಕರ್ಯ-ಸೌಲಭ್ಯಗಳನ್ನು ಒದಗಿಸಿಕೊಡುತ್ತಿದ್ದರು. ಕಡೆ ಕಡೆಯಲ್ಲಿ ಅವರನ್ನು ನಾನು ಶ್ಯಾನುಭೋಗರೆಂದು ಭಾವಿಸುತ್ತಿರಲೇ ಇಲ್ಲ. ನನ್ನ ಕುಟುಂಬದ ಒಬ್ಬ ಬಂಧು ಎಂದು ತಿಳಿದುಕೊಂಡಿದ್ದೆ. ಅವರು ಒಬ್ಬ ಸಚ್ಚಾರಿತ್ರರು, ದೈವಭಕ್ತರು ಮತ್ತು ಪರೋಪಕಾರಿಗಳು. ರೈತರನ್ನು ತಮ್ಮ ಮಕ್ಕಳಂತೆ ನೋಡಿಕೊಳ್ಳುತ್ತಿದ್ದ ಮಹಾಶಯರು.

ಇದೇ ಸಮಯದಲ್ಲಿ ನಮ್ಮ ಚಿಕ್ಕನಾಯಕನಹಳ್ಳಿ ಕಸಬಾ ಹೋಬಳಿಗೆ ಒಬ್ಬ ರೆವಿನ್ಯೂ ಇನ್ಸ್‌ಪೆಕ್ಟರನ್ನು ಡಿ. ಸಿ. ಆಫೀಸಿನಿಂದ ವರ್ಗಮಾಡಿ ಕಳುಹಿಸಿದರು. ಆತನು ಕೆಲಸದಲ್ಲಿ ಆಸಕ್ತಿವುಳ್ಳವನಲ್ಲವೆಂದು ತಿಳಿದಿದ್ದ ನನಗೆ ಆತನ ಮೋಸ, ಕಳವು, ವಂಚನೆ ಸ್ವಲ್ಪ ಮಟ್ಟಿಗೆ ತಿಳಿದಿತ್ತು. ಎರಡನೆ ಬಾರಿ ಈ ತಾಲ್ಲೂಕಿಗೆ ರೆವಿನ್ಯೂ ಇನ್ಸ್‌ಪೆಕ್ಟರಾಗಿ ಬರುತ್ತಿದ್ದಾನೆಂದು ತಿಳಿಯಿತು. ಆದ ಕಾರಣ ಆತನನ್ನು ನಾನು ಕೆಲಸಕ್ಕೆ ತೆಗೆದುಕೊಳ್ಳಲು ಅವಕಾಶ ಕೊಡಲಿಲ್ಲ. ಆಗ ಅವನು ನನಗೆ ಮನೆ ಬಾಡಿಗೆಗೆ ಕೊಟ್ಟಿದ್ದ ಪಟ್ಟಾಭಿರಾಮಶೆಟ್ಟರಿಂದಲೂ ಸಹ ಶಿಫಾರಸ್ಸು ಹೇಳಿಸಿದ. ಆದರೂ ನಾನು ಜಗ್ಗಲಿಲ್ಲ. ಇದನ್ನು ಮನಸ್ಸಿನಲ್ಲಿಟ್ಟುಕೊಂಡು ನನಗೆ ತೊಂದರೆ ಕೊಡಬೇಕೆಂಬ ಉದ್ದೇಶದಿಂದ ಚಿಕ್ಕನಾಯಕನಹಳ್ಳಿ ಕಸಬಾದಲ್ಲಿ ವಾಸವಿದ್ದ ಹಾಗೂ ನಾನು ಹಿಂದೆ ಕಂದಾಯದ ಹಣ ದಸ್ತು ಮಾಡಿದ್ದಕ್ಕೆ ಕ್ರಿಮಿನಲ್ ಕೇಸ್ ಹಾಕಿದ್ದ ಕೆಲವು ಶ್ಯಾನುಭೋಗರನ್ನು ಮತ್ತು ಪಟೇಲರನ್ನು ಜೊತೆ ಮಾಡಿಕೊಂಡು ಇಲ್ಲಸಲ್ಲದ ಆರೋಪವನ್ನು ಮಾಡಿ ಆಗಿನ ಲಂಚ ನಿರೋಧ ಇಲಾಖಾ ಅಧಿಕಾರಿಗಳವರಿಗೆ ಮೂಗ ಅರ್ಜಿಯನ್ನು ಹಾಕಿಸಿದ್ದನೆಂದು ತಿಳಿದು ಬಂತು. ಈ ಅರ್ಜಿಯ ವಿಚಾರಣೆಗಾಗಿ ಶ್ರೀ ಕೆ. ಸಿ. ರಾಮನಾಥಯ್ಯನವರು ಅವರ ಆಫೀಸ್ ಮ್ಯಾನೇಜರ್ ಸುಂದರರಾಜ ಅಯ್ಯಂಗಾರ್‌ರೊಡನೆ ತಾಲ್ಲೂಕು ಕಚೇರಿಗೆ ಬಂದು ಸಂಬಂಧಪಟ್ಟ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿದರು. ಯಾವ ಆರೋಪವೂ ಕಿಂಚಿತ್ತೂ ಸಾಬೀತಾಗಲಿಲ್ಲ. ಅನಂತರ ಈ ಸಂಬಂಧವಾಗಿ " All alligations are

found false and baseless and petitions are filed ಎಂದು ಲಂಚ ನಿರೋಧ ಆಫೀಸಿನಿಂದ ಪತ್ರ ಬಂತು.

ನಾನು ಚಿಕ್ಕನಾಯಕನಹಳ್ಳಿಯಲ್ಲಿ ಇರುವಾಗ ಸುಮಾರು 15-20 ದಿವಸಗಳು ಅನೇಕ ಗ್ರಾಮಗಳಲ್ಲಿ ಕ್ಯಾಂಪ್ ಮಾಡುತ್ತಿದ್ದೆ. ಚಿಕ್ಕನಾಯಕನಹಳ್ಳಿ ಟೌನಿನಲ್ಲಿ ವಾರ ಕ್ಕೊಮ್ಮೆ ನಡೆಯುವ ಸಂತೆ ದಿವಸ ಹೆಡ್ ಕ್ವಾರ್ಟರ್‌ನಲ್ಲೇ ಇರುತ್ತಿದ್ದೆ. ಕ್ಯಾಂಪಿನ ವೇಳೆಯಲ್ಲಿ ಪೆಟ್ಟಿಗೆಯಲ್ಲಿ ಅಡಿಗೆ ಸಾಮಗ್ರಿಗಳನ್ನು ತಮ್ಮಯ್ಯ ಎಂಬ ಅಡಿಗೆಯವನ ಮೂಲಕ ಕ್ಯಾಂಪು ಮಾಡಬೇಕೆಂದಿದ್ದ ಹಳ್ಳಿಗೆ ಕಳುಹಿಸುತ್ತಿದ್ದೆನು. ನಾನು ಬಸ್ಸಿನಲ್ಲಿ ಗ್ರಾಮಗಳಿಗೆ ಹೋಗುತ್ತಿದ್ದೆ. ಅನೇಕ ರಸ್ತೆಗಳು ಹಾಗೂ ಗೋ ಕಟ್ಟೆಗಳನ್ನು ದುರಸ್ತಿ ಕಾರ್ಯಗಳನ್ನು ಸ್ಥಳದಲ್ಲೇ ನಿಂತು ಮಾಡಿಸುತ್ತಿದ್ದೆ. ಹುಳಿಯಾರ್ ಹೋಬಳಿ ಎಳನಾಡು ಗ್ರಾಮದಲ್ಲಿ ಪ್ರಸಿದ್ಧವಾದ ಶ್ರೀ ಸಿದ್ಧರಾಮೇಶ್ವರಸ್ವಾಮಿ ದೇವಸ್ಥಾನವಿತ್ತು. ಸಾವಿರಾರು ಭಕ್ತಾದಿಗಳು ಪ್ರತಿದಿನವೂ ದೇವರ ದರ್ಶನಕ್ಕೆ ಬರುತ್ತಿದ್ದರು. ನಾನು ಆ ಊರಿಗೆ ಹೋದಾಗಲೆಲ್ಲಾ ದೇವಸ್ಥಾನಕ್ಕೆ ಭೇಟಿಕೊಟ್ಟು ಬಹು ಭಕ್ತಿಯಿಂದ ಪೂಜೆ ಸಲ್ಲಿಸುತಿದ್ದೆ. ಜನಗಳು ಆ ಕಾಲದಲ್ಲಿ ಎಷ್ಟು ಭಕ್ತಿಯಿಂದಿರುತ್ತಿದ್ದರು ಎಂದರೆ ಯಾವ ಮನೆಯಲ್ಲಿಯೂ ಕೂಡ ಯಾರೂ ಸಹ ದೇವಸ್ಥಾನದ ಕಡೆ ಕಾಲು ಚಾಚಿ ಮಲಗುತ್ತಿರಲಿಲ್ಲ. ಆ ದೇವರ ಬಗ್ಗೆ ಅಷ್ಟು ಭಕ್ತಿ ಇತ್ತು ; ಜನಗಳಿಗೆ ಭಯ ಇತ್ತು. ಒಂದು ದಿನ ಆ ಊರಿನ ಶ್ಯಾನುಭೋಗರಾದ ವಿಶ್ವನಾಥರಾಯರು ಹಾಗೂ ಊರಿನ ಗಣ್ಯರಲ್ಲೊಬ್ಬರಾದ ಸಿದ್ದ ರಾಮೇಗೌಡರು ಕೆಲವು ಮುಖ್ಯಸ್ಥರೊಡನೆ ನನ್ನ ಊಟವಾದ ನಂತರ ಪಂಚಾಯಿತಿ ಹಾಲಿಗೆ ಬಂದರು. ಯಾವಾಗಲೂ ಕೂಡ ನಾನು ಕ್ಯಾಂಪಿನಿಂದ ವಾಪಸ್ ಹೋಗುವಾಗ ಹಾಲು, ಮೊಸರು, ತರಕಾರಿ ಮತ್ತು ಸೌದೆಗಳಿಗೆ 3-4 ರೂಪಾಯಿಗಳನ್ನು ಪಟೇಲರು ಅಥವಾ ಶ್ಯಾನುಭೋಗರಿಗೆ ಕೊಟ್ಟು ಬರುತ್ತಿದ್ದೆ. ಆದರೆ ಆಗಾಗ್ಗೆ ನನ್ನ ಅಡುಗೆಯ ತಮ್ಮಯ್ಯ ನನಗೆ ಹೇಳುತ್ತಿದ್ದ, ಸ್ವಾಮಿ ನೀವು ಏನು ಮಾಡುತ್ತಿದ್ದೀರಿ, ಹಿಂದೆ ಯಾವ ಅಮಲ್ದಾರರೂ ಈ ರೀತಿ ಮಾಡುತ್ತಿರಲಿಲ್ಲ. ಹೀಗೆ ದುಡ್ಡು ಕೊಡುವುದು ಸರಿಯೇ ಸ್ವಾಮಿ ಎಂದ. ಈ ದುಡ್ಡು ಸರಿಯಾಗಿ ಯಾರಿಗೆ ಸೇರಬೇಕೋ ಅವರಿಗೆ ಸೇರುವುದಿಲ್ಲ ಎಂದು ಹೇಳಿದನು. ಆದರೂ ನಾನು ಇದಕ್ಕೆ ಲಕ್ಷ್ಯಕೊಡದೆ ಕೆಲವು ತಿಂಗಳುಗಳು ಮುಂದುವರೆಸಿದೆ.

ಆದರೆ ಈ ದಿವಸ ಬಂದ ಸಿದ್ದರಾಮೇಗೌಡರು ಸುಮಾರು 65-70 ವರ್ಷ ವಯಸ್ಸಿನ ಒಳ್ಳೆಯ ವಿದ್ಯಾವಂತರಲ್ಲದಿದ್ದರೂ, ಸುಸಂಸ್ಕೃತರು ಮತ್ತು ಗುಣಸಂಪನ್ನರು. ಇವರು ಕೆಲವು ರೈತ ಮುಖಂಡರೊಡನೆ ನನ್ನ ಬಳಿ ಬಂದು ಮಾತನಾಡುತ್ತಾ ಹೀಗೆ ಹೇಳಿದರು, ಏನು ಸ್ವಾಮಿ ; ನೀವು ಕ್ಯಾಂಪ್ ಬಿಡುವಾಗ ನಮ್ಮ ಊರಿನಲ್ಲಿ ನೀವಿದ್ದು ಊಟ ಮಾಡಿದ ಖರ್ಚಿಗಾಗಿ ಸ್ವಲ್ಪ ದುಡ್ಡು ಕೊಟ್ಟು ಹೋಗುತ್ತೀರ ಇದು ಸರಿಯೇ ?

ಎಂದು ಹೇಳುತ್ತಾ ಊರಿಗೆ ಬಂದ ತಾಲ್ಲೂಕಿನ ತಾಯಿಯಂತಿರುವ ನಿಮಗೆ ಸ್ವಲ್ಪ ಹಾಲು, ಮೊಸರು ಸೌದೆಗಳನ್ನು ಕೊಡದಿರುವಷ್ಟು ಅನಾಥ ಮಕ್ಕಳೇ ನಾವು ? ನೀವು ನಮ್ಮಿಂದ ಕಾಸು ದುಡ್ಡು ತೆಗೆದುಕೊಳ್ಳದೇ ನಮ್ಮ ಕೆಲಸಗಳನ್ನು ಮಾಡಿಕೊಡುತ್ತಿದ್ದೀರಿ. ಆದರೆ ನೀವು ನಮ್ಮ ಉಪಚಾರವನ್ನು ಬೇಡವೆನ್ನುವುದು ನಮಗೆ ನೋವುಂಟು ಮಾಡಿದೆ ಮಹಾಸ್ವಾಮಿ ಎಂದು ದುಃಖಿತರಾಗಿ ಹೇಳಿದರು. ನನಗೆ ಮನಸ್ಸು ಬಹುವಾಗಿ ಕರಗಿತು.

ಶ್ಯಾನುಭೋಗರಾದ ವಿಶ್ವನಾಥರಾಯರು ಹಾಗೂ ಇತರೆ ಗಣ್ಯರು ಸಹ ಇದನ್ನು ಅನುಮೋದಿಸಿದರು. ಆಗ ನಾನು ಆಗಲಿ ಗೌಡರೇ ಇದನ್ನು ನಾನು ಯೋಚಿಸಿ ನೋಡುತ್ತೇನೆ. ಜನಗಳಿಂದ ಅಪವಾದನೆ ಬರಬಾರದೆಂಬ ಕಾರಣದಿಂದ ಈ ರೀತಿ ಮಾಡುವುದು ಒಳ್ಳೆಯದೆಂದು ನಾನು ಭಾವಿಸಿದ್ದೇನೆ : ಎಂದು ತಿಳಿಸಿದೆ. ಎಲ್ಲರೂ ಹೋದರು ಕಡೆಗೆ ಕೂಲಂಕುಷವಾಗಿ ವಿಚಾರಮಾಡಿ ಎಲ್ಲರ ಅಭಿಪ್ರಾಯ ಪಡೆದು ಆ ಪದ್ಧತಿಯನ್ನು ನಿಲ್ಲಿಸಿಬಿಟ್ಟೆ. ಅನಂತರ ಕ್ಯಾಂಪಿಗೆ ಹೋದರೂ ಕೂಡ ತಮಯ್ಯನನ್ನ ಕರೆದುಕೊಂಡು ಹೋಗುತ್ತಿದ್ದೆ. ಆದರೆ ಶ್ಯಾನುಭೋಗರು ಪಟೇಲರು ಸಮಯಕ್ಕೆ ಸರಿಯಾಗಿ ಊಟದ ವ್ಯವಸ್ಥೆ ಮಾಡಿ ತಮ್ಮಯ್ಯನ ಮೂಲಕ ಊಟ, ತಿಂಡಿ, ಎಳನೀರು ವಗೈರೆ ಕಳುಹಿಸುತ್ತಿದ್ದರು.

ಅಮಲ್ದಾರ್‌ರ ಕೆಲಸ ಹಾಗೂ ಅವರ ಅಧಿಕಾರ ಕೇವಲ ರಿಕಾರ್ಡ್ ವಿಲೇವಾರಿ ಹಾಗೂ ಕಂದಾಯದ ವಸೂಲಿಗೆ ಸೀಮಿತವಾದುದಲ್ಲ. ಅದು ಹೂವಿನ ಆಸನವೂ ಅಲ್ಲ, ಹಾಸಿಗೆಯೂ ಅಲ್ಲ, ಮುಖ್ಯವಾಗಿ ತಾಲ್ಲೂಕಿನಲ್ಲಿರುವ ಲಕ್ಷಾಂತರ ಜನ ಸಾಮಾನ್ಯರೊಂದಿಗೆ ಮಿಳಿತವಾಗಿ ಅವರನ್ನು ಸರಳ ಸೌಜನ್ಯದಿಂದ ಕಾಣುತ್ತಾ, ಅವರ ಅಹವಾಲುಗಳನ್ನು ಕೇಳಿ ಅವರ ದುಃಖ ದುಮ್ಮಾನಗಳಿಗೆ ಕಾನೂನು ಮಿತಿಯಲ್ಲಿ ಸೌಲಭ್ಯಗಳನ್ನು ಒದಗಿಸುವುದು ನನ್ನ ಪರಮಧರ್ಮವೆಂದು ನಂಬಿದ್ದೆ. ಈ ರೀತಿಯಾಗಿ ಸುಮಾರು ಮೂರೂವರೆ ವರ್ಷಗಳ ಕಾಲ ಚಿಕ್ಕನಾಯಕನಹಳ್ಳಿಯಲ್ಲಿ ಸರ್ಕಾರಿ ಸೇವೆ ಮಾಡಿದೆನೆಂಬ ಆತ್ಮತೃಪ್ತಿ ಈಗಲೂ ನನ್ನಲ್ಲಿದೆ. ನಾನು ಮಾಡಿಸಿದಷ್ಟು ಗೋಕಟ್ಟೆ ಸೇರಿ, ರಸ್ತೆ ಕೆಲಸಗಳನ್ನು ಹಿಂದೆ ಯಾವ ಅಮಲ್ದಾರರೂ ಮಾಡಿಸಿರಲಿಲ್ಲವೆಂದು ರೈತರು ಮತ್ತು ತಾಲ್ಲೂಕು ಆಫೀಸಿನ ಸಿಬ್ಬಂದಿ ವರ್ಗದವರು ಹೇಳುತ್ತಿದ್ದುದು ಈಗಲೂ ನನಗೆ ನೆನಪಿದೆ. ನನ್ನ ಈ ಇಚ್ಛೆಯನ್ನು ಪೂರೈಸಲು ಬಹುವಾಗಿ ರಷ್ಯನ್ ದೇಶದಿಂದ ಬರುತ್ತಿದ್ದ ಗೋಧಿ ಸಹಾಯ ಮಾಡಿತು.

ನಾನು ಸೇವೆಯಲ್ಲಿದ್ದಾಗ ಲಂಚವನ್ನು ಸ್ವೀಕರಿಸುತ್ತಿರಲಿಲ್ಲ. ಹಾಗೆಂದೇ ಸತ್ಯಸಂಧ ಎಂದು ಹೇಳಲೂ ನಾನು ಸಿದ್ಧನಿಲ್ಲ. ಆದರೆ ರೈತರು ಬೆಳೆದ ತರಕಾರಿ, ತೆಂಗಿನಕಾಯಿ, ಕೊಬ್ಬರಿ ಮತ್ತು ಇತರೆ ಸಾಮಾನುಗಳನ್ನು ಏನಾದರೂ ಅವರಾಗಿಯೇ ತಂದರೆ ತೆಗೆದುಕೊಳ್ಳುತ್ತಿದ್ದೆ. ಆದರೆ ಅವರು ನನ್ನಿಂದ ಏನಾದರೂ ಪ್ರತಿಫಲವನ್ನು ಅಪೇಕ್ಷಿಸುತ್ತಿದ್ದರೆಂದು ಕಂಡು ಬಂದರೆ ಏನೂ ಮುಟ್ಟುತ್ತಿರಲಿಲ್ಲ.

ಆಗಿನ ಮುಖ್ಯ ಮಂತ್ರಿಯಾಗಿದ್ದವರು ಶ್ರೀ ಕೆಂಗಲ್ ಹನುಮಂತಯ್ಯನವರು. ಆ ಮಹಾನುಭಾವರ ಕಾಲದಲ್ಲಿ ಪ್ರತಿ ತಾಲ್ಲೂಕಿಗೂ ಸಂಸ್ಕೃತಿ ಪ್ರಚಾರಕ್ಕಾಗಿ ಗ್ರಾಂಟನ್ನು ಒದಗಿಸುತ್ತಿದ್ದರು. ಇದರಿಂದ ರಾಮಾಯಣ ಮಹಾಭಾರತ ಪುಸ್ತಕಗಳನ್ನು ಅಚ್ಚು ಮಾಡಿಸಿ ಸುಲಭ ಬೆಲೆಗಳಿಗೆ ಹಂಚುತ್ತಿದ್ದರು. ಅಲ್ಲದೆ ಸಂಸ್ಕೃತಿ ಪ್ರಚಾರ ಇಲಾಖೆಯನ್ನು ಪ್ರಾರಂಭಿಸಿ ಲಕ್ಷಾಂತರ ರೂಪಾಯಿ ಹಣವನ್ನು ಒದಗಿಸಿ ಪ್ರತಿಯೊಬ್ಬ ಅಮಲ್ದಾರ್‌ನಿಗೂ ಈ ಕಾರ್ಯಕ್ರಮ ನಡೆಸಲು ಮತ್ತು ಗಮಕಿಗಳನ್ನು, ದಾಸರುಗಳನ್ನು ಕರೆಸಿ ಪ್ರತಿಯೊಂದು ಹಳ್ಳಿಯಲ್ಲೂ ಕಡ್ಡಾಯವಾಗಿ ಕೀರ್ತನೆ ಗಾಯನವನ್ನು, ರಾಮಾಯಣ, ಭಾರತ ವಾಚನ, ಹರಿಕಥೆ, ಕಾವ್ಯಗಳನ್ನು ಓದಿಸುವುದರ ಮೂಲಕ ಸಾಕಷ್ಟು ಸಂಸ್ಕೃತಿ ಪ್ರಚಾರ ಕಾರ್ಯಗಳನ್ನು ಮಾಡಿಸುತ್ತಿದ್ದರು. ನಾನೂ ಕೂಡ ಆ ದಿನಗಳಲ್ಲಿ ಬೆಂಗಳೂರಿನ ಶಕುಂತಲಾಬಾಯಿ, ಗುಡಿಬಂಡೆ ರಾಮಾಚಾರ್ ಹಾಗೂ ಇನ್ನೂ ಅನೇಕಾನೇಕ ಗಮಕಿಗಳನ್ನು ಹಾಗೂ ಸಾಹಿತಿಗಳನ್ನು ಬರಮಾಡಿಕೊಂಡು ಭಾರತ ವಚನ, ಹರಿಕಥೆ, ಜಾನಪದಗೀತೆಗಳನ್ನು ಗ್ರಾಮಗಳಲ್ಲಿ ಅವರಿಂದ ನಡೆಸಿ ಜನರು ಸುಸಂಸ್ಕೃತರಾಗಲು ಅನುಕೂಲವಾಗುವಂತೆ ಪ್ರೋತ್ಸಾಹಿಸುತ್ತಿದ್ದೆ ಮತ್ತು ಸರ್ಕಾರದವರು ನಿಗದಿಪಡಿಸಿದಂತೆ ದೂರದಿಂದ ಬಂದು ಕಾರ್ಯಕ್ರಮ ನಡೆಸಿಕೊಟ್ಟ ವಿದ್ಯಾವಂತರುಗಳಿಗೆ ಅವರವರ ಯೋಗ್ಯತೆಗೆ ಅನುಸಾರವಾಗಿಭತ್ಯವನ್ನು ಸರಕಾರದಿಂದ ಕಳುಹಿಸುತ್ತಿದ್ದ ಗ್ರಾಂಟಿನಿಂದ ಕೊಡುತ್ತಿದ್ದೆ. ಅನೇಕ ಶ್ಯಾನುಭೋಗರು ಮತ್ತು ಪುರೋಹಿತರು ನನ್ನ ಈ ಕೆಲಸವನ್ನು ಹಾಗೂ ನನ್ನ ಪ್ರಾಮಾಣಿಕತೆಯನ್ನು ಮೆಚ್ಚಿ "ನ ಭೂತೋ ನ ಭವಿಷ್ಯತಿ" ಎಂದು ಹೇಳುತ್ತಿದ್ದುದು ನನಗೆ ಈಗಲೂ ಜ್ಞಾಪಕದಲ್ಲಿದೆ. ಈ ಕೀರ್ತಿ ಆಗ ಮುಖ್ಯಮಂತ್ರಿಗಳಾಗಿದ್ದ ಶ್ರೀ ಕೆಂಗಲ್ ಹನುಮಂತಯ್ಯನವರಿಗೆ ಸಲ್ಲತಕ್ಕದ್ದು. ಸಾಮಾನ್ಯ ಜನಗಳನ್ನು ಸಹ ಸೂಜಿಕಲ್ಲಿನಂತೆ ಆಕರ್ಷಿಸುವುದು ನನಗೆ ದೈವದತ್ತವಾಗಿ ಬಂದದ್ದು ನನ್ನ ಸುದೈವವೆಂದೇ ಭಾವಿಸುತ್ತೇನೆ.

ಚಿಕ್ಕನಾಯಕನಹಳ್ಳಿಯಲ್ಲಿ ನಾನಿದ್ದಷ್ಟು ಅವಧಿಯಲ್ಲಿ ನನಗೆ ಹೆಚ್ಚಿನ ಉತ್ತೇಜನ ಕೊಟ್ಟವರೆಂದರೆ ಕುಪ್ಪೂರು ಗದ್ದಿಗೆ ಮಠದ ಮಠಾಧೀಶರಾದ ಷ।ಬ್ರ। ಶ್ರೀ ಚಂದ್ರಶೇಖರ ಸ್ವಾಮಿಗಳು, ಎಂ. ಎಲ್. ಎ. ಲಿಂಗದೇವರು, ಮಲಿಯಪ್ಪನವರು, ಬೆಳ್ಳಾರದ ಗುಜ್ಜಾರಪ್ಪನವರು, ಸಾಸಲು ಎಸ್. ಕೆ. ಚನ್ನವೀರಪ್ಪನವರು, ತಿಮ್ಮನಹಳ್ಳಿಯ ಪುರದಪ್ಪನವರು. ಇವರುಗಳು ನನಗೆ ಹೆಚ್ಚಿನ ಸಹಕಾರವನ್ನು ಕೊಟ್ಟು ಆತ್ಮೀಯತೆಯಿಂದ ನಡೆದುಕೊಂಡಿದ್ದರು. ಅವರನ್ನು ನಾನು ಯಾವತ್ತೂ ಮರೆಯುವಂತಿಲ್ಲ.

ನಾನು ಚಿಕ್ಕನಾಯಕನಹಳ್ಳಿಯಲ್ಲಿ ಅಮಲ್ದಾರನಾಗಿದ್ದಾಗ ನನ್ನ ಪೂಜ್ಯ ಗುರುಗಳಾದ ತೀ. ನಂ. ಶ್ರೀಕಂಠಯ್ಯನವರು ಅವರ ಹುಟ್ಟಿದ್ದ ಊರಾದ ತೀರ್ಥಪುರಕ್ಕೆ ಬಂದಿದ್ದರು. ಅವರು ಅಲ್ಲಿನ ಶ್ಯಾನುಭೋಗರಾಗಿದ್ದ ನಂಜುಂಡಯ್ಯನವರ ತಮ್ಮಂದಿರು. ಅವರ ಊರು ಚಿಕ್ಕನಾಯಕನಹಳ್ಳಿಯಿಂದ ಸುಮಾರು 10 ಮೈಲಿ ಒಳದಾರಿ. ಅಲ್ಲಿಗೆ ಬಸ್ಸುಗಳಿದ್ದಿಲ್ಲ. ಎತ್ತಿನ ಬಂಡಿಗಳಲ್ಲಿ ಹೋಗಬೇಕಿತ್ತು. ಅವರು ತಾಲ್ಲೂಕು ಆಫೀಸ್‌ನಲ್ಲಿ

ಅಕಸ್ಮಾತ್ ಭೇಟಿಯಾದರು. ನಾನು ಅವರನ್ನು ಬಹಳ ಭಕ್ತಿಯಿಂದ ಕಚೇರಿಗೆ ಬರಮಾಡಿಕೊಂಡೆ. ಯೋಗಕ್ಷೇಮವನ್ನು ವಿಚಾರಿಸಿ ನಂತರ ತಮ್ಮ ಹುಟ್ಟು ಊರಿಗೆ ಹೋಗುತ್ತೇನೆ ಎಂದು ಹೇಳಿ ಹೋದರು.

ಎರಡು ದಿವಸಗಳು ತಮ್ಮ ಹುಟ್ಟೂರಿನಲ್ಲಿದ್ದು ಅವರು ಊರು ಬಿಡುವ ಮುಂಚೆ ನಾನು ಅವರ ಊರಿಗೆ ಬರಬೇಕೆಂದು ಹೇಳಿಕಳುಹಿಸಿದರು. ನಾನು ಹೋದೆ, ನನ್ನ ಜೊತೆಯಲ್ಲಿ ಅವರೂ ಊಟಕ್ಕೆ ಕೂತು ಮೃಷ್ಟಾನ್ನ ಭೋಜನವನ್ನು ಮಾಡಿಸಿದರು. "ಉಪ್ಪಿಟ್ಟು, ಹುಳಿಯಿಷ್ಟು, ಕಾರ ಸಿಹಿಯಷ್ಟಿಟ್ಟು, ಒಪ್ಪಿರೊದ್ದಮ ಭೋಜನ ರುಚಿ" ಎಂಬಂತಿತ್ತು ಆ ಭೋಜನ. ಮೈಸೂರಿನಿಂದ ತಮ್ಮ ಬಂದಿದ್ದಾನೆಂದು ಅಣ್ಣ ನಂಜುಂಡಯ್ಯನವರು ವಿಧವಿಧವಾಗಿ ಭೋಜನಗಳನ್ನು ಮಾಡಿಸಿದ್ದರು. ಹೂವಿನಿಂದ ನಾರು ಸ್ವರ್ಗ ಸೇರಿತು ಎಂಬ ಹಾಗೆ ನನಗೂ ಆ ಭಾಗ್ಯ ದೊರೆಯಿತು. ಗುರುವು ಶಿಷ್ಯನ ಹತ್ತಿರ ಪ್ರೀತಿಯಿಂದ ಮಾತಾಡುವುದೇ ಒಂದು ಭಾಗ್ಯ, ಅದರೆ ಅವರ ಜೊತೆಯಲ್ಲಿ ಕೂತು ಊಟ ಮಾಡುವಷ್ಟು ಅವಕಾಶ ಸಿಕ್ಕಿದ ನಾನೆಷ್ಟು ಭಾಗ್ಯಶಾಲಿ ಎಂದುಕೊಂಡೆ. ಹೀಗಿತ್ತು ಗುರು ಶಿಷ್ಯರ ಆತ್ಮೀಯ ಸಂಬಂಧ. ಈಚೆಗೆ ಅವರು ಸ್ವರ್ಗಸ್ಥರಾದದ್ದು ನನಗೆ ತುಂಬಾ ದುಃಖವನ್ನುಟುಮಾಡಿದೆ. ಭಗವಂತನು ಅವರ ಆತ್ಮಕ್ಕೆ ಚಿರಶಾಂತಿಯನ್ನು ಕೊಡಲಿ ಎಂದು ಹೇಳಿ ದೇವರಲ್ಲಿ ಪ್ರಾರ್ಥಿಸುತ್ತೇನೆ. ಅವರು ಒಳ್ಳೆಯ ವಾಗ್ಮಿಗಳು ವಿದ್ಯಾವಂತರು ಉಪನ್ಯಾಸಬೋಧನೆಯಲ್ಲಿ ಅಂತಹ ಮಹಾ ಪರಿಣಿತರನ್ನು ಇದುವರೆವಿಗೂ ನೋಡಿಯೇ ಇಲ್ಲ.

1956ನೇ ಅಕ್ಟೋಬರ್ ತಿಂಗಳಲ್ಲಿ ನನ್ನನ್ನು ಬೆಂಗಳೂರಿನ ಕೃಷಿ ಇಲಾಖೆಯಲ್ಲಿ ಕೃಷಿ ನಿರ್ದೇಶಕರ ಕಚೇರಿಗೆ ವಿಶೇಷ ತಹಸೀಲ್ದಾರ್ ಆಗಿ ವರ್ಗ ಮಾಡಿದರು. ಕಾರಣ ಇಷ್ಟೆ. ಆಗಿನ "Anti corruption Director" ಶ್ರೀ ಅಪ್ಪಾಜಪ್ಪನವರು ಅಗ್ರಿಕಲ್ಚರ್ ನಿರ್ದೇಶಕರ ಕಚೇರಿಗೆ ತನಿಖೆಗಾಗಿ ಹೋಗಿದ್ದಾಗ ಕಚೇರಿಯಲ್ಲಿ ಇಟ್ಟಿದ್ದ ರಿಜಿಸ್ಟರ್‌ಗಳು ಹಾಗೂ ದಾಖಲೆ ಕ್ರಮಗಳ ವ್ಯವಸ್ಥೆಯನ್ನು ನೋಡಿ ಬೇಜಾರುಪಟ್ಟುಕೊಂಡು ರೆವಿನ್ಯೂ ಇಲಾಖೆಯ, ಒಳ್ಳೆಯ ಅಮಲ್ದಾರರನ್ನು ಈ ಕಚೇರಿಗೆ ಅಧಿಕಾರಿಯಾಗಿ ನೇಮಕ ಮಾಡುವುದು ಒಳ್ಳೆಯದು ಎಂದು ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿದ್ದರಂತೆ. ಆ ಶಿಫಾರಸ್ಸಿನ ಮೇಲೆ ಸರ್ಕಾರದವರು ಈ ಇಲಾಖೆಗೆ ಬಂದು ವಿಶೇಷ ತಹಸೀಲ್ದಾರ್ ಹುದ್ದೆಯನ್ನು ಸೃಷ್ಟಿಮಾಡಿದ್ದಾರೆಂದು ಆಗಿನ ರೆವಿನ್ಯೂ ಕಮಿಷನರ್‌ರವರು ನನ್ನನ್ನು ಈ ಕಚೇರಿಯ ರಿಕಾರ್ಡ್ ವ್ಯವಸ್ಥೆಯನ್ನು ಸರಿಪಡಿಸಲು ವರ್ಗ ಮಾಡಿಸಿದರು. ಈ ಸಮಯದಲ್ಲಿ ಚಿಕ್ಕನಾಯಕನಹಳ್ಳಿಯಿಂದ ಬಿಡುಗಡೆಯಾಗುವ ಮುನ್ನ 10–15 ದಿನಗಳ ಕಾಲ ಒಂದೇ ಸಮನೆ ಸಮಸ್ತ ರೈತಬಾಂಧವರಿಂದ ಪಟೇಲ್ ಶ್ಯಾನುಭೋಗರುಗಳು ಹಾಗೂ ಹಿತೈಷಿಗಳಿಂದಲೂ ಸತ್ಕಾರಕೂಟಗಳು ನಡೆದವು. ಇದು ನನ್ನ ಮೇಲೆ ಜನಗಳು ಇಟ್ಟಿದ್ದ ಪ್ರೀತಿ ವಿಶ್ವಾಸದ ಸಂಕೇತವಾಗಿದ್ದಿತು.

ನಾನು ಅಗ್ರಿಕಲ್ಚರ್ ಕಚೇರಿಯಲ್ಲಿ ಬಂದು ಕೆಲಸಕ್ಕೆ ಹಾಜರಾದೆ. ನನಗೆ ಆ ಕಚೇರಿಯಲ್ಲಿ ಹೆಚ್ಚಿಗೆ ಬಯಸುವುದು ಹೋಗಲಿ, ಅಲ್ಲಿಗೆ ಹೋದಾಗ ಅಲ್ಲಿನವರಿಗೆ ನಾನು ಅಲ್ಲಿಗೆ ಹೋದದ್ದು ಎಲ್ಲಿಲ್ಲದ ಅಸಮಾಧಾನವಾಗಿ ಕಿರಿಕಿರಿಯಾಗಿರಬಹುದು. ರೆವಿನ್ಯೂ ಡಿಪಾರ್ಟ್‌ಮೆಂಟಿನ ಅಮಲ್ದಾರ್‌ರವರೊಬ್ಬರು ತಮ್ಮ ಆಫೀಸಿನ ರಿಕಾರ್ಡ್ ವ್ಯವಸ್ಥೆ ಸರಿಪಡಿಸಲು ಬಂದಿರುವುದು ಅವರಿಗೆ ಇಷ್ಟವಾಗಲಿಲ್ಲ ಎಂದು ಕಾಣುತ್ತದೆ. ಈ ಕಾರಣದಿಂದ ಅವರು ಒಂದು ಟಪಾಲನ್ನು ಸಹ ನನಗೆ ಕಳುಹಿಸುತ್ತಿರಲಿಲ್ಲ. ಒಂದು ರಿಕಾರ್ಡ್ ಕೂಡ ನನಗೆ ತೋರಿಸುತ್ತಿರಲಿಲ್ಲ. ಸುಮಾರು 20 ದಿನಗಳ ಕಾಲ ಸುಮ್ಮನೆ ಕೂತುಕೊಳ್ಳಬೇಕಾಯಿತು. ಒಂದು ಟೇಬಲ್ ಕುರ್ಚಿ ಮಾತ್ರ ಕೊಟ್ಟರು. ಆದರೆ ಪೆನ್ನು ಮಾತ್ರ ತೆಗೆಯುತ್ತಿರಲಿಲ್ಲ. ಇದನ್ನು ನಾನು ಹತ್ತಿರದಲ್ಲೆ ಇದ್ದ ರೆವಿನ್ಯೂ ಕಮೀಷನರ್ ರವರ ಆಫೀಸಿಗೆ ಹೋಗಿ ಕಮೀಷನರವರನ್ನು ಭೇಟಿಮಾಡಿ ಭಿನ್ನವಿಸಿಕೊಂಡೆ. ಶ್ರೀ ಜಿ. ಎನ್. ನಾಗರಾಜರಾಯರು ಬಹಳ ಒಳ್ಳೆಯ ಮಹಾನುಭಾವರು, ಪ್ರಾಮಾಣಿಕ, ದಕ್ಷ ಹಾಗೂ ಕರ್ತವ್ಯಶೀಲ ಅಧಿಕಾರಿಗಳು.

ಆ ಸಮಯದಲ್ಲಿ ನನ್ನ ಸುದೈವ ನನಗೆ ತುಮಕೂರಿನಲ್ಲಿ ಡಿ.ಸಿ.ಯಾಗಿದ್ದ ಶ್ರೀ ಎಂ. ಮುನಿಸ್ವಾಮಿಯವರು ಬೆಂಗಳೂರಿನ ಜಿಲ್ಲಾಧಿಕಾರಿಗಳಾಗಿದ್ದರು. ಅವರಿಗೆ ನಾನು ಎಲ್ಲಿ ಕೆಲಸ ಮಾಡುತ್ತಿರುವೆನೆಂದು ಗೊತ್ತಿರಲಿಲ್ಲ. ಅವರ ಆಪ್ತ ಸಹಾಯಕರಾಗಿದ್ದ ರಾಧಾಕೃಷ್ಣರವರಿಗೂ ಗೊತ್ತಿರಲಿಲ್ಲ. ಅಂತೂ ನಾನು ಬೆಂಗಳೂರಿನಲ್ಲಿರುವುದು ಮಾತ್ರ ಗೊತ್ತಿತ್ತು. ಅವರು ವಿಭಾಗಾಧಿಕಾರಿಗಳಿಗೆ ಆಗತಾನೆ ಪತ್ರ ಬರೆದು ತಿಳಿಸಿದ್ದರು.

"I Learnt that one Sri K. C. Puttanarasiah who was Thahasiladar at Chikkanayakanahalli Range is now working as Special Thahasiladar in Railway goodshed, please transfer him to Devanahalli Taluk as Thahasildar where the present Amaldar is transferred for Survey training."

ಇದನ್ನು ರೆವಿನ್ಯೂ ಕಮೀಷನರವರಿಗೆ ಆಪ್ತ ಸಹಾಯಕರಾಗಿದ್ದ ಶ್ರೀಮಾನ್ ಮಾರಶೆಟ್ಟಿಯವರು ನನಗೆ ತೋರಿಸಿದರು. ಇವರು ನನಗೆ ತುಂಬಾ ಆತ್ಮೀಯರಾಗಿದ್ದರು. ಅಗ್ರಿಕಲ್ಚರ್ ಇಲಾಖೆಯಲ್ಲಿ ಕೆಲಸವಿಲ್ಲದೆ ಬೇಜಾರಾಗಿದ್ದ ನನಗೆ ಇದು ಒಂದು ವರವಾಗಿ ಪರಿಣಮಿಸಿತು. ಆ ಕೂಡಲೆ ಆ ಕಾಗದವನ್ನು ನೋಡಿ ಶ್ರೀ ಜಿ. ಎನ್. ನಾಗರಾಜರಾವ್ ಅವರು ನನ್ನನ್ನು ದೇವನಹಳ್ಳಿಗೆ ವರ್ಗ ಮಾಡಿದರು.

1956ನೇ ಜುಲೈನಲ್ಲಿ ನಾನು ದೇವನಹಳ್ಳಿಯಲ್ಲಿ ಅಮಲ್ದಾರರಾಗಿ ಕೆಲಸಕ್ಕೆ ಹಾಜರಾದೆ. ಅಲ್ಲಿ ಹಿಂದೆ ಕೆಲಸ ಮಾಡುತ್ತಿದ್ದ ಅಮಲ್ದಾರ್‌ರವರು ಕಚೇರಿಯ ಶಿರಸ್ತೇದಾರರಿಗೆ ಚಾರ್ಜ್ ಕೊಟ್ಟು ಹೊರಟು ಹೋಗಿದ್ದರು. ಇಲ್ಲಿ ಬರಗಾಲವಿತ್ತು. ಸರ್ಕಾರದಿಂದ ಅನೇಕ ಬರಪರಿಹಾರ ಕಾರ್ಯಕ್ರಮಗಳು ಜಾರಿಯಲ್ಲಿದ್ದವು. ನಾನು ಹೋದ

ಕೂಡಲೆ ಬರ ಪರಿಹಾರ ಕಾರ್ಯಕ್ರಮದ ಕಡೆ ಆದ್ಯ ಗಮನ ಹರಿಸಿದೆ. ರಷ್ಯನ್ ಗೋದಿ ದಾಸ್ತಾನು ಸಾಕಷ್ಟಿತ್ತು. ತಾಲ್ಲೂಕು ಅಭಿವೃದ್ಧಿ ಸಮಿತಿಯನ್ನು ರಚಿಸಿದ್ದರು. ಅವರ ಸಹಕಾರ ಹಾಗೂ ಸಲಹೆಯ ಮೇರೆಗೆ ಕೂಡಲೆ ಅವಶ್ಯವಿದ್ದ ಕಡೆ ಗೋಕಟ್ಟೆಗಳ ದುರಸ್ತಿ, ರಸ್ತೆಗಳ ರಿಪೇರಿ, ಹಳೆಯ ರಸ್ತೆಯ ದುರಸ್ತಿಗಳನ್ನು ಮಾಡಲು ಕ್ರಮ ತೆಗೆದುಕೊಂಡೆ.

ಚಕ್ರಕಲ್ ದಿಣ್ಣೆ ರಸ್ತೆ, ಇದು ದೇವನಹಳ್ಳಿ – ದೊಡ್ಡಬಳ್ಳಾಪುರ ರಸ್ತೆಯಿಂದ ಸುಮಾರು 10 ಮೈಲು ದೂರ ರಸ್ತೆಯೇ ಇರಲಿಲ್ಲ. ಆ ರಸ್ತೆಯನ್ನು ಮಾಡಿಸಿದೆ. ಈ ಕೆಲಸಕ್ಕೆ ಕೂಲಿಗಾರರಿಗೆ ಹಣ ಕೊಡುತ್ತಿರಲಿಲ್ಲ. ಬದಲಾಗಿ ರಷ್ಯನ್ ಗೋದಿ ಕೊಡುತ್ತಿದ್ದೆವು. ಅದೇ ರೀತಿ ಬೂದಿಗೆರೆಯಿಂದ ಮಂಚಪ್ಪನ ಹೊಸಹಳ್ಳಿ ಹಾಗೂ ಚನ್ನರಾಯ ಪಟ್ಟಣದಿಂದ ಚೀಮಾಚನಹಳ್ಳಿ ಮಾರ್ಗವಾಗಿ ನಲ್ಲೂರಿನವರೆಗೂ ಒಂದು ಒಳರಸ್ತೆಯನ್ನು ಮಾಡಿಸಿದ್ದೆ. ಚಿಕ್ಕನಾಯಕನಹಳ್ಳಿಯಲ್ಲಿ ನಡೆಸಿದಂತೆ ಈ ತಾಲ್ಲೂಕಿನಲ್ಲೂ ಹೆಚ್ಚು ಹೆಚ್ಚು ಶ್ರದ್ಧೆಯಿಂದ ಕಂದಾಯ ವಸೂಲಿ ಮಾಡುತ್ತಿದ್ದೆ. ಕಾರಣ ಈಗಾಗಲೇ ಹೇಳಿದಂತೆ ಆಗಿನ ಕಾಲದಲ್ಲಿ ಕಂದಾಯವೇ ಸರ್ಕಾರಕ್ಕೆ ಮುಖ್ಯ ಆದಾಯ. ಅದನ್ನು ಸಮರ್ಪಕವಾಗಿ ನಡೆಸಿದ ಅಧಿಕಾರಿಗೆ ಬಡ್ತಿ ಹಾಗೂ ವೇತನ ಬಡ್ತಿಗಳು ಸುಲಭವಾಗಿ ಸಿಗುತ್ತಿದ್ದವು. ಅಲ್ಲದೆ ಆ ಕೆಲಸವು ಅಮಲ್ದಾರ್‌ರ ಮುಖ್ಯ ಕೆಲಸವು ಆಗಿತ್ತು. ಇಲ್ಲಿಯೂ ಸಹ 1957ನೇ ಇಸವಿಯ ಕಂದಾಯದ ವಸೂಲಿಯನ್ನು ತಾಲ್ಲೂಕಿನ ಆರ್.ಐ.ಗಳು ಹಾಗೂ ಗ್ರಾಮಾಧಿಕಾರಿಗಳ ಸಹಕಾರದಿಂದ ಬಹಳ ತೃಪ್ತಿಕರವಾಗಿ ನಡೆಸಿದ್ದರಿಂದ ಸುಮಾರು 2000 ರೂಪಾಯಿಗಳ ಬಾಕಿ ಬಿಟ್ಟು ಉಳಿದ ಕಂದಾಯವನ್ನು ವಸೂಲಿ ಮಾಡಿ ಆ ಸಾಲಿನಲ್ಲಿ ಬೆಂಗಳೂರು ಜಿಲ್ಲೆಗೆ ದೇವನಹಳ್ಳಿ ತಾಲ್ಲೂಕು ಮೊದಲನೇ ಸ್ಥಾನವನ್ನು ಪಡೆಯುವಂತೆ ಮಾಡಿದೆ.

ಅನೇಕ ಪಂಚಾಯಿತಿ ಹಾಗೂ ಛೇರ್ಮನ್‌ಗಳು ಹಾಗೂ ಪಟೇಲರುಗಳು ಪದೇ ಪದೇ ಬಂದು ಪಂಚಾಯಿತಿ ಕಾಯಿದೆಗೆ ಅನೇಕ ತಿದ್ದುಪಡಿಗಳನ್ನು ತರಬೇಕಾಗಿದೆ ಎಂದು ಹೇಳುತ್ತಿದ್ದರು. ಅಲ್ಲಿನ ಜನರು ಕಾನೂನು ತಿಳಿದವರಾಗಿದ್ದು ಬುದ್ಧಿವಂತರೂ ಆಗಿದ್ದರು. ತಾಲ್ಲೂಕು ಅಭಿವೃದ್ಧಿ ಮಂಡಳಿಯಲ್ಲಿದ್ದುಕೊಂಡು ಸದಸ್ಯರುಗಳು ನಿರ್ಣಯವನ್ನು ಈ ದಿಸೆಯಲ್ಲಿ ತೆಗೆದುಕೊಂಡರು. ನಾನೂ ಕೂಡ ಸದರಿ ಕಾನೂನನ್ನು ಓದಿ ನೋಡಿದೆ. ಹೆಚ್ಚು ತಿದ್ದುಪಡಿಗಳು ತರಬೇಕಾಗುವುದು ಅವಶ್ಯಕವೆಂದು ಕಂಡು ಬಂತು. ಈ ವಿಚಾರವನ್ನು ಆಗಿನ ಜಿಲ್ಲಾಧಿಕಾರಿಗಳಾಗಿದ್ದ ಶ್ರೀ ಡಿ. ಆರ್. ಚನ್ನರುದ್ರಯ್ಯನವರಿಗೆ ತಿಳಿಸಿದೆ. ಇವರು ತುಂಬಾ ನಯ ವಿನಯ ಸಂಪನ್ನರು, ಸೌಜನ್ಯ ಮೂರ್ತಿಗಳು ದಕ್ಷ ಹಾಗೂ ಪ್ರಾಮಾಣಿಕ ಅಧಿಕಾರಿಗಳು. ಅವರು ನನಗೆ ಮೊದಲಿಂದಲೂ ಪರಿಚಯವಿತ್ತು. ಕಾರಣ ಅವರು ದೊಡ್ಡಬಳ್ಳಾಪುರದವರು, ಆ ತಾಲ್ಲೂಕಿನಲ್ಲೇ ನಾನು 4 ವರ್ಷಗಳು ರೆವಿನ್ಯೂ ಇನ್ಸ್‌ಪೆಕ್ಟರ್‌ರಾಗಿದ್ದೆ. ಶ್ರೀ ಚನ್ನರುದ್ರಯ್ಯನವರು ನನಗೆ ಸೂಚಿಸಿದಂತೆ ದೇವನಹಳ್ಳಿಯಲ್ಲಿ ಒಂದು ಪಂಚಾಯಿತಿ ಕಾನ್‌ಫೆರೆನ್ಸ್ ಏರ್ಪಾಟುಮಾಡಿ ಅಲ್ಲಿಗೆ

ತಾಲ್ಲೂಕಿನಾದ್ಯಂತ ಇರುವ ಪಂಚಾಯಿತಿಯ ಛೇರ್ಮನ್ನರು, ಕಾರ್ಯದರ್ಶಿಗಳು, ಸದಸ್ಯರುಗಳನ್ನೆಲ್ಲಾ ಬರಮಾಡಿಕೊಂಡೆವು. ಆ ಸಭೆಯ ಅಧ್ಯಕ್ಷತೆಗೆ ಕಂದಾಯ ಸಚಿವರನ್ನು ಆಹ್ವಾನಿಸಿದೆವು. ಸಭೆಯಲ್ಲಿ ಪಂಚಾಯಿತಿ ಮುಖಂಡರುಗಳಾದ ಆವತಿ ವೆಂಕಟೇಗೌಡ, ವೆಂಕಟರಾಯಪ್ಪ, ಕೆ. ಹೆಚ್. ಮುನಿಶ್ಯಾಮಪ್ಪ, ರೆಡ್ಡಿಹಳ್ಳಿ ದಾಸಪ್ಪ, ಕೋರಾ ಗ್ರಾಮದ ಮುನಿಶ್ಯಾಮಪ್ಪ, ಚಿಕ್ಕ ಜಾಲದ ಕೃಷ್ಣಮೂರ್ತಿ, ಮುನಿಸ್ವಾಮಪ್ಪ, ಬೂದಿಗೆರೆ ಗವಿಯಪ್ಪ, ಶೆಟ್ಟಿರುದ್ರಪ್ಪ ಹಾಗೂ ಎಲ್ಲಾ ಪಂಚಾಯಿತಿ ಛೇರ್ಮನ್‌ಗಳು ಸೆಕ್ರೆಟರಿಗಳು ಹಾಗೂ ಇತರೆ ಸದಸ್ಯರುಗಳು ಸೇರಿ ಸುಮಾರು 1000 ಜನ ಕಾನ್ಫರೆನ್ಸ್‌ನಲ್ಲಿ ಭಾಗವಹಿಸಿದರು.

ತಿದ್ದುಪಡಿಯ ಅವಶ್ಯಕತೆಯನ್ನು ಕೂಲಂಕಷವಾಗಿ ಚರ್ಚೆ ಮಾಡಲಾಯ್ತು. ಈ ಚರ್ಚೆಯ ಅನುಮೋದಕರ್ಯಾರು ಎಂದು ಮೊದಲೇ ಗೊತ್ತುಪಡಿಸಿದ್ದೆವು. ಕಂದಾಯ ಮಂತ್ರಿಗಳಾಗಿದ್ದ ಎಂ. ಪಿ. ಪಾಟೀಲ್‌ರವರು ಸಮಕ್ಷಮದಲ್ಲಿ ಈ ಎಲ್ಲಾ ತೀರ್ಮಾನವನ್ನು ತೆಗೆದುಕೊಳ್ಳಲಾಯ್ತು. ಈ ಸಭೆಯನ್ನು ದೇವನಹಳ್ಳಿ ಸಮೀಪ ನಲ್ಲೂರಿನಲ್ಲಿ ನಡೆಸಲಾಯ್ತು. ಸುಮಾರು 150 ತಿದ್ದುಪಡಿಗಳನ್ನು ಅಂದು ಸೂಚಿಸಿ ಅನುಮೋದಿಸಲಾಯ್ತು ಸುಮಾರು 10 ಗಂಟೆಗಳ ಕಾಲ ಈ ಸಭೆಯು ಬಿರುಸಿನಿಂದ ನಡೆಯಿತು. ಭಾಗವಹಿಸಿದ್ದ ಎಲ್ಲಾ ಸದಸ್ಯರಿಗೂ ಊಟದ ವ್ಯವಸ್ಥೆಯನ್ನು ಕೂಡ ಮಾಡಿದ್ದೆವು. ಈ ತಿದ್ದುಪಡಿಯನ್ನು ಡಿ. ಸಿ. ಸಾಹೇಬರಿಗೆ ಕಳುಹಿಸಿದೆ. ಅನಂತರ ಇದೇನಾಯಿತೋ ಇದುವರೆವಿಗೂ ಗೊತ್ತಾಗಲಿಲ್ಲ.

ದೇವನಹಳ್ಳಿಗೆ 3 ಮೈಲಿದೂರದಲ್ಲಿ ಬೊಮ್ಮವರ ಎಂಬ ಗ್ರಾಮವಿದೆ. ಅಲ್ಲಿ ಪಟೇಲ್ ಹನುಮಂತೇಗೌಡ, ಮುನಿಶ್ಯಾಮಪ್ಪ ಎಂಬುವರು ತುಂಬಾ ಮುಖ್ಯಸ್ಥರು. ನಾನು ಕಂದಾಯ ವಸೂಲಿಗೆ ಹೋಗಿದ್ದಾಗ ಒಂದು ಪಾಳು ಬಿದ್ದಿರುವ ದೇವಸ್ಥಾನಕ್ಕೆ ನನ್ನನ್ನು ಕರೆದುಕೊಂಡು ಹೋಗಿ ತೋರಿಸಿದರು. ಇದು ಯಾವ ದೇವಸ್ಥಾನ ಯಾವ ದೇವರು ಗೊತ್ತಿಲ್ಲ. ಹತ್ತಿರದಲ್ಲೇ ಕಲ್ಯಾಣಿ ಒಂದಿತ್ತು. ಅದು ಮಣ್ಣು ಮತ್ತು ಮರಳಿನಿಂದ ತುಂಬಿಕೊಂಡಿತ್ತು. ದೇವಸ್ಥಾನ ನೋಡಲು ಬಹಳ ಅಂದವಾಗಿತ್ತು. ಆದರೆ ಸಾಕಷ್ಟು ಶಿಥಿಲವಾಗಿತ್ತು. ಚೋಳರ ಕಾಲದ್ದಿದ್ದಿರಬಹುದು, ಇದು ವಿಷ್ಣುದೇವಸ್ಥಾನವೇ ಶಿವನ ದೇವಸ್ಥಾನವೇ ಎಂದು ತಿಳಿಯಲು ಸಾಯಂಕಾಲದವರೆಗೂ ಪ್ರಯತ್ನಿಸಿದೆವು. ಕಡೆಗೂ ಯಾವುದೆಂಬುದನ್ನು ನಿರ್ಣಯಿಸಲು ಸಾಧ್ಯವಾಗಲಿಲ್ಲ. ಆದರೆ ಸಾಯಂಕಾಲ ಅಲ್ಲಿಗೆ ಒಬ್ಬ ವಯಸ್ಸಾದ ಮುದುಕರು ಬಂದರು. ಅವರನ್ನು ಕೇಳಿದೆ, ಏನಪ್ಪ ಇದು ಯಾವ ದೇವಸ್ಥಾನ ಎಂದು, ಅದಕ್ಕವರು ಹೇಳಿದರು ಸ್ವಾಮಿ, ಇದು ಶಿವನ ದೇವಸ್ಥಾನ. ಇಲ್ಲಿ ಸುಮಾರು 6 ಅಡಿ ಎತ್ತರದ ಹಾಗೂ 3 ಅಡಿ ಸುತ್ತಳತೆಯ ಒಂದು ಲಿಂಗವಿತ್ತು, ಒಂದು ಪಾಣಿಪೀಠ ಇತ್ತು. ಈಗ್ಗೆ ಸುಮಾರು 25 ವರ್ಷಗಳ ಹಿಂದೆ ಯಾರೋ ಬಂದು ಆ ಲಿಂಗವನ್ನು ಕಿತ್ತು ಕೊಂಡು ಹೋಗಿ ದೇವನಹಳ್ಳಿಯ ವೇಣುಗೋಪಾಲಸ್ವಾಮಿ

ದೇವಸ್ಥಾನದ ಬಳಿ ಹಾಕಿದ್ದಾರೆ, ಆ ಲಿಂಗವು ಈಗಲೂ ಅಲ್ಲಿಯೇ ಇದೆ ಎಂದರು. ನಾನು ಕೂಡಲೆ ನನ್ನದೇ ಆದ ಕುದುರೆಗಾಡಿಯಲ್ಲಿ ದೇವನಹಳ್ಳಿಗೆ ಬಂದು ಶ್ರೀ ವೇಣು ಗೋಪಾಲಸ್ವಾಮಿ ದೇವಾಲಯಕ್ಕೆ ಹೋಗಿ ನೋಡಿದೆ ಅಲ್ಲಿ ಆ ಮುದುಕ ಹೇಳಿದ ಲಿಂಗ ವಿತ್ತು. ಪಾಣಿಪೀಠ ಸ್ವಲ್ಪ ಭಿನ್ನವಾಗಿತ್ತು. ಅದನ್ನು ಕೂಡಲೆ ಗಾಡಿಗಳಲ್ಲಿ ಬೊಮ್ಮವರಕ್ಕೆ ಸಾಗಿಸುವ ಏರ್ಪಾಟು ಮಾಡಿದೆ. ಊರಿನವರೆಲ್ಲರೂ ಬಂದರು. ಸುತ್ತ ಮುತ್ತಲಿನ ಹಳ್ಳಿಯ ಜನರೆಲ್ಲರೂ ಸೇರಿದರು. ಶಿಥಿಲವಾಗಿದ್ದ ದೇವಸ್ಥಾನವನ್ನು ರಿಪೇರಿ ಕಾರ್ಯ ಕೈಗೊಂಡರು. ಹೂಳು ತುಂಬಿದ್ದ ಕಲ್ಯಾಣಿಯ ಮಣ್ಣನ್ನು ತೆಗೆಯಲು ಪ್ರಾರಂಭಿಸಿದರು. ಊರಿನವರ ಸಮಯಪ್ರಜ್ಞೆ ಸಹಕಾರದಿಂದಾಗಿ ಈ ಕೆಲಸ ತೃಪ್ತಿಕರವಾಗಿ ಪೂರ್ಣವಾಗಿ ನಡೆಯಿತು. ನನಗಂತೂ ಈ ಕೆಲಸ ವಿಶೇಷ ಸಂತೋಷವನ್ನು ತಂದಿತು. ಅನಂತರ ದೇವರ ಪ್ರತಿಷ್ಠಾಪನಾ ಕಾರ್ಯವೂ ನಡೆಯಿತು. ಸುಮಾರು 25 ಜನ ಆಗಮಿಕರು ಬಂದು ಬಹಳ ಸಂಭ್ರಮದಿಂದ ಶಾಸ್ತ್ರೋಕ್ತವಾಗಿ ವೇದಘೋಷಗಳೊಡನೆ ಪ್ರತಿಷ್ಠಾಪನೆ ಮಾಡಿದರು. ಈಗಲೂ ಕೂಡ ಈ ಊರಲ್ಲಿ ಪ್ರಸಿದ್ಧವಾದ ಶಿವದೇವಾಲಯವನ್ನು ಕಾಣ ಬಹುದು.

ದೇವನಹಳ್ಳಿಯ ವೇಣುಗೋಪಾಲಸ್ವಾಮಿ ದೇವಸ್ಥಾನವು ಬಹು ಪ್ರಸಿದ್ಧ ವಾದುದು ಈ ದೇವಸ್ಥಾನಕ್ಕೆ ಅದೇ ತಾಲ್ಲೂಕಿನ ಅರದೇಶಹಳ್ಳಿಯಲ್ಲಿ ಸುಮಾರು 50 ಎಕರೆ ತರಿ ಮತ್ತು ಖುಷ್ಕಿ ಜಮೀನಿತ್ತು. ಫಲವತ್ತಾದ ಜಮೀನು ರೈತರುಗಳೇ ಈ ಜಮೀನುಗಳನ್ನು ಸಾಗುವಳಿ ಮಾಡುತ್ತಿದ್ದರು. ವರ್ಷಕ್ಕೆ ಅರ್ಚಕರಿಗೆ 50-00 ರೂಪಾಯಿ ಗುತ್ತಿಗೆಯಂತೆ ಕೊಡುತ್ತಿದ್ದರು. ಅವರಲ್ಲಿ ಕೆಲವರು ಕೊಡುತ್ತಿದ್ದರು ಇನ್ನು ಕೆಲವರು ಕೊಡುತ್ತಲೇ ಇರಲಿಲ್ಲ. ಅರ್ಚಕರು ನನ್ನಲ್ಲಿಗೆ ಬಂದು ಆಗಾಗ್ಗೆ ದೂರು ಕೊಡು ತ್ತಿದ್ದರು.

ಒಂದು ದಿನ ವೇಣುಗೋಪಾಲಸ್ವಾಮಿ ದೇವಸ್ಥಾನದ ಅರ್ಚಕರು ನನ್ನ ಬಳಿ ಬಂದು ಸ್ವಾಮಿ ನಮ್ಮ ದೇವಸ್ಥಾನಕ್ಕೆ ಇರುವ ಆಸ್ತಿಯಲ್ಲಿ 50 ಎಕರೆ ಜಮೀನಿಗೆ ಕೇವಲ 50-00 ರೂಗಳನ್ನು ವರ್ಷಕ್ಕೆ ರೈತರು ಕೊಡುತ್ತಿದ್ದಾರೆ. ಜಮೀನು ತುಂಬಾ ಫಲವತ್ತಾಗಿದ್ದು ದೇವಸ್ಥಾನಕ್ಕೆ ಏನೇನೂ ವರಮಾನ ಬರುತ್ತಿಲ್ಲ. ಇದನ್ನು ಸರಿಪಡಿಸಿ ಕೊಡಿ ಎಂದು ಕೋರಿದರು. ಇನಾಮತಿ ಕ್ಯಾನ್ಸಲ್ ಮಾಡಿಸಿ ಜಮೀನನ್ನು ಹರಾಜು ಮಾಡಿಸಿದರೆ ಹೆಚ್ಚಿನ ವರಮಾನ ಬರುತ್ತದೆ ; ಎಂದು ತಿಳಿಸಿದರು. ಅದೇ ಸಮಯದಲ್ಲಿ ಯಶವಂತಪುರದ ಶ್ರೀ ವೈ. ಮುನಿಸ್ವಾಮಪ್ಪನವರು ಹಾಗೂ ಅವರ ಸಹೋದರ ಶ್ರೀ ವೈ. ಕೃಷ್ಣಮೂರ್ತಿಯವರು ಸಹ ಬಂದು ಈ ವಿಚಾರವನ್ನು ಸರಿಪಡಿಸಿ ಎಂದು ಕೋರಿದರು. ಇವರಿಬ್ಬರೂ ನನಗೆ ತುಂಬಾ ಆತ್ಮೀಯರಾಗಿದ್ದರು. ನುಡಿದಂತೆ ನಡೆಯುವ ಗಣ್ಯ ವ್ಯಕ್ತಿಗಳಾಗಿದ್ದರು. ಜೊತೆಗೆ ಆಗರ್ಭ ಶ್ರೀಮಂತರು.

ಇನಾಮತಿ ಕ್ಯಾನ್ಸಲ್ ಮಾಡುವ ಅಧಿಕಾರ ಆಗ ಕೇವಲ ಸರ್ಕಾರದ್ದಾಗಿತ್ತು.

ಮೊದಲು ನೀವು ಇನಾಮತಿ ರದ್ದು ಪಡಿಸಿಕೊಂಡು ಬನ್ನಿ, ಅನಂತರ ಹರಾಜು ವ್ಯವಸ್ಥೆ ಮಾಡಿಸುತ್ತೇನೆ ಎಂದು ಹೇಳಿದೆ. ಅದರಂತೆ ಇನಾಮತಿ ರದ್ದುಪಡಿಸುವ ಕೆಲಸವನ್ನು ಶ್ರೀ ಮುನಿಸ್ವಾಮಪ್ಪನವರು ಖುದ್ದು ಬಗೆಹರಿಸಿಕೊಂಡು ಬಂದರು. ಅದರಂತೆ ಹರಾಜಿಗೆ ಸಿದ್ಧಮಾಡಿದೆ. ಶ್ರೀ ಮುನಿಸ್ವಾಮಪ್ಪನವರೇ ರೂ. 2,000 ಡಿಪಾಜಿಟ್ ಹಣ ಕಟ್ಟಿದರು. ಒಂದು ತಿಂಗಳೊಳಗಾಗಿ ಹರಾಜಿಗೆ ವ್ಯವಸ್ಥೆ ಮಾಡಿಯಾಯ್ತು. ಸದರಿ ಜಮೀನಿಗೆ ಸುಮಾರು ರೂ. 30,000 ಗಳಷ್ಟು ಹಣ 1957ನೇ ಇಸವಿಯಲ್ಲಿ ಹರಾಜಿನಿಂದ ಬಂತು. ಈ ಹಣವನ್ನು ಎಂಡೋಮೆಂಟಿನ ಖಾತೆಯಲ್ಲಿ ಇರಿಸಿದೆ. (ಧಾರ್ಮಿಕ ದತ್ತಿ ಖಾತೆ) ಇದರಿಂದ ಸುಮಾರು ವಾರ್ಷಿಕ ರೂ. 2500 ಗಳು ವರಮಾನ ಬರುವಂತಾಯ್ತು. ಅನಂತರ ಅರ್ಚಕರ ಸಂಬಳ ಹೆಚ್ಚಿಸಿ ಉಳಿದ ಹಣದಿಂದ ದೇವರ ಪೂಜಾ ಕಾರ್ಯಗಳನ್ನು ನಡೆಸಲು ಅನುಕೂಲಮಾಡಿಕೊಡಲಾಯ್ತು.

ದೇವನಹಳ್ಳಿಯಲ್ಲಿ ನಾನು ಅಮಲ್ದಾರರಾಗಿದ್ದಾಗ ನನ್ನ ಮಕ್ಕಳು ದೇವನಹಳ್ಳಿಯ ವಿದ್ಯಾಶಾಲೆಯಲ್ಲಿ ಓದುತ್ತಿದ್ದರು. ಅವರೆಲ್ಲಾ ಮೈನರ್ ಮಕ್ಕಳು. ನನ್ನ ಮೊದಲನೇ ಮಗಳು ಗಂಗಮ್ಮ ಮಾತ್ರ ಎಸ್. ಎಸ್. ಎಲ್. ಸಿ. ಯಲ್ಲಿ ಓದುತ್ತಿದ್ದಳು. ಆಕೆಗೆ ಮದುವೆ ಮಾಡಲು ಸಿದ್ಧತೆಗಳು ನಡೆದವು. ನನ್ನ ಕಷ್ಟ ಸುಖದಲ್ಲಿ ಸಹಭಾಗಿಯಾಗುತ್ತಿದ್ದ ಯಾವಾಗಲೂ ನನ್ನ ಹಿತಚಿಂತಕರಾಗಿದ್ದ ನನ್ನ ಮಗನಿಗಿಂತ ಹೆಚ್ಚೆಂದು ಭಾವಿಸಿದ್ದ ಅಕ್ಕನ ಮಗನಾದ ಶ್ರೀ ಕೆ. ಎಲ್. ಪುಟ್ಟಯ್ಯನಿಗೆ ಕೊಟ್ಟು ಮಗಳ ಲಗ್ನವನ್ನು ಮಾಡಿದ್ದಾಯಿತು.

ಆತನ ಶೈಶವ, ಬಾಲ್ಯ, ವಿದ್ಯಾಭ್ಯಾಸ ಮತ್ತು ಸರ್ಕಾರಿ ನೌಕರಿ ಕೊಡಿಸಿಕೊಟ್ಟು ಅವನ ತಾಯಿ ತಂದೆಗಳಿಗಿಂತ ಹೆಚ್ಚಾಗಿ ಪೋಷಿಸುತ್ತಿದ್ದವರಲ್ಲಿ ನಾನೊಬ್ಬ. ನಾನಾಗ ರೆವಿನ್ಯೂ ಇನ್‌ಸ್ಪೆಕ್ಟರ್ ನೌಕರಿ ಮಾಡಿದಾಗ 1935ರಲ್ಲಿ ಆತ ಕೇವಲ 6 ವರ್ಷದ ಬಾಲಕ. ಆಗ ನನ್ನನ್ನು ಸೇರಿದವನು ನಾನು ವರ್ಗವಾಗಿ ಹೋದ ಸ್ಥಳಗಳಿಗೆಲ್ಲಾ ನನ್ನೊಡನೆಯೇ ಬರುತ್ತಿದ್ದ. ನನ್ನ ಕಷ್ಟ ಸುಖದಲ್ಲಿ ಯಾವಾಗಲೂ ಭಾಗಿಯಾಗಿರುತ್ತಿದ್ದ. ಸಾಲದ್ದಕ್ಕೆ ನನ್ನ ಅಕ್ಕನ ಮಗ. ಈಗಾಗಲೇ ಹೇಳಿರುವಂತೆ ನನ್ನ ಅಕ್ಕನನ್ನು ಅವಿಭಕ್ತ ಕುಟುಂಬದಲ್ಲಿದ್ದ ನನ್ನ ತಾಯಿಯ ತಮ್ಮ ಲಿಂಗಣ್ಣನಿಗೆ ಕೊಟ್ಟಿದ್ದೆವು. ಅವರ ಜ್ಯೇಷ್ಠ ಪುತ್ರನೇ ಶ್ರೀ ಕೆ. ಎಲ್. ಪುಟ್ಟಯ್ಯ. ಈ ಮದುವೆಯನ್ನು ನನ್ನ ಸ್ವಗ್ರಾಮವಾದ ಕೋಡಿಗೇಹಳ್ಳಿಯಲ್ಲಿ ನಡೆಸಲಾಯ್ತು. ಆಗಲೂ ನಾವೆಲ್ಲರೂ ಅವಿಭಕ್ತ ಕುಟುಂಬದಲ್ಲೆ ಇದ್ದೆವು. ಆದರೆ ಆರತಕ್ಷತೆಯನ್ನು ಮಾತ್ರ ದೇವನಹಳ್ಳಿಯಲ್ಲಿ ಇಟ್ಟುಕೊಂಡಿದ್ದೆವು. ದೇವನಹಳ್ಳಿಯ ಆರತಕ್ಷತೆಗೆ ಸಾವಿರಾರು ಜನ ಹಿತೈಷಿಗಳು, ಸ್ನೇಹಿತರು ಬಂಧು ವಧೂವರರಿಗೆ ಆಶೀರ್ವಾದವನ್ನು ಮಾಡಿದರು.

ಈ ಲಗ್ನವಾದ ಕೆಲವು ತಿಂಗಳುಗಳ ನಂತರ ನನ್ನ ಮನ, ಮನೆಗಳನ್ನು ಸದಾ ಬೆಳಗಿದ ಆದರ್ಶಗೃಹಿಣಿ, ಮನೆಯ ದೇವತೆಯಂತಿದ್ದ ನನ್ನ ಇಚ್ಛೆಯಂತೇ ನಡೆಯುತ್ತಿದ್ದ

ನನ್ನಲ್ಲಿ ಅತ್ಯಂತ ಗೌರವ ಭಕ್ತಿಯಿಂದ ಇರುತ್ತಿದ್ದ ನನ್ನ ಮೊದಲನೇ ಪತ್ನಿ ಮಲ್ಲಮ್ಮನವರು ಬಹಳ ವರ್ಷಗಳಿಂದ ಕೀಲುನೋವಿನಿಂದ ನರಳುತ್ತಿದ್ದು ಕಾಯಿಲೆಯಿಂದಾಗಿ ಅಮರರಾದರು. ಇವರ ನಿಧನದಿಂದ ನನ್ನ ಜೀವನದಲ್ಲಿ ತುಂಬಲಾರದ ನಷ್ಟವಾಯಿತು. ಅತ್ಯಂತ ದುಃಖಿತನಾದೆ. ಈ ದಿವಸವೂ ಕೂಡ ನಮ್ಮ ತಂದೆ–ತಾಯಿ ಮತ್ತು ಸೋದರ ಮಾವಂದಿರ ಜೊತೆಯಲ್ಲಿ ಆಕೆಯನ್ನು ಮತ್ತು ಅವರ ತಾಯಿ ಸಿದ್ದಮ್ಮನನ್ನು ನಿತ್ಯವೂ ಸ್ಮರಿಸಿಕೊಳ್ಳುತ್ತಿದ್ದೇನೆ. ಸಿದ್ದಮ್ಮ ನನ್ನ ಅತ್ತೆಯಾದರೂ ನನಗೆ ತಾಯಿಯಂತೆ ಇದ್ದು ಸಾಕಿ ಸಲಹಿ ನಾನು ಹೋದ ಸ್ಥಳಗಳಿಗೆಲ್ಲಾ ಬಂದು ನನ್ನನ್ನು ಮಗನಂತೆ ಆರೈಸುತ್ತಿದ್ದಳು. ಆಕೆಗೆ ನನ್ನಲ್ಲಿ ಅಪಾರವಾದ ಪ್ರೀತಿ ಮತ್ತು ಮಮತೆ ಈ ದಿವಸ ಆಕೆಯೂ ಸ್ವರ್ಗಸ್ಥಳಾಗಿದ್ದಾಳೆ.

ನಾನು ದೇವನಹಳ್ಳಿಯಲ್ಲಿ ವಾಸವಿದ್ದ ಸರ್ಕಾರಿ ವಸತಿಗೃಹದ ಎದುರಿನಲ್ಲಿ ಹಾಗೂ ತಾಲ್ಲೂಕು ಕಚೇರಿಯ ಎದುರಿನಲ್ಲೇ ಒಂದು ಆಂಜನೇಯಸ್ವಾಮಿ ದೇವಸ್ಥಾನಕ್ಕೆ ನೂರಾರು ಭಕ್ತಾದಿಗಳು ಬರುತ್ತಿದ್ದರು. ಆ ದೇವಸ್ಥಾನವನ್ನು ಭಕ್ತಾದಿಗಳೇ ನಡೆಸುತ್ತಿದ್ದರು. ಪೂಜಾಕಾರ್ಯಗಳು ಬಹಳ ವಿಜೃಂಭಣೆಯಿಂದ ನಡೆಯುತ್ತಿದ್ದವು. ಅದರೆ ಬಂದ ಸುಮಾರು ಭಕ್ತಾದಿಗಳು ನನ್ನನ್ನು ಕಂಡು ಈ ದೇವರಿಗೆ ಒಂದು ಬೆಳ್ಳಿಯ ವಜ್ರಾಂಗಿಯನ್ನು ಮಾಡಿಸಿಕೊಡುವ ಏರ್ಪಾಟನ್ನು ಮಾಡಿ ಎಂದು ಕೋರುತ್ತಿದ್ದರು. ದೈವಭಕ್ತಿ, ಕೂಡಲೆ ಈ ವಜ್ರಾಂಗಿಯನ್ನು ಮಾಡಿಸಿಕೊಡುವ ಏರ್ಪಾಡನ್ನು ಮಾಡಿ ಸುಮಾರು ಆಗಿನ ಕಾಲದಲ್ಲಿ (1957 ರಲ್ಲಿ ರೂ. 1500 ಬೆಲೆಯುಳ್ಳ ವಜ್ರಾಂಗಿಯನ್ನು ಮಾಲೂರಿನ ಹತ್ತಿರದ ಶಿವಾರಪಟ್ಟಣ ಆಚಾರರನ್ನು ಕರೆಸಿ ವಿಗ್ರಹಕ್ಕೆ ತಕ್ಕಂತೆ ವಜ್ರಾಂಗಿಯನ್ನು ತೊಡಿಸಿ ನಮ್ಮೆಲ್ಲರ ಪ್ರೀತಿಗೆ ಪಾತ್ರರಾಗಿದ್ದ ಹಾಗೂ ಜಿಲ್ಲಾಧಿಕಾರಿಗಳಾಗಿದ್ದ ಶ್ರೀ ಡಿ. ಬಿ. ಚನ್ನರುದ್ರಯ್ಯನವರನ್ನು ಬರಮಾಡಿಕೊಂಡು ವಿಶೇಷ ವಿಜೃಂಭಣೆ ವೈಭವಗಳಿಂದ ಅವರಿಂದ ಉದ್ಘಾಟನೆ ಮಾಡಿಸಿದೆ. ಹರಿಕಥೆ ಮತ್ತು ಸಂಗೀತ ಕಾರ್ಯಕ್ರಮಗಳನ್ನು ಏರ್ಪಾಟು ಮಾಡಿದೆ. ನಮ್ಮ ಜಿಲ್ಲಾಧಿಕಾರಿಗಳಿಗೆ ಇದರಿಂದ ತುಂಬಾ ಸಂತೋಷವಾಯಿತು. ಭಾರಿ ಜನ ಸೇರಿದ್ದ ಈ ಸಭೆಯಲ್ಲಿ ಈ ವಿಚಾರವನ್ನು ತಮಗಾದ ಸಂತೋಷವನ್ನು ವ್ಯಕ್ತಪಡಿಸಿದ್ದು ನನ್ನ ದೈವ.

ಇದೇ ಸಂದರ್ಭದಲ್ಲಿ ಒಂದು ವಿಷಯವನ್ನು ತಮ್ಮಲ್ಲಿ ಹೇಳಬೇಕೆನಿಸುತ್ತದೆ. ನಾನು ದೇವನ ಹಳ್ಳಿಯಲ್ಲಿ ಅಮಲ್ದಾರ್‌ರಾಗಿದ್ದಾಗ ಶ್ರೀ ಎಲ್. ಮುನಿಸ್ವಾಮಿ, ಶ್ರೀ ಜಿ.ವಿ.ಕೆ. ರಾವ್ ಮತ್ತು ಶ್ರೀ ಡಿ. ಬಿ. ಚನ್ನರುದ್ರಯ್ಯ ಇವರುಗಳು ನನಗೆ ಜಿಲ್ಲಾಧಿಕಾರಿಗಳಾಗಿದ್ದರು. ಒಂದು ದಿನ ಶ್ರೀ ಡಿ. ಬಿ. ಚನ್ನರುದ್ರಯ್ಯನವರು ತಾಲ್ಲೂಕು ತನಿಖೆಗೆ ಬಂದು ಸಬ್ಸಿಡಿ ರಿಜಿಸ್ಟರನ್ನು ತನಿಖೆ ಮಾಡಿದರು. ಆಗ ಒಬ್ಬ ರೈತನಿಗೆ ಒಂದು ಬಾವಿ ತೋಡಿಸಿದಾಗ ರೂ. 1 ಸಾವಿರ ಖರ್ಚಾಗಿದ್ದರೆ ಸರ್ಕಾರದವರು ರೂ. 250 ಸಬ್ಸಿಡಿ ಕೊಡುತ್ತಿದ್ದರು. ಅನಂತರ ಅದು ರೂ. 500 ಗಳಿಗೆ ಏರಿತು. ಇದಕ್ಕಾಗಿಯೇ

ಪ್ರತಿಯೊಂದು ತಾಲ್ಲೂಕಿಗೂ ಸರ್ಕಾರದಿಂದ ಬಂದ ಹಣವನ್ನು ಹಂಚುತ್ತಿದ್ದರು. ನಮ್ಮ ತಾಲ್ಲೂಕಿಗೂ ಕೂಡ ಈ ಯೋಜನೆಗಾಗಿ ಎಲ್ಲಾ ತಾಲ್ಲೂಕುಗಳಿಗೂ ಕೊಟ್ಟಂತೆ ಗ್ರಾಂಟು ಹಂಚಿದರು.

ನಮ್ಮ ತಾಲ್ಲೂಕಿಗೆ ಹಂಚಿಕೊಟ್ಟಿದ್ದ ಹಣ ಡಿ. ಸಿ. ಸಾಹೇಬರು ತನಿಖೆಗೆ ಬರುವ ವೇಳೆಗಾಗಲೇ ಪೂರ್ತಿಯಾಗಿ ಖರ್ಚಾಗಿತ್ತು. ಅದನ್ನು ನೋಡಿ ಜಿಲ್ಲಾಧಿಕಾರಿಗಳು ಇನ್ನೂ ಎಷ್ಟು ಅರ್ಜಿಗಳು ಬಾಕಿ ಇವೆ ಎಂದು ಕೇಳಿದರು. ಆಗ ನಾನು ಕೂಡಲೇ ಬಾವಿ ಕೆಲಸ ಪೂರ್ಣಮಾಡಿ ಪಂಚಾಯಿತಿ ಸಬ್ ಓವರಸಿಯರ್‌ರಿಂದ ಬಾವಿ ಕೆಲಸ ಪೂರ್ತಿಯಾದ ಬಗ್ಗೆ ಸರ್ಟಿಫಿಕೇಟ್ ಪಡೆದಿರುವ ಸುಮಾರು 200–300 ಅರ್ಜಿಗಳನ್ನು ಅವರ ಮುಂದಿಟ್ಟೆ. ಆಗ ಫೆಬ್ರವರಿ ಒಂದನೇ ವಾರ ಇನ್ನೂ ಹೆಚ್ಚಿಗೆ ಸುಮಾರು ರೂ. 50 ಸಾವಿರ ಹಣ ಈ ಅರ್ಜಿಗಳ ವಿಲೇವಾರಿಗಾಗಿ ಬೇಕಾಗಬಹುದು ಸ್ವಾಮಿ ಎಂದು ತಿಳಿಸಿದೆ. ಅದಕ್ಕವರು ಇಷ್ಟು ಕೊಡುತ್ತೇನೆಂದು ಹೇಳಲಿಲ್ಲ. ಬದಲಾಗಿ ಬೇರೆ ತಾಲ್ಲೂಕುಗಳಲ್ಲಿ ಖರ್ಚಾಗದೇ ಉಳಿದಿರುವ ಹಣವನ್ನು ಈ ತಾಲ್ಲೂಕಿಗೆ ವರ್ಗಾವಣೆ ಮಾಡಲು ಪ್ರಯತ್ನಿಸುತ್ತೇನೆ ಎಂದು ಹೇಳಿ ಕೂಡಲೆ ಅಮಲ್ದಾರರ ಸಭೆಯನ್ನು ಕರೆದರು. ಎಲ್ಲಾ 11 ತಾಲ್ಲೂಕುಗಳ ಅಮಲ್ದಾರರೂ ಸಭೆಗೆ ಬಂದಿದ್ದರು. ನಮ್ಮ ಸಬ್ಸಿಡಿ ವಿಷಯ 5ನೇ ವಿಷಯವಾಗಿತ್ತು. ಅಜೆಂಡಾ ಪ್ರಕಾರ 5ನೇ ವಿಷಯಕ್ಕೆ ಬಂದಾಗ ಎಲ್ಲಾ ಅಮಲ್ದಾರ್‌ರನ್ನೂ ಒಬ್ಬೊಬ್ಬರನ್ನಾಗಿ ವಿವರವಾದ ಖರ್ಚು ಬಾಕಿಯನ್ನು ಕೇಳಿದರು. ಕೇವಲ 3 ಜನ ಮಾತ್ರ ನಮಗೆ ಸ್ವಲ್ಪ ಹಣ ಬೇಕಾಗಿದೆಯೆಂದು ಹೇಳಿದರು. ಉಳಿದ 7–8 ಜನರು ನಮಗೆ ಡಿಮ್ಯಾಂಡ್ ಇಲ್ಲವಾಗಿ ಉಳಿದ ಹಣವನ್ನು ವಾಪಸ್ ತೆಗೆದುಕೊಳ್ಳಬೇಕೆಂದು ಹೇಳಿದರು. ಸುಮಾರು ರೂ. 50 ಸಾವಿರ ಹಣವನ್ನು ಈ ತಾಲ್ಲೂಕುಗಳಿಂದ ತೆಗೆದುಕೊಳ್ಳಲು ಲೆಕ್ಕ ಮಾಡಲಾಯ್ತು. ಕಡೆಗೆ ಇಷ್ಟು ಹಣವನ್ನು ಕೂಡ ದೇವನಹಳ್ಳಿಯ ಅಮಲ್ದಾರ್‌ರವರಿಗೆ ಕೊಡಿ ಎಂದು ಜಿಲ್ಲಾಧಿಕಾರಿಗಳು ಕೂಡಲೆ ಅರ್ಡರ್ ಮಾಡಿ ನಮ್ಮ ತಾಲ್ಲೂಕಿಗೆ ಕೊಟ್ಟರು.

ಮಾರನೇ ದಿನವೇ ರೂ. 50 ಸಾವಿರ ಗಳನ್ನು ಕಳುಹಿಸಿದರು. ಈ ಹಣವನ್ನು ಮಾರ್ಚ್ ತಿಂಗಳೊಳಗಾಗಿ ಖರ್ಚು ಮಾಡಲು ಸೂಚಿಸಿದರು. ಅದರಂತೆ ಮಾರ್ಚಿನಲ್ಲೇ ಪೂರ್ತಾ ಹಣವನ್ನು ಹಾಜರಿದ್ದ ಎಲ್ಲಾ ಅರ್ಜಿಗಳಿಗೂ ವಿಲೇವಾರಿ ಮಾಡಿದೆ. ಮುಂದಿನ ಸಭೆಯಲ್ಲಿ ಜಿಲ್ಲಾಧಿಕಾರಿಗಳು ನನ್ನನ್ನು ಮುಕ್ತಕಂಠದಿಂದ ಪ್ರಶಂಸಿಸಿದರು.

ಒಂದು ದಿನ ಆಕಸ್ಮಾತ್ ಯಾವುದೋ ಕೆಲಸಕ್ಕೆಂದು ಬೆಂಗಳೂರಿಗೆ ಹೋಗಿದ್ದಾಗ ಡಿ. ಸಿ. ಕಛೇರಿಗೆ ಹೋಗಿ ಜಿಲ್ಲಾಧಿಕಾರಿಗಳಾದ ಶ್ರೀ ಚನ್ನರುದ್ರಯ್ಯನವರನ್ನು ನೋಡಿದೆ. ಅವರು ಕೂಡಲೇ ಅವರ ಪಿ. ಎ. ಅವರನ್ನು ಕರೆದು, "ರಾಧಾಕೃಷ್ಣ, ದೇವನಹಳ್ಳಿಯ ಅಮಲ್ದಾರ್ ಅವರು ಬಂದಿದ್ದಾರೆ ಅವರಿಗೆ ಕಾಫಿ ತರಿಸಿಕೊಡಿ" ಎಂದು ಜಿಲ್ಲಾಧಿಕಾರಿಗಳೇ ಹೇಳಬೇಕಾದರೆ ಅವರಿಗೆ ನನ್ನ ಮೇಲೆ ಇದ್ದ ಮಮತೆ ಗೌರವ ಎಷ್ಟೆಂಬುದರ

ಅರಿವಾಗುತ್ತದೆ. ಅದೇ ದಿನ ನನ್ನನ್ನು ದೇವನಹಳ್ಳಿಯ ಬಿ.ಡಿ.ಓ. ಆಗಿ ನೇಮಕ ಮಾಡಲು ಡೆವಲಪ್‌ಮೆಂಟ್ ಸೆಕ್ರೆಟರಿಯವರಿಂದ ಶಿಫಾರಸ್ಸು ಹೋಗಿದೆ ಎಂಬ ಸಮಾಚಾರ ತಿಳಿಯಿತು. ನಾನು ಸಂಜೆಯೇ ಜಿಲ್ಲಾಧಿಕಾರಿಗಳನ್ನು ನೋಡಿ ಈ ವಿಷಯ ವನ್ನು ತಿಳಿಸಿದೆ. ಅದೇ ದಿನ ಸಾಯಂಕಾಲ ಅವರು ರೆವಿನ್ಯೂ ಮಂತ್ರಿಗಳನ್ನು ನೋಡಿದ ರಂತೆ. ಆಗ ಅವರು ದೇವನಹಳ್ಳಿಯಲ್ಲಿರುವ ಅಮಲ್ದಾರ್‌ರವರು ಬಿ.ಡಿ.ಓ. ಏನೇನು ಕೆಲಸ ಮಾಡುತ್ತಾರೋ ಅದನ್ನು ಈಗ ಅಮಲ್ದಾರ್‌ರಾಗಿಯೇ ಮಾಡುತ್ತಿದ್ದಾರೆ. ಅವರನ್ನೇಕೆ ಬಿ.ಡಿ.ಓ. ಆಗಿ ನೇಮಕ ಮಾಡುತ್ತೀರಿ ಎಂದು ಹೇಳಿ ಕ್ಯಾನ್ಸಲ್ ಮಾಡಿಸಿ ಕೊಂಡು ಬಂದು ದೇವನಹಳ್ಳಿಯಲ್ಲಿ ಅಮಲ್ದಾರ್ ಆಗಿ ಮುಂದುವರೆಯಲು ಅನುಕೂಲ ಮಾಡಿಕೊಟ್ಟರು. ಈ ವಿಷಯವನ್ನು ಸ್ವತಃ ಜಿಲ್ಲಾಧಿಕಾರಿಗಳೇ ಅನಂತರ ನನಗೆ ತಿಳಿಸಿ ದರು. ಅವರಿಗೆ ನನ್ನ ಮೇಲೆ ಅಪಾರವಾದ ಪ್ರೀತಿ ಮತ್ತು ಅಭಿಮಾನ ನನ್ನನ್ನು ಯಾವಾಗಲೂ ಅವರು ತನ್ನ ಕೈಕೆಳಗಿನ ಅಧಿಕಾರಿ ಎಂದು ಕಾಣುತ್ತಿರಲಿಲ್ಲ, ಸ್ವಂತ ಮಗನಂತೆ ತುಂಬಾ ಸಲಿಗೆಯಿಂದ ನೋಡುತ್ತಿದ್ದರು. ಅವರ ಮಾತು ಯಾವಾಗಲೂ ಮಧುರ, ಹೃದಯ ಮಲ್ಲಿಗೆ ಹೂವಿನಂತೆ. ಅವರು ಯಾವುದೇ ಸಮಯದಲ್ಲಿಯೂ ಸಿಟ್ಟು ಮಾಡಿಕೊಂಡಿದ್ದನ್ನು ನಾನು ಕಾಣಲೇ ಇಲ್ಲ.

ಈ ಸಂದರ್ಭದಲ್ಲಿ ನನ್ನ ಒಂದು ನೆನಪನ್ನು ಇಲ್ಲಿ ಹೇಳ ಬಯಸುತ್ತೇನೆ. ಒಂದು ದಿನ ಸುಮಾರು 9 ಗಂಟೆಗೆ ನಾನು ದೇವನಹಳ್ಳಿಯಲ್ಲಿ ವಾಸವಾಗಿದ್ದ ತಾಲ್ಲೂಕು ಕಚೇರಿ ಎದುರಿನ ಹರಕುಮುರುಕು ಮನೆಯಲ್ಲಿ ಇರುವಾಗ ಡಿ. ಸಿ. ಚನ್ನರುದ್ರಯ್ಯನವರು ಹಾಗೂ ಬೆಂಗಳೂರು ವಿಭಾಗಾಧಿಕಾರಿಗಳಾದ ಶ್ರೀ ರೀಗೋ ರವರು ದೊಡ್ಡಬಳ್ಳಾಪುರದ ಕಡೆಯಿಂದ ಬಂದು ನನ್ನ ಮನೆಯ ಹತ್ತಿರ ವ್ಯಾನ್ ನಿಲ್ಲಿಸಿ ನನ್ನನ್ನು ಡ್ರೈವರ್ ಮೂಲಕ ಬರಲು ಹೇಳಿ ಕಳಿಸಿದರು. ಮನೆ ರಸ್ತೆ ಪಕ್ಕದಲ್ಲೇ ಇತ್ತು. ಈ ಅನಿರೀಕ್ಷಿತ ಭೇಟಿಯನ್ನು ನಾನು ನಿರೀಕ್ಷಿಸಿರಲಿಲ್ಲ. ಡ್ರೈವರ್ ಬಂದು ಕೂಡಲೆ ನನ್ನನ್ನು ಉದ್ದೇಶಿಸಿ ಸ್ವಾಮಿ ದೊಡ್ಡ ಸಾಹೇಬರು ನಿಮ್ಮನ್ನು ಕರೆಯುತ್ತಿದ್ದಾರೆ ಬನ್ನಿ : ನೀವು ಹೇಗಿದ್ದೀರೋ ಹಾಗೆಯೇ ಬರಬೇಕೆಂದು ಅಪ್ಪಣೆಯಾಗಿದೆ ಎಂದ." ಕೂಡಲೆ ನಾನು ಉಟ್ಟಿದ್ದ ಪಂಚೆಯಲ್ಲೇ ಹೋದೆ, ಹೋಗಿ ಅವರನ್ನು ಭೇಟಿಮಾಡಿದೆ. ಕೂಡಲೆ ಜಿಲ್ಲಾಧಿ ಕಾರಿಗಳು ನನ್ನನ್ನು ವಿಭಾಗಾಧಿಕಾರಿಗಳಾದ ಶ್ರೀ ಆರ್. ಜಿ. ರೀಗೋ ಸಾಹೇಬರಿಗೆ ಪರಿಚಯಿಸಿ ಇವರು ಕಂದಾಯ ವಸೂಲಿಯಲ್ಲಿ ಜಿಲ್ಲೆಗೆ ಮೊದಲಿಗರು ಎಂದು ಹೇಳಿದರು. ತಕ್ಷಣವೇ ವಿಭಾಗಾಧಿಕಾರಿಗಳು ಹೌದು ; ಹೌದು : ಇವರು ನನಗೆ ಗೊತ್ತು ಇವರು ನನ್ನ ಬಳಿ ಮಧುಗಿರಿಯಲ್ಲಿ ರೆವಿನ್ಯೂ ಇನ್‌ಸ್ಪೆಕ್ಟರ್ ಆಗಿದ್ದರು. He is very efficient in Collection work'' ಎಂದು ತಿಳಿಸಿದರು.

"ತಾಲ್ಲೂಕಿನ ಯಾವ ವಿಚಾರವೂ ಇಲ್ಲಿ ಬರಲೇ ಇಲ್ಲ. ನಾನು ನಮಸ್ಕಾರ ಹೇಳಿ ಕಳುಹಿಸಿಕೊಟ್ಟೆ. ನನ್ನ ಯಾವ ಆತಿಥ್ಯವನ್ನೂ ಸ್ವೀಕರಿಸಲು ಅವರು ಒಪ್ಪಲಿಲ್ಲ. ಅರ್ಜೆಂಟ್

ಕೆಲಸದ ಮೇಲೆ ಹೊರಟುಹೋದರು. ಮುಂದಿನ ಸಲ ಜಿಲ್ಲಾಧಿಕಾರಿಗಳು ತಾಲ್ಲೂಕಿಗೆ ದಯಮಾಡಿಸಿದಾಗ ನಾನು ಈ ವಿಚಾರವನ್ನು ಪ್ರಸ್ತಾಪಿಸಿದೆನು. ಆಗ ಅವರು ಡಿವಿಜನಲ್ ಕಮೀಷನರ್‌ರವರಿಗೆ ನಿಮ್ಮನ್ನು ಪರಿಚಯ ಮಾಡಿಸಲು ಕರೆಸಿದೆ ಅಷ್ಟೆ ಅಂದರು. ಆನಂತರ ನನಗೆ 3 ವರ್ಷಗಳ ಸೇವೆ ದೇವನಹಳ್ಳಿಯಲ್ಲಿ ಪೂರೈಸಿತು. ನನ್ನನ್ನು ಮೈಸೂರು ಡಿವಿಜನ್‌ಗೆ ವರ್ಗಮಾಡಿರುವುದಾಗಿ ತಿಳಿದು ಬಂತು. ಆಗಿನ ರೆವಿನ್ಯೂ ಮಂತ್ರಿಗಳಾಗಿದ್ದ ಶ್ರೀ ಕಡಿದಾಳ್ ಮಂಜಪ್ಪನವರನ್ನು ಭೇಟಿಮಾಡಿ ದೊಡ್ಡ ಬಳ್ಳಾಪುರದಲ್ಲಿ ಅಮಲ್ದಾರ್ ಹುದ್ದೆ ಖಾಲಿ ಇದೆ, ಅಲ್ಲಿಗೆ ನನ್ನನ್ನು ವರ್ಗಮಾಡಿ ಎಂದು ಕೇಳಿಕೊಂಡೆ ; ಅವರು ಆಗಲೀ ಎಂದು ಆಶ್ವಾಸನೆ ಕೊಟ್ಟರು. ಆದಾದನಂತರ ವಾರದಲ್ಲಿ ಮತ್ತೆ ನಾನು ರೆವಿನ್ಯೂ ಸಚಿವರನ್ನು ಕಂಡಾಗ ನಿಮ್ಮನ್ನು ದೊಡ್ಡಬಳ್ಳಾಪುರಕ್ಕೆ ವರ್ಗ ಮಾಡಲು ರೆವಿನ್ಯೂ ಸೆಕ್ರೆಟರಿಗಳು ಒಪ್ಪುತ್ತಿಲ್ಲ . ''Can we call it a transfer from Devenahalli to Doddaballapura'' ಎಂದು ಹೇಳಿದರು ಎಂಬುದಾಗಿ ತಿಳಿಸಿದರು.

ನನಗೆ ದೊಡ್ಡಬಳ್ಳಾಪುರಕ್ಕೆ ಹೋಗುವ ಉದ್ದೇಶವೇನೂ ಇರಲಿಲ್ಲ. ಅಲ್ಲಿ ಸುಮಾರು 4–5 ವರ್ಷಗಳ ಕಾಲ ನಾನು ಕೆಲಸ ಮಾಡುತ್ತಿದ್ದಾಗ ನನಗೆ ಅನೇಕ ಮುಖಂಡರ ಪರಿಚಯವಾಗಿತ್ತು. ಅಲ್ಲದೆ ಘಾಟಿಸುಬ್ರಮಣ್ಯ ದೇವಸ್ಥಾನಕ್ಕೆ ಗೋಪುರ ವಿರಲಿಲ್ಲ. ಆ ಗೋಪುರ ನಿರ್ಮಾಣ ಮಾಡಲು ಅಮಲ್ದಾರ್ ಆಗಿ ನಾನು ಸ್ವಲ್ಪ ಸೇವೆ ಸಲ್ಲಿಸಬಹುದೆಂಬ ಉದ್ದೇಶದಿಂದ ಕೋರಿದ್ದೆ ಅಷ್ಟೆ. ಆದರೆ ಸಚಿವರು ಆ ರೀತಿ ಹೇಳಿದ ಮೇಲೆ ಸುಮ್ಮನಾದೆ. ಈ ಮಧ್ಯೆ ಕೆಲವು ಜನ ವಿಧಾನಸಭಾ ಸದಸ್ಯರುಗಳು ನನ್ನ ವರ್ಗಾವಣೆ ವಿಚಾರದಲ್ಲಿ ರೆವಿನ್ಯೂ ಮಂತ್ರಿಗಳನ್ನು ನೋಡಿ ಶಿಫಾರಸ್ಸು ಮಾಡಿದ್ದಾರೆಂದು ಒಳ್ಳೆಯ ಕೆಲಸ ಮಾಡುತ್ತಿದ್ದ ಅಧಿಕಾರಿಯನ್ನು ಕಾರಣವಿಲ್ಲದೆ ಮೈಸೂರು ಡಿವಿಜನ್‌ಗೆ ವರ್ಗ ಮಾಡುವ ಅಗತ್ಯವೇನಿತ್ತು ಎಂದು ಪ್ರಶ್ನಿಸಿದರು ಎಂದು ತಿಳಿದು ಬಂತು. ಆದರೆ ಮಂತ್ರಿಗಳಿಗೂ ಹಾಗೂ ವಿಧಾನಸಭಾ ಸದಸ್ಯರಿಗೂ ಮಾತುಕತೆಯಲ್ಲಿ ಸ್ವಲ್ಪ ಚಕಮಕಿ ನಡೆದು ಕಡೆಗೆ ಬೆಂಗಳೂರು ಡಿವಿಜನ್‌ನಲ್ಲೇ ನನ್ನನ್ನು ಉಳಿಸಿಕೊಳ್ಳುತ್ತೇನೆಂದು ಅವರು ಹೇಳಿ ನಂತರ ನನ್ನನ್ನು ಚಿತ್ರದುರ್ಗ ಜಿಲ್ಲೆಯ ಜಗಳೂರಿಗೆ ತಹಸೀಲ್ದಾರ್ ಆಗಿ ವರ್ಗ ಮಾಡಿದರು. "ಕೋಣನೆರಡುಂ ಹೋರೆ ಗಿಡುವಿಂಗೆ ಮೃತ್ಯು" ಎಂಬಂತಾಯಿತು ನನ್ನ ಸ್ಥಿತಿ. ಈ ವಿಚಾರದಲ್ಲಿ ನಾನು ಯಾವ ವಿಧಾನ ಸಭಾಧ್ಯಕ್ಷರನ್ನೂ ನೋಡಿರಲಿಲ್ಲ. ಇನ್ನು ವರ್ಗಾವಣೆ ವಿಚಾರದಲ್ಲಿ ಹೆಚ್ಚಿಗೆ ಒತ್ತಾಯ ಮಾಡುವುದು ಸರಿಯಲ್ಲವೆಂದು ತಿಳಿದು ನಾನೂ ಜಗಳೂರಿಗೆ ಹೋಗಿ ಅಧಿಕಾರವಹಿಸಿಕೊಂಡೆ. ಅಲ್ಲಿನ ತಹಸೀಲ್ದಾರ್ ಆಗಿದ್ದ ಸುಂದರರಂರವರು ನನ್ನ ಸಹೋದ್ಯೋಗಿಗಳಾಗಿದ್ದು ನನಗೆ ಪರಿಚಯವಿತ್ತು. ಒಂದೆರಡು ತಿಂಗಳುಗಳ ನಂತರ ನಾನು ರೆವಿನ್ಯೂ ಮಂತ್ರಿಗಳಾದ ಕಡಿದಾಳ್ ಮಂಜಪ್ಪನವರನ್ನು ಕಂಡಾಗ ಅವರು ಈ ಮಾತು ಹೇಳಿದರು : ದೇವನಹಳ್ಳಿಯ ತಾಲ್ಲೂಕು ಶಾಸನಸಭಾ

ಸದಸ್ಯರಾಗಿದ್ದ ಆರ್. ಮುನಿಸ್ವಾಮಯ್ಯನವರು ನನ್ನನ್ನು ಕಂಡಾಗ ನಿಮ್ಮ ಪ್ರಾಮಾಣಿಕತೆ ಹಾಗೂ ನೀವು ಮಾಡುತ್ತಿರುವ ಒಳ್ಳೆಯ ಕೆಲಸದ ವಿಚಾರ ಹೇಳಿದರು. ಇದಾದ ಕೆಲವು ದಿನಗಳ ನಂತರ ಆಗಿನ ಆಹಾರ ಮಂತ್ರಿಗಳಾಗಿದ್ದ ಶ್ರೀ ಟಿ. ಮರಿಯಪ್ಪನವರು ಅವರನ್ನು ಕುರಿತು ಅವರ ತಾಲ್ಲೂಕು ಆದ ನಾಗಮಂಗಲಕ್ಕ ಒಳ್ಳೆ ಅಮಲ್ದಾರರನ್ನು ಕೊಡಿ ಅಂತ ಹೇಳಿದರು. ಅದಕ್ಕಾಗಿಯೇ ನಿಮ್ಮನ್ನು ಮೈಸೂರು ಡಿವಿಜನ್‌ಗೆ ಸೇರಿದ ನಾಗಮಂಗಲಕ್ಕೆ ವರ್ಗ ಮಾಡಿದ್ದೆ. ಇನ್ಯಾವ ದುರುದ್ದೇಶವೂ ಇರಲಿಲ್ಲವೆಂದು ಹೇಳಿ ನನ್ನ ಮನಸ್ಸಿಗೆ ಸಮಾಧಾನ ತಂದು ಕೊಟ್ಟರು. ಈ ವಿಚಾರ ನನಗೆ ಮೊದಲೇ ಗೊತ್ತಿದ್ದರೆ ನಾನು ಸಂತೋಷವಾಗಿ ನಾಗಮಂಗಲಕ್ಕೆ ಹೋಗುತ್ತಿದ್ದೆ ; ನನಗೆ ಗೊತ್ತಾಗಲಿಲ್ಲ ದಯವಿಟ್ಟು ಕ್ಷಮಿಸಿ ಎಂದು ಕೇಳಿಕೊಂಡೆನು.

ಒಂದು ದಿನ ಜಗಳೂರಿನ ತಾಲ್ಲೂಕ್ ಕಚೇರಿಯಲ್ಲಿ ಕೆಲಸದಲ್ಲಿ ನಿರತನಾಗಿದ್ದಾಗ ಕೆಲವು ದಾಖಲೆಗಳನ್ನು ಪರಿಶೀಲಿಸುತ್ತಿದ್ದೆ. ಆ ಸಮಯದಲ್ಲಿ ರೆವಿನ್ಯು ಮಂತ್ರಿಗಳು ಸುಮಾರು ಒಂದು ತಿಂಗಳ ಹಿಂದೆಯಷ್ಟೆ ಆ ತಾಲ್ಲೂಕ್ ಕಚೇರಿಗೆ ಭೇಟಿ ನೀಡಿದ್ದ ಸಂದರ್ಭದಲ್ಲಿ ತಮ್ಮ ಟಿಪ್ಪಣಿಯಲ್ಲಿ ಹೀಗೆ ಡೈರಿಯಲ್ಲಿ ಬರೆದಿದ್ದನ್ನು ನೋಡಿದೆನು' ''Pendency is heavy ; collection is bad ; some compitent Thasildhar is to be posted'' ಎಂದು ಬರೆದಿದ್ದರು. ಕೂಡಲೆ ನಾನು ದರಕಾಸ್ತು ಡಿಸಿಬಿ ತಃಖ್ತೆ ವಗೈರೆ ಬಾಬುಗಳ ರಿಕಾರ್ಡ್‌ಗಳನ್ನು ತರಿಸಿಕೊಂಡು ಹಗಲು ರಾತ್ರಿ ಶಿರಸ್ತೇದಾರ್ ಮತ್ತು ಗುಮಾಸ್ತರನ್ನಿಟ್ಟುಕೊಂಡು ಕೇವಲ 3 ತಿಂಗಳೊಳಗಾಗಿ ಸುಮಾರು ಶೇಕಡ 80 ರಷ್ಟು ಪೆಂಡಿಂಗ್ ಕೇಸುಗಳನ್ನು ಕಡಿಮೆಗೊಳಿಸಿದೆ. ಜಿಲ್ಲಾಧಿಕಾರಿಗಳಾದ ಶ್ರೀ ಆಲೂರ ಬಸಪ್ಪನವರು, ದಾವಣಗೆರೆ ಸಬ್ ಡಿವಿಜನ್ ಆಫೀಸರ್ ಕಬಾಡಿಯವರು ಆಗಾಗ್ಗೆ ತಾಲ್ಲೂಕಿಗೆ ಭೇಟಿಕೊಟ್ಟು ಹೋಗುತ್ತಿದ್ದರು.

ನನ್ನ ಕೆಲಸವನ್ನು ನೋಡಿ ಮೆಚ್ಚಿಗೆ ಸಲ್ಲಿಸುವುದು ಹೋಗಲಿ, ನನ್ನನ್ನು ಏನೋ ಒಂದು ಬಗೆಯ ತಿರಸ್ಕಾರ ಮನೋಭಾವದಿಂದ ನೋಡುತ್ತಿದ್ದುದು ನನಗೆ ಕಂಡು ಬಂತು. ಅವರು ಬಂದಾಗಲೆಲ್ಲಾ ಬಿ.ಡಿ.ಓ. ಮತ್ತು ಅವರ ಸಿಬ್ಬಂದಿ ಮತ್ತು ಇತರೆ ಜನರೊಡನೆ ಹೆಚ್ಚಾಗಿ ಸಂಪರ್ಕವಿಟ್ಟುಕೊಂಡಿದ್ದರೇ ಹೊರತು ನನ್ನನ್ನು ಹೆಚ್ಚಾಗಿ ಗಣನೆಗೇ ತೆಗೆದುಕೊಳ್ಳುತ್ತಿರಲಿಲ್ಲ ಎಂದು ಹೇಳಲು ತುಂಬಾ ವಿಷಾದವೆನಿಸುತ್ತದೆ. ಜಿಲ್ಲಾಧಿಕಾರಿಗಳ ಕಚೇರಿಯಲ್ಲಿ ನಡೆಯುತ್ತಿದ್ದ ಸಭೆಯಲ್ಲಿ ಕೂಡ ನನಗೆ ಯಾವ ಪ್ರಾಶಸ್ತ್ಯವನ್ನೂ ಕೊಡುತ್ತಿರಲಿಲ್ಲ. ಡಿ.ಸಿ. ಮತ್ತು ಸಬ್ ಡಿವಿಜನ್ ಆಫೀಸರ್ ಮತ್ತು ನನಗೆ ಏನೋ ಏಕೋ ಸರಿಹೋಗಲಿಲ್ಲ. ಇದರಿಂದ ನನಗೆ ಕೇವಲ ಮೂರು ತಿಂಗಳಲ್ಲೇ ಈ ತಾಲ್ಲೂಕಿನ ಕೆಲಸ ಬೇಜಾರಾಗಿ ಯಾವಾಗ ಇಲ್ಲಿಂದ ವರ್ಗವಾಗುವುದೋ ಎಂಬ ಆತುರದಲ್ಲಿದ್ದೆ. ಆದರೆ ಸರ್ಕಾರಿ ಕೆಲಸಕಾರ್ಯಗಳನ್ನು ನಡೆಸುವುದರಲ್ಲಿ ನನಗೆ ಉತ್ಸಾಹ ಕಡಿಮೆಯಾಗಿರಲಿಲ್ಲ.

1959ರ ಫೆಬ್ರವರಿಯಲ್ಲಿನ ವಸೂಲಿಗಾಗಿ ಗ್ರಾಮಾಧಿಕಾರಿಗಳ ಸಭೆಯನ್ನು ಕರೆದು ಹೆಚ್ಚಾಗಿ ವಸೂಲಿ ಮಾಡಲು ತಗಾದೆ ಮಾಡುತ್ತಿದ್ದೆ. ಅದಕ್ಕೆ ಅವರು ಓಗೊಟ್ಟು ಹೆಚ್ಚು ಹೆಚ್ಚು ವಸೂಲಿ ಮಾಡಿ ಹಿಂದಿನ 10 ವರ್ಷಗಳಲ್ಲಿ ಯಾವತ್ತೂ ಗಳಿಸದಷ್ಟು ಹೆಚ್ಚಾಗಿ ಕಂದಾಯವನ್ನು ವಸೂಲಿ ಮಾಡಿ ಜಿಲ್ಲೆಯಲ್ಲಿ ಮೊದಲನೆಯ ತಾಲ್ಲೂಕಾಗಿ ಮಾಡಲು ಸಾಹಸ ಮಾಡಿದೆ. ಇದಕ್ಕಾಗಿ ನನ್ನ ಜೊತೆ ಸಹಕರಿಸಿದ ಎಲ್ಲಾ ಗ್ರಾಮಾಧಿಕಾರಿಗಳಿಗೂ ನನ್ನ ಕೃತಜ್ಞತೆಗಳನ್ನು ಅರ್ಪಿಸಿದೆ. ಇಷ್ಟೆಲ್ಲಾ ಕಷ್ಟಪಟ್ಟು ಕೆಲಸ ಮಾಡಿದರೂ ಕೂಡ ಜಿಲ್ಲಾಧಿಕಾರಿಗಳ ಹಾಗೂ ಸಬ್‌ಡಿವಿಜನ್ ಆಫೀಸರ್ ಪ್ರೀತಿ ವಿಶ್ವಾಸವನ್ನು ಗಳಿಸಲು ಸಾಧ್ಯವಾಗಲಿಲ್ಲ. ಅವರಿಗೂ ನನಗೂ ಸರಿ ಬೀಳಲೇ ಇಲ್ಲ. ಈ ಮಧ್ಯೆ 1959ರ ಮಾರ್ಚಿಯಲ್ಲಿ ಡಿವಿಜನಲ್ ಕಮೀಷನರ್‌ರಾಗಿದ್ದ ಶ್ರೀ ರೆಬೆಲೋ ಸಾಹೇಬರು ನಮ್ಮ ತಾಲ್ಲೂಕಿಗೆ ಇನ್ಸ್‌ಪೆಕ್ಷನ್‌ಗಾಗಿ ಬಂದರು. ಹಿಂದೆ ತಾಲ್ಲೂಕು ಆಫೀಸ್‌ಗೆ ಇನ್ಸ್‌ಪೆಕ್ಷನ್‌ಗೆ ಬಂದಾಗ ಈ ತಾಲ್ಲೂಕಿನ ವಸೂಲಿ ಕಡಿತದ ವಿಲೇವಾರಿ ಪರಿಸ್ಥಿತಿ ಚೆನ್ನಾಗಿಲ್ಲವೆಂದು ತಿಳಿದಿದ್ದು ರೆವಿನ್ಯೂ ಮಂತ್ರಿಗಳೇ ನಾನು ಹೋದ ಮೇಲೆ ಎಷ್ಟರ ಮಟ್ಟಿಗೆ ಪ್ರಗತಿಯಾಗಿದೆ ಎಂಬುದನ್ನು ತಿಳಿದುಕೊಂಡು ಬರಲು ಕಳುಹಿಸಿರಬಹುದೆಂದು ನನಗೆ ಅನುಮಾನ ಬಂತು. ರೆಬೆಲೋ ಸಾಹೇಬರು ಬೆಳಗ್ಗೆ 9 ಗಂಟೆಗೆ ತಾಲ್ಲೂಕು ಕಚೇರಿಗೆ ದಯಮಾಡಿಸಿ ಸುಮಾರು ಮಧ್ಯಾಹ್ನ 2 ಗಂಟೆಗಳ ವರೆಗೂ ತಾಲ್ಲೂಕಿನ ಎಲ್ಲಾ ಭಾಗಗಳ ರಿಜಿಸ್ಟರ್‌ಗಳನ್ನು ನೋಡಿ Disposal is very good; collections also satisfactoryly improved ಎಂದು ತಾಲ್ಲೂಕು ಆಫೀಸಿನ ಎಲ್ಲಾ ಸಿಬ್ಬಂದಿಯವರ ಮುಂದೆ ಅಪ್ಪಣೆ ಕೊಡಿಸಿದರು.

ನಾನೇ ಈ ಜಿಲ್ಲೆಗೆ ವಸೂಲಿಯಲ್ಲಿ ಮೊದಲನೆಯವನು ಎಂದು ಸಾಹೇಬರಿಗೆ ಮನವರಿಕೆಯಾಯಿತು. ಹಿಂದಿನ 10–15 ವರ್ಷಗಳಿಂದಲೂ ಈ ಪರಿಸ್ಥಿತಿ ಇರಲಿಲ್ಲ. ಅನಂತರ ಟಿ.ಬಿ.ಯಲ್ಲಿ ಊಟ ಮುಗಿಸಿಕೊಂಡು ಬೆಂಗಳೂರಿಗೆ ಹೋದರು. ನಾನೂ ಕೂಡ ಅವರ ಜೊತೆಯಲ್ಲಿ ದಾವಣಗೆರೆಯ ಗಡಿಯವರೆಗೂ ಜೊತೆಯಲ್ಲಿದ್ದೆ. ಅವರು ಹೋಗುವಾಗ ನನ್ನ ಕೆಲಸದ ವಿಚಾರದಲ್ಲಿ ಬಹಳ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ನಾನು ವಾಪಸ್ ಬಂದೆ. ಇದಾದ ಸುಮಾರು 15 ದಿವಸಗಳ ನಂತರ ನನ್ನನ್ನು ಬೆಂಗಳೂರು ಸಿಟಿಗೆ ಆಹಾರ ಇಲಾಖೆಗೆ ವಿಶೇಷ ತಹಸೀಲ್ದಾರ್‌ರಾಗಿ ನೇಮಕವಾಗಿದೆ ಯೆಂದು ನನಗೆ ಆದೇಶ ಬಂತು. ನನಗೆ ಈ ಆದೇಶ ನೋಡಿ ಎಲ್ಲಿಲ್ಲದ ಸಂತೋಷ ವಾಯಿತು.

1957–58ರ ಸಾಲುಗಳಲ್ಲಿ ನಾನು ದೇವನಹಳ್ಳಿ ಅಮಲ್ದಾರ್ ಆಗಿದ್ದಾಗ ಡಿ.ಸಿ. ಆಗಿದ್ದ ಶ್ರೀ ಚನ್ನರುದ್ರಯ್ಯನವರು 1959ರಲ್ಲಿ ಡೈರೆಕ್ಟರ್ ಆಫ್ ಫುಡ್ ಸಪ್ಲೈಸ್ ಆಗಿದ್ದರು. ಅದೇ ವರ್ಷದಲ್ಲಿ ಸಕ್ಕರೆ ಪಡಿತರ ವ್ಯವಸ್ಥೆ ಜಾರಿಗೆ ಬಂತು. ಹಿಂದೆ ಆಹಾರ ಇಲಾಖೆಯಲ್ಲಿದ್ದು ಸೇವೆ ಮಾಡಿದ್ದ ನನಗೆ ಹೆಚ್ಚು ಅನುಭವ ಹಾಗೂ

ಜನಪ್ರಿಯತೆಯೂ ಕೂಡ ಇತ್ತು. ಅಲ್ಲದೆ ಆಹಾರ ಇಲಾಖಾ ನಿರ್ದೇಶಕರಾದ ಚನ್ನರುದ್ರಯ್ಯನವರಿಗೆ ನನ್ನ ಮೇಲೆ ಹೆಚ್ಚು ಅಭಿಮಾನವಿತ್ತು. ಈ ಕಾರಣಗಳಿಂದ ಅವರು ಕೂಡಲೇ ನನ್ನ ಸರ್ವಿಸನ್ನು ಆಹಾರ ಇಲಾಖೆಗೆ ಕೊಡಬೇಕೆಂದು ಡಿವಿಜನಲ್ ಕಮೀಷನರ್‌ರವರಾದ ಶ್ರೀ ರೆಬೆಲೋರವರಿಗೆ ಪತ್ರ ಬರೆದರು. ಅದನ್ನು ಅನುಸರಿಸಿ ಸರ್ಕಾರದ ಅಪ್ಪಣೆ ಇಲ್ಲದೆಯೇ ಅವರು ನನ್ನ ವರ್ಗ ಮಾಡಿದರು ಎಂದು ಅನಂತರ ಗೊತ್ತಾಯಿತು. ಆದರೆ ಡಿವಿಜನಲ್ ಕಮೀಷನರ್‌ರವರು ಚಿತ್ರದುರ್ಗ ಜಿಲ್ಲಾಧಿಕಾರಿಗಳಿಗೆ ಹೊರಡಿಸಿದ ನನ್ನ ವರ್ಗಾವಣೆಯ ಆದೇಶವನ್ನು ಒಪ್ಪಿ ನನ್ನನ್ನು ಅಲ್ಲಿಂದ ಬಿಡುಗಡೆ ಮಾಡಲು ಏಕೋ ಏನೋ ವಿಳಂಬ ಮಾಡಿದರು. ಆದರೆ ನನ್ನ ಸುದೈವ, ಆ ಜಿಲ್ಲಾಧಿಕಾರಿಗಳಿಗೂ ಬೇರೆ ಕಡೆಗೆ ವರ್ಗವಾಯಿತು. ಹೊಸದಾಗಿ ಬಂದ ಜಿಲ್ಲಾಧಿಕಾರಿಗಳು ನನಗೆ ಹೆಚ್ಚು ಪರಿಚಯವಿದ್ದ ಶ್ರೀ ಎಂ. ಕೆ. ವೆಂಕಟೇಶ್, ಐ.ಎ.ಎಸ್. ರವರು ಚಾರ್ಜ್ ತೆಗೆದುಕೊಂಡ ಕೂಡಲೆ ತಹಸೀಲ್ದಾರ್ ಸಭೆ ಕರೆದು ಸಭೆಯಲ್ಲಿ ಒಬ್ಬೊಬ್ಬರನ್ನೂ ಪರಿಚಯ ಮಾಡಿಕೊಳ್ಳುತ್ತಿದ್ದರು. ನನ್ನ ಸರದಿ ಬಂದಾಗ "ಏನು ಪುಟ್ಟನರಸಯ್ಯ ನೀವು ಎಲ್ಲಿದ್ದೀರಿ, ಎಲ್ಲಿ ಯಾವ ತಾಲ್ಲೂಕಿನಲ್ಲಿದ್ದೀರಿ" ಎಂದು ಕೇಳಿದರು. ಅವರ ತಂದೆಯವರಾದ ಶ್ರೀ ಕೃಷ್ಣಮೂರ್ತಿಯವರಿಗೂ ನನಗೂ ತುಂಬಾ ಸ್ನೇಹ. ಅದು ನಾನು 1943ರಲ್ಲಿ ವಿಶ್ವೇಶ್ವರಪುರಂನಲ್ಲಿ ಫುಡ್ ಇನ್ಸ್‌ಪೆಕ್ಟರ್‌ರಾಗಿದ್ದಾಗ ಅವರು ಫೋರ್ಟ್ ಹೈಸ್ಕೂಲ್‌ನ ಹೆಡ್‌ಮಾಸ್ಟರ್‌ರಾಗಿದ್ದರು. ಅವರ ಮನೆಗೆ ಆಗಾಗ್ಗೆ ಹೋಗುತ್ತಿದ್ದೆ. ನಾನು ನನ್ನ ಸರದಿ ಬಂದಾಗ ಸಧ್ಯದಲ್ಲಿ ನಾನು ಜಗಳೂರಿನಲ್ಲಿದ್ದೇನೆ ಎಂದು ಮಾತ್ರ ಹೇಳಿದೆ. ಸಭೆ ಮುಗಿದ ಮೇಲೆ ನನ್ನ ವರ್ಗಾವಣೆಯ ವಿಷಯವನ್ನು ಅವರಿಗೆ ತಿಳಿಸಿದೆ. ಕೂಡಲೆ ಅವರು ನನಗೆ ರಿಲೀವ್ ಆರ್ಡರ್ ಕೊಟ್ಟು ಸಂತೋಷದಿಂದ ಬೀಳ್ಕೊಟ್ಟರು. ಅನಂತರ ನಾನು ಕೂಡಲೆ ಬೆಂಗಳೂರಿಗೆ ಬಂದೆ. ಬಂದ ಕೂಡಲೆ ಬೆಂಗಳೂರಿನ ವಿಭಾಗಾಧಿಕಾರಿಗಳಾದ ಶ್ರೀ ರೆಬೆಲೋ ಸಾಹೇಬರನ್ನು ನೋಡಿ ನನ್ನ ಅಭಿನಂದನೆಗಳನ್ನು ಸಲ್ಲಿಸಿದೆ. ಅನಂತರ ಡೈರೆಕ್ಟರ್ ಆಫ್ ಫುಡ್ ಸಪ್ಲೈಸ್ ಶ್ರೀ ಚನ್ನರುದ್ರಯ್ಯನವರನ್ನು ಕಂಡು ಅಲ್ಲಿ ಚಾರ್ಜ್ ತೆಗೆದುಕೊಂಡು ಅವರಿಗೂ ನನ್ನ ವಂದನೆಗಳನ್ನು ಸಲ್ಲಿಸಿ ನನ್ನ ಕೆಲಸವನ್ನು ಪ್ರಾರಂಭಿಸಿದೆ. ಹೀಗೆ ಇಲ್ಲಿ ನಾನು 1960 ರವರೆಗೂ ಕಷ್ಟಪಟ್ಟು 8–10 ಗಂಟೆಗಳ ಕಾಲ ಕೆಲಸ ಮಾಡುತ್ತಿದ್ದೆ. ಪ್ರಾತಃಕಾಲ ಎರಡೂ ಗೋಡೌನ್‌ಗಳ ಚಾರ್ಜ್, ಮಧ್ಯಾಹ್ನ 2 ಗಂಟೆಯಿಂದ ರಾತ್ರಿ 8–9 ಗಂಟೆ ವರೆಗೂ ಸ್ಪೆಷಲ್ ತಹಸೀಲ್ದಾರ್ ಆಗಿ ಅಸಿಸ್ಟೆಂಟ್ ಡೈರೆಕ್ಟರ್ ಆಫ್ ಫುಡ್ ಸಪ್ಲೈಸ್ ಆಫೀಸಿನಲ್ಲಿ ಕೆಲಸ ಮಾಡಿಕೊಂಡು ಇದ್ದೆ. ಶ್ರೀ ರೆಬೆಲೋ ಸಾಹೇಬರು ಹಾಗೂ ಶ್ರೀ ಡಿ. ಆರ್. ಚನ್ನರುದ್ರಯ್ಯನವರುಗಳು ನನ್ನನ್ನು ಸದಾ ಪ್ರೋತ್ಸಾಹಿಸಿ ಪ್ರೀತಿ ವಿಶ್ವಾಸದಿಂದ ಕಾಣುತ್ತಿದ್ದರು. ಅವರುಗಳನ್ನು ನಾನು ಯಾವಾಗಲೂ ಸ್ಮರಿಸುತ್ತಾ ಇರುತ್ತೇನೆ. ಅವರುಗಳು ನನಗೆ ಸದಾ ಪ್ರಾತಃಸ್ಮರಣೀಯರು.

1960ನೇ ಅಕ್ಟೋಬರ್ ತಿಂಗಳಲ್ಲಿ ಶ್ರೀ ಕಡಿದಾಳ ಮಂಜಪ್ಪನವರು ರೆವಿನ್ಯೂ ಮಂತ್ರಿಗಳಾಗಿದ್ದ ಕಾಲ. ಅವರ ಪರಿಚಯವಿತ್ತು ಎಂಬುದನ್ನು ನಾನು ಈಗಾಗಲೇ ಹೇಳಿದ್ದೇನೆ. ಅದೇ ಅವಧಿಯಲ್ಲಿ ನನಗೆ ಬಡ್ತಿ ಸಿಕ್ಕಿ ನನ್ನನ್ನು ಬೆಂಗಳೂರು ಸಬ್ ಡಿವಿಜನ್ ಆಫೀಸರ್ ಆಗಿ ನೇಮಿಸಿದ್ದರು. ಇಲ್ಲಿಯೂ ಸಹ ಮೊದಲಿನಂತೆಯೇ ಹೆಚ್ಚು ಶ್ರದ್ಧೆಯಿಂದ ವಸೂಲಿ ಕೆಲಸ ಹಾಗೂ ಕಡತಗಳ ವಿಲೇವಾರಿಯನ್ನು ಮಾಡುತ್ತಿದ್ದೆ. ಈ ಡಿವಿಜನ್ನಿನಲ್ಲಿ ಕೆಲಸ ಮಾಡುವಾಗ ಅನೇಕ ಮಹೋದಯರು, ಶಾಸಕರು ಹಾಗೂ ಮೇಲಾಧಿಕಾರಿಗಳೊಂದಿಗೆ ಹೆಚ್ಚು ಹೆಚ್ಚು ಸಂಪರ್ಕ ದೊರಕಿತು.

1962ರಲ್ಲಿ ನನ್ನನ್ನು ನಾಗಪುರದಲ್ಲಿರುವ ಮಿಲಿಟರಿ ಕಮಾಂಡೆಂಟ್ ತರಬೇತಿಗೆ ಕಳುಹಿಸಿದರು. ಆಗಿನ ಕಾಲದಲ್ಲಿ ಅದು ಎಲ್ಲಾ ಅಸಿಸ್ಟೆಂಟ್ ಕಮೀಷನರ್‌ಗಳಿಗೂ ಕಡ್ಡಾಯವಾಗಿ ಪಡೆಯಬೇಕಾಗಿತ್ತು. ತರಬೇತಿ 2 ತಿಂಗಳು ಕಾಲ. ಅದನ್ನು ಯಶಸ್ವಿಯಾಗಿ ಮುಗಿಸಿ ಸರ್ಟಿಫಿಕೇಟ್ ಪಡೆದು ಬೆಂಗಳೂರು ಸಬ್ ಡಿವಿಜನ್ನಿಗೆ ವಾಪಸ್ ಬಂದೆ. ಈ ಮಧ್ಯೆ ಬೆಂಗಳೂರು ಉತ್ತರ ತಾಲ್ಲೂಕಿನಲ್ಲಿ ಶ್ರೀ ಕರಿಯಪ್ಪ ಎಂಬುವರು ತಹಸೀಲ್ದಾರ್‌ರವರಿದ್ದರು. ಅವರ ಸ್ಥಾನಕ್ಕೆ ಆಗಿನ ಮಂತ್ರಿಗಳಾಗಿದ್ದ ಶ್ರೀ ವೀರಣ್ಣ ಗೌಡರ ಆಪ್ತ ಕಾರ್ಯದರ್ಶಿ ಶ್ರೀ ಎನ್. ಟಿ. ರಾಮಸ್ವಾಮಿಗೌಡ ಎಂಬುವರನ್ನು ನೇಮಿಸಿದರು. ಇವರು ಸರ್ಕಾರದ ಕೆಲಸಗಳನ್ನು ತುಂಬಾ ಅಲಕ್ಷ್ಯದಿಂದ ಮಾಡುತ್ತಿದ್ದರಲ್ಲದೆ ಬೆಂಗಳೂರು ಸಿಟಿ ಹಾಗೂ ಸುತ್ತಮುತ್ತಲಿನ ಗ್ರಾಮಗಳ ಸರ್ಕಾರಿ ಜಾಗಗಳನ್ನು ತಮ್ಮ ಸಂಬಂಧಿಗಳಿಗೆ, ಹಿತೈಷಿಗಳಿಗೆ, ಸ್ನೇಹಿತರಿಗೆ, ಎಂ.ಪಿ., ಎಂ.ಎಲ್.ಎ.ಗಳಿಗೆ ದರಕಾಸ್ತು ಮೂಲಕ ವಿಲೇ ಮಾಡಲು ಪ್ರಯತ್ನ ನಡೆಸುವ ಕಾರ್ಯಕ್ರಮದಲ್ಲಿ ಹೆಚ್ಚು ಆಸಕ್ತಿ ವಹಿಸಲು ಪ್ರಾರಂಭಿಸಿದರು. ದಕ್ಷಿಣ ತಾಲ್ಲೂಕಿನ ತಹಸೀಲ್ದಾರ್‌ರವರಿಗೂ ಸಹ ಅವರ ತಾಲ್ಲೂಕಿನ ಖಾಲಿ ಸರ್ಕಾರಿ ಜಾಗಗಳನ್ನು ಹುಡುಕಿ ಅವರಿಗೆ ತಿಳಿಸುವಂತೆ ಹೇಳುತ್ತಿದ್ದರಂತೆ. ಈ ರೀತಿಯ ರಿಕಾರ್ಡ್‌ಗಳು ನನಗೆ ಹೆಚ್ಚಿಗೆ ಬರುವುದು ಪ್ರಾರಂಭವಾಯಿತು. ನಾನು Index of land (ಕೇತುವಾರುಗಳು) ಗಳನ್ನು ತರಿಸಿ ನೋಡಿದೆ ಈಗ ಈ ತಹಸೀಲ್ದಾರ್‌ಗಳಿಂದ ಶಿಫಾರಸ್ಸಾಗಿ ಬಂದಿರುವ ಜಮೀನುಗಳು ಹಿಂದೆಯೇ ಹತ್ತು – ಹನ್ನೆರಡು ಬಾರಿ ಸರ್ಕಾರದಿಂದ ಅನೇಕ ಕಾರಣದಿಂದಾಗಿ ಮುಖ್ಯವಾಗಿ ಗೋಮಾಳ ಕಮ್ಮಿ ಇರುವುದರಿಂದ ಕ್ಯಾನ್ಸಲ್ ಆಗಿರುವುದು ಬೇತಾವಾರಿನಲ್ಲಿ ದಾಖಲೆಗಳಿದ್ದವು. ಈ ವಿಚಾರವಾಗಿ ಎರಡು ಮೂರು ಬಾರಿ ಸಂಬಂಧಪಟ್ಟ ತಹಸೀಲ್ದಾರ್‌ರವರನ್ನು ಕರೆಸಿ ತಿಳಿಸಿದೆ. ಆದರೂ ಕೂಡ ನನ್ನ ಮಾತಿಗೆ ಬೆಲೆ ಕೊಡದೆ ಇನ್ನು ಹೆಚ್ಚಿನ ಮಟ್ಟದಲ್ಲಿ ಈ ರಿಕಾರ್ಡ್‌ಗಳನ್ನು ಅವರಿಗೆ ಇಷ್ಟ ಬಂದವರಿಗೆ, ಹಿತೈಷಿಗಳಿಗೆ ಶಿಫಾರಸ್ಸು ಮಾಡುವುದು ಕಂಡು ಬಂತು. ನನಗೆ ಎಲ್ಲಿಲ್ಲದ ಬೇಸರ ಉಂಟಾಗಿ ನಾನು ನನ್ನ ಅಧೀನದಲ್ಲಿರುವ ಇಬ್ಬರು ತಹಸೀಲ್ದಾರ್‌ಗಳಿಗೂ ಒಂದು ಸುತ್ತೋಲೆಯನ್ನು ಕಳುಹಿಸಿದೆ.

Whatever the Gomala is insufficient in where the extent of Gomala is less than 30 acres for every 100 heads of Cattle and when Dharkast of these lands have been previously rejected by the government for one or the other reason several times. It is not necessary for the Tahsildar to get the records buildup pressing for the same land and send recommendation knowing full well that the grant for these lands will be again rejected by the government, such Dharkast application need not be entertained and even if they are entertained the parties may be informed and suitable endorsement be issued to them where by the times and energy of the R.I. and Village Officers may be saved and the same be utilised for other revenue work such as collection of L. R.—V. P. taxes and buildup records in other missing cases etc.

The two Tahsildars are therefore requested not to build fresh records for such lands hereafter and send them to this office.

ಈ ಸುತ್ತೋಲೆಯಿಂದ ಬೆಂಗಳೂರು ಉತ್ತರ ತಾಲ್ಲೂಕಿನ ತಹಸೀಲ್ದಾರ್ ರಾಮಸ್ವಾಮಿಗೌಡರಿಗೆ ಕಿರಿಕಿರಿಯಾಗಿರಬಹುದು. ಅವರು ನನ್ನೊಡನೆ ಸೇರುವುದನ್ನು ನಿಲ್ಲಿಸಿದರು. ಅಲ್ಲದೆ ನನ್ನೊಡನೆ ಮಾತನಾಡುವುದನ್ನೂ ನಿಲ್ಲಿಸಿದರು. ಕಡೆಯಲ್ಲಿ ಆಗಿನ ಜಿಲ್ಲಾಧಿಕಾರಿಯಾಗಿದ್ದ ಶ್ರೀ ಬಿ. ಎಸ್. ಹನುಮಾನ್‌ರೊಡನೆ ಈ ವಿಚಾರವನ್ನು ಪ್ರಸ್ತಾಪ ಮಾಡಿರಬಹುದೆಂದು ತಿಳಿದು ಬಂತು.

ಒಂದು ದಿನ ಡಿ.ಸಿ.ಯವರು ನನ್ನನ್ನು ಮತ್ತು ಇಬ್ಬರು ತಹಸೀಲ್ದಾರ್‌ರನ್ನು ಈ ವಿಚಾರವಾಗಿ ಮಾತನಾಡಲು ಕರೆಸಿದರು. ನನ್ನ ಜೊತೆಯಲ್ಲಿ ಆಗ ಡಿ.ಸಿ. ಯವರ ಹೆಡ್‌ಕ್ವಾರ್ಟರ್ಸ್ ಅಸಿಸ್ಟೆಂಟ್ ಶ್ರೀ ಶಂಕರಪ್ಪನವರೂ ಬಂದಿದ್ದರು. ನಾನು ಜಿಲ್ಲಾಧಿಕಾರಿಗಳಿಗೆ ತಿಳಿಸಿದೆ. ಈಗ ನಡೆಯುತ್ತಿರುವುದು ನನಗಂತೂ ಸರಿಯಾಗಿ ಕಾಣು ಬರಲಿಲ್ಲ. ಒಂದು ಜಮೀನಿಗೆ ಸರ್ಕಾರದವರು ಈಗಾಗಲೇ 10–12 ಬಾರಿ ದರಕಾಸ್ತು ವಜಾ ಮಾಡಿದ್ದರೂ ಸಹ ಪದೇ ಪದೇ ಅದೇ ಜಮೀನಿಗೆ ಈ ಅಮಲ್ದಾರ್‌ರವರು ದರಕಾಸ್ತು ಅರ್ಜಿಗಳನ್ನು ಪಡೆದು ಅವರಿಗೆ ಸೂಕ್ತ ಎಂಡಾರ್ಸ್‌ಮೆಂಟ್ ಕೊಡುವುದರ ಬದಲು ರೆವಿನ್ಯೂ ಇನ್ಸ್‌ಪೆಕ್ಟರ್‌ಗೆ ಅರ್ಜಿ ಕಳುಹಿಸಿ ಅವರಿಂದ ರಿಕಾರ್ಡ್‌ಗಳನ್ನು ಪುನಃ ಸಿದ್ಧಪಡಿಸುವುದು ಮತ್ತು ನನಗೆ ಶಿಫಾರಸ್ಸು ಮಾಡುವುದು. ಇದು ಸರಿಯೇ. ನಾನಂತೂ ಇಂತಹ ಕಡತಗಳನ್ನು ವಾಪಾಸ್ ಕಳುಹಿಸುತ್ತಿದ್ದೇನೆ ಎಂದು ತಿಳಿಸಿದೆ. ಅಲ್ಲದೆ ತಾಪ್ಪೂ

ಕೂಡ ಇದನ್ನು ತಿರಸ್ಕರಿಸಬೇಕಾಗುತ್ತದೆ. ಅಕಸ್ಮಾತ್ ತಾವು ಸರ್ಕಾರಕ್ಕೆ ಇಂತಹ ಕಡತಗಳನ್ನು ಕಳುಹಿಸಿದರೆ ಅಲ್ಲಿಯೂ ಕೂಡ ಇವು ತಿರಸ್ಕೃತವಾಗುತ್ತವೆ. ಹೀಗೆ ಮಾಡುವುದರಿಂದ ವೃಥಾ ಕಾಲವ್ಯಯ ಹಾಗೂ ರೆವಿನ್ಯೂ ಇನ್ಸ್‌ಪೆಕ್ಟರ್‌ಗಳಿಗೆ ಅನಗತ್ಯವಾದ ಕಾರ್ಯದ ಒತ್ತಡವಾಗುವುದಲ್ಲದೆ ಅವರು ಅದೇ ವೇಳೆಯನ್ನು ಬೇರೆ ಕೆಲಸ, ಕಾಗದ ವಿಲೇವಾರಿ ಮಾಡಿಕೊಳ್ಳುವುದಕ್ಕೆ ತೊಂದರೆಯಾಗುತ್ತದೆ ಎಂದು ಬಹಳ ವಿನಯದಿಂದ ತಿಳಿಸಿದೆ. ಶ್ರೀ ಶಂಕರಪ್ಪನವರು ಸಹ ನನ್ನ ವಾದವನ್ನು ತುಂಬು ಹೃದಯದಿಂದ ಸ್ವಾಗತಿಸಿ ಅನುಮೋದಿಸಿದರು. ಆದರೆ ಅಮಲ್ದಾರ್ ರಾಮಸ್ವಾಮಿ ಗೌಡರು ಬೇರೆ ಮಾರ್ಗವಲ್ಲಿ ಅಂದರೆ ಈ ಪದ್ಧತಿಯನ್ನು ಅನುಸರಿಸಿದರೆ ಅಮಲ್ದಾರ್‌ರವರು ದರಕಾಸ್ತು ಅರ್ಜಿ ಸ್ವೀಕರಿಸುವ ಅಧಿಕಾರವನ್ನು ಕಳೆದುಕೊಂಡ ಹಾಗೆ ಆಗುತ್ತದೆ ಎಂದು ವಾದಿಸಿದರು. ಪಾಪ ಬೆಂಗಳೂರು ದಕ್ಷಿಣ ತಾಲ್ಲೂಕಿನ ತಹಸೀಲ್ದಾರ್‌ರಾದ ಶ್ರೀ ಗೋಪಾಲಶೆಟ್ಟರು ಎಲ್ಲವನ್ನೂ ಕೇಳುವುದರಲ್ಲೇ ಕಾಲ ಕಳೆದರು.

ಅದಕ್ಕೆ ನಾನು ಈ ರೀತಿ ಹೇಳಿದೆ ದರಕಾಸ್ತು ಅರ್ಜಿಗಳು ಬಂದ ಕೂಡಲೆ ಇಂಡೆಕ್ಸ್ ಮತ್ತು ಲ್ಯಾಂಡ್ ರಿಜಿಸ್ಟರ್‌ನಲ್ಲಿ ಸರ್ಕಾರದಿಂದ ಈಗಾಗಲೇ ಈ ಜಮೀನಿನ ದರಕಾಸ್ತು ವಜಾ ಆಗಿರುವ ವಿಚಾರ ಪರಿಶೀಲಿಸಿ ಸೂಕ್ತ ಎಂಡಾರ್ಸ್‌ಮೆಂಟ್ ಕೊಟ್ಟು ವಿಲೇವಾರಿ ಮಾಡುವುದು ಒಳ್ಳೆಯದು ಎಂದು ತಿಳಿಸಿದೆ. ಆದರೆ ಡಿ.ಸಿ.ಯವರು ಮಾತ್ರ ಇದಕ್ಕೆ ಏನೂ ಹೇಳದೆ ಸುಮ್ಮನೆ ಕುಳಿತರು. ಮತ್ತೆ ಪರಿಶೀಲಿಸಿ ಸೂಕ್ತ ಆರ್ಡರ್ ಕಳುಹಿಸಿ ಕೊಡುವುದಾಗಿ ಹೇಳಿ ನಮ್ಮನ್ನೆಲ್ಲಾ ಬೀಳ್ಕೊಟ್ಟರು.

ನಾನು 4 ವರ್ಷಗಳ ಕಾಲ ಬೆಂಗಳೂರು ಸಬ್‌ಡಿವಿಜನ್ ಆಫೀಸರ್‌ರಾಗಿದ್ದಾಗ ನನಗೆ ಬೆಂಗಳೂರು ಉತ್ತರ ಹಾಗೂ ದಕ್ಷಿಣ ಮತ್ತು ಬೆಂಗಳೂರು ಸಿಟಿ ಸೇರಿದ್ದವು. ಈ ಎರಡೂ ತಾಲ್ಲೂಕುಗಳ ಸುಮಾರು 100 ಗ್ರಾಮಗಳು ಸಿಟಿ ಸರಹದ್ದುಗಳಲ್ಲಿದ್ದು, ರಾಜಾಜಿನಗರ, ಜಯನಗರ, ಬಸವೇಶ್ವರನಗರ, ವೈಯಾಲಿಕಾವಲ್, ಗಂಗೇನಹಳ್ಳಿ, ಜೆ.ಪಿ. ನಗರ ಎಂದು ಕರೆಯುವ ಅನೇಕ ಬಡಾವಣೆಗಳಾಗಿವೆ. ಈ ಹಳ್ಳಿಗಳ ಗೋಮಾಳದ ಜಮೀನುಗಳೆಲ್ಲಾ ಬಡಾವಣೆಗಳಾಗಿರುತ್ತವೆ. ನಾನು ಬೇಕಾದರೆ 10-20 ಎಕರೆ ಗೋಮಾಳದ ಜಮೀನನ್ನು ದರಕಾಸ್ತು ಮೂಲಕ ಪಡೆಯಬಹುದಾಗಿತ್ತು. ಆದರೆ ನನಗೆ ಸಲ್ಲಬೇಕಾಗಿದ್ದನ್ನು ಭಗವಂತನು ಕೊಟ್ಟಿದ್ದಾನೆ. ಹೆಚ್ಚಿಗೆ ಆಸೆ ಪಡುವುದು ಮಹಾಪಾಪ ಎಂದು ತಿಳಿದಿದ್ದವನು ನಾನು.

ಒಂದು ದಿನ ನಾನು ಬೆಂಗಳೂರು ಸಬ್‌ಡಿವಿಜನ್ ಆಫೀಸರ್‌ರಾಗಿದ್ದಾಗ ಸುಮಾರು 1962ರಲ್ಲಿ ರಾಮನಗರದ ಸಬ್‌ಡಿವಿಜನ್ ಇನ್‌ಚಾರ್ಜ್ ಕೂಡ ನಾನೇ ಇದ್ದೆ. ಆಗ ನನ್ನ ಆತ್ಮೀಯ ಸ್ನೇಹಿತರಾದ ಚನ್ನಪಟ್ಟಣದ ಶ್ರೀ ಕೆ. ಗುಂಡಪ್ಪನವರು ಬಂದು ನನ್ನನ್ನು ಚನ್ನಪಟ್ಟಣ ತಾಲ್ಲೂಕಿನಲ್ಲಿ ಅವರ ಹಳ್ಳಿಯಲ್ಲಿ (ಜಾತ್ರೆಯ ಹೆಸರನ್ನು ಮರೆತಿದ್ದೇನೆ) ನಡೆಯುವ ದನಗಳ ಜಾತ್ರೆಗೆ ದಯಮಾಡಿಸಿ ಉತ್ತಮ ರಾಸುಗಳಿಗೆ ಬಹುಮಾನ ವಿತರಣೆ

ಮಾಡಬೇಕೆಂದು ಕೇಳಿಕೊಂಡರು. ನಾನೂ ಸಂತೋಷದಿಂದ ಒಪ್ಪಿಕೊಂಡು ಆ ದಿವಸ ನಾನು ಚನ್ನಪಟ್ಟಣಕ್ಕೆ ನನ್ನ ಬಳಿ ಇದ್ದ ಮಾರ್ರಿಸ್ ಮೈನರ್ ಕಾರಿನಲ್ಲಿ ಸುಮಾರು ಮಧ್ಯಾಹ್ನ 2 ಗಂಟೆಗೆ ಬೆಂಗಳೂರನ್ನು ಬಿಟ್ಟೆನು. ನನ್ನ ಕಾರನ್ನು ಡ್ರೈವರ್ ಬಾಲಕೃಷ್ಣ ಎಂಬುವನು ಡ್ರೈವ್ ಮಾಡುತ್ತಿದ್ದನು. ನಾನು ಹಿಂದಿನ ಸೀಟಿನಲ್ಲಿ ಕುಳಿತಿದ್ದೆ. ಸುಮಾರು ಕೆಂಗೇರಿ ಬಳಿಯಿಂದ ನಾನು ಅರೆ ನಿದ್ರೆಯಲ್ಲಿದ್ದೆ ಮುಂದೆ ಡ್ರೈವರ್ ಕಾರು ಓಡಿಸುತ್ತಿದ್ದ. ರಾಮನಗರಕ್ಕೆ ಅತಿ ಸಮೀಪದಲ್ಲಿರುವ "ಮಾಂಡ್ರೆ ಹೆಂಚಿನ ಫ್ಯಾಕ್ಟರಿ" ಬಳಿ ಇದ್ದಕ್ಕಿದ್ದ ಹಾಗೆ ಡ್ರೈವರ್ ಕಾರನ್ನು ಬಲಗಡೆಗೆ ಚಲಿಸಿ ಸ್ಥಳದಲ್ಲೇ ರಸ್ತೆಯಲ್ಲಿ ರಾಮನಗರಕ್ಕೆ ಹೋಗುತ್ತಿದ್ದವರ ಮೈ ಮೇಲೆ ಹೋಗಿ ಸುಮಾರು 2 ಜನರ ಸಾವಿಗೆ ಕಾರಣನಾದ. ಕಾರು ಒಂದು ಮರದ ಹತ್ತಿರದಲ್ಲಿ ಬಂದು ನಿಂತಿತು. ಪಕ್ಕದಲ್ಲೇ ಅಂದರೆ 3-4 ಅಂಗುಲ ಅಂತರದಲ್ಲಿ ಒಂದು ದೊಡ್ಡ ಕಟ್ಟೆ ಇತ್ತು ; ಕಟ್ಟೆ ತುಂಬಾ ನೀರಿತ್ತು. ಅದೃಷ್ಟವಶಾತ್ ನನಗಾಗಲಿ ಡ್ರೈವರ್ ಬಾಲಕೃಷ್ಣನಿಗಾಗಲಿ ಏನೂ ತೊಂದರೆಯಾಗಲಿಲ್ಲ. ಕಾರಿಗೂ ಯಾವ ಜಖಂ ಆಗಲಿಲ್ಲ. ಇದನ್ನು ನಾನು ನನ್ನ ಜೀವನದಲ್ಲೇ ಮರೆಯುವ ಹಾಗಿಲ್ಲ. ದೇವರ ದಯೆಯಿಂದ ಆ ಕೇಸಿನಲ್ಲಿ ಡ್ರೈವರ್ ಬಾಲಕೃಷ್ಣನ ಮೇಲಿದ್ದ ಕ್ರಿಮಿನಲ್ ಛಾರ್ಜ್‌ನಲ್ಲಿ ಅವನು ನಿರಪರಾಧಿ ಎಂದು ಖುಲಾಸೆಯಾಯ್ತು, ನಾನು ಬೆಂಗಳೂರು ಸಬ್‌ಡಿವಿಜನ್‌ನಲ್ಲಿದ್ದಾಗ ಹೆಚ್.ಎ.ಎಲ್. ಸುತ್ತಮುತ್ತಲಿನ 14 ಗ್ರಾಮಗಳಿಗೆ ಹೆಚ್ಚು ಸೌಲಭ್ಯ ಒದಗಿಸಲು ಸ್ಯಾನಿಟರಿ ಬೋರ್ಡ್ ಎಂಬ ಒಂದು ಸಂಸ್ಥೆ ಇತ್ತು. ಅದಕ್ಕೆ ಬೆಂಗಳೂರಿನ ಸಬ್‌ಡಿವಿಜನ್ ಅಸಿಸ್ಟೆಂಟ್ ಕಮೀಷನರೇ ವೈಸ್‌ಪ್ರೆಸಿಡೆಂಟ್. ನನ್ನ ಜೊತೆಗೆ ಸರ್ಕಾರದಿಂದ ನಾಮಕರಣ ಮಾಡಿದ 5 ಅಥವಾ 6 ಜನ ಖಾಸಗಿ ಸದಸ್ಯರಿದ್ದರು. ಒಬ್ಬ ಸ್ಪೆಷಲ್ ಆಫೀಸರ್, ಸಿಬ್ಬಂದಿ ವರ್ಗವಿತ್ತು. ಆ 14 ಗ್ರಾಮಗಳ ಅಭಿವೃದ್ಧಿ ಕೆಲಸಗಳನ್ನು ಬಹಳ ಹೆಚ್ಚಿನ ಮಟ್ಟದಲ್ಲಿ ಇತರ ಸದಸ್ಯರ ಸಹಕಾರದಿಂದ ನಡೆಸಿದೆ. ಆದರೆ ಆ ಪ್ರಾಂತ್ಯದಲ್ಲಿ ಒಂದು ಪ್ರೌಢಶಾಲೆಯಿರಲಿಲ್ಲ. ವಿದ್ಯಾರ್ಥಿಗಳು ವಿದ್ಯೆಯಲ್ಲಿ ಬಹಳ ಹಿಂದಿದ್ದರು. ಅವರು ಪ್ರೌಢವಿದ್ಯಾಭ್ಯಾಸಕ್ಕಾಗಿ ಬೆಂಗಳೂರು ಸಿಟಿಗೆ ಹೋಗಿ ಬರಬೇಕಾಗಿತ್ತು. ಪ್ರೌಢಶಾಲೆ ಪ್ರಾರಂಭಿಸಲು ಒಂದು ಕಟ್ಟಡ ಬೇಕಾಗಿತ್ತು. ನಾನು ಮತ್ತು ಸಂಸ್ಥೆಯ ಎಲ್ಲಾ ಸದಸ್ಯರುಗಳು ಗ್ರಾಮದ ಎಲ್ಲಾ ಮನೆಗಳಿಗೆ ಹೋಗಿ ಆಗಿನ ಕಾಲದಲ್ಲೇ (1962) ಸುಮಾರು ರೂ. 20,000 ರೂ ಚಂದಾ ವಸೂಲಿಮಾಡಿ ಆಗ ಆಸ್ಪತ್ರೆ ನಡೆಸುತ್ತಿದ್ದ ಒಂದು ಖಾಸಗಿ ಕಟ್ಟಡದಲ್ಲಿ "ವಿಶ್ವೇಶ್ವರಯ್ಯ ಹೈಸ್ಕೂಲನ್ನು" ಪ್ರಾರಂಭ ಮಾಡಿಸಿ ಆಗಿನ ರೆವಿನ್ಯೂ ಮಂತ್ರಿಗಳಾಗಿದ್ದ ಶ್ರೀ ಎಂ. ವಿ. ಕೃಷ್ಣಪ್ಪನವರಿಂದ ಉದ್ಘಾಟನೆ ಮಾಡಿಸಿದೆ. ಬೌರಿಂಗ್ ಪೇಟೆಯಲ್ಲಿ ಪ್ರೌಢಶಾಲೆಯೊಂದರಲ್ಲಿ ಮುಖ್ಯೋಪಾಧ್ಯಾಯರಾಗಿದ್ದು ಆಗ ತಾನೆ ರಿಟೈರ್ಡ್ ಆಗಿದ್ದ ಶ್ರೀ ಕೃಷ್ಣಮೂರ್ತಿ ಎಂಬುವರನ್ನು ಹೆಡ್‌ಮಾಸ್ಟರನ್ನಾಗಿ ನೇಮಕ ಮಾಡಿದೆವು. 50-60 ವಿದ್ಯಾರ್ಥಿಗಳೊಡನೆ ಪ್ರಾರಂಭಿಸಲ್ಪಟ್ಟ ಈ ಸಂಸ್ಥೆಯಲ್ಲಿ ಈಗ ಸುಮಾರು 1000 ಮಂದಿ ವಿದ್ಯಾರ್ಥಿಗಳು ಪ್ರೌಢಶಾಲೆ

ಯಲ್ಲಿ ವ್ಯಾಸಂಗ ಮಾಡುತ್ತಿದ್ದಾರಂತೆ. ಶಾಲೆ ನಡೆಸಲು ಪ್ರಾರಂಭಮಾಡಿದ ಕಟ್ಟಡ ಕೆಲಸ ಮುಗಿದಿದೆಯಂತೆ. ಹಾಗೂ ಈ ಶಾಲೆಯಲ್ಲಿ ಪಿ.ಯು.ಸಿ. ತರಗತಿಗಳೂ ಸಹ ಪ್ರಾರಂಭ ವಾಗಿವೆಯಂತೆ. ಇದನ್ನು ಹೇಳಲು ನನಗೆ ತುಂಬಾ ಹೆಮ್ಮೆಯಾಗುತ್ತದೆ.

1964ನೇ ಇಸವಿಯಲ್ಲಿ ನನ್ನನ್ನು ಚಿಕ್ಕಬಳ್ಳಾಪುರ ಸಬ್ ಡಿವಿಜನ್‌ಗೆ ವರ್ಗ ಮಾಡಿದರು. ಈ ಡಿವಿಜನ್‌ನಲ್ಲಿ 5 ತಾಲ್ಲೂಕುಗಳಿದ್ದವು. ಒಂದು ವರ್ಷ ಕಾಲ ಇಲ್ಲಿ ಕೆಲಸ ಮಾಡಿದೆ ಇಲ್ಲಿಯೂ ಕೂಡ ಬಹಳ ಶ್ರಮವಹಿಸಿ ಶ್ರದ್ಧೆಯಿಂದ ಕೆಲಸಮಾಡಿದೆ. ಕ್ಷೇತ್ರದ ಪರಿಚಯು ನನಗೆ ಈ ಹಿಂದೆಯೇ ದೇವನಹಳ್ಳಿ ಅಮಲ್ದಾರ್‌ರಾಗಿದ್ದಾಗ ಚೆನ್ನಾಗಿ ಗೊತ್ತಿತ್ತು. ಆಗಲೂ ಸಹ ನಮ್ಮದು ಅವಿಭಕ್ತ ಕುಟುಂಬವಾಗಿತ್ತು. ನನ್ನ ಅಕ್ಕ ಮರಿಯಮ್ಮ ಮತ್ತು ಸೋದರ ಮಾವಂದಿರು ಒಟ್ಟಿಗೆ ಇದ್ದೆವು. "ಹುಟ್ಟಿದ ಮನೆ ಕಟ್ಟಿದ ಕೆರೆ" ಯಾವತ್ತಾದರೂ ಒಡೆಯುವುದು ಸಹಜ ಎಂಬಂತೆ ನಮ್ಮ ಇಬ್ಬರು ಮಾವಂದಿರಲ್ಲಿ ಯಾವುದೋ ಸಣ್ಣ ಕಾರಣವಾಗಿ ವೈಮನಸ್ಸುಂಟಾಗಿ ಚಿಕ್ಕಬಳ್ಳಾಪುರದಲ್ಲಿದ್ದ ನನಗೆ ಊರಿನಿಂದ ಕರೆ ಬಂತು ಕೂಡಲೆ ಬಂದು ಜಮೀನನ್ನು ಹಂಚಿಕೊಡಿ ಎಂದು. ಕಾರಣ ಎಲ್ಲ ಜಮೀನು ಸೇರಿ ಸುಮಾರು ಒಂದು ನೂರು ಎಕರೆ ತರಿ ಖುಷ್ಕಿ ಹಾಗೂ 8-10 ಎಕರೆ ಬಾಗಾಯ್ತು ಬಿಟ್ಟು ಎಲ್ಲಾ ಜಮೀನು ನನ್ನ ಹೆಸರಿನಲ್ಲಿ ಇದ್ದವು. ಕೂಡಲೆ ನನ್ನ ಹುಟ್ಟೂರಿಗೆ ಹೋದೆ. ಎಷ್ಟೋ ಸಮಾಧಾನ ಮಾಡಿ ಹೇಳಿದೆ. ಆದರೆ ಅವರ್‍ಯಾರು ನನ್ನ ಮಾತಿಗೆ ಓಗೊಟ್ಟು ಒಟ್ಟಿಗೆ ಇರಲು ಇಷ್ಟಪಡಲಿಲ್ಲ. ಕಡೆಗೆ ಶ್ಯಾನುಭೋಗರನ್ನು ಕರೆಸಿ ಆಸ್ತಿಯನ್ನು ಭಾಗಮಾಡಿ ಕೊಟ್ಟೆ. ಒಂದೆರಡು ಶತಮಾನಗಳಿಂದ ಒಟ್ಟಿಗೆ ಇದ್ದ ನಮ್ಮ ಕುಟುಂಬ ಆ ದಿವಸ ಒಡೆಯಿತು.

ನನ್ನ ಇಬ್ಬರು ಮಾವಂದಿರು ಆಗಲೂ ನನ್ನಲ್ಲಿ ವಿಶೇಷವಾದ ಪ್ರೀತಿ ಗೌರವ ವನ್ನಿಟ್ಟಿದ್ದರು. ನಾನು ಹೇಳಿದ ಹಾಗೆ ಎಲ್ಲರೂ ಕೇಳದೆ ಬೇರೆ ಬೇರೆಯಾಗಿದ್ದರೂ ಅನ್ಯೋನ್ಯವಾದ ಜೀವನ ನಡೆಸಿಕೊಂಡು ಹೋಗಲು ಸಮ್ಮತಿಸಿದರು. ಭಗವಂತನು ನಿಮಗೆಲ್ಲರಿಗೂ ಸಕಲಸನ್ಮಂಗಳಗಳನ್ನುಂಟು ಮಾಡಲಿ ಎಂದು ಹೇಳಿ ನಾನು ವಾಪಸ್ಸು ಚಿಕ್ಕ ಬಳ್ಳಾಪುರಕ್ಕೆ ಬಂದೆ. ಆ ಸುಮಾರಿನಲ್ಲಿ ಮತ್ತೆ ಬೆಂಗಳೂರಿನಲ್ಲಿ ಇನ್‌ಫಾರ್ಮಿಂಗ್ ರೇಷನಿಂಗ್ ಪ್ರಾರಂಭಮಾಡಲು ಸರ್ಕಾರದವರು ಆಜ್ಞೆ ಹೊರಡಿಸಿ ಆಗಿನ ರೆವಿನ್ಯೂ ಮತ್ತು ಆಹಾರ ಮಂತ್ರಿಗಳಾಗಿದ್ದ ಶ್ರೀ ಎಂ. ವಿ. ಕೃಷ್ಣಪ್ಪನವರು ನನ್ನ ಕಾರ್ಯದಕ್ಷತೆಯನ್ನು ಮತ್ತು ನಾನು ಆಹಾರ ಇಲಾಖೆಯಲ್ಲಿ ಇದ್ದು ಪ್ರಾಮಾಣಿಕ ಕೆಲಸ ಮಾಡಿದ ಅನುಭವವನ್ನು ತಿಳಿದು ನನ್ನನ್ನು ಬೆಂಗಳೂರಿಗೆ ಫುಡ್ ರೇಂಜ್ ಆಫೀಸರ್ ಆಗಿ ವರ್ಗ ಮಾಡಿದರು. ಬೆಂಗಳೂರಿನ ಕಂಟೋನ್‌ಮೆಂಟ್ ವಿಭಾಗದಲ್ಲಿ ಅಧಿಕಾರವಹಿಸಕೊಂಡೆ. ಆದರೆ 5 ತಾಲ್ಲೂಕುಗಳನ್ನು ಒಳಗೊಂಡ ಒಂದು ರೆವಿನ್ಯೂ ಡಿವಿಜನ್ನಿನಲ್ಲಿ ಇದ್ದು ಜನಗಳಿಗೆ ವಿಶೇಷವಾಗಿ ಬಡಬಗ್ಗರಿಗೆ ಸಹಾಯಮಾಡುವ ಅವಕಾಶ ತಪ್ಪಿದ್ದು ನನಗೆ ಬೇಸರವಾಗಿ ಪುನಃ ಆಹಾರ ಸಚಿವರಾದ ಶ್ರೀ ಎಂ. ವಿ. ಕೃಷ್ಣಪ್ಪ

ನವರನ್ನು ಕೇಳಿಕೊಂಡಾಗ ಆಹಾರ ಇಲಾಖೆಯಲ್ಲಿ ನಿಮ್ಮಂತಹ ಅನುಭವವಿರುವ ಅಧಿಕಾರಿಗಳು ಹೆಚ್ಚು ಇಲ್ಲ. ಇಲ್ಲಿ ನೀವು ಈ ಜಾಗಕ್ಕೆ ಒಂದು ತಿರುವು ಕೊಡಬಲ್ಲಿರಿ ಎಂದು ತಿಳಿಸಿದರು. ಸುಮಾರು ಒಂದುವರೆ ವರ್ಷ ಕಾಲ ಈ ರೇಂಜ್‌ನಲ್ಲಿ ಫುಡ್ ರೇಂಜ್ ಆಫೀಸರ್‌ರಾಗಿ ಕೆಲಸ ಮಾಡಿದೆ. ನನಗೆ ಆರೋಗ್ಯ ಸರಿಯಿರಲಿಲ್ಲ (ಮೂಲ ವ್ಯಾಧಿ ಇತ್ತು). ಆಪರೇಷನ್ ಮಾಡಿಸಿಕೊಳ್ಳಬೇಕಾಯ್ತು. ಹೆಚ್ಚಿಗೆ ವಾಹನಗಳಲ್ಲಿ ತಿರುಗಾಡಲು ಸಾಧ್ಯವಾಗುತ್ತಿರಲಿಲ್ಲ. ಆದಕಾರಣ ಒಂದು ಮಿನಿಸ್ಟೀರಿಯಲ್ ಕೆಲಸ ಕೊಡಬೇಕೆಂದು ರೆವಿನ್ಯೂ ಮತ್ತು ಆಹಾರ ಮಂತ್ರಿಗಳನ್ನು ಕೇಳಿಕೊಂಡೆ. ನನ್ನನ್ನು ಬೆಂಗಳೂರಿನ ಡಿವಿಜನ್ ಕಮೀಷನರ್ ಕಚೇರಿಯಲ್ಲಿ ಹೆಡ್‌ಕ್ವಾರಟರ್ಸ್ ಅಸ್ಟಿಸೆಂಟ್ ಆಗಿ ನೇಮಿಸಿದರು.

ಒಂದು ವರ್ಷ ಮಾತ್ರ ಅಲ್ಲಿ ಕೆಲಸ ಮಾಡಿದೆ. ಅನಂತರ 1966ರಲ್ಲಿ ನನ್ನನ್ನು ವಿಧಾನಸೌಧಕ್ಕೆ ರೆವಿನ್ಯೂ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯನ್ನಾಗಿ ವರ್ಗಾಯಿಸಿದರು. ಅಲ್ಲಿ ಅನೇಕ ಗುರುತರವಾದ ಜವಾಬ್ದಾರಿ ಕೆಲಸಗಳನ್ನು ನಿರ್ವಹಿಸಲು ಅವಕಾಶವಾಯಿತು. 1966 ರಲ್ಲಿ ನನಗೆ ಮತ್ತೊಂದು ಸೇವೆ ಮಾಡುವ ಅವಕಾಶ ಸಿಕ್ಕಿತು. ಆಗಿನ "ಮೈಸೂರು ಸ್ಟೇಟ್ ಅಡ್‌ಮಿನಿಸ್ಟ್ರೇಟಿವ್ ಸರ್ವಿಸ್ ಅಸೋಸಿಯೇಷನ್"ನ ಕಾರ್ಯದರ್ಶಿಯಾಗಿ ಕೆಲಸ ಮಾಡುವ ಅವಕಾಶ ದೊರೆಯಿತು. ಈ ಸಂಘಕ್ಕೆ ನಮ್ಮ ಅಧ್ಯಕ್ಷರಾಗಿ ಶ್ರೀ ಸಿ. ನರಸಿಂಹಮೂರ್ತಿ ಐ. ಎ. ಎಸ್. ರವರು ಆಗಿದ್ದರು. (ಇವರು ಬೆಂಗಳೂರಿನ ಎಸ್. ಎಂ. ಕೆ. ಆರ್. ವಿ. ಮಹಿಳಾ ಕಾಲೇಜಿನ ಪ್ರಾಂಶುಪಾಲರಾದ ಶ್ರೀಮತಿ ಜಿ. ಸ. ಮಂಗಳರವರ ತಂದೆ) ಈ ಸಂಸ್ಥೆಗೆ ರಾಜ್ಯದ ಎಲ್ಲಾ ಡಿ.ಸಿ.ಗಳು ಸ್ಟೇಟ್ ಆಫೀಸರ್‌ಗಳೂ ಅಸಿಸ್ಟೆಂಟ್ ಕಮೀಷನರ್‌ಗಳೂ ಸದಸ್ಯರಾಗಿದ್ದರು. ಇಂತಹ ಮಹಾಸಂಸ್ಥೆಯಲ್ಲಿ ಸುಮಾರು 3 ವರ್ಷಗಳ ಕಾಲ ಕಾರ್ಯದರ್ಶಿಯಾಗಿ ಕೆಲಸ ಮಾಡಿದೆ. ಕಲ್ಕತ್ತಾ ಮತ್ತು ದೆಹಲಿಯಲ್ಲಿ ನಡೆದ ರಾಜ್ಯಮಟ್ಟದ ಅಧಿಕಾರಿಗಳ ಸಮ್ಮೇಳನದಲ್ಲಿ ರಾಜ್ಯದ ಏಕಮೇವ ಪ್ರತಿನಿಧಿಯಾಗಿ ಭಾಗವಹಿಸುವ ಅವಕಾಶ ಸಿಕ್ಕಿತು. ಆ ಸಮ್ಮೇಳನದಲ್ಲಿ ಭಾಗವಹಿಸಲು ಅನೇಕ ಅಧಿಕಾರಿಗಳು ಪ್ರಯತ್ನಪಟ್ಟರು. ಆದರೆ ಆಗಿನ ಸರ್ಕಾರದ ಮುಖ್ಯಕಾರ್ಯದರ್ಶಿ ಆಗಿದ್ದ ಶ್ರೀ ಕೆ. ನಾರಾಯಣಸ್ವಾಮಿಯವರು ನನ್ನನ್ನೇ ಚುನಾಯಿಸಿ ಪ್ರತಿನಿಧಿಯಾಗಿ ಕಳುಹಿಸಿಕೊಟ್ಟರು. ಶ್ರೀಯುತರು ಈ ದಿವಸ ಅಮರರಾಗಿದ್ದಾರೆ. ನನಗೆ ಅವರಲ್ಲಿ ತುಂಬಾ ವಿಶ್ವಾಸ ಹಾಗೂ ಎಲ್ಲಕ್ಕೂ ಮಿಗಿಲಾಗಿ ಪೂಜ್ಯಭಾವನೆಯಿತ್ತು.

ಒಟ್ಟಿನಲ್ಲಿ, ಸುಮಾರು 35 ವರ್ಷಗಳ ಕಾಲ ಸರ್ಕಾರಿ ಸೇವೆಯನ್ನು ಸಲ್ಲಿಸಿದೆ. ಜಾತಿಮತಗಳ ಭೇದವಿಲ್ಲದೆ ಚಿಕ್ಕವರು ದೊಡ್ಡವರು ಎಂಬ ತಾರತಮ್ಯವಿಲ್ಲದೆ ಬಡವರು ಬಲ್ಲಿದರು ಪಂಡಿತರು ಪಾಮರರು ಎಂಬ ಭೇದಭಾವವಿಲ್ಲದೆ 35 ವರ್ಷಗಳ ಕಾಲ ಸರ್ಕಾರಿ ಸೇವೆಯನ್ನು ಯಾವುದೇ ಅಪವಾದಗಳಿಗೂ ಎಡೆಮಾಡಿಕೊಡದೆ ಸಾರ್ಥಕ ಸೇವೆ

ಯನ್ನು ಸಲ್ಲಿಸಿದೆ. ಅಲ್ಲದೆ ಸೇವಾವಧಿಯುದ್ದಕ್ಕೂ ನನ್ನ ಜೊತೆಯಲ್ಲಿ ಕೆಲಸಮಾಡಿದ ಅಧಿಕಾರಿಗಳ ನೌಕರವರ್ಗದವರ ಹತ್ತಿರ ಗೌರವ ಪ್ರೀತಿಗಳನ್ನು ಸಂಪಾದಿಸಿಕೊಂಡು 1969ನೇ ಮಾರ್ಚ್ 24ನೇ ತಾರೀಖು ನಿವೃತ್ತಿಯಾದೆ. ಇದು ನನಗೆ ತುಂಬಾ ತೃಪ್ತಿ ಸಮಾಧಾನ ತಂದಿದೆ. ಈ ಕೀರ್ತಿಯೇ ನನಗೆ ಶಾಶ್ವತವಾದುದು. ಯಾವತ್ತೂ ನಾನು ನನ್ನ ಪ್ರವೃತ್ತಿಯಲ್ಲಿ ಉಲ್ಲಾಸ ಮನೋಧರ್ಮವನ್ನು ಕಳೆದುಕೊಂಡಿಲ್ಲ. ದೇವರು ನನಗೆ ದೊರಕಿಸಿಕೊಟ್ಟ ಕರ್ತವ್ಯವನ್ನು ಸಂತೋಷದಿಂದ ನಿಷ್ಠೆಯಿಂದ ಯಾರಿಗೂ ಯಾವುದೇ ನೋವುಂಟು ಮಾಡದೆ, ದೇವರ ಇಚ್ಛೆಯಂತೆ ಆತ್ಮಸಾಕ್ಷಿಯಾಗಿ ಕಾಯಾ, ವಾಚಾ, ಮನಸಾ ನೆರವೇರಿಸಿದ್ದೇನೆ. ದಯಾಮಯನಾದ ಭಗವಂತನು ಈಗಲೂ ಕೂಡ ಸಾಕಷ್ಟು, ಶಕ್ತಿಯನ್ನು ಹುಮ್ಮಸ್ಸನ್ನು ದಯಪಾಲಿಸಿದ್ದಾನೆ. ಇದು ನನಗೆ ಅತ್ಯಂತ ನೆಮ್ಮದಿಯನ್ನು ಕೊಟ್ಟಿದೆ.

ನನ್ನ ಸೇವೆಯ ಉದ್ದಕ್ಕೂ ಪ್ರಾಮಾಣಿಕ, ದಕ್ಷ, ಹಾಗೂ ಕರ್ತವ್ಯಶೀಲ ಅಧಿಕಾರಿಗಳು ಸಿಕ್ಕಿ ಅವರ ಸಹಯೋಗದೊಂದಿಗೆ ಕೆಲಸ ಮಾಡಿದ ನಾನೇ ಧನ್ಯ. ಇದು ನನ್ನ ಸುಯೋಗ ಎಂದು ಭಾವಿಸಿದ್ದೇನೆ. ಅಂತಹ ಅಧಿಕಾರಿಗಳು ಈಗ ಸಿಗಬಹುದು, ಆದರೆ ಬಹು ವಿರಳ. ಹಾಗೆಯೇ ನಯವಿನಯ ಸದ್ಗುಣ ಸಂಪನ್ನರೂ ಆಡಳಿತ ವಿಚಕ್ಷಣೆಯಲ್ಲಿ ಕರ್ತವ್ಯನಿಷ್ಠರೂ ಪರಿಶುದ್ಧ ಚಾರಿತ್ರ್ಯವುಳ್ಳವರೂ ಹಾಗೂ ಪ್ರಾಮಾಣಿಕರೂ ದಕ್ಷರೂ ಆಡಳಿತದಲ್ಲಿ ನುರಿತ ತ್ರಿಕರಣ ಶುದ್ಧರೂ ಆದ ತಹಸೀಲ್ದಾರ್‌ಗಳು ಜಿಲ್ಲಾಧಿಕಾರಿಗಳೂ, ಡಿವಿಜನ್ ಕಮೀಷನರುಗಳೂ ಕರ್ನಾಟಕ ಸರ್ಕಾರದ ಹಿರಿಯ ಹಾಗೂ ದಕ್ಷ ಕಾರ್ಯದರ್ಶಿಗಳೂ ನನಗೆ ದೊರೆತಿದ್ದರು. ಇದು ನನ್ನ ಭಾಗ್ಯವೆಂದೇ ಭಾವಿಸಿದ್ದೇನೆ.



# ನಾನು ಮತ್ತು ನನ್ನ ಕುಟುಂಬ

ನನಗೆ ಹುಟ್ಟಿದ ತಾರೀಖು ಸರಿಯಾಗಿ ತಿಳಿಯದು. ಕುಂಡಲಿಯೂ ಇಲ್ಲ, ಜಾತಕವೂ ಸಿಗಲಿಲ್ಲ ; ನನ್ನ ಹೆಸರಿನ ನಕ್ಷತ್ರದ ಮೇಲೆ ನನಗೆ ಎರಡು ಲಗ್ನಗಳು ನಡೆದಿವೆ.

ಜೋಯಿಸರು ಮುಹೂರ್ತದ ಸಮಯದಲ್ಲಿ ಹೇಳುವ "ದೈವ ಬಲಂ ತಾರಾಬಲಂ, ಚಂದ್ರಬಲಂ" ಎಂಬುದೇ ಗಟ್ಟಿ. ಈ ಆಧಾರದ ಮೇಲೆಯೇ ನಾನು ಕುಟುಂಬದ ಜೀವನವನ್ನು ನಡೆಸಿರುತ್ತೇನೆ.

ನನಗೆ 3 ಜನ ಗಂಡುಮಕ್ಕಳು ಮತ್ತು 3 ಜನ ಹೆಣ್ಣು ಮಕ್ಕಳು—ಮೊದಲನೆಯ ಮಗಳು ಗಂಗಮ್ಮನನ್ನು ನನ್ನ ಅಕ್ಕನ ಮಗನಾದ ಶ್ರೀ ಕೆ. ಎಲ್. ಪುಟ್ಟಯ್ಯನವರಿಗೆ ಕೊಟ್ಟು ಲಗ್ನ ಮಾಡಿದ್ದೇನೆಂದು ಈಗಾಗಲೇ ಮೇಲೆ ಹೇಳಿದ್ದೇನೆ. ಇವರು ಕರ್ನಾಟಕ ಸರ್ಕಾರದಲ್ಲಿ ಅಧೀನ ಕಾರ್ಯದರ್ಶಿಯಾಗಿದ್ದು ನಿವೃತ್ತಿಯಾಗಿದ್ದರು. ಇವರು ಇತ್ತೀಚೆಗೆ ದಿವಂಗತರಾಗಿರುತ್ತಾರೆ. ಅವರಿಗೆ ಹನುಮಂತರಾಜು ಮತ್ತು ಕೆ. ಪಿ. ವಿಜಯಕುಮಾರ್ ಎಂಬ ಇಬ್ಬರು ಗಂಡು ಮಕ್ಕಳು ಇದ್ದು ಇಬ್ಬರಿಗೂ ಲಗ್ನವಾಗಿದೆ. ಹನುಮಂತರಾಜುವಿಗೆ ಒಂದು ಗಂಡು ಮಗುವಿದೆ. ಒಬ್ಬರು B.Com. Course ಪೂರೈಸಿಕೊಂಡು ಕಂಟ್ರಾಕ್ಟ್ ಮಾಡುತ್ತಿದ್ದರೆ, ಇನ್ನೊಬ್ಬರು ಬ್ಯಾಂಕಿನಲ್ಲಿ ಅಕೌಂಟೆಂಟ್ ಆಗಿದ್ದಾರೆ. ಒಬ್ಬ ಮಗಳು ಜ್ಯೋತಿಯನ್ನೂ ಸಹರೂ ಬ್ಯಾಂಕಿನಲ್ಲಿ ವೇತನ ಕಾರ್ಯದರ್ಶಿ ನಂದಕುಮಾರ್‌ರವರಿಗೆ ಕೊಟ್ಟು ವಿವಾಹವಾಗಿದೆ. ಎರಡನೇ ಮಗಳು ಭಾರತಿ. ಈಕೆ ಬಿ.ಎ. ಪದವೀಧರೆ. ಇವರನ್ನು ಹೆಚ್. ನರಸಿಂಹ ಮೂರ್ತಿ ಎಂಬುವರಿಗೆ ಲಗ್ನ ಮಾಡಿಕೊಟ್ಟಿದ್ದೇನೆ. ಇವರು ಎಂ.ಎಸ್‌ಸಿ. ಪದವೀಧರರು. ಇವರು ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಬ್ಯಾಂಕಿನಲ್ಲಿ ಮೇನೇಜರ್‌ರಾಗಿ ಕೆಲಸ ಮಾಡುತ್ತಿದ್ದಾರೆ. ಇವರಿಗೆ ಒಬ್ಬ ಗಂಡು ಮಗು ಒಂದು ಹೆಣ್ಣು ಮಗು ಇದೆ. ಗಂಡು ಮಗನು ಎಸ್.ಎಸ್.ಎಲ್.ಸಿ. ಪಾಸ್ ಮಾಡಿಕೊಂಡು ಮೊದಲನೇ ವರ್ಷದ ಪಿ.ಯು.ಸಿ.ಯಲ್ಲಿ ವ್ಯಾಸಂಗ ಮಾಡುತ್ತಿದ್ದಾನೆ.

ಮೂರನೇ ಮಗಳು ಕೆ. ಸಿ. ರೂಪಕಲಾ ಇವರನ್ನು ಬೆಂಗಳೂರಿನ ಸುಪ್ರಸಿದ್ಧ ವಕೀಲರೂ, ಹನುಮಾನ್ ಮೋಟಾರ್ಸ್ ಸಂಸ್ಥೆಯ ಮಾಲೀಕರೂ ಆದ ಶ್ರೀ ಪಿ. ಆರ್. ರಂಗಯ್ಯನವರ ಏಕೈಕ ಪುತ್ರರಾದ ಶ್ರೀ ಪಿ. ಎಸ್. ರಘುನಾಥ್‌ರವರಿಗೆ ಕೊಟ್ಟು ಲಗ್ನಮಾಡಿರುತ್ತೇನೆ. ಈಕೆಗೆ ಸವಿತಾ, ಸರಿತಾ, ಕವಿತಾ ಎಂಬ ಮೂವರು ಹೆಣ್ಣುಮಕ್ಕಳಿದ್ದಾರೆ. Convent ನಲ್ಲಿ ಓದುತ್ತಿದ್ದಾರೆ.

ಇನ್ನು ಗಂಡುಮಕ್ಕಳಲ್ಲಿ ಶ್ರೀ ಕೆ. ಪಿ. ನರಸಿಂಹಮೂರ್ತಿಯವರು ಮೊದಲನೇ

ಮಗ. ಇವರು ಎಂ. ಇ. ಪದವೀಧರರು. ಇವರು ನಗರದ ಪ್ರತಿಷ್ಠಿತ ಆರ್. ವಿ. ಇಂಜಿನೀಯರಿಂಗ್ ಕಾಲೇಜಿನಲ್ಲಿ ಪ್ರೊಫೆಸರಾಗಿ (Civil Eng.) ಕೆಲಸ ಮಾಡುತ್ತಿದ್ದಾರೆ. ಅಲ್ಲದೆ ಖ್ಯಾತ ಹಾಗೂ ಪ್ರತಿಷ್ಠಿತ ವಾಸ್ತುಶಿಲ್ಪಿಗಳಾಗಿದ್ದು ಇವರು ಟೀಂ–2 ಎಂಬ ವಾಸ್ತುಶಿಲ್ಪ ಸಂಸ್ಥೆಯನ್ನು ನಡೆಸುತ್ತಿದ್ದಾರೆ. ತಮ್ಮ ಸಹೋದ್ಯೋಗಿಗಳ, ಸ್ನೇಹಿತರ ಹಾಗೂ ಬಂಧುಗಳ ಅಪಾರ ಪ್ರೀತಿ ಗೌರವಗಳನ್ನು ಪಡೆದಿದ್ದು ಯಾವಾಗಲೂ ದಾನ ಧರ್ಮ ಹಾಗೂ ದೇವತಾಕಾರ್ಯಗಳನ್ನು ಮಾಡುತ್ತಾ ಎಲ್ಲರ ಮೆಚ್ಚುಗೆಯನ್ನು ಪಡೆದಿರುತ್ತಾರೆ. ಇಂಥ ಸುಪುತ್ರನನ್ನು ಪಡೆದಿದ್ದು ನನ್ನ ಸೌಭಾಗ್ಯವೆಂದು ಭಾವಿಸಿದ್ದೇನೆ. ಆತನ ಹೆಂಡತಿ ಶ್ರೀಮತಿ ಮಂಜುಳ, ಪದವೀಧರೆ. ಇವರು ಸುಖಸಂಸಾರವನ್ನು ನಡೆಸಿಕೊಂಡು ಹೋಗುತ್ತಿದ್ದಾರೆ. ಇವರಿಗೆ ರಜನಿ ಮತ್ತು ಮೈತ್ರೇಯಿ ಎಂಬ ಇಬ್ಬರು ಹೆಣ್ಣು ಮಕ್ಕಳಿದ್ದಾರೆ. ರಜನಿಯು ವಿದ್ಯಾವರ್ಧಕ ಸಂಘದಲ್ಲಿ ಉತ್ತಮ ವರ್ಗದಲ್ಲಿ ಪಾಸ್ ಮಾಡಿಕೊಂಡು S.E.T ನಲ್ಲಿ II PUC ಓದುತ್ತಿದ್ದಾಳೆ, ಎರಡನೇ ಮೈತ್ರೇಯಿ ವಿದ್ಯಾವರ್ಧಕ ಶಾಲೆಯಲ್ಲಿ VIIನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದಾಳೆ.

ಎರಡನೇ ಮಗ ಶ್ರೀ ಕೆ. ಪಿ. ಶ್ರೀನಿವಾಸಮೂರ್ತಿಯವರು ಬಿ.ಎಸ್ಸಿ. ಪದವೀಧರರು, ಇವರು ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಸೇವೆ ಸಲ್ಲಿಸುತ್ತಿದ್ದು ಸಂಜೆ ವೇಳೆ ಸೋಮಾರಿತನಕ್ಕೆ ಎಡೆಕೊಡದೆ ಸರ್ಕ್ಯುಲೆಟಿಂಗ್ ಲೈಬ್ರರಿಯನ್ನು ನಡೆಸುತ್ತಿದ್ದಾರೆ.

ಮೂರನೇ ಮಗ ಶ್ರೀ ಕೆ. ಪಿ. ಚಿಕ್ಕಣ್ಣಸ್ವಾಮಿಯವರು ಬಿ.ಇ. ಪದವೀಧರರು ಕಟ್ಟಡದ ಕಂಟ್ರಾಕ್ಟ್ ಕೆಲಸಗಳಲ್ಲಿ ಹೆಚ್ಚು ಅನುಭವ ಪಡೆದು ತಮ್ಮ ಕರ್ತವ್ಯಗಳನ್ನು ಯಶಸ್ವಿಯಾಗಿ ಚಾಕಚಕ್ಯತೆಯಿಂದ ಹೆಚ್ಚು ನೈಪುಣ್ಯತೆಯಿಂದ ಮಾಡುತ್ತಿದ್ದಾರೆ. ಇದು ನನಗೆ ತುಂಬಾ ಸಂತೋಷವನ್ನುಂಟುಮಾಡಿದೆ. ಇವರು ತಮ್ಮ ಸ್ನೇಹಿತರ, ಬಂಧುಗಳ ಪ್ರೀತಿ ವಿಶ್ವಾಸವನ್ನು ಪಡೆದು ಜನಾನುರಾಗಿಗಳಾಗಿದ್ದಾರೆ. ಇವರ ಹೆಂಡತಿ ಡಾ॥ ಸುನಂದಾ, ಎಂ.ಬಿ.ಬಿ.ಎಸ್. ಪದವೀಧರೆ. ಇವರು ಬೆಂಗಳೂರು ಮಹಾನಗರ ಪಾಲಿಕೆಯ ಆರೋಗ್ಯ ಇಲಾಖೆಯಲ್ಲಿ ಮಹಿಳಾ ವೈದ್ಯಾಧಿಕಾರಿಯಾಗಿ ಕೆಲಸಮಾಡುತ್ತಿದ್ದಾರೆ. ಇವರು ಪ್ರತಿಷ್ಠಿತ ಕುಟುಂಬದಲ್ಲಿ ಜನಿಸಿರುವರು. ಇವರಿಗೆ ಕೆ.ಸಿ. ಯತೀಶ್ ಎಂಬ ಒಂದು ಗಂಡು ಮಗು ಮತ್ತು ಹೆಣ್ಣು ಮಗು ಇವೆ. ಇವರ ತಂದೆಯವರು ಶ್ರೀ ಕೆ. ಮುದ್ದಯ್ಯನವರು ಪೊಲೀಸ್ ಅಸಿಸ್ಟೆಂಟ್ ಕಮೀಷನರಾಗಿ ನಿವೃತ್ತಿಯಾಗಿರುತ್ತಾರೆ.

ನನ್ನ ಎರಡನೇ ಹೆಂಡತಿ ಮೀನಾಕ್ಷಮ್ಮ ಇವರು ಬೆಂಗಳೂರಿಗೆ ಸಮೀಪದಲ್ಲಿರುವ ಶಾರಕ್ಕಿ ಅಗ್ರಹಾರದ ಶ್ರೀ ವೆಂಕಟಶ್ಯಾಮಪ್ಪ ಇವರ ಮಗಳು. ಇವರು ಹೆಚ್ಚು ವಿದ್ಯಾವಂತರಲ್ಲದಿದ್ದರೂ ಮಾತಿನಲ್ಲಿ ಚತುರೆ, ಮನೆಯ ಕೆಲಸದಲ್ಲಿ ಬಹು ಜಾಣೆ, ಒಪ್ಪ ಓರಣದಲ್ಲಿ ಎತ್ತಿದ ಕೈ, ಅಡಿಗೆ ತಿಂಡಿಗಳನ್ನು ಬಹಳ ಚೊಕ್ಕವಾಗಿ ರುಚಿಯಾಗೆ ಮಾಡುವ ಕಲೆಯುಳ್ಳವರು.

# ಬ್ಯಾಂಕಿನ ಸೇವೆ

ನನ್ನ ಸೇವೆಯನ್ನು ಮೆಚ್ಚಿಕೊಂಡು ಆಗಿನ ರೆವಿನ್ಯೂ ಸೆಕ್ರೆಟರಿಗಳಾಗಿದ್ದ ಶ್ರೀ ಎಂ. ಎಸ್. ಸ್ವಾಮಿನಾಥನ್‌ರವರ ಶಿಫಾರಸ್ಸಿನ ಮೇಲೆ ರೆವಿನ್ಯೂ ಮಂತ್ರಿಗಳಾದ ಶ್ರೀ ಕೌಜಲಗಿ ಸಾಹೇಬರು ನಾನು ನಿವೃತ್ತನಾದರೂ ಕೂಡ ನನಗೆ ರೆಫ್ಯೂಜ್ಡ್ ಲೀವ್ 6 ತಿಂಗಳು ಕೊಟ್ಟು ಸಂಬಳವನ್ನೂ ಸಹ ಮಂಜೂರು ಮಾಡಿದ್ದರು. ನಾನು ಈ ರೆಫ್ಯೂಜ್ಡ್ ಲೀವ್‌ನಲ್ಲಿ ಇರಬೇಕಾದರೆ ಒಂದು ದಿವಸ ನನ್ನ ಹಿತೈಷಿಗಳು ಆತ್ಮೀಯ ಬಂಧುಗಳೂ ಆದ ಶ್ರೀ ಡಬ್ಲ್ಯು. ಹೆಚ್. ಹನುಮಂತಪ್ಪ (ಜ್ಯೂನಿಯರ್)ರವರು ರೆಸಿಡೆನ್ಸಿ ರಸ್ತೆಯಲ್ಲಿದ್ದ ನಮ್ಮ ಮನೆಗೆ ಬಂದರು. ಬಂದವರೇ ನಾನು ಒಂದು ಸಹಕಾರಿ ಬ್ಯಾಂಕಿನ ಅಧ್ಯಕ್ಷನಾಗಿದ್ದೇನೆ ಆ ಬ್ಯಾಂಕಿನಲ್ಲಿ ಷೇರು ಮೊಬಲಗು ಒಂದು ಲಕ್ಷಕ್ಕೂ ಕಮ್ಮಿ ಇದೆ. ನಮ್ಮ ಲೈಸೆನ್ಸ್ ಕ್ಯಾನ್ಸಲ್ ಮಾಡುತ್ತೇವೆಂದು ಆರ್.ಬಿ.ಐ.ನವರು ನಮಗೆ ನೋಟೀಸ್ ಕೊಟ್ಟಿರುತ್ತಾರೆ. ನಾನು ಮತ್ತು ನಮ್ಮ ಡೈರೆಕ್ಟರುಗಳು ಷೇರು ವಸೂಲಿಗಾಗಿ ಒದ್ದಾಡುತ್ತಿದ್ದೇವೆ. ನೀವು ಒಂದು ಷೇರು ಕೊಡಿ. ಒಂದು ಷೇರಿನ ಮೊತ್ತ ರೂ. 100 ಎಂದು ಹೇಳಿದರು. ನನಗೆ ಅವರಲ್ಲಿ ತುಂಬಾ ಪ್ರೀತಿ ವಿಶ್ವಾಸ. ಅವರನ್ನು ಬ್ಯಾಂಕಿನ ಹೆಸರು ಕೇಳಿದೆ. ಅದಕ್ಕವರು "ನೆಹರೂನಗರ ಸಹಕಾರಿ ಬ್ಯಾಂಕ್" ಎಂದು ಹೇಳಿದರು. ಅವರು ಕೇಳಿದ ಕೂಡಲೇ ರೂ. 101-25 ಗೆ ಒಂದು ಚೆಕ್ ಕೊಟ್ಟೆ. ಅನಂತರ ಅವರು ನಮ್ಮ ಮನೆಯಿಂದ ಹೊರಟರು.

ಅದು ದೊಡ್ಡಮನೆ ಹಾಗೂ ದೊಡ್ಡ ಕಾಂಪೌಂಡ್. ಈಗ ಈಸ್ಟ್‌ವೆಸ್ಟ್ ಹೋಟೆಲ್ ಇದೆಯಲ್ಲ ಅದರ ಪಕ್ಕದ ಮನೆ. ಅಂತೂ ಬಾಡಿಗೆಯದು. ಕಾಂಪೌಂಡ್ ಗೇಟ್ ಬಳಿಗೆ ಹೋದವರೇ ಮತ್ತೆ ವಾಪಸ್ ಬಂದರು. ಬಂದವರೆ, "ಪುಟ್ಟನರಸಯ್ಯ ನವರೆ ನೀವು ಯಾವಾಗ ನಿವೃತ್ತಿಯಾಗುವುದು" ಎಂದು ಕೇಳಿದರು. ನಾನು ಅವರಿಗೆ ಹೇಳಿದೆ. ಈಗಾಗಲೇ ನಾನು ನಿವೃತ್ತಿಯಾಗಿದ್ದೇನೆ. ಆದರೆ ರೆಫ್ಯೂಜ್ಡ್ ಲೀವ್‌ನಲ್ಲಿದ್ದು ಸಂಬಳ ತೆಗೆದುಕೊಳ್ಳುತ್ತಿದ್ದೇನೆ ಎಂದು ತಿಳಿಸಿದೆ. ನಿಮ್ಮ ರೆಫ್ಯೂಜ್ಡ್ ಲೀವ್ ಯಾವಾಗ ಮುಗಿಯುತ್ತದೆ ಎಂದು ಕೇಳಿದರು. ನಾನು ತಿಳಿಸಿದೆ ಇದೇ ವರ್ಷದ ಸೆಪ್ಟಂಬರ್ 24ನೇ ದಿನಾಂಕಕ್ಕೆ ಮುಗಿಯುತ್ತದೆ ಎಂದು. ಅದಕ್ಕವರು ಕೇಳಿದರು ನೀವು ನಿವೃತ್ತರಾದ ಮೇಲೆ ಏನು ಮಾಡಬೇಕೆಂದು ತೀರ್ಮಾನಿಸಿದ್ದೀರಿ ಎಂದು ಅದಕ್ಕೆ ನಾನು ಹೇಳಿದೆ ಹಳ್ಳಿಯಲ್ಲಿ ಜಮೀನು ಇದೆ ವ್ಯವಸಾಯ ಅಭಿವೃದ್ಧಿಪಡಿಸಲು ಯೋಜಿಸಿದ್ದೇನೆ ಎಂದು ಹೇಳಿ, ಅಂತಿಮವಾಗಿ ಇನ್ನೂ ಯಾವ ತೀರ್ಮಾನವನ್ನೂ ತೆಗೆದುಕೊಂಡಿಲ್ಲ ಎಂದು ತಿಳಿಸಿದೆ. ಆಗ ಅವರು ನಮ್ಮ ಬ್ಯಾಂಕಿಗೆ ನೀವು ಮ್ಯಾನೇಜರ್‌ರಾಗಿ ಬರುತ್ತೀರಾ

ಎಂದು ಕೇಳಿದರು. ಬ್ಯಾಂಕಿನ ವ್ಯವಹಾರ ನನಗೆ ಎಳ್ಳಷ್ಟು ಗೊತ್ತಿಲ್ಲ. ಆದರೂ ಇನ್ನೂ ಸಮಯವಿದೆ ನೋಡೋಣ ಎಂದು ಹೇಳಿ ಕಳುಹಿಸಿದೆ. ಅನಂತರ ಜುಲೈ ತಿಂಗಳ ಮೊದಲನೇ ವಾರವಿರಬಹುದು ಮತ್ತೊಮ್ಮೆ ಅವರು ನನ್ನನ್ನು ಮೈಸೂರು ಬ್ಯಾಂಕಿನ ಚೌಕದಲ್ಲಿಸಿಕ್ಕಿದಾಗ ನಾಗು ಹೇಳಿದ್ದು ಏನು ಮಾಡಿದಿರಿ ಎಂದು ಜ್ಞಾಪಿಸಿದರು. ನಾನು ಹೇಳಿದೆ ಭಾರತೀಯ ರೆಡ್‌ಕ್ರಾಸ್ ಸೊಸೈಟಿ ಕರ್ನಾಟಕ ಶಾಖೆಯಲ್ಲಿ ಅಸಿಸ್ಟೆಂಟ್ ಸೆಕ್ರೆಟರಿ ಹುದ್ದೆ ಖಾಲಿ ಇದೆ ಎಂದು ಶ್ರೀ ಕೆ. ಎಂ. ನಂಜಪ್ಪನವರು ಹೇಳಿ, ನೀವು ಅಲ್ಲಿಗೆ ಬನ್ನಿ ಎಂದು ಹೇಳಿರುತ್ತಾರೆ ಎಂದು ತಿಳಿಸಿದೆ. ಅದಕ್ಕೆ ಅವರು ನಮ್ಮ ಬ್ಯಾಂಕು ನಷ್ಟ ಅನುಭವಿಸುತ್ತಿದೆ. ಬ್ಯಾಂಕಿನಲ್ಲಿ ಷೇರು ಮೊಬಲಗು ಸಾಕಷ್ಟು ಇಲ್ಲ ಹಾಗೂ ಆಡಳಿತ ಸರಿಯಾಗಿ ನಡೆಯುತ್ತಿಲ್ಲ. ನಿಮ್ಮಂತಹವರು ನಮಗೆ ಬೇಕಾಗಿದೆ ನೀವು ನಮ್ಮ ಸಂಸ್ಥೆಗೆ ಬನ್ನಿ ಎಂದು ಒತ್ತಾಯಮಾಡಿದರು. ಅಂತೂ ಕಡೆಗೆ ನನ್ನನ್ನೂ ಒಪ್ಪಿಸಿದರು. ಅದರಂತೆ ಆ ತಿಂಗಳು ನಡೆದ ಬ್ಯಾಂಕಿನ ಮೀಟಿಂಗ್‌ನಲ್ಲಿ ನನ್ನನ್ನು ಮ್ಯಾನೇಜರ್‌ರಾಗಿ ತೆಗೆದುಕೊಳ್ಳುವಂತೆ ತೀರ್ಮಾನ ತೆಗೆದುಕೊಂಡು ಆಗಸ್ಟ್ ತಿಂಗಳಲ್ಲೇ ಚಾರ್ಜ್ ವಹಿಸಿಕೊಳ್ಳುವಂತೆ ಹೇಳಿದರು. ಅವರ ಕೋರಿಕೆಯಂತೆ 1969ನೇ ಅಗಸ್ಟ್ 1ನೇ ತಾರೀಖಿನಿಂದ ಅಲ್ಲಿ ನಾನು ಛಾರ್ಜ್ ತೆಗೆದುಕೊಂಡೆ. ಆದರೆ ಸಂಭಾವನೆಯನ್ನು ಸೆಪ್ಟೆಂಬರ್ 24ನೇ ತಾರೀಖಿನವರಗೂ ತೆಗದುಕೊಳ್ಳದೆ ಹಾನರರಿಯಾಗಿ ಕೆಲಸಮಾಡಿದೆ.

1969ರಲ್ಲಿ ಬ್ಯಾಂಕಿನಲ್ಲಿ 11 ಜನ ಆಡಳಿತ ಮಂಡಳಿಯ ಸದಸ್ಯರಿದ್ದು ಬ್ಯಾಂಕಿನ ವ್ಯವಹಾರವನ್ನು ನಾನು ಮತ್ತು ಒಬ್ಬ ಕ್ಯಾಷಿಯರ್ ಮಾತ್ರ ನೋಡಿಕೊಳ್ಳುತ್ತಿದ್ದೆವು. ಬೇರೆ ಯಾರೂ ಗುಮಾಸ್ತರಿರಲಿಲ್ಲ. ವ್ಯವಹಾರಗಳು ಮಾತ್ರ ಅತ್ಯಂತ ಸಣ್ಣ ಪ್ರಮಾಣದಲ್ಲಿ ನಡೆಯುತ್ತಿತ್ತು. ಅಲ್ಲದೆ ವ್ಯಾವಹಾರಿಕ ಬಂಡವಾಳ ಕೇವಲ ರೂ.2,88,560-00 ಇತ್ತು. ಇತರೆ ಖಾತೆಗಳಲ್ಲಿ ಕೇವಲ ಕೆಲವೇ ಸಾವಿರಗಷ್ಟು ಹಣ ಹತ್ತು. ರಿಜರ್ವ್ ಫಂಡ್ ಇರಲೇ ಇಲ್ಲ. ಷೇರು ಹಣ ಒಂದು ಲಕ್ಷ ಹತ್ತು ಸಾವಿರ ಇತ್ತು. ನಗದು ಠೇವಣಿ ಇರಲೇ ಇಲ್ಲ. ಈ ಬ್ಯಾಂಕು 1966ರಲ್ಲಿ ಪ್ರಾರಂಭವಾಗಿದ್ದು ಕೇವಲ 500 ರೂ. ಗಳನ್ನು ಮಾತ್ರ ಸದಸ್ಯರುಗಳಿಗೆ ಆಧಾರರಹಿತ ಸಾಲವನ್ನು ಕೊಡುತ್ತಿತ್ತು. ಆಗ 843 ಜನ ಸದಸ್ಯರಿದ್ದರು. ಬ್ಯಾಂಕನ್ನು ಯಾವ ನಿಟ್ಟಿನಿಂದ ನೋಡಿದರೂ ಕೂಡ ಅದನ್ನು ಬ್ಯಾಂಕು ಎಂದು ಕರೆಯುವ ಮಟ್ಟಿಗೆ ಹಣಕಾಸಿನ ಪರಿಸ್ಥಿತಿ ಇರಲಿಲ್ಲ. ಕೊಟ್ಟ ಸಾಲ ಸರಿಯಾಗಿ ವಾಪಸ್ ಬರುತ್ತಿರಲಿಲ್ಲ. ಆದರೆ ನಾನು ಮಾತ್ರ ಬ್ಯಾಂಕಿನ ಕೆಲಸಕ್ಕೆ ಸಮಯಕ್ಕೆ ಸರಿಯಾಗಿ ಬಂದು ಹಾಜರಾಗುತ್ತಿದ್ದೆ. ನನಗೆ ಬ್ಯಾಂಕಿನ ವಿಚಾರಗಳೇನೂ ಅಷ್ಟಾಗಿ ಗೊತ್ತಿರಲಿಲ್ಲ. ಆಡಿಟ್‌ರವರು ವರ್ಷ ವರ್ಷವೂ ತನಿಖೆಗೆ ಬಂದು ತಪಾಸಣೆ ಮಾಡಿಕೊಂಡು ಹೋಗುತ್ತಿದ್ದರು. ಬ್ಯಾಂಕಿನಲ್ಲಿ ಯಾವುದೇ ಲೋಪ ದೋಷಗಳಿವೆ ಎಂದು ಆಡಿಟ್ ರಿಪೋರ್ಟ್‌ನಲ್ಲಿ ತೋರಿಸಿರಲಿಲ್ಲ. ಸದಸ್ಯರುಗಳಿಂದ ಯಾವ ತಕರಾರುಗಳೂ ಇರಲಿಲ್ಲ. ಆಡಿಟ್ ಕೆಲಸವನ್ನು 8-10 ದಿನಗಳು ನಡೆಸಿ ಆಡಿಟ್ ರಿಪೋರ್ಟ್‌ನ್ನು

ಕೊಡುತ್ತಿದ್ದರು. ನಾನು ಆಗಾಗ ಷೇರು ಮತ್ತು ಲೋನ್ ಬಾಕಿಯನ್ನು ವಸೂಲಿ ಮಾಡಲು ಹೋಗುತ್ತಿದ್ದೆ. ಹೀಗಾಗಿ ನಾನು ಬ್ಯಾಂಕಿನಲ್ಲಿ ಸರ್ವ ರೀತಿಯಲ್ಲೂ ಸಮರ್ಪಕವಾಗಿ ಕೆಲಸಮಾಡುತ್ತಿದ್ದೇನೆಂದು ಭಾವಿಸಿದ್ದೆ. ಹೀಗೆಯೇ ಸುಮಾರು 1972ರ ವರೆಗೂ ನಡೆಯುತ್ತಿತ್ತು. 1972ನೇ ಇಸವಿಯಲ್ಲಿ ಫೆಬ್ರವರಿಯಲ್ಲಿ ರಿಸರ್ವ್ ಬ್ಯಾಂಕಿನವರು ಇನ್ಸ್‌ಫೆಕ್ಷನ್‌ಗೆ ಬಂದರು. ಅದಕ್ಕೂ ಮುಂಚೆ ಜನವರಿ ತಿಂಗಳಲ್ಲೇ ಆರ್.ಬಿ.ಐನವರು ಇನ್ಸ್‌ಫೆಕ್ಷನ್‌ಗೆ ಬರುವ ಬಗ್ಗೆ ಪತ್ರ ಬರೆದಿದ್ದರಂತೆ ಅದನ್ನು ನಾನೇ ಆಗಲಿ ಕಾರ್ಯದರ್ಶಿಯವರೇ ಆಗಲಿ ನೋಡಿರಲಿಲ್ಲ. ನಮ್ಮ ಕ್ಯಾಷಿಯರ್‌ರೂ ಸಹ 10 ದಿನಗಳ ಹಿಂದೆಯಷ್ಟೇ ರಜಾ ಹೋಗಲು ಅಪ್ಪಣೆ ಕೇಳಿದ್ದು ನಾನು ಮತ್ತು ಕಾರ್ಯದರ್ಶಿಗಳು ಅವರಿಗೆ ರಜಾ ಮಂಜೂರು ಮಾಡಿದ್ದೆವು. ಆತನು ಮೂವತ್ತು ದಿನಗಳ ರಜಾ ಪಡೆದಿದ್ದ. ಸಾಲದ ಲೆಡ್ಜರ್‌ಗಳನ್ನು ಬಿಟ್ಟರೆ ಬೇರೆ ಯಾವ ಲೆಡ್ಜರ್‌ಗಳನ್ನು ನಮಗೆ ಒಪ್ಪಿಸಿರಲಿಲ್ಲ. ನಾನು ಈ ವಿಷಯವನ್ನು ಆರ್. ಬಿ.ಐ.ನ ತನಿಖಾಧಿಕಾರಿಗಳಿಗೆ ತಿಳಿಸಿ ಕ್ಯಾಷಿಯರ್ ರಜದಿಂದ ಮರಳಿ ಬ್ಯಾಂಕಿಗೆ ಬರುವವರೆಗೂ ನಮ್ಮ ಬ್ಯಾಂಕಿನ ತನಿಖೆ ಮಾಡಲು ಸಾಧ್ಯವಾಗುವುದಿಲ್ಲ ಎಂದು ತಿಳಿಸಿ ಹೆಡ್ ಆಫೀಸ್‌ಗೂ ಸಹ ಈ ವಿಷಯವನ್ನು ವರದಿ ಮಾಡಿದೆ.

ಈ ಮಧ್ಯೆ ನಾನು ಬ್ಯಾಂಕಿನಲ್ಲಿರಬೇಕಾದರೆ ನನ್ನ ಹೆಸರಿನ ಒಂದು ಟೆಲಿಗ್ರಾಂ ಬಂತು. ಅದರಲ್ಲಿ "Bus Accident, Cashier Died. His belongs will follow, inform his house immediately" ಎಂದು ಇತ್ತು. ಈ ಪೋಸ್ಟ್ ಮಂತ್ರಾಲಯದ ಪಕ್ಕದ ಟೌನ್ ಅದೋನಿ ಎಂಬ ಊರಿನಿಂದ ಬಂದಿತ್ತು. ಕೂಡಲೆ ನಾನು ಮತ್ತು ಆಗಿನ ಕಾರ್ಯದರ್ಶಿಯವರಾಗಿದ್ದ ಶ್ರೀ ಎಸ್. ವಿ. ಕೆ. ರಾಜನ್‌ರವರು ಟೆಲಿಫೋನ್ ಮೂಲಕ ಆ ಸ್ಥಳಕ್ಕೆ ಸಂಪರ್ಕಿಸಿದೆವು. ಮತ್ತು ನಮ್ಮ ಕ್ಯಾಷಿಯರ್ ಆಗಾಗ್ಗೆ ಹೋಗುತ್ತಿದ್ದ ಕಡೆಗೆಲ್ಲಾ ಫೋನ್ ಮೂಲಕ ಸಂಪರ್ಕಿಸಿದೆವು, ಯಾವ ಬಸ್ಸೂ ಆಕ್ಸಿಡೆಂಟ್ ಆಗಿಲ್ಲ. ಯಾರೂ ಸತ್ತಿಲ್ಲವೆಂದು ತಿಳಿದು ಬಂತು. ಆಗ ಕೂಡಲೇ ಈ ವ್ಯಕ್ತಿಯ ಬಗ್ಗೆ ನನಗೆ ಶಂಕೆ ಬಂತು. ಆತನನ್ನು ನೋಡಲು ಅವರ ಬಂಧುಗಳ ಮೂಲಕ ಪ್ರಯತ್ನಪಡಲಾಯ್ತು. ಅವರು ಯಾತ್ರೆಯಲ್ಲಿದ್ದಾರೆ ಎಂದು ಮಾತ್ರ ತಿಳಿದು ಬಂದಿತು. ಆದರೆ ಆರ್. ಬಿ. ಐ.ನವರು ನಮಗೆ ಪತ್ರ ಬರೆದು ಸಮಯಾವಕಾಶ ಕೊಡದೆ ತನಿಖೆ ಮಾಡಲು ಒತ್ತಾಯಮಾಡಿದರು. ಆಗ ಇಂಡಿಯನ್ ಬ್ಯಾಂಕಿನಿಂದ ಮೇನೇಜರ್ ಆಗಿ ನಿವೃತ್ತಿಯಾಗಿದ್ದ ಶ್ರೀ ಎಂ. ಶಂಕರಪ್ಪನವರನ್ನು ಕೇಳಿಕೊಂಡು ಲಭ್ಯವಿದ್ದ ಸಾಲದ ರಿಜಿಸ್ಟರ್‌ಗಳ ಆಧಾರದ ಮೇಲೆ ಬ್ಯಾಂಕಿನ ಹಣಕಾಸಿನ ಪಟ್ಟಿಯನ್ನು ತಯಾರಿಸಲಾಯ್ತು. ಅದರ ಪ್ರಕಾರ ಸುಮಾರು ರೂ. 5000 ಹಣ ಬ್ಯಾಂಕಿನಿಂದ ಖೋತವಾಗಿದೆ ಎಂದು ಗೊತ್ತಾಯಿತು. ಆ ವರದಿಯನ್ನು ಆರ್.ಬಿ.ಐ. ನವರು ಪರಿಶೀಲನೆ ಮಾಡಿ ಅಂತಿಮ ರಿಪೋರ್ಟ್ ಕಳುಹಿಸಲು ಆದೇಶಿಸಿದರು. ಈ ಹಿಂದೆ

ನಮ್ಮ ಬ್ಯಾಂಕನ್ನು 3 ವರ್ಷಗಳ ಕಾಲ ಸತತವಾಗಿ ಆಡಿಟ್‌ಮಾಡಿದ್ದ, ಸಹಕಾರ ಇಲಾಖೆಯ ಆಡಿಟ್‌ರವರಾದ ಶ್ರೀ ಶ್ರೀನಿವಾಸಮೂರ್ತಿ ಎಂಬುವರನ್ನು ಪುನಃ ಆಡಿಟ್ ಮಾಡಲು ಕೋರಲಾಯ್ತು.

ಅವರನ್ನು ಪತ್ತೆ ಮಾಡುವುದೇ ಕಷ್ಟವಾಯ್ತು. ಅವರು ಆಫೀಸಿಗೆ ಬರುತ್ತಲೇ ಇರಲಿಲ್ಲ. ಅವರ ಸರಿಯಾದ ಅಡ್ರೆಸ್ ಸಹ ಕೊಟ್ಟಿರಲಿಲ್ಲ. ಒಂದು ತಿಂಗಳು ಹುಡುಕಿ ಪತ್ತೆಮಾಡಿದರು. ಆಡಿಟ್ ಮಾಡಲು ಒಪ್ಪಿಸುವುದು ತುಂಬಾ ಕಷ್ಟವಾಯ್ತು. ಅವರು ಆಡಿಟ್‌ಮಾಡಿ ವರದಿಯನ್ನು ಕೊಟ್ಟರು. ಈ ವರದಿಯನ್ನು ಆಡಳಿತ ಮಂಡಳಿಯವರು ಒಪ್ಪಲಿಲ್ಲ. ಅನಂತರ ಚಾರ್ಟರ್ಡ್ ಅಕೌಂಟೆಂಟ್‌ರಾದ ಶ್ರೀ ಲಕ್ಷ್ಮೀಪತಯ್ಯನವರಿಗೆ ಈ ಲೆಕ್ಕಗಳನ್ನು ಒಪ್ಪಿಸಿದೆವು. ಇಷ್ಟಾದರೂ ಕ್ಯಾಷಿಯರ್ ಬ್ಯಾಂಕಿಗೆ ವಾಪಾಸ್ ಬರಲೇ ಇಲ್ಲ. ಈ ಮಧ್ಯೆ ನಾನು ಮತ್ತು ಒಬ್ಬ ನಿರ್ದೇಶಕರಾದ ಶ್ರೀ ವಿ. ನಾರಾಯಣಸ್ವಾಮಿಯವರು ಸೇರಿ ಕ್ಯಾಷಿಯರ್‌ರವರನ್ನು ಹುಡುಕಿಕೊಂಡು 1974 ಸಾಲಿನ ಏಪ್ರಿಲ್ ತಿಂಗಳು 16ನೇ ತಾರೀಖಿನಂದು ಮಂತ್ರಾಲಯಕ್ಕೆ ಹೋದೆವು. ಅವರ ಪರಿಚಯಸ್ಥರೊಬ್ಬರು ಹೇಳಿದರು ಈಗ ಮೂರು ದಿನಗಳ ಹಿಂದೆ ಅವರು ಈ ಸ್ಥಳದಿಂದ ವಾಪಸ್ ಹೋದರು ಎಂದು. ಶ್ರೀ ರಾಘವೇಂದ್ರ ಸ್ವಾಮಿಯವರನ್ನು ಪ್ರಾರ್ಥಿಸಿ ಇನ್ನು ಒಂದು ವಾರದೊಳಗೆ ಆತನನ್ನು ದೊರಕಿಸಿಕೊಡುವಂತೆ ಪ್ರಾರ್ಥಿಸಿಕೊಂಡು ವಾಪಾಸ್ ಬೆಂಗಳೂರಿಗೆ ಹಿಂತಿರುಗಿದೆವು. ಶ್ರೀ ರಾಘವೇಂದ್ರಸ್ವಾಮಿಯವರ ದಯೆಯಿಂದ ಅದೇ ತಿಂಗಳ 23ನೇ ತಾರೀಖು ಅವರು ನಮ್ಮ ಬ್ಯಾಂಕಿನ ಅಟೆಂಡರ್‌ರಾಗಿದ್ದ ಶ್ರೀ ಮುತ್ತು ರಾಯಪ್ಪ ಎಂಬುವರಿಗೆ ಮಲ್ಲೇಶ್ವರಂ ಸರ್ಕಲ್‌ನಲ್ಲಿ ಸಿಕ್ಕಿದರು. ಆದರೆ ಅವರು ಮುತ್ತುರಾಯಪ್ಪನವರಿಗೆ ಇಲ್ಲಸಲ್ಲದ ಸಬೂಬನ್ನು ಹೇಳಿ ಮಧ್ಯಾಹ್ನ 4 ಗಂಟೆಗೆ ಮಲ್ಲೇಶ್ವರಂ ರೈಲ್ವೆಸ್ಟೇಷನ್ ಹತ್ತಿರ ಅವರು ನಡೆಸುತ್ತಿರುವ ಹಾಲಿನ ಬೂತ್ ಬಳಿ ಬರುತ್ತೇವೆಂದು ತಿಳಿಸಿ ಹೋದರು ಎಂದು ಅನಂತರ ಮುತ್ತುರಾಯಪ್ಪನವರು ತಿಳಿಸಿದರು. ನಾನು ಕೂಡಲೆ ಮಲ್ಲೇಶ್ವರಂ ರೈಲ್ವೆ ಸ್ಟೇಷನ್‌ಗೆ ನನ್ನ ಕಾರಿನಲ್ಲಿ ಹೋದೆ. ಕಾರನ್ನು ಬೇರೆ ಕಡೆ ನಿಲ್ಲಿಸಿ ಆತನಿಗಾಗಿ ಕಾಯುತ್ತಾ ಇದ್ದೆ. ಆತ ಬರಲೇ ಇಲ್ಲ, ಸುಮಾರು 6 ಗಂಟೆಯ ವರೆಗೂ ನೋಡಿ ವಾಪಸ್ ಹೋಗೋಣವೆಂದು ಚಿಂತಿಸುತ್ತಿರುವಾಗ ನಮ್ಮ ಹಳ್ಳಿಯಿಂದ ಬಂದಿದ್ದ ಕಿಟ್ಟಯ್ಯನಪಾಳ್ಯದ ಗಂಗಪ್ಪ ಎಂಬುವರು ನಮ್ಮ ಮನೆಗೆ ಹೋಗಿದ್ದು ನನ್ನನ್ನು ವಿಚಾರಿಸಿದರಂತೆ, ಆಗ ನಮ್ಮ ಮನೆಯವರು ಅವರಿಗೆ ಹೇಳಿದ ಪ್ರಕಾರ ಬ್ಯಾಂಕಿನ ಕಾರ್ಯದರ್ಶಿಯಾಗಿದ್ದ ಶ್ರೀ ಎಸ್. ವಿ. ಕೆ. ರಾಜನ್‌ರವರು ಆಗತಾನೆ ನಮ್ಮ ಮನೆಗೆ ಫೋನ್ ಮಾಡಿ ಕ್ಯಾಷಿಯರಾಗಿದ್ದ ಶ್ರೀ ಗುರುರಾಜ್‌ರವರು ಶ್ರೀ ರಾಜನ್ ಅವರ ಆಫೀಸಿನಲ್ಲಿ ಇರುತ್ತಾರಂತೆ ಕೂಡಲೆ ಅವರನ್ನು ನೋಡಬೇಕಂತೆ ಎಂದು ತಿಳಿಸಿದರು. ಕೂಡಲೆ ರಾಜನ್‌ರವರ ಕಚೇರಿಗೆ ಹೋದೆ ಅಲ್ಲಿ ಕ್ಯಾಷಿಯರ್ ಇದ್ದರು. ಕೂಡಲೇ ಅವರನ್ನು ಪೊಲೀಸ್ ಸ್ಟೇಷನ್ನಿಗೆ ಕರೆದುಕೊಂಡು ಹೋಗಿ ಹಾಜರುಪಡಿಸಿದೆ. ಪೊಲೀಸ್

ಸ್ಟೇಷನ್ನಿನಲ್ಲಿ ಇನ್ಸ್‌ಪೆಕ್ಟರ್‌ರವರ ಮುಂದೆ ಹೇಳಿಕೆ ನೀಡಿ ನಾನು ಬ್ಯಾಂಕಿನ ಹಣವನ್ನು ದುರುಪಯೋಗಪಡಿಸಿಕೊಂಡಿರುವುದು ನಿಜವೆಂತಲೂ, ಎಷ್ಟು ಹಣ ದುರುಪಯೋಗವಾಗಿದೆ ಎಂದು ತಿಳಿಸಲು ಈಗ ಸಾಧ್ಯವಿಲ್ಲವೆಂತಲೂ ಹಾಗೂ ಎಲ್ಲಾ ಹಣವನ್ನೂ ನಾನೊಬ್ಬನೇ ಉಪಯೋಗಿಸಿಕೊಂಡಿರುವುದು ನಿಜವೆಂತಲೂ ಹೇಳಿಕೆಯನ್ನು ಕೊಟ್ಟು ಬ್ಯಾಂಕಿಗೆ ನಿತ್ಯವೂ ಹಾಜರಾಗಿ ಲೆಕ್ಕಗಳನ್ನು ತನಿಖೆ ಮಾಡಲು ಸಹಕರಿಸುತ್ತೇನೆಂದೂ ಹೇಳಿಕೆ ಕೊಟ್ಟಮೇಲೆ ಆತನನ್ನು ಬಿಡುಗಡೆ ಮಾಡಿದರು. ಅನಂತರ ಪ್ರತಿದಿನವೂ ಆತನು ಬ್ಯಾಂಕಿಗೆ ಬರಲು ಪ್ರಾರಂಭಿಸಿದನು ಆ ವೇಳೆಯಲ್ಲಿ ಇಲಾಖಾ ಆಡಿಟರವರಾದ ಶ್ರೀ ಶ್ರೀನಿವಾಸಮೂರ್ತಿಯವರನ್ನು ಕರೆಸಿ ಅವರಿಂದ ಮತ್ತೊಮ್ಮೆ ವಿವರವಾದ ಆಡಿಟ್ ವರದಿಯನ್ನು ಮಾಡಿಸಿದೆವು. ಆ ವರದಿಯನ್ನು ಆಡಳಿತ ಮಂಡಲಿಯವರು ಒಪ್ಪಲಿಲ್ಲ. ಕಡೆಗೆ ಆಡಳಿತ ಮಂಡಳಿಯ ಆದೇಶದಂತೆ ಚಾರ್ಟರ್ಡ್ ಅಕೌಂಟೆಂಟ್ ಲಕ್ಷ್ಮೀಪತಯ್ಯನವರನ್ನು ಲೆಕ್ಕಪತ್ರಗಳನ್ನು ಕೂಲಂಕುಷವಾಗಿ ತನಿಖೆ ಮಾಡಲು ನೇಮಿಸಿಕೊಂಡೆವು. ಅವರು ಶ್ರೀ ಸುಬ್ಬರಾವ್ ಎಂಬ ಆಡಿಟರವರನ್ನು ನಮ್ಮ ಬ್ಯಾಂಕಿಗೆ ಕಳುಹಿಸಿದರು. ಶ್ರೀ ಸುಬ್ಬರಾವ್‌ರವರು ಸುಮಾರು 3 ತಿಂಗಳು ಕಾಲ ನಮ್ಮ ಬ್ಯಾಂಕಿನ ಲೆಕ್ಕಗಳನ್ನು ಆಡಿಟ್‌ಮಾಡಿ ತಮ್ಮ ವರದಿಯನ್ನು ತಯಾರಿಸಿದರು. ಅದರ ಪ್ರಕಾರ ರೂ. 3,800 ಗಳಷ್ಟು ಹಣ ದುರುಪಯೋಗವಾಗಿದೆಯೆಂದು ಇದು ಬ್ಯಾಂಕ್ ಪ್ರಾರಂಭವಾದಾಗಿನಿಂದಲೂ ನಡೆದು ಬಂದಿದ್ದು ಇಲಾಖಾ ಆಡಿಟ್‌ನವರು ಪ್ರತಿ ವರ್ಷದ ತಮ್ಮ ರಿಪೋರ್ಟ್‌ನಲ್ಲಿ ಈ ಲೋಪವನ್ನು ನಮೂದು ಮಾಡಿರುವುದಿಲ್ಲವೆಂದು ತಿಳಿಸಿದರು. ಈ ವರದಿಯನ್ನು ಆಡಳಿತ ಮಂಡಳಿಯು ಒಪ್ಪಿ ಸರ್ವಸದಸ್ಯರ ಸಭೆಯಲ್ಲಿ ಮಂಡಿಸಿದರು. ಈ ವಿಷಯವಾಗಿ ವಿವಾದಗಳು ಬೆಳಗ್ಗೆ 10 ಗಂಟೆಯಿಂದ ಸಾಯಂಕಾಲ 5 ಗಂಟೆಯವರೆಗೂ ಬಹಳ ಗಂಭೀರವಾಗಿ ನಡೆದವು. ಎಲ್ಲಕ್ಕೂ ಸೂಕ್ತ ಸಮಜಾಯಿಷಿಗಳನ್ನು ಕೊಟ್ಟೆವು. ಜನರಲ್ ಬಾಡಿ ಮೀಟಿಂಗ್‌ನಲ್ಲೂ ಸಹ ಇದೇ ಕ್ಯಾಷಿಯರ್ ಹಾಜರಾಗಿ ಈ ಹಣವನ್ನು ನಾನು ದುರುಪಯೋಗಪಡಿಸಿಕೊಂಡಿರುವುದು ನಿಜವೆಂದೂ ಸ್ಟೇಟ್‌ಮೆಂಟ್‌ನ್ನು ತಮ್ಮ ಸ್ವಹಸ್ತದಿಂದ ಬರೆದುಕೊಟ್ಟರು. ಕಡೆಗೆ ಹಣ ವಸೂಲು ಮಾಡುವ ಕ್ರಮ ತೆಗೆದುಕೊಳ್ಳುವ ವಿಚಾರ ಬಂತು. ಆಗ ವಕೀಲರಾದ ಶ್ರೀ ಎಂ. ಹನುಮಂತಯ್ಯನವರು ಸಲಹೆ ಮಾಡಿದರು. ಈ ಅಪರಾಧಿಯನ್ನು ಕ್ರಿಮಿನಲ್ ಪ್ರಾಸಿಕ್ಯೂಷನ್‌ಗೆ ಒಳಪಡಿಸಿದರೆ ಆತನಿಗೆ ಶಿಕ್ಷೆಯಾಗುವುದೇ ಹೊರತು ಬ್ಯಾಂಕಿನ ಹಣ ವಸೂಲಾಗುವುದು ಕಷ್ಟ. ಅದರ ಬದಲು ಆತನ ಮೇಲೆ ಡಿಕ್ರಿ ಪಡೆದು ಹಣ ವಸೂಲ್ಮಾಡಲು ಕ್ರಮ ತೆಗೆದುಕೊಳ್ಳುವುದು ಒಳ್ಳೆಯದೆಂದು ಸಲಹೆ ಮಾಡಿದರು.

ಆ ಸಭೆಯಲ್ಲಿ ಸುಮಾರು 300-400 ಜನ ಸದಸ್ಯರಿದ್ದರು. ಈ ಸಲಹೆಯನ್ನು ಒಪ್ಪಬಹುದೆಂದು ಸರ್ವಾನುಮತದಿಂದ ಒಪ್ಪಿಕೊಂಡರು. ಇಷ್ಟು ದೊಡ್ಡ ಮೊಬಲಗನ್ನು ವಾಪಸ್ ಕೊಡಲು ನನಗೆ ಕಾಲಾವಕಾಶ ಮಾಡಿಕೊಡಬೇಕೆಂದು ಕ್ಯಾಷಿಯರ್‌ರವರು

ಸಭೆಗೆ ಮನವಿ ಮಾಡಿಕೊಂಡರು. ಅಲ್ಲದೆ ಒಂದು ವಿಶೇಷವಾದ ಮುಚ್ಚಳಿಕೆಯನ್ನು ಬರೆದು ಕೊಟ್ಟರು. ಅದೇ ಪ್ರಕಾರ ಅವರ ಮೇಲೆ ಡಿಕ್ರಿಯೂ ಆಯಿತು. ಈ ಮಧ್ಯೆ ಅವರು ಪ್ರತಿ ತಿಂಗಳೂ ಸಾಧ್ಯವಾದಷ್ಟು ಹಣವನ್ನು ಬ್ಯಾಂಕಿಗೆ ಕಟ್ಟುತ್ತಾ ಬಂದರು. ಅಲ್ಲದೆ ಈ ಮಧ್ಯೆ ಅಡ್ವೋಕೇಟ್‌ರವರ ಸಲಹೆ ಪಡೆದು ಅವರ ತಂದೆ ಹೆಸರಿನಲ್ಲಿದ್ದ ಒಂದು ಸ್ಥಿರಾಸ್ತಿಯನ್ನು ಬ್ಯಾಂಕಿಗೆ (ಅವರ ತಂದೆ ದಿವಂಗತರಾಗಿದ್ದರಿಂದ) ಅವರ ತಾಯಿಯು ಹಾಗೂ ತಾವು ಜಂಟಿಯಾಗಿ ಆಧಾರ ಮಾಡಿಕೊಡುವುದರ ಮೂಲಕ ರೂ. 5000-00ಗಳನ್ನು ಸಾಲವಾಗಿ ಕೊಟ್ಟು ಆ ಮೊಬಲಗನ್ನು ಅವರಿಗೆ ಕ್ಯಾಷ್ ಕೊಡದೆ ಅವರು ದುರುಪಯೋಗ ಪಡಿಸಿಕೊಂಡಿದ್ದ ಮೊಬಲಗಿಗೆ ಜಮಾ ಮಾಡಿ ಕೊಂಡೆವು. ಅದನ್ನು ಬ್ಯಾಂಕಿಗೆ ಅವರ ಬಾಕಿಗೆ ಜಮಾ ಮಾಡಿಕೊಂಡ ನಂತರ ಆ ಆಸ್ತಿಯನ್ನು ಹರಾಜು ಮಾಡಿ ಛಪಾವಣೆಯಾಗಿದ್ದ ಪೂರ್ತಾ ಹಣವನ್ನು ವಸೂಲಿ ಮಾಡಲು ಏರ್ಪಾಡುಮಾಡಿದೆ. ಅದರಂತೆ ಸುಮಾರು ರೂ. 30000-00ಗಳಿಗೆ ಆ ಆಸ್ತಿಯನ್ನು 1976ರಲ್ಲಿ ಹರಾಜು ಮಾಡಲಾಯ್ತು. ಅವರಿಂದ ಬರಬೇಕಾದ ಬಾಕಿ ಪೂರ್ತಿಯಾಗಿ ಬ್ಯಾಂಕಿಗೆ ಸಂದಾಯವಾಯಿತು. ಬಡ್ಡಿಯನ್ನು ಸಹ ವಸೂಲಿ ಮಾಡಲಾಯಿತು. ಅನಂತರ ಅವರನ್ನು ಕೆಲಸದಿಂದ ನಿವೃತ್ತಿಗೊಳಿಸಲಾಯಿತು.

ಈ ಗಲಾಟೆ ನಡೆಯುತ್ತಿರಬೇಕಾದರೆ ಬ್ಯಾಂಕಿನ ಅನೇಕ ಜನ ಸದಸ್ಯರುಗಳಿಗೆ ಬ್ಯಾಂಕಿನ ವ್ಯವಹಾರದ ಬಗ್ಗೆ ಶಂಕೆ ಬಂದದ್ದು ಸಹಜ. ಷೇರು ಹಣವನ್ನು ವಾಪಸು ಪಡೆಯಲು ತಗಾದೆ ಮಾಡುತ್ತಿದ್ದರು. ಹಣ ದುರುಪಯೋಗವಾಗಿದ್ದ ಕಾರಣ ನಾವು ಸದಸ್ಯರುಗಳಿಗೆ ರೂ. 100-00 ಷೇರು ಹಣವನ್ನು ವಾಪಸು ಮಾಡಲು ಸಾಧ್ಯವಾಗಿಲ್ಲ ವಾಗಿ ಕೇವಲ ರೂ. 85-00ಗಳನ್ನು ಮಾತ್ರ ವಾಪಸು ಕೊಡುತ್ತಿದ್ದೆವು. ಅನೇಕ ಸದಸ್ಯರು ದಿನವೂ ಗಲಾಟೆ ಮಾಡುತ್ತಿದ್ದರು. ಬ್ಯಾಂಕು ಕೊಟ್ಟಿದ್ದ ಸಾಲ ವಸೂಲಿ ಯಾಗದೆ ತುಂಬಾ ಬಾಕಿ ಉಳಿದಿತ್ತು. ಅಂತಹ ಸದಸ್ಯರುಗಳ ಮೇಲೆ ದಾವ ಹೂಡಿ ಸುಮಾರು ರೂ. 25000-00ಗಳ ಸುಸ್ತಿ ಸಾಲವನ್ನು ಕಡ್ಡಾಯವಾಗಿ ವಸೂಲಿ ಮಾಡಲಾಯಿತು. ದುರುಪಯೋಗವಾದ ಹಣ ರೂ. 38000-00 ಹಾಗೂ ಸುಸ್ತಿಯಾಗಿದ್ದ ಸಾಲದ ಹಣ ಎಲ್ಲವೂ ವಸೂಲಾದ ನಂತರ ಸದಸ್ಯರುಗಳು ಷೇರು ಹಣವನ್ನು ವಾಪಸು ಕೇಳುವುದನ್ನು ಬಿಟ್ಟು ಹೊಸ ಸದಸ್ಯರಾಗಲು ಸೇರಿಕೊಳ್ಳ ಲಾರಂಭಿಸಿದರು. ಹೀಗೆ ಮುಚ್ಚಬೇಕಾಗಿದ್ದ ಪೂರ್ಣ ಮುಳುಗಿಹೋಗಿದ್ದ ಈ ಬ್ಯಾಂಕನ್ನು ಇಂದು ನಗರದ ಸಹಕಾರಿ ಬ್ಯಾಂಕುಗಳಲ್ಲೇ ಒಂದು ಉತ್ತಮ ಮಟ್ಟದ ಬ್ಯಾಂಕನ್ನಾಗಿ ಬೆಳೆಸಿ ಭದ್ರವಾದ ಆರ್ಥಿಕ ಸ್ಥಿತಿಗೆ ತರುವಲ್ಲಿ ಬಹಳಷ್ಟು ಶ್ರಮಿಸಬೇಕಾ ಯಿತು. ಸುಮಾರು 5 ವರ್ಷಗಳ ಕಾಲ ಹಗಲು ರಾತ್ರಿ ನಿದ್ರೆ ಆಹಾರವಿಲ್ಲದೆ ಶ್ರಮ ವಹಿಸಿ ನನ್ನ ಕರ್ತವ್ಯವನ್ನು ತ್ರಿಕರಣಶುದ್ಧಿಯಾಗಿ ನಿರ್ವಹಿಸಿ ಬ್ಯಾಂಕನ್ನು ಬೃಹತ್ತಾಗಿ ಬೆಳೆಸಲು ಪ್ರಯತ್ನಿಸಿದೆ. ಹೀಗೆ ಶ್ರಮವಹಿಸಿ ಕಾರ್ಯ ಮಾಡಲು ನನಗೆ ಸಹಕಾರ

ಮಾರ್ಗದರ್ಶನ ಕೊಟ್ಟ ಎಲ್ಲಾ ಸಾಲುಗಳ ಆಡಳಿತ ಮಂಡಳಿಯ ಪದಾಧಿಕಾರಿಗಳಿಗೂ, ನಿರ್ದೇಶಕರುಗಳಿಗೂ ಹಾಗೂ ಸದಸ್ಯರುಗಳಿಗೂ ನಾನು ಈ ಸಂದರ್ಭದಲ್ಲಿ ಹೃತ್ಪೂರ್ವಕ ವಾಗಿ ವಂದನೆಗಳನ್ನು ಸಲ್ಲಿಸುತ್ತೇನೆ.

ಹಿಂದೆ ಬ್ಯಾಂಕು ನೆಹರೂನಗರದ ಸರ್ಕಲ್‌ನಲ್ಲಿ ಒಂದು ಸಣ್ಣ ಬಾಡಿಗೆ ಮನೆ ಯಲ್ಲಿತ್ತು. ಇಂದು ಪ್ರಮುಖ ಸ್ಥಳವಾದ ಶೇಷಾದ್ರಿಪುರಂ 1ನೇ ಮುಖ್ಯ ರಸ್ತೆಯಲ್ಲಿ ಸುಸಜ್ಜಿತವಾದ ಸುಭದ್ರವಾದ 15 ಲಕ್ಷಕ್ಕೂ ಮಿಗಿಲಾದ ಮೂರು ಅಂತಸ್ತಿನ ಸ್ವಂತ ಕಟ್ಟಡವನ್ನು ಹೊಂದಿ ಬಹಳ ವಿಜೃಂಭಣೆಯಿಂದ ಹಾಗೂ ಅಚ್ಚುಕಟ್ಟಾಗಿ ಕೆಲಸ ಮಾಡುತ್ತಿದೆ.

ಈ ಸಮಯದಲ್ಲಿ ಬ್ಯಾಂಕಿನ 1966ನೇ ಇಸವಿಯಲ್ಲಿ ಇದ್ದ ಹಣಕಾಸಿನ ಸ್ಥಿತಿಗಳ ಮತ್ತು ಹೀಗಿದ್ದ ಬ್ಯಾಂಕನ್ನು ಇಂದು ನಾನು ಯಾವ ರೀತಿ ಪೋಷಿಸಿ ಬೆಳೆಸುತ್ತಿದ್ದೇನೆ ಎಂಬುದನ್ನು ನಿಮ್ಮ ಮುಂದೆ ನಿರೂಪಿಸಲು ಇಚ್ಛಿಸುತ್ತೇನೆ. ಇದನ್ನು ತಮಗೆ ತಿಳಿಸದಿದ್ದರೆ ನನ್ನ ಕರ್ತವ್ಯ ಲೋಪವಾದೀತೆಂದು ನನ್ನ ಭಾವನೆ. ಇದನ್ನು ನಾನು ಕೇವಲ ಪ್ರಶಂಸೆ ಗಾಗಿ ಮಾಡುತ್ತಿಲ್ಲವೆಂದು ತಾವು ಯಾರೂ ಭಾವಿಸುವುದಿಲ್ಲವೆಂದು ತಿಳಿದು ಇಲ್ಲಿ ಹೇಳಬಯಸುತ್ತೇನೆ.

| | ವಿವರಗಳು | 1966–67ನೇ ಸಾಲುಗಳಲ್ಲಿದ್ದಂತೆ | 30–6–92ನೇ ದಿನಾಂಕಕ್ಕೆ |
|---|---|---|---|
| 1. | ಷೇರು ಮೊಬಲಗು | 65375–00 | 2267300–00 |
| 2. | ಸದಸ್ಯತ್ವ | 377 | 3325 |
| 3. | ರಿಸರ್ವ್ ಫಂಡ್ | ಇರಲಿಲ್ಲ | 1142348–27 |
| 4. | ಫಿಕ್ಸೆಡ್ ಡಿಪಾಸಿಟ್ | ಇರಲಿಲ್ಲ | 20893876–11 |
| 5. | ಕರೆಂಟ್ ಡಿಪಾಸಿಟ್ | 604 | 17954–00 |
| 6. | ಉಳಿತಾಯ ಲೆಕ್ಕ | 1264–00 | 1413277–00 |
| 7. | ವ್ಯವಹಾರಿಕ ಬಂಡವಾಳ | 108499–00 | 37971686–00 |
| 8. | ಲಾಭ ಗಳಿಕೆ | 6117 (ನಷ್ಟ) | 753621–00 ನಿವ್ವಳ ಲಾಭ |

9. ಡಿವಿಡೆಂಡ್ ಇಲ್ಲ. ಬ್ಯಾಂಕು ನಷ್ಟದಲ್ಲಿದ್ದುದರಿಂದ ಡಿವಿಡೆಂಡ್ ಕೊಡು ತ್ತಿರಲಿಲ್ಲ. ಈಗ ಶೇಕಡ 9 ಪ್ರತಿ ವರ್ಷವೂ ಕೊಡುತ್ತಿದ್ದೇವೆ.

ಈ ಸಮಯದಲ್ಲಿ ಒಂದು ಮಹತ್ವದ ವಿಷಯವನ್ನು ತಮ್ಮ ಮುಂದಿಡಲು ಬಯಸುತ್ತೇನೆ. ಹೆಚ್ಚಿಗೆ ವ್ಯವಹಾರಿಕ ಬಂಡವಾಳ ಡಿಪಾಸಿಟ್ ಷೇರು ವಗೈರೆ ಅಭಿವೃದ್ಧಿಗೆ ಬರಲು ನಮ್ಮ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಆಡಳಿತ ಮಂಡಳಿ ಯಲ್ಲಿರುವ 12 ವಿದ್ಯಾಸಂಸ್ಥೆಗಳು ಹಾಗೂ ಆ ಸಂಸ್ಥೆಗಳ ಮುಖ್ಯಸ್ಥರು, ಸಿಬ್ಬಂದಿ

ವರ್ಗದವರ ಸಹಕಾರ, ಸಹಾಯವೇ ಅತ್ಯಂತ ಮುಖ್ಯ ಕಾರಣವೆಂದು ಈ ಸಮಯದಲ್ಲಿ ಹೇಳುತ್ತಾ ಈ ವಿದ್ಯಾ ಸಂಸ್ಥೆಯ ಆಡಳಿತ ಮಂಡಳಿಯ ಪದಾಧಿಕಾರಿಗಳು ಸಂಸ್ಥೆಯ ಅಧ್ಯಕ್ಷರು, ಕೋಶಾಧ್ಯಕ್ಷರು ಬಹುವಾಗಿ ನಮ್ಮ ಬ್ಯಾಂಕಿಗೆ ಸಹಾಯ ಮಾಡುತ್ತಿರುತ್ತಾರೆ. ಅವರೆಲ್ಲರನ್ನು ನಾನು ಈ ಸಮಯದಲ್ಲಿ ಬ್ಯಾಂಕಿನ ಆಡಳಿತ ಮಂಡಳಿಯ ಪರವಾಗಿ ಹಾಗೂ ವೈಯಕ್ತಿಕವಾಗಿಯೂ ಕೃತಜ್ಞತಾ ಪೂರ್ವಕವಾಗಿ ವಂದಿಸುತ್ತೇನೆ.

ಈ ವಿದ್ಯಾಸಂಸ್ಥೆಯ ಶಿಕ್ಷಕರು ಹಾಗೂ ಶಿಕ್ಷಕೇತರರು ಹೆಚ್ಚು ಹೆಚ್ಚು ಜನ ಬ್ಯಾಂಕಿನ ಸದಸ್ಯರಾಗಿ ತಮ್ಮ ವಹಿವಾಟನ್ನು ಈ ಬ್ಯಾಂಕಿನಲ್ಲಿ ನಡೆಸಿ ಬ್ಯಾಂಕಿನ ಸೌಲಭ್ಯ ಗಳನ್ನು ಸದುಪಯೋಗಪಡಿಸಿಕೊಳ್ಳುತ್ತಿದ್ದಾರೆ. ಬ್ಯಾಂಕಿನ ಆಡಳಿತ ಮಂಡಳಿಯವರು ಸಹ ಅವರಿಗೆ ಪ್ರಥಮ ಪ್ರಾಶಸ್ತ್ಯದ ಸೇವೆಯನ್ನು ಕೊಟ್ಟು ಎಲ್ಲರಿಗಿಂತಲೂ ಹೆಚ್ಚಿನ ಸೌಲಭ್ಯಗಳನ್ನು ಒದಗಿಸುತ್ತಿದ್ದಾರೆ. ಆ ಶಿಕ್ಷಕ ವೃಂದಕ್ಕೆ ಹಾಗೂ ಶಿಕ್ಷಕೇತರ ವೃಂದಕ್ಕೂ ಸಹ ತುಂಬಾ ಸಹಕಾರಿಯಾಗಿದೆ.

ಹೀಗೆ ಒಂದು ಹಣಕಾಸಿನ ಸಂಸ್ಥೆ ಮತ್ತು ಒಂದು ವಿದ್ಯಾಸಂಸ್ಥೆ ಒಟ್ಟು ಲಕ್ಷ್ಮೀ ಸರಸ್ವತಿಯ ಸಂಗಮದಂತೆ ನಡೆಯುತ್ತಿದೆ. ನಮ್ಮ ಒಟ್ಟು ಕುಟುಂಬವು ನೂರಾರು ವರ್ಷಗಳ ಕಾಲ ಅವಿಭಕ್ತ ಕುಟುಂಬವಾಗಿದ್ದು ಕಾಲಸ್ಥಿತಿ ಬದಲಾವಣೆಯಾವಲ್ಲಿ ಒಡೆಯುತ್ತಿದ್ದರೂ ನಾನು ಒಂದು ಹಣಕಾಸಿನ ಸಂಸ್ಥೆ ಎರಡನೆಯದಾಗಿ ಒಂದು ಸರಸ್ವತಿ ಮಂದಿರದ ಒಂದು ಅವಿಭಕ್ತ ಕುಟುಂಬದ ಪ್ರಧಾನ ಕಾರ್ಯದರ್ಶಿಯಾಗಿ ನಮ್ಮ ವಿದ್ಯಾಸಂಸ್ಥೆಯ ಅಧ್ಯಕ್ಷರಾದ ಸನ್ಮಾನ್ಯ ಶ್ರೀ ಕೆ. ಎಂ. ನಂಜಪ್ಪ ಅವರ ಮಾರ್ಗ ದರ್ಶನದಲ್ಲಿ, ನನ್ನೆಲ್ಲಾ ಸಹೋದ್ಯೋಗಿಗಳ ಮತ್ತು ಸ್ನೇಹಿತರ ಸಹಾಯ ಸಹಕಾರಗಳಿಂದ ಇಂದಿಗೂ ಬಹಳ ಯಶಸ್ವಿಯಾಗಿ ನಡೆಸಿಕೊಂಡು ಹೋಗುತ್ತಿದ್ದೇನೆ. ಇದು ನನಗೆ ತುಂಬಾ ಹೆಮ್ಮೆಯ ವಿಷಯವಾಗಿದೆ. ಅಲ್ಲದೆ ನನಗೆ ಈ ಸಂಸ್ಥೆಗಳಲ್ಲಿ ಸೇವೆ ಮಾಡು ತ್ತಿರುವುದು ಅತ್ಯಂತ ತೃಪ್ತಿಯನ್ನು ಕೊಟ್ಟಿದೆ.

ಇಷ್ಟೆಲ್ಲಾ ಬ್ಯಾಂಕು ಅಭಿವೃದ್ಧಿಗೆ ಬಂದು ಇಂದು ನಗರದ ಇತರೆ ಸಹಕಾರ ಬ್ಯಾಂಕುಗಳಿಗೆ ಹೋಲಿಸಿದರೆ ಅತ್ಯುತ್ತಮವಾಗಿ ಸೇವೆ ಸಲ್ಲಿಸುತ್ತಾ ಆರ್ಥಿಕವಾಗಿ ಭದ್ರ ಬುನಾದಿ ಹೊಂದಿದ್ದು ತನ್ನದೇ ಆದ ವೈಶಿಷ್ಟ್ಯವನ್ನು ಪಡೆದಿದೆ. ಈ ಕೀರ್ತಿಯು ನನಗೆ ಈ ಬ್ಯಾಂಕಿಗೆ ಸೇವೆ ಸಲ್ಲಿಸಲು ಅನುವು ಮಾಡಿಕೊಟ್ಟು ಸದಾ ಪ್ರೋತ್ಸಾಹಿಸಿ ಮಾರ್ಗದರ್ಶನ ಮಾಡುತ್ತಿದ್ದ ಮತ್ತು ಈಗಲೂ ಮಾಡುತ್ತಿರುವ ಶ್ರೀಮಾನ್ ಡಬ್ಲ್ಯೂ. ಹೆಚ್. ಹನುಮಂತಪ್ಪ (ಜ್ಯೂನಿಯರ್) ರವರಿಗೆ ಸಲ್ಲತಕ್ಕದ್ದು. ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಅಲ್ಲದೆ ಅವರನ್ನು ನಾನು ಎಂದೆಂದಿಗೂ ಮರೆಯುವಂತಿಲ್ಲ. ಅವರ ತಂದೆಯವರಾದ ಬೆಂಗಳೂರು ಮಹಾಜನತೆಯ ಅಪಾರ ಪ್ರೀತಿ ವಿಶ್ವಾಸವನ್ನು ಗಳಿಸಿದ್ದ ಹಾಗೂ ಬೆಂಗಳೂರು ಮಹಾ ನಗರ ಪಾಲಿಕೆಯ ಪ್ರಥಮ

ಅಧ್ಯಕ್ಷರಾಗಿದ್ದ ಶ್ರೀಮಾನ್ ದಿವಂಗತ ಡಬ್ಲ್ಯು. ಹೆಚ್. ಹನುಮಂತಪ್ಪನವರು ಯಾವಾಗಲೂ ನನ್ನ ಮೇಲೆ ಪ್ರೀತಿ ಅಭಿಮಾನವಿಟ್ಟಿದ್ದರು. ನಾನು ಬೆಂಗಳೂರಿಗೆ ಬಂದಾಗಲೆಲ್ಲಾ ಅವರ ಮನೆಗೆ ಹೋಗಿ ಮಾರ್ಗದರ್ಶನ ಪಡೆಯುತ್ತಿದ್ದೆ. ನನಗೆ ಅನೇಕ ವಿಧವಾದ ಸಹಾಯ ಸಹಕಾರಗಳನ್ನು ಕೊಡುತ್ತಿದ್ದುದಲ್ಲದೆ ನನ್ನ ವಿಚಾರದಲ್ಲಿ ಅಪಾರ ವಾದ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಿದ್ದರು. ಭಗವಂತನು ಅವರ ಆತ್ಮಕ್ಕೆ ಚಿರಶಾಂತಿ ಯನ್ನು ಕೊಡಲಿ ಎಂದು ಹಾರೈಸುತ್ತೇನೆ. ಅವರು ಇಂದಿಗೂ ನನಗೆ ಪೂಜ್ಯರು ಹಾಗೂ ಪ್ರಾತಃಸ್ಮರಣೀಯರು. ಡಬ್ಲ್ಯು. ಹೆಚ್. ಹನುಮಂತಪ್ಪ ಅವರು ಖೋಡೆ ಮನೆತನದ ಮೂಲ ಪುರುಷರು ಮತ್ತು ಬೆಂಗಳೂರು ಬ್ರಹ್ಮ ಸಮಾಜದ ಸಂಸ್ಥಾಪಕರು. ಈ ಮನೆತನದ ಹೆಸರಿನಲ್ಲಿ ಈಗಲೂ ಬೆಂಗಳೂರು ಸಿಟಿ ಕಾರ್ಪೊರೇಷನ್‌ರವರು ಕಿಲಾರಿ ರೋಡಿನ ಒಂದು ರೋಡಿಗೆ, ಗಾಂಧೀನಗರದ ಒಂದು ರೋಡಿಗೆ ಇವರ ಹೆಸರನ್ನು ಇಟ್ಟು ಇವರನ್ನು ಗೌರವಿಸಿದ್ದಾರೆ. ನನಗೆ ಅತ್ಯಂತ ಸಂತೋಷವನ್ನುಂಟು ಮಾಡಿದೆ. ನಾನು ಈಗಲೂ ಈ ಮನೆತನದ ಮೇಲೆ ಅಪಾರವಾದ ಪ್ರೀತಿ ಗೌರವವನ್ನು ಇಟ್ಟುಕೊಂಡಿದ್ದೇನೆ. ಇವರ ತಮ್ಮಂದಿರಾದ ಡಬ್ಲ್ಯು. ಹೆಚ್. ಪುಟ್ಟಯ್ಯನವರು ಧರ್ಮಿಷ್ಟರು, ಸದ್ಗುಣ ಸಂಪನ್ನರು, ನಮ್ಮ ಜನಾಂಗದಲ್ಲಿ ಎಲ್ಲಾ ಧರ್ಮಕಾರ್ಯಗಳು, ದೇವತಾಕಾರ್ಯಗಳು, ಮದುವೆ ಇನ್ಯಾವುದೇ ಸಮಾರಂಭದಲ್ಲಿ ಎಲೆ ಮರೆಯ ಕಾಯಿಯಂತೆ ಇದ್ದು ಮಾರ್ಗ ದರ್ಶನ ಮಾಡುತ್ತಿದ್ದಾರೆ. ಅನೇಕ ವಿಧದಲ್ಲಿ ದಾನ ಧರ್ಮಗಳನ್ನು ಮಾಡುತ್ತಿರುವುದು ನಮ್ಮೆಲ್ಲರಿಗೂ ಹೆಮ್ಮೆಯನ್ನು ತರುತ್ತಿರುವ ಸಂಗತಿ. ಒಟ್ಟಿನಲ್ಲಿ ಇವರ ಮನೆತನದವರು ನಯವಿನಯ ಸಂಪನ್ನರು ಮತ್ತು ಸೌಜನ್ಯಶೀಲ ವ್ಯಕ್ತಿಗಳು. ನನ್ನ ಜೀವನ ಚರಿತ್ರೆ ಯನ್ನು ಬರೆಯುತ್ತಿರುವಾಗಲೇ ಶ್ರೀ ಪುಟ್ಟಯ್ಯನವರ ಮಗ ಡಬ್ಲ್ಯು. ಹೆಚ್. ಕೃಷ್ಣಪ್ಪ ರವರಿಗೆ ಕರ್ನಾಟಕ ಸರ್ಕಾರದಿಂದ ಅವರ ಪ್ರತಿಭೆ, ವಿದ್ವತ್ತು ಮತ್ತು ಯುವಜನಸೇವೆ ಯನ್ನು ಗುರುತಿಸಿ 1990ನೇ ಇಸವಿಯ "ಯುವ ಪ್ರಶಸ್ತಿ"ಯನ್ನು ದೊರಕಿಸಿಕೊಟ್ಟು ಈ ಮನೆತನಕ್ಕೆ ಹಾಗೂ ನಮಗೆಲ್ಲರಿಗೂ ಗೌರವತಂದಿದ್ದಾರೆ. ನೌಕರರೂ ಬ್ಯಾಂಕಿನವರಾದ ನಾವು ಇವರ ಗೌರವಾರ್ಥ ಒಂದು ಸನ್ಮಾನ ಸಮಾರಂಭವನ್ನು ದಿನಾಂಕ 8-2-1992ನೇ ತಾರೀಖು ಇಟ್ಟುಕೊಂಡು ಅವರು ಬ್ಯಾಂಕಿಗೆ ಕಳೆದ 5-6 ವರ್ಷಗಳಿಂದಲೂ ಸಲ್ಲಿಸಿರುವ ಸೇವೆಯನ್ನು ಸ್ಮರಿಸಿಕೊಂಡು ಫಲಪುಷ್ಪಗಳನ್ನು ಅರ್ಪಿಸಿ ನೆನಪಿನ ಕಾಣಿಕೆಯನ್ನು ಸಲ್ಲಿಸಿದ್ದೇವೆ. ಈ ಶುಭ ಸಂದರ್ಭದಲ್ಲಿ ನಡೆಯಬಾರದ ಒಂದು ದುರ್ಘಟನೆ ನಮ್ಮ ಮನೆಯಲ್ಲಿ ನಡೆದುದವನ್ನು ನಾನು ತುಂಬಾ ವಿಷಾದದಿಂದ ತಮ್ಮ ಮುಂದೆ ಇಡುತ್ತಿದ್ದೇನೆ. ಹುಟ್ಟಿದಂದಿನಿಂದಲೂ ನನ್ನ ಜೊತೆಯಲ್ಲಿ ಬೆಳೆದು ನನ್ನ ಕಷ್ಟಸುಖಗಳಲ್ಲಿ ಯಾವಾಗಲೂ ಭಾಗಿಯಾಗುತ್ತಿದ್ದ ನನ್ನ ಮೊದಲನೆ ಅಳಿಯ ಶ್ರೀ ಕೆ. ಎಲ್. ಪುಟ್ಟಯ್ಯನವರು 12-2-92 ರಂದು ದೈವಾಧೀನರಾದುದು ನನ್ನ ದುರ್ದೈವ. ಈ ಘಟನೆ ಅಕಸ್ಮಾತ್ ನಡೆದು ನನ್ನನ್ನು ದುಃಖ ಸಾಗರದಲ್ಲಿ ಮುಳುಗಿಸಿತು. ಈಗಾಗಲೇ ಮೇಲೆ ತಿಳಿಸಿರುವಂತೆ

ಅವರು ಸದ್ಗುಣ ಸಂಪನ್ನರು, ಜೊತೆಗೆ ಅವರು ವಿನಯವಿನಯ ಸಂಪನ್ನರು. ಒಟ್ಟಿನಲ್ಲಿ ಅವರು ನನಗೆ ಮೂರು ವಿಧದಲ್ಲಿ ಸಂಬಂಧಿಗಳು. ನನ್ನ ತಾಯಿಯ ತಮ್ಮ, ಲಿಂಗಣ್ಣನಿಗೆ ನನ್ನ ಅಕ್ಕ ಮರಿಯಮ್ಮನನ್ನು ಕೊಟ್ಟು ಮದುವೆಯಾಗಿ ಅವರಿಂದ ಹುಟ್ಟಿದ ಪುಟ್ಟಯ್ಯ ಮೊದಲಿಗೆ ನನ್ನ ಭಾವಮೈದುನನಾದ. ನನ್ನ ಮಗಳು ಗಂಗಮ್ಮನನ್ನು ಅವನಿಗೆ ಲಗ್ನ ಮಾಡಿದ್ದರಿಂದ ಎರಡನೆಯದಾಗಿ ಅಳಿಯನಾದ, ಅನಂತರ ಅವನ ಮಗಳನ್ನು ನನ್ನ ಮಗನಿಗೆ ತಂದು ಲಗ್ನ ಮಾಡಿಕೊಂಡಿದ್ದರಿಂದ ಬೀಗನೂ ಆದ. ಹೀಗೆ ನಾನಾ ವಿಧದಲ್ಲಿ ಸಂಬಂಧವಿದ್ದ ಇವರು ನನಗೆ ತ್ರಿವೇಣಿ ಸಂಗಮದಂತೆ ಬಾಂಧವ್ಯವುಳ್ಳವರಾಗಿದ್ದರು. ಮಗನಿಗಿಂತಲೂ ಹೆಚ್ಚೆಂದು ಭಾವಿಸಿದ್ದ ಅಂಥ ಅಳಿಯನನ್ನು ಕಳೆದುಕೊಂಡು ನಾನು ತುಂಬಾ ದುಃಖಿಯಾಗಿದ್ದೇನೆ. ಅವರ ಅಗಲಿಕೆಯಿಂದ ನನಗೆ ತುಂಬಲಾರದ ನಷ್ಟ, ಭಗವಂತನು ಅವರ ಆತ್ಮಕ್ಕೆ ಚಿರಶಾಂತಿಯನ್ನು ಕರುಣಿಸಲೆಂದು ನಾನು ಈ ಸಮಯದಲ್ಲಿ ಹಾರೈಸುತ್ತೇನೆ.



# ಶೇಷಾದ್ರಿಪುರಂ ಶಿಕ್ಷಣ ದತ್ತಿಯಲ್ಲಿ ಸೇವೆ

1972ನೇ ಇಸವಿ ಅಕ್ಟೋಬರ್ ತಿಂಗಳಲ್ಲಿ ನಾನು ಬ್ಯಾಂಕಿನಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ನಮ್ಮ ಬ್ಯಾಂಕಿನ ಕಾರ್ಯದರ್ಶಿಗಳಾಗಿದ್ದ ಹಾಗೂ ನನ್ನ ಹಿತೈಷಿಗಳಾಗಿದ್ದ ಶ್ರೀ ಎಸ್. ವಿ. ಕೆ. ರಾಜನ್‌ರವರೊಂದಿಗೆ ನರಸಿಂಹರಾಜ ರೋಡಿನಲ್ಲಿ ಹೋಗುತ್ತಿರಬೇಕಾದರೆ ಬೆಂಗಳೂರು ಸ್ಟೋರ್ಸ್‌ಗೆ ಅಕಸ್ಮಾತ್ ಭೇಟಿ ಕೊಟ್ಟೆ. ಆ ಸಂದರ್ಭದಲ್ಲಿ ಬೆಂಗಳೂರು ಕಾರ್ಪೊರೇಶನ್ ಮೇಯರ್ ಆಗಿದ್ದ ಶ್ರೀಮಾನ್ ಕೆ. ಎಂ. ನಂಜಪ್ಪನವರು ಸ್ಟೋರಿನಲ್ಲಿದ್ದರು. ನಾವು ಹೋದಕೂಡಲೆ ನಮ್ಮನ್ನು ಕುಳಿತುಕೊಳ್ಳಲು ಹೇಳಿದರು. ಕೆಲವು ಸಮಯದ ನಂತರ ನನ್ನನ್ನು ಕುರಿತು ನೀವಿಬ್ಬರೂ ತಲಾ ರೂ. 50–00 ಕೊಡಿ ಎಂದು ಹೇಳಿದರು. ನಾನು ಕಾರಣ ಕೇಳಿದೆ, ಅದಕ್ಕೆ ಅವರು ನಾನು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಧ್ಯಕ್ಷನಾಗಿದ್ದೇನೆ. ನಿಮ್ಮನ್ನೂ ಕೂಡ ಆ ಸಂಸ್ಥೆಗೆ ಸದಸ್ಯರನ್ನಾಗಿ ಸೇರಿಸಿಕೊಳ್ಳಬೇಕೆಂದಿದ್ದೇನೆ, ನೀವಿಬ್ಬರೂ ಸದಸ್ಯರಾಗಲು ಸದಸ್ಯತ್ವದ ಶುಲ್ಕ ರೂ. 50–00 ಗಳನ್ನು ಮಾತ್ರ ಕೊಡಿ ಎಂದು ತಿಳಿಸಿದರು. ನಾನು ಕೂಡಲೆ ರೂ. 100–00 ಗಳನ್ನು ಕೊಟ್ಟೆ (ನಂತರ ರಾಜನ್‌ರವರು ನನಗೆ 50 ರೂಗಳನ್ನು ವಾಪಸ್ ಕೊಟ್ಟರು).

ಶ್ರೀಮಾನ್ ನಂಜಪ್ಪನವರು ನನ್ನನ್ನು 1963 ರಿಂದಲೂ ತಿಳಿದಿದ್ದರು. ಅಲ್ಲದೆ ಅವರ ಜೊತೆಯಲ್ಲಿ ಸಹೋದ್ಯೋಗಿಯಾಗಿ ನಗರದ ಆಚಾರ್ಯ ಪಾಠಶಾಲೆಯ ಆಡಳಿತ ಮಂಡಳಿಯ ಸದಸ್ಯನಾಗಿ ಕೆಲಸ ಮಾಡಿದ ಪರಿಚಯವಿತ್ತು. ನಾನು ಬೆಂಗಳೂರು ಸಿಟಿ ಅಸಿಸ್ಟೆಂಟ್ ಕಮೀಷನರಾಗಿ 1960 ರಿಂದ 1964ರ ವರೆಗೆ ಕೆಲಸ ಮಾಡುತ್ತಿದ್ದಾಗ ಬಸವನಗುಡಿಯ ನರಸಿಂಹರಾಜ ಕಾಲೋನಿಗೆ ಹೊಂದಿಕೊಂಡಿರುವ ಆಚಾರ್ಯ ಪಾಠಶಾಲೆಗೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಸುಮಾರು 100 ಎಕರೆ ಗೋಮಾಳದ ಜಮೀನನ್ನು ಸೋಮನಹಳ್ಳಿಯಲ್ಲಿ ಕೊಡಿಸಿಕೊಟ್ಟ ವಿಚಾರವೂ ಅವರಿಗೆ ತಿಳಿದಿತ್ತು. ಆಗ ಅವರು ಆಚಾರ್ಯ ಪಾಠಶಾಲೆಯ ಅಧ್ಯಕ್ಷರಾಗಿದ್ದರು. ದಿವಂಗತ ಪೂಜ್ಯ ಅನಂತಾಚಾರ್‌ರವರು ಈ ಸಂಸ್ಥೆಯ ಸಂಸ್ಥಾಪಕರಾಗಿ ಪ್ರಿನ್ಸಿಪಾಲರಾಗಿ ಸೇವೆ ಸಲ್ಲಿಸುತ್ತಿದ್ದರು. ಅನಂತರ ನಾವು ಕೇವಲ ಕೆಲವು ನಿಮಿಷಗಳನ್ನು ಕಳೆದು ಬೆಂಗಳೂರು ಸ್ಟೋರ್ಸ್‌ನಿಂದ ವಾಪಸ್ ಬಂದೆವು. ಶ್ರೀ ಕೆ. ಎಂ. ನಂಜಪ್ಪನವರು ನಮ್ಮಿಬ್ಬರನ್ನೂ ಮೆಂಬರನ್ನಾಗಿ ಮಾಡಿಸಿದರು.

1974ರಲ್ಲಿ ಒಂದು ದಿನ ಬೆಳಗ್ಗೆ ನಾನು ನೆಹರೂ ನಗರ ವೃತ್ತದ ಬಳಿ ಇದ್ದ ನಮ್ಮ ಬ್ಯಾಂಕಿನಲ್ಲಿ ಕುಳಿತು ಆ ತಿಂಗಳ ಕೊನೇ ವಾರದಲ್ಲಿ ನಡೆಯಲಿರುವ ಸರ್ವಸದಸ್ಯರ

ಸಭೆಗೆ ಬ್ಯಾಂಕಿನ ವರದಿಯನ್ನು ಬರೆಯಲು ತೊಡಗಿರಬೇಕಾದರೆ ಒಬ್ಬ ವಯೋವೃದ್ಧ ವ್ಯಕ್ತಿಗಳು ಮಹಡಿ ಹತ್ತಿ ನಮ್ಮಲ್ಲಿಗೆ ಬಂದು ಬ್ಯಾಂಕಿನಲ್ಲಿ ಪುಟ್ಟನರಸಯ್ಯನವರು ಎಂಬುವರು ಯಾರು ? ಎಂದು ಕೇಳಿದರು. ನಾನು ಕೂಡಲೆ ನಾನೇ ಎಂದು ಉತ್ತರಿಸಿದೆ. ನೀವು ಯಾರು ? ಎಂದು ಆ ವ್ಯಕ್ತಿಯನ್ನು ಕೇಳಲಾಗಿ ಅದಕ್ಕವರು ನಾನು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯಲ್ಲಿ ಕಾರ್ಯದರ್ಶಿಯಾಗಿ ಕೆಲಸ ಮಾಡುತ್ತಿದ್ದೇನೆ. ನನ್ನ ಹೆಸರು ವೆಂಕಟರಾವ್ ಎಂದು ಹೇಳಿದರು. ನಮ್ಮ ಸಂಸ್ಥೆಯ ಅಧ್ಯಕ್ಷರಾಗಿರುವ ಶ್ರೀ ಕೆ. ಎಂ. ನಂಜಪ್ಪನವರು ತಮ್ಮನ್ನು ನೋಡಿ ಈ ಕಾಗದಕ್ಕೆ ನಿಮ್ಮ ಸಹಿ ತೆಗೆದು ಕೊಂಡು ಬನ್ನಿ ಎಂದು ನನ್ನನ್ನು ಕಳುಹಿಸಿದ್ದಾರೆ ಎಂದು ತಿಳಿಸಿದರು. ಆ ಕಾಗದವನ್ನು ನನ್ನ ಮುಂದಿಟ್ಟರು. ನಾನು ಆ ಪತ್ರವನ್ನು ಓದಿದೆ. ಅದು ಆ ಸಂಸ್ಥೆಯಲ್ಲಿ ಇನ್ನು ಕೇವಲ 15 ದಿನಗಳಲ್ಲಿ ನಡೆಯಲಿರುವ ಸರ್ವಸದಸ್ಯರ ಸಭೆಯ ಆಡಳಿತ ಮಂಡಳಿಗೆ ನಡೆಯಬೇಕಾದ ಚುನಾವಣೆಗೆ ಸಲ್ಲಿಸಬೇಕಾಗಿದ್ದ ಉಮೇದುವಾರಿಕೆ ಅರ್ಜಿಯಾಗಿತ್ತು. ನನಗೆ ಗಾಬರಿಯಾಯಿತು, ನಾನು ಈ ಸಂಸ್ಥೆಗೆ ಸದಸ್ಯನಾಗಿದ್ದುದೇ ಮರೆತುಹೋಗಿತ್ತು ಕೂಡಲೆ ನಾನು ಶ್ರೀಮಾನ್ ಕೆ. ಎಂ. ನಂಜಪ್ಪನವರಿಗೆ ಫೋನ್ ಮಾಡಿ ಮಾತಾಡಿದೆ. ಅವರು ಫೋನಿನಲ್ಲಿ ನನಗೆ ಹೇಳಿದರು, ನೀವು ಆ ಪತ್ರಕ್ಕೆ ರುಜು ಹಾಕಿ ಕಳುಹಿಸಿ ಎಂದು ತಿಳಿಸಿದರು. ಅದಕ್ಕೆ ನಾನು ಹೇಳಿದೆ ಕಾಲೇಜಿನ ಸರ್ವಸದಸ್ಯರ ಸಭೆ ಇರುವ ದಿನವೇ ನಮ್ಮ ಬ್ಯಾಂಕಿನ ಸರ್ವಸದಸ್ಯರ ಸಭೆಯೂ ಸಹ ಗಾಂಧೀನಗರದ ಆರ್ಯ ವಿದ್ಯಾ ಶಾಲೆಯಲ್ಲಿ ಏರ್ಪಡಿಸಲಾಗಿದೆ. ನಾನು ಆ ಸಭೆಯಲ್ಲಿ ಹಾಜರಿಲ್ಲದೆ ಈ ನಾಮಿನೇಷನ್ ಕಳುಹಿಸುವುದಾದರೂ ಹೇಗೆ ಎಂದು ಕೇಳಿದೆ. ಆದರೆ ಅವರು ಹೇಳಿದರು ನೀವು ಸುಮ್ಮನೆ ನಾನು ಹೇಳಿದ ಹಾಗೆ ಸಹಿ ಹಾಕಿ ಕಳುಹಿಸಿ ಎಂದು ಮಾತ್ರ ತಿಳಿಸಿದರು. ರುಜು ಹಾಕಿದೆ. ಆ ಪತ್ರವನ್ನು ಆ ಸಂಸ್ಥೆಯ ಕಾರ್ಯದರ್ಶಿಯವರ ಮೂಲಕವೇ ಕಳುಹಿಸಿದೆ. ಚುನಾವಣೆಯ ದಿನ ನಮ್ಮ ಬ್ಯಾಂಕಿನ ಚುನಾವಣೆಯೂ ನಡೆಯುತ್ತಿತ್ತು. ಸುಮಾರು 5 ಗಂಟೆ ಸಮಯ ನಾನು ನಮ್ಮ ಬ್ಯಾಂಕಿನ ಸರ್ವಸದಸ್ಯರ ಸಭೆಯ ಕೆಲಸಗಳನ್ನು ಮುಗಿಸಿಕೊಂಡು ಮನೆಗೆ ಶ್ರೀ ವಿ. ನಾರಾಯಣಸ್ವಾಮಿಯವರ ಜೊತೆಯಲ್ಲಿ ಊಟಕ್ಕೆ ಹೋದೆ – ಊಟ ಮಾಡುತ್ತಿರುವಾಗಲೇ ನನಗೆ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಸರ್ವಸದಸ್ಯರ ಸಭೆಯು ಆ ದಿವಸ ನಡೆಯುತ್ತಿರುವುದು ಜ್ಞಾಪಕಕ್ಕೆ ಬಂತು. ಆ ಸಭೆಯ ಚುನಾವಣೆಯು ಸಂಜೆ 6 ಗಂಟೆಯವರೆಗೂ ಇತ್ತು. ಕೂಡಲೆ ಊಟ ಮಾಡುವುದನ್ನು ಬಿಟ್ಟು ಕಾರಿನಲ್ಲಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗೆ ಬಂದೆ, ಆಗ ಸಂಜೆ 5–50 ಗಂಟೆ ಆಗಿತ್ತು. ಎಲ್ಲಾ ಸದಸ್ಯರೂ ಓಟು ಮಾಡಿದ್ದರು. ನನ್ನೊಬ್ಬನ ಓಟು ಮಾತ್ರ ಬಾಕಿ ಇತ್ತು. ಶ್ರೀಮಾನ್ ಕೆ. ಎಂ. ನಂಜಪ್ಪನವರು ನನ್ನನ್ನು ನೋಡಿ ಕೂಡಲೆ ಹೋಗಿ ಓಟು ಹಾಕಿ ಬನ್ನಿ ಎಂದು ತಿಳಿಸಿದರು. ಓಟು ಮಾಡಿದೆ, ಕೂಡಲೆ ಮತಗಳ ಎಣಿಕೆ ಪ್ರಾರಂಭವಾಯಿತು. ಈ ಚುನಾವಣೆಯಲ್ಲಿ ನಾನೂ ಸಹ ಗೆದ್ದಿರುವೆ

ನೆಂದು ಘೋಷಿಸಿದರು. ಅನಂತರ ನಾನು 1974 ರಿಂದ 1976ರ ವರೆವಿಗೂ ಪ್ರತಿಯೊಂದು ಆಡಳಿತ ಮಂಡಳಿಯ ಸಭೆಗೂ ತಪ್ಪದೆ ಹೋಗುತ್ತಿದ್ದೆ. ಸಭೆಯು ಬಹಳ ಜೋರಾಗಿ ನಡೆಯುತ್ತಿತ್ತು. ಶ್ರೀ ಕೆ. ಎಂ. ನಂಜಪ್ಪನವರು ಅಧ್ಯಕ್ಷರಾಗಿ, ಅಡ್ವೊಕೇಟ್ ಶ್ರೀ ವಿ. ಕೃಷ್ಣಮೂರ್ತಿಯವರು ಉಪಾಧ್ಯಕ್ಷರಾಗಿ ಮತ್ತು ಕಲ್ಯಾಣ ಕೆಫೆಯ ಮಾಲೀಕರಾಗಿದ್ದ ಶ್ರೀ ಜಿ. ಎನ್. ನರಸಿಂಹಮೂರ್ತಿಯವರು ಖಜಾಂಚಿ ಯಾಗಿದ್ದರು. ಇವರಿಬ್ಬರೂ ಬಹಳ ಬಲವಾಗಿ ತಮ್ಮ ತಮ್ಮ ವಾದವನ್ನು ಮಂಡಿಸು ತ್ತಿದ್ದರು. ಈ ಸಂದರ್ಭದಲ್ಲಿ ಆಗಿನ ಕಾರ್ಯದರ್ಶಿಯಾಗಿದ್ದ ವೆಂಕಟರಾಯರು ಅನಾರೋಗ್ಯದ ನಿಮಿತ್ತ ಕೆಲವು ತಿಂಗಳುಗಳ ಕಾಲ ರಜಾ ಹೋಗಲು ಅನುಮತಿ ಕೇಳಿದ್ದರು. ಅನುಮತಿಯನ್ನು ಕೊಟ್ಟಿದ್ದೂ ಆಗಿತ್ತು, ಅವರ ಬದಲಿಗೆ ಹಂಗಾಮಿಯಾಗಿ ಶ್ರೀ ಕೃಷ್ಣರಾವ್ ಎಂಬುವರನ್ನು ನೇಮಕ ಮಾಡಿಕೊಂಡಿದ್ದೂ ಆಯಿತು. ಈ ಮಧ್ಯೆ ಕೆಲವು ಸದಸ್ಯರುಗಳು ವೆಂಕಟರಾಯರಿಗೆ ರಜಾದಿಂದ ಕೂಡಲೆ ವಾಪಸ್ ಬರುವಂತೆ ಪತ್ರ ಬರೆಯುತ್ತಿದ್ದರೆಂದು ನನಗೆ ತಿಳಿದುಬಂತು. ಸಂಸ್ಥೆಯ ಅಧ್ಯಕ್ಷರಾಗಿದ್ದ ಶ್ರೀ ಕೆ. ಎಂ. ನಂಜಪ್ಪನವರಿಗೂ ಕೂಡ ಶ್ರೀ ವೆಂಕಟರಾಯರವರನ್ನು ವಾಪಸ್ ತೆಗೆದು ತೆಗೆದುಕೊಳ್ಳಬೇಕೆಂದು ಬಲವಾದ ಅಭಿಪ್ರಾಯ ಮೂಡಿತ್ತು. ಅವರು ವಾಪಸ್ ಬಂದರು.ನಂತರ ಅಧ್ಯಕ್ಷರನ್ನು ನೋಡಿ ಅವರ ಸೂಚನೆಯಂತೆ ಚಾರ್ಜು ತೆಗೆದುಕೊಳ್ಳಲು ಹೋದರು. ಆ ಸಮಯದಲ್ಲಿ ಆಡಳಿತ ಮಂಡಳಿಯ ಇನ್ನೊಬ್ಬ ಸದಸ್ಯರು ಶ್ರೀ ವೆಂಕಟರಾಯರನ್ನು ಕುರಿತು ನಿಮ್ಮನ್ನು ಮತ್ತೆ ಕಾರ್ಯದರ್ಶಿಯಾಗಿ ತೆಗೆದುಕೊಳ್ಳಲು ಸಾಧ್ಯವಿಲ್ಲ. ಕೃಷ್ಣರಾವ್‌ರವರೇ ಇರಲಿ ಎಂದು ತಿಳಿಸಿದರು ಎಂದು ಕೆಲವು ದಿನಗಳ ನಂತರ ವೆಂಕಟರಾವ್‌ರವರು ನನಗೆ ತಿಳಿಸಿದರು. ಹೀಗಾಗಿ ಕೆಲವು ಸದಸ್ಯರು ವೆಂಕಟ ರಾವ್‌ರವರ ಪರವಾಗಿ ಮತ್ತು ಕೆಲವರು ಕೃಷ್ಣರಾವ್‌ರವರ ಪರವಾಗಿಯೂ ವಾದ ಮಾಡಲು ಪ್ರಾರಂಭ ಮಾಡಿದರು. ಇದು ಸುಮಾರು ಒಂದು ತಿಂಗಳ ಕಾಲ ನಡೆಯಿತು. ಕೃಷ್ಣರಾವ್‌ರವರು ಶ್ರೀ ವೆಂಕಟರಾವ್‌ರವರಿಗೆ ಚಾರ್ಜ್ ಕೊಡಲಿಲ್ಲ. ಸುಮಾರು ಒಂದು ತಿಂಗಳು ಈ ಸಂಸ್ಥೆಯ ಬಾಗಿಲು ಮುಚ್ಚಿ ಬೀಗ ಹಾಕಿತ್ತು.

ಈ ಮಧ್ಯೆ ಯಾರೊ ಒಬ್ಬ ಸದಸ್ಯರು ಒಂದು ಅನಾಮಧೇಯ ಪತ್ರವನ್ನು ಅಧ್ಯಕ್ಷರಿಗೆ ಬರೆದಿದ್ದನ್ನು ಅಧ್ಯಕ್ಷರು ನನಗೆ ತೋರಿಸಿದರು. ಅದರ ಸಾರಾಂಶ ಹೀಗಿತ್ತು.

"ಈ ಸಂಸ್ಥೆಯ ಅಸೋಸಿಯೇಷನ್ನಿನ ಬೈಲಾ ಪ್ರಕಾರ ಚುನಾಯಿತ ಸದಸ್ಯರು ಗಳಲ್ಲಿ ಇಬ್ಬರು ಜಾಯಿಂಟ್ ಸೆಕ್ರೆಟರಿಗಳನ್ನಾಗಿ ನೇಮಕ ಮಾಡಿಕೊಳ್ಳಬೇಕೆಂದು ಆಡಳಿತ ಮಂಡಳಿಗೆ ಆದೇಶವಿರುವಾಗ ಆಡಳಿತ ಮಂಡಳಿಯ ಹೊರಗಿನವರನ್ನು ಕಾರ್ಯದರ್ಶಿ ಯಾಗಿ ನೇಮಕಮಾಡಿಕೊಳ್ಳಲು ಅವಕಾಶವಿಲ್ಲ. ಹೀಗೆ ನೀವು ಹೊರಗಿನವರನ್ನು ನೇಮಕ ಮಾಡುತ್ತಿದ್ದೀರಿ. ಇದು ಸರಿಯೇ" ಎಂದು ಅಧ್ಯಕ್ಷರನ್ನು ಪ್ರಶ್ನಿಸಿದ್ದರು.

ಈ ಪತ್ರವನ್ನು ಓದಿದ ನಂತರ ಅಧ್ಯಕ್ಷರಿಗೆ ನೀವು ಏನು ತೀರ್ಮಾನ ತೆಗೆದು ಕೊಳ್ಳುತ್ತೀರೋ ಅದನ್ನು ನಾನು ಒಪ್ಪುತ್ತೇನೆ ಎಂದು ಹೇಳಿ ಮನೆಗೆ ಬಂದೆ. ಈ ಮಧ್ಯೆ ಏನೇನು ನಡೆಯಿತೋ ನನಗೆ ಗೊತ್ತಿಲ್ಲ. ಇದಾದ ಕೆಲವು ದಿನಗಳ ನಂತರ ಅಂದರೆ 1976ನೇ ಅಕ್ಟೋಬರ್ ಮೊದಲನೇ ವಾರದಲ್ಲಿರಬಹುದು ಆಡಳಿತ ಮಂಡಳಿಯ ಸದಸ್ಯರಲ್ಲೊಬ್ಬರಾದ ಶ್ರೀ ಜಿ. ಕೆ. ಶ್ರೀನಿವಾಸರವರು ನಮ್ಮ ಬ್ಯಾಂಕಿನ ಮಹಡಿಯ ಮುಂಭಾಗದಲ್ಲಿರುವ ಪ್ಯಾಸೇಜ್‌ನಲ್ಲಿ ಸಂಜೆ 6 ಗಂಟೆಯಲ್ಲಿ ನಾನು ಕುಳಿತಿರಬೇಕಾದರೆ ನನಗೆ ಒಂದು ಕಿವಿ ಮಾತನ್ನು ಹೇಳಿದರು. ನಮ್ಮ ಶಿಕ್ಷಣ ಸಂಸ್ಥೆಗೆ ಬಂದಿರುವ ಅನಾಮಧೇಯ ಪತ್ರವನ್ನು ಪ್ರಸ್ತಾಪಿಸಿ ಈಗ ಕೆಲವು ಜನ ಆಡಳಿತ ಮಂಡಳಿಯ ಸದಸ್ಯರು ಶ್ರೀ ವೆಂಕಟರಾಯರು ಕಾರ್ಯದರ್ಶಿಯಾಗುವುದು ಬೇಡ ಹಾಗೆಯೇ ಕೃಷ್ಣರಾವ್ ಸಹ ಬೇಡ. ಸಂಸ್ಥೆಯ ಚುನಾಯಿತ ಸದಸ್ಯರ ಪೈಕಿ ಯಾರಾದರಿಬ್ಬರನ್ನು ಜಾಯಿಂಟ್ ಸೆಕ್ರೆಟರಿಗಳನ್ನಾಗಿ ಚುನಾಯಿಸಬೇಕೆಂದು ತೀರ್ಮಾನಕ್ಕೆ ಬಂದಿದ್ದಾರೆ. ನನ್ನನ್ನು ಒಬ್ಬ ಜಾಯಿಂಟ್ ಸೆಕ್ರೆಟರಿಯಾಗಿರಬೇಕೆಂದು ಬಹಳ ಜನ ಸದಸ್ಯರು ಒತ್ತಾಯಿಸುತ್ತಿದ್ದಾರೆ. ಆದರೆ ನನಗೆ ಆಡಳಿತದ ವ್ಯವಹಾರ ತಿಳಿದಿಲ್ಲ ಹಾಗೂ ನನ್ನ ವ್ಯಾಪಾರದ ಒತ್ತಡದಿಂದಾಗಿ ನಾನು ಹೇಗೆ ಈ ಹುದ್ದೆಯನ್ನು ಒಪ್ಪಲು ಸಾಧ್ಯ. ನೀವು ಸಹಕರಿಸುವುದಾದರೆ ನಾನು ಒಪ್ಪಬೇಕೆಂದಿದ್ದೀನಿ ಎಂದರು. ಅದಕ್ಕೆ ನಾನು ಹೇಳಿದೆ ನೋಡಿ ಶ್ರೀನಿವಾಸರವರೇ ನಾನು ಪ್ರತಿವಾರವೂ ಕೂಡ ನಮ್ಮ ಜಮೀನು ನೋಡಿ ಕೊಳ್ಳಲು ಹಳ್ಳಿಗೆ ಹೋಗುತ್ತಿದ್ದೀನಿ. ಈ ಮಧ್ಯೆ ಬ್ಯಾಂಕಿನ ಕೆಲಸ ಬೇರೆ ಇದೆ. ಇದು ಹೇಗೆ ಸಾಧ್ಯ ? ನನ್ನಿಂದ ಸಾಧ್ಯವಾಗುವುದಿಲ್ಲವೆಂದು ಹೇಳಿದೆ. ಆದರೆ ಅವರು ಬಲವಂತಮಾಡಿ ನೀವು ಇಷ್ಟು ಖಡಾಖಂಡಿತವಾಗಿ ಹೇಳಬೇಡಿ, ಯೋಚನೆಮಾಡಿ ಹೇಳಿ ನಾನು ನಾಳೆ ಮತ್ತೆ ಬರುತ್ತೇನೆ, ಎಂದು ಹೇಳಿ ಹೊರಟು ಹೋದರು.

ನಾನು ಈ ವಿಷಯವಾಗಿ ಕೆಲವು ಆತ್ಮೀಯ ಸ್ನೇಹಿತರೊಡನೆ, ಹಿತೈಷಿಗಳೊಡನೆ ಪ್ರಸ್ತಾಪವಮಾಡಿದೆ. ಅವರುಗಳು ಬ್ಯಾಂಕು ಮತ್ತು ಈ ವಿದ್ಯಾಸಂಸ್ಥೆಯು ಪಕ್ಕ ಪಕ್ಕದಲ್ಲೇ ಇರುವುದರಿಂದ ಮತ್ತು ನಿಮಗೆ ಆಡಳಿತ ಅನುಭವವಿರುವುದರಿಂದಲೂ ಜೊತೆಗೆ ಶ್ರೀ ಶ್ರೀನಿವಾಸ್‌ರವರ ಸಹಕಾರ ನಿಮಗೆ ದೊರಕುವುದರಿಂದಲೂ ಈ ವಿದ್ಯಾಸಂಸ್ಥೆಗೆ ಸೇವೆಯನ್ನು ಸಲ್ಲಿಸುವ ಈ ಅವಕಾಶವನ್ನು ಕಳೆದುಕೊಳ್ಳಬೇಡಿ ಎಂದು ಸಲಹೆ ಮಾಡಿದರು. ಮನೆಯಲ್ಲಿ ವಿಚಾರಿಸಿದರೆ ನನ್ನ ಕುಟುಂಬ ವರ್ಗದವರೆಲ್ಲರೂ ಸಹ ಇದೇ ಅಭಿಪ್ರಾಯವನ್ನು ಸೂಚಿಸಿದರು. ಮಾರನೇ ದಿನ ಶ್ರೀ ಜಿ. ಕೆ. ಶ್ರೀನಿವಾಸ್‌ರವರು ಕಾರಣ ಹೇಳಿದ ಸಮಯಕ್ಕೆ ಸರಿಯಾಗಿ ಬ್ಯಾಂಕಿಗೆ ಬಂದರು. ಆಗ ಶ್ರೀ ಶ್ರೀನಿವಾಸ್ ರವರೊಡನೆ ಈಗಿನಷ್ಟು ಹೆಚ್ಚಿನ ಪರಿಚಯವಿರಲಿಲ್ಲ. ಆದರೂ ಅವರ ವಿಚಾರವನ್ನು ಅವರ ಉದಾರ ಸ್ವಭಾವ ಹಾಗೂ ಅವರ ಒಳ್ಳೆಯ ಗುಣಗಳು ಹಾಗೂ ಸಜ್ಜನಿಕೆಯನ್ನು ಅನೇಕರಿಂದ ತಿಳಿದುಕೊಂಡಿದ್ದೆ. ಅವರು ಬಂದ ಕೂಡಲೆ ನನ್ನನ್ನು ಉದ್ದೇಶಿಸಿ ನೀವು

ಏನು ತೀರ್ಮಾನ ಮಾಡಿದ್ದೀರಿ ಎಂದು ಕೇಳಿದರು. ಅದಕ್ಕೆ ನಾನು ನೀವು ನನ್ನ ಜೊತೆಯಲ್ಲಿ ಇರುವುದಾದರೆ ನನಗೆ ನಿಮ್ಮ ಸಹಕಾರ ಸಿಗುವುದಿದ್ದರೆ ಮಾತ್ರ ಆಗಲಿ ನೀವು ಒಪ್ಪಿಕೊಳ್ಳಿ ಎಂದು ಹೇಳಿದೆ. ಮಾರನೇ ದಿನ 1976ನೇ ಅಕ್ಟೋಬರ್ 15ನೇ ತಾರೀಖು ಈ ವಿಷಯವನ್ನು ಮೀಟಿಂಗ್‌ನಲ್ಲಿ ಇಟ್ಟರು. ಆಡಳಿತ ಮಂಡಳಿಯ ಎಲ್ಲಾ ಸದಸ್ಯರೂ ಆ ಸಭೆಯಲ್ಲಿ ಹಾಜರಿದ್ದರು. ಆ ಸಭೆಯಲ್ಲಿ ಒಂದು ಪ್ರಶ್ನೆ ಉದ್ಭವ ವಾಯಿತು. ಬೈಲಾ ಪ್ರಕಾರ ಒಬ್ಬ ಜಾಯಿಂಟ್ ಸೆಕ್ರೆಟರಿ ಆಯಿತು. ಇನ್ನೊ ಒಂದು ಜಾಯಿಂಟ್ ಸೆಕ್ರೆಟರಿ ಯಾರನ್ನು ಮಾಡುತ್ತೀರಿ ಎಂದು ಕೇಳಿದರು. ಆ ವಿಚಾರ ಬಂದ ಕೂಡಲೆ ಶ್ರೀ ಜಿ. ಕೆ. ಶ್ರೀನಿವಾಸ್‌ರವರು ಮತ್ತು ಶ್ರೀ ಕೆ. ಎಂ. ನಂಜಪ್ಪನವರು ನನ್ನ ಹೆಸರನ್ನು ಸೂಚಿಸಿದರು. ಸದಸ್ಯರೆಲ್ಲರೂ ಈ ವಿಷಯವನ್ನು ಸರ್ವಾನುಮತದಿಂದ ಅನುಮೋದಿಸಿದರು ಆಗ :

1) ಶ್ರೀ ಜಿ. ಕೆ. ಶ್ರೀನಿವಾಸಯ್ಯ ಜಾಯಿಂಟ್ ಸೆಕ್ರೆಟರಿ (ಡೆವಲಪ್‌ಮೆಂಟ್)

2) ಶ್ರೀ ಕೆ. ಸಿ. ಪುಟ್ಟನರಸಯ್ಯ ಜಾಯಿಂಟ್ ಸೆಕ್ರೆಟರಿ (ಆಡಳಿತ)

ಎಂದು ಸಭೆಯಲ್ಲಿ ತೀರ್ಮಾನ ಮಾಡಿದರು. ನಾನು ಮಾರನೇ ದಿನವೇ ಅಂದರೆ ಅಕ್ಟೋಬರ್ 16, 1976ರಲ್ಲಿ ಶ್ರೀ ಕೃಷ್ಣರಾವ್‌ರವರಿಂದ ಕಾರ್ಯದರ್ಶಿಯಾಗಿ ಚಾರ್ಜ್ ತೆಗೆದುಕೊಂಡೆನು. ಈ ಮಧ್ಯೆ ಈ ಸಂಸ್ಥೆಯು ಅಸೋಸಿಯೇಷನ್ ಆಗಿದ್ದು ಅದನ್ನು 1978ರಲ್ಲಿ ಟ್ರಸ್ಟಾಗಿ ನೋಂದಾಯಿಸಲಾಯಿತು. ಅಲ್ಲಿಂದೀಚೆಗೆ ಎರಡು ಮೂರು ಬಾರಿ ಆಡಳಿತ ಮಂಡಳಿಗೆ ಚುನಾವಣೆಗಳು ನಡೆದವು. ಎಲ್ಲಾ ಚುನಾವಣೆ ಗಳಲ್ಲೂ ಅಂದಿನಿಂದ ಇಂದಿನವರೆಗೂ ನಾನು ಟ್ರಸ್ಟ್ ಆಕ್ಟ್ ಪ್ರಕಾರ ಆಡಳಿತ ಮಂಡಳಿಯ ಪ್ರಧಾನ ಕಾರ್ಯದರ್ಶಿಯಾಗಿ ಮುಂದುವರಿಯುತ್ತಾ ಸೇವೆ ಸಲ್ಲಿಸು ತ್ತಿದ್ದೇನೆ.

ಈ ಸಂಸ್ಥೆಗೆ ನಾನು ಸದಸ್ಯನಾಗಲು ಶ್ರೀಮಾನ್ ಕೆ. ಎಂ. ನಂಜಪ್ಪನವರು ಕಾರಣರಾದರೆ ಕಾರ್ಯದರ್ಶಿಯಾಗಲು ಶ್ರೀ ಜಿ. ಕೆ. ಶ್ರೀನಿವಾಸ್‌ರವರೆ ಕಾರಣರು. ಈ ವಿದ್ಯಾಸಂಸ್ಥೆಯ ಕಾರ್ಯದರ್ಶಿಯಾಗಿ ಸೇವೆಮಾಡಲು ಅನುವು ಮಾಡಿಕೊಟ್ಟ ಅವರಿಬ್ಬರನ್ನು ಈ ಸಮಯದಲ್ಲಿ ನಾನು ನೆನಪು ಮಾಡಿಕೊಳ್ಳುತ್ತಾ ವಿದ್ಯಾಸೇವೆ ಮಾಡಲು ನನಗೆ ಅವಕಾಶಮಾಡಿಕೊಟ್ಟ ಈ ಮಹಾನುಭಾವರಿಬ್ಬರಿಗೂ ನನ್ನ ಅನಂತ ಪ್ರಣಾಮಗಳು.

ನಾನು ಈ ಸಂಸ್ಥೆಯ ಕಾರ್ಯದರ್ಶಿ ಸ್ಥಾನಕ್ಕೆ ಎಂದೂ ಆಸೆಪಟ್ಟವನಲ್ಲ, ಆಗುವ ಚಪಲವೂ ಇರಲಿಲ್ಲ. ಬ್ಯಾಂಕಿನಲ್ಲಿ ಸೇವೆ ಸಲ್ಲಿಸುತ್ತಾ ಈ ವಿದ್ಯಾಸಂಸ್ಥೆಯ ಕಾರ್ಯದರ್ಶಿ ಯಾಗಿ ಸೇವೆ ಮಾಡುವ ಭಾಗ್ಯ ತಾನಾಗಿಯೇ ಒದಗಿ ಬಂದದ್ದು ದೈವಕೃಪೆಯೇ ಎಂದು ನಾನು ಭಾವಿಸಿರುವೆನು.

ನಾನು ಕಾರ್ಯದರ್ಶಿಯಾದ ಹೊಸದರಲ್ಲಿ ಈ ಸಂಸ್ಥೆಯು ಕೇವಲ 5 ಸಂಸ್ಥೆಗಳನ್ನು ನಡೆಸುತ್ತಿತ್ತು.

1) ಸ್ತ್ರೀ ಸಮಾಜ ಮಿಡ್ಲ್ ಸ್ಕೂಲ್
2) ಹೈಸ್ಕೂಲ್ (ಕಂಬೈಂಡ್)
3) ಸಂಜೆ ಕಾಲೇಜು
4) ಪಿ.ಯು.ಸಿ. ಕಾಲೇಜು
5) ಪದವಿ ಕಾಲೇಜು (ಕಾಮರ್ಸ್ ಮತ್ತು ಆರ್ಟ್ಸ್ ಮಾತ್ರ)

ನಾನು ಈ ಸಂಸ್ಥೆಗೆ ಬಂದ ನಂತರ ಈ 5 ಸಂಸ್ಥೆಗಳ ಜೊತೆಗೆ ಇಂದು 10 ಸಂಸ್ಥೆಗಳನ್ನು ನಡೆಸಲು ಕಾರಣವಾಗಿದೆ. ಶಿಕ್ಷಣದ ಗುಣಮಟ್ಟ ಮೊದಲು ಕೇವಲ ಶೇಕಡ 40ರಿಂದ 45ರಷ್ಟಿತ್ತು. ಇಂದು ಪಿಯುಸಿಯಲ್ಲಿ ಶೇ. 96 ಅದರಲ್ಲೂ ಸುಮಾರು ಶೇ. 75 ಫಸ್ಟ್‌ಕ್ಲಾಸ್ ಹಾಗೂ ಒಂದು ರ್‍ಯಾಂಕ್ ಗಳಿಸಿದೆ. ಎರಡು ಹೈಸ್ಕೂಲುಗಳೂ 100ಕ್ಕೆ 100 ಫಲಿತಾಂಶ ಪಡೆದಿವೆ. ಡಿಗ್ರಿ ಕಾಲೇಜ್ ಕೂಡ ಬೆಂಗಳೂರು ವಿಶ್ವವಿದ್ಯಾಲಯದ ಮಟ್ಟದಲ್ಲಿ 2ನೇ ಸ್ಥಾನದಲ್ಲಿದೆ.

1976ರಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆ ಎಲ್ಲಾ ತರಗತಿಯಿಂದ ಕೇವಲ 2000 ಇತ್ತು. ಈಗ ಸುಮಾರು 7000 ಜನ ವಿದ್ಯಾರ್ಥಿಗಳು ವಿವಿಧ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ. ನಮ್ಮ ಶಾಲಾ ಕಾಲೇಜುಗಳ ಪ್ರವೇಶಕ್ಕೆ ಹಿಂದೆ ಬೇಡಿಕೆ ಇಲ್ಲದಿದ್ದು ಇಂದು ನೂಕುನುಗ್ಗಲು ಜಾಸ್ತಿಯಾಗಿ ಪ್ರವೇಶ ಗಿಟ್ಟಿಸುವುದು ತುಂಬಾ ಕಷ್ಟವಾಗಿದೆ. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಆಶ್ರಯದಲ್ಲಿ ಇಂದು ನಡೆಯುತ್ತಿರುವ ಸಂಸ್ಥೆಗಳೆಂದರೆ :

ಶೇಷಾದ್ರಿಪುರಂ ಇಂಗ್ಲಿಷ್ ಪ್ರೈಮರಿ ಶಾಲೆ
ಶೇಷಾದ್ರಿಪುರು ಸ್ತ್ರೀ ಸಮಾಜ ಮಿಡ್ಲ್ ಸ್ಕೂಲ್
ಶೇಷಾದ್ರಿಪುರಂ ಬಾಲಕರ ಪ್ರೌಢಶಾಲೆ
ಶೇಷಾದ್ರಿಪುರಂ ಬಾಲಕಿಯರ ಪ್ರೌಢಶಾಲೆ
ಶೇಷಾದ್ರಿಪುರಂ ಪದವಿ ಕಾಲೇಜು
ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜು
ಶೇಷಾದ್ರಿಪುರಂ ಸಂಜೆ ಕಾಲೇಜು (ಪದವಿ ಹಾಗೂ ಪದವಿ ಪೂರ್ವ)
ಶೇಷಾದ್ರಿಪುರಂ ಸಂಜೆ ಕಾನೂನು ಕಾಲೇಜು
ಶೇಷಾದ್ರಿಪುರಂ 'ಡಿ' ಫಾರ್ಮಸಿ ಕಾಲೇಜು

ಶೇಷಾದ್ರಿಪುರಂ ನರ್ಸರಿ ಶಾಲೆ, ಹಾಗೂ ಪಿಯುಸಿ ಮತ್ತು ಪದವಿ ಕಾಲೇಜುಗಳಲ್ಲಿ ಕಂಪ್ಯೂಟರ್ ಮತ್ತು ಎಲೆಕ್ಟ್ರಾನಿಕ್ಸ್ ವಿಭಾಗಗಳನ್ನು ಸಹ ತೆರೆದಿರುತ್ತೇವೆ. ಎರಡು ಪ್ರೌಢಶಾಲೆಗಳಲ್ಲಿ ಕಂಪ್ಯೂಟರ್ ವಿಭಾಗಗಳನ್ನು ತೆರೆದಿರುತ್ತೇವೆ.

ಒಂದು ಒಳ್ಳೆಯ ವಿದ್ಯಾಸಂಸ್ಥೆಗೆ ಇರಬೇಕಾದ ಎಲ್ಲ ಗುಣಗಳನ್ನು ಅಳವಡಿಸಿಕೊಂಡು ಈ ಸಂಸ್ಥೆಯು ನಡೆಯುತ್ತಿದೆಯೆಂದು ಹೆಮ್ಮೆಯಿಂದ ಹೇಳಲು ಬಯಸುತ್ತೇನೆ. ಒಂದು ಸಂಸ್ಥೆಯನ್ನು ಒಳ್ಳೆಯ ಸಂಸ್ಥೆ ಎಂದು ಹೇಳಬೇಕಾದರೆ ಈ ಸಂಸ್ಥೆಗೆ ಯಾವ ಯಾವ ಗುಣಗಳಿರಬೇಕೆಂದು ಯಾರಾದರೂ ಕೇಳಿದರೆ ನನ್ನ ಅನುಭವದಿಂದ ಹೇಳುವುದಿಷ್ಟೆ.

1. ಶಿಸ್ತು 2. ಫಲಿತಾಂಶ 3. ಪರೀಕ್ಷೆಯಲ್ಲಿ ಕಾಪಿ ಹೊಡೆಯಲು ಅವಕಾಶವಿಲ್ಲದಿರುವಂತೆ ವ್ಯವಸ್ಥೆ ಮಾಡುವುದು 4. ಸಂಸ್ಥೆಯ ದೃಢವಾದ ಆರ್ಥಿಕ ಸ್ಥಿತಿಗತಿ 5) ಒಳ್ಳೆಯ ಸ್ಥಳಾವಕಾಶ 6. ಉತ್ತಮ ಬೋಧಕ ವೃಂದ.

ಇವುಗಳಲ್ಲಿ ಎಲ್ಲಾ ಗುಣಗಳನ್ನು ಮೈಗೂಡಿಸಿಕೊಂಡಿರುವ ನಮ್ಮ ಸಂಸ್ಥೆ ಇಂದು ಒಂದು ಉತ್ತಮ ಶಿಕ್ಷಣ ಸಂಸ್ಥೆ ಎಂದು ಹೆಸರು ದೊರಕಿಸಿಕೊಂಡಿದೆ. ಆರ್ಥಿಕ ಸ್ಥಿತಿಯನ್ನು ಬೇರೆ ತಾಂತ್ರಿಕ ಹಾಗೂ ವೈದ್ಯಕೀಯ ಸಂಸ್ಥೆಗಳಿಗೆ ಹೋಲಿಸಿದರೆ ಅಷ್ಟೇನೂ ತೃಪ್ತಿಕರವಾಗಿಲ್ಲವೆಂದು ಹೇಳಬಹುದು. ಆದರೆ ಯಾರೂ ಯಾವ ಆತಂಕ ಪಡಬೇಕಿಲ್ಲವೆಂದು ಮಾತ್ರ ಹೇಳಬಲ್ಲೆ.

ಮೊದಲಿಗೆ (1976ಕ್ಕೆ ಮುಂಚೆ) ಸಂಸ್ಥೆಯ ಸಿಬ್ಬಂದಿಯವರಿಗೆ ಸಂಬಳ ಕೊಡಲು ಕನಿಷ್ಠವಾಗಿ ಹಣವಿರಲಿಲ್ಲ. 1976–77ರಲ್ಲಿ ಪ್ರಿನ್ಸಿಪಾಲರನ್ನು ಮತ್ತು ಹೆಡ್‌ಮಾಸ್ಟರನ್ನು ಕರೆದು ಬಾಕಿ ಇರುವ ವರ್ಷದ ಫೀಸನ್ನು ವಿದ್ಯಾರ್ಥಿಗಳಿಂದ ಕೂಡಲೆ ವಸೂಲಿಮಾಡಿ. ಇಲ್ಲವಾದರೆ ನಿಮಗೆ ಮುಂದಿನ ತಿಂಗಳು ಸಂಬಳ ಸಿಗುವುದು ಕಷ್ಟವಾಗುತ್ತದೆ, ಎಂದು ಹೇಳುತ್ತಿದ್ದೆ. ಆದರೆ ಈಗ ಇದು ತಿರುಗುಮುರುಗಾಗಿದೆ. ಸರ್ಕಾರದಿಂದ ಸಂಬಳದ ಅನುದಾನ ಬಂದು ಸಿಬ್ಬಂದಿಯವರಿಗೆ ಸಂಬಳದ ಸವಲತ್ತು ಕಿಂಚಿತ್ತೂ ತೊಂದರೆಯಾಗುತ್ತಿಲ್ಲ. ಸಾಲದ್ದಕ್ಕೆ ವಿದ್ಯಾರ್ಥಿಗಳಿಂದ ಪ್ರವೇಶದ ಮೇಲೆ ಬರುವ ಅಲ್ಪಸ್ವಲ್ಪ ಕಾಣಿಕೆಯಿಂದ ಹಾಗೂ ಪೋಷಕರಿಂದ ಬರುವ ಉದಾರ ಕೊಡಿಗೆಗಳಿಂದ ಇಂದು ಸಂಸ್ಥೆಗೆ ಭದ್ರವಾದ ಆರ್ಥಿಕ ದೃಢತೆಯನ್ನು ಹೊಂದಲು ಅನುಕೂಲವಾಗಿದೆ.

ಇನ್ನು ದಿನೇ ದಿನೇ ಹೆಚ್ಚುತ್ತಿರುವ ವಿದ್ಯಾ ಸಂಸ್ಥೆಯಿಂದಾಗಿ ನನ್ನ ಕಾಲೇಜಿನಲ್ಲಿರುವ ಸ್ಥಳಾವಕಾಶ ಸಾಕಾಗದೆ ಆಡಳಿತ ಮಂಡಳಿಯ ಸದಸ್ಯರ ಹಾಗೂ ನಮ್ಮ ವಿದ್ಯಾ ಸಂಸ್ಥೆಗಳ ಮುಖ್ಯಸ್ಥರ ಸಹಕಾರದಿಂದ ನಾನು ಈ ಸಂಸ್ಥೆಗೆ ಬಂದ ನಂತರ 1978 ರಿಂದೀಚೆಗೆ ಸದರಿ ಕಟ್ಟಡದಲ್ಲಿ 2 ಮತ್ತು 3ನೇ ಮಹಡಿಗಳನ್ನು ಸುಮಾರು 1 ಕೋಟಿ ರೂಪಾಯಿ ವೆಚ್ಚದಲ್ಲಿ ಕಟ್ಟಿಸಿ ಸ್ಥಳಾವಕಾಶ ಕಲ್ಪಿಸಿದ್ದೇವೆ. ಇಷ್ಟಾದರೂ ಸ್ಥಳದ ಕೊರತೆ ಇದ್ದುದನ್ನು ಗಮನಿಸಿ 1989 ರಲ್ಲಿ ಸಂಸ್ಥೆಯ ಸುವರ್ಣ ಮಹೋತ್ಸವದ ಸವಿನೆನಪಿಗಾಗಿ ಸುಮಾರು 75 ಲಕ್ಷ ರೂಪಾಯಿಗಳ ಸುಸಜ್ಜಿತವಾದ

ಕಟ್ಟಡವನ್ನು ಕಟ್ಟಿಸಲಾಯ್ತು. ಅದರಲ್ಲೂ ಪ್ರಾಥಮಿಕ ಹಾಗೂ ಬಾಲಕಿಯರ ಪ್ರೌಢಶಾಲೆಗಳನ್ನು ನಡೆಸಲಾಗುತ್ತಿದೆ.

ಇದಲ್ಲದೆ ಬೆಂಗಳೂರು ನಗರದ ಹೊರವಲಯದಲ್ಲಿರುವ ಯಲಹಂಕ ನ್ಯೂಟೌನ್‌ನಲ್ಲಿ ಈಗಾಗಲೇ 2 ಎಕರೆ ಜಾಗವನ್ನು ಕರ್ನಾಟಕ ಗೃಹಮಂಡಳಿಯವರಿಂದ ಪಡೆದು ಕಟ್ಟಡದ ಕೆಲಸವನ್ನು ಪ್ರಾರಂಭಿಸುತ್ತಿದ್ದೇವೆ. ಅದರಿಂದ ನಮ್ಮ ಕಾಲೇಜಿನ ಪ್ರವೇಶಕ್ಕಾಗಿ ನಡೆಯುತ್ತಿರುವ ಜನಸಂದಣಿ ಸ್ವಲ್ಪಮಟ್ಟಿಗೆ ಸುಧಾರಿಸಬಹುದೆಂದು ನನ್ನ ಭಾವನೆ.

ಇದಲ್ಲದೆ ನಮ್ಮ ಶಿಕ್ಷಣ ದತ್ತಿಗೆ ಕಳಶವಿಟ್ಟಂತೆ 1992-93ನೇ ಸಾಲಿನಿಂದ ಸ್ನಾತಕೋತ್ತರ ಪದವಿ (ಇಂಗ್ಲಿಷ್) ತರಗತಿಗಳನ್ನು ಪ್ರಾರಂಭಿಸಲು ಬೆಂಗಳೂರು ವಿಶ್ವವಿದ್ಯಾಲಯ ಹಾಗೂ ಘನ ಸರ್ಕಾರದವರು ಮಂಜೂರಾತಿಯನ್ನು ನೀಡಿರುತ್ತಾರೆ. ಇದರಿಂದಾಗಿ ನಮ್ಮ ಸಂಸ್ಥೆಯು ಇಂದು ಶಿಶುವಿಹಾರದಿಂದ ಉನ್ನತ ಶಿಕ್ಷಣವಾದ ಸ್ನಾತಕ ಪದವಿಯನ್ನು ನೀಡುವಂತಹ ಒಂದು ಉತ್ತಮ ಬೃಹತ್ ಸಂಸ್ಥೆಯಾಗಿ ಬೆಳೆದಿದೆ ಎಂದು ನಾನು ಹೆಮ್ಮೆಯಿಂದ ಹೇಳಿಕೊಳ್ಳಲು ಬಯಸುತ್ತೇನೆ.

ನಮ್ಮ ಎಲ್ಲಾ ಶಿಕ್ಷಣ ಸಂಸ್ಥೆಗಳಲ್ಲೂ ಬಹಳ ಒಳ್ಳೆಯ ಶಿಸ್ತಿನ ವಾತಾವರಣ ಮೂಡಿದೆ. ನಮ್ಮ ಸಂಸ್ಥೆಯು ಶಿಸ್ತಿಗೆ ಮತ್ತು ಒಳ್ಳೆಯ ಫಲಿತಾಂಶಕ್ಕೆ ಹೆಸರುವಾಸಿಯಾಗಿದೆ. ಬೆಂಗಳೂರು ನಗರದ ಕಾರ್ಪೊರೇಷನ್ ವ್ಯಾಪ್ತಿಯ ಕೆಲವೇ ಕೆಲವು ಪ್ರತಿಷ್ಠಿತ ವಿದ್ಯಾ ಸಂಸ್ಥೆಗಳಲ್ಲಿ ನಮ್ಮ ಸಂಸ್ಥೆಯು ಒಂದಾಗಿದೆಯೆಂದು ತುಂಬಾ ಹೆಮ್ಮೆಯಿಂದ ಹೇಳಬಯಸುತ್ತೇನೆ. ನಮ್ಮ ಸಂಸ್ಥೆಯಲ್ಲಿ ಅತಿ ಸುಂದರವಾದ ಸುಸಜ್ಜಿತವಾದ ದೊಡ್ಡ ಸಭಾಂಗಣವಿದೆ. ಅದರಲ್ಲಿ ಶಾಲಾ ಕಾಲೇಜುಗಳ ಸಮಾರಂಭಗಳನ್ನು ಬಹಳ ವಿಜೃಂಭಣೆಯಿಂದ ನಡೆಸಲು ಅನುಕೂಲವಿದೆ. ಅಲ್ಲದೆ ದೊಡ್ಡ ಸಮಾರಂಭಗಳನ್ನು ನಡೆಸಲು "ರಾಷ್ಟ್ರಕವಿ ಕುವೆಂಪು ರಂಗ ಮಂದಿರ" ಎಂಬ ಹೆಸರಿನ ಬಯಲು ರಂಗ ಮಂದಿರವನ್ನು ಸಹ ನಿರ್ಮಾಣಮಾಡಿದ್ದೇವೆ. ಈ ಬಡಾವಣೆಯಲ್ಲೇ ಬಹಳ ದೊಡ್ಡದೊಡ್ಡ ಸಂಗೀತ ವಿದ್ವಾನ್‌ಗಳಿಂದ ಸಂಗೀತ ಕಾರ್ಯಕ್ರಮಗಳು ನಡೆಯುತ್ತವೆ.

ಹಿಂದೆ ಸುಮಾರು 1978-79ರಲ್ಲಿ ಈ ಸಂಸ್ಥೆಯಲ್ಲಿ ಅಶಿಸ್ತು ತಾಂಡವ ವಾಡುತ್ತಿತ್ತು. ವಿದ್ಯಾರ್ಥಿಗಳ ಸಂಘದವರಿಂದ ಶಾಲೆ ಕಾಲೇಜುಗಳ ಪೀಠೋಪಕರಣ ಧ್ವಂಸವಾಗುತ್ತಿದ್ದವು. ಕಾಲೇಜಿನ ಕಿಟಕಿ ಬಾಗಿಲುಗಳು ಸದಾ ಮುರಿದು ಬೀಳುತ್ತಿದ್ದವು. ಅವುಗಳಲ್ಲಿ ಕೆಲವು ಮುಖ್ಯ ಘಟನೆಗಳನ್ನು ಇಲ್ಲಿ ಹೇಳ ಬಯಸುತ್ತೇನೆ. ಒಂದು ದಿನ ಎಸ್. ಎಸ್. ಎಲ್. ಸಿ. ಪರೀಕ್ಷೆಯು ನಡೆಯುತ್ತಿರಬೇಕಾದರೆ ಪಾಂಡುರಂಗ ಎಂಬ ವಿದ್ಯಾರ್ಥಿಯು ಬಿಲ್ಡಿಂಗ್ ಹಿಂಭಾಗದಿಂದ ಹತ್ತಿ ಎರಡನೇ ಮಹಡಿಯ ಕಿಟಕಿಯ ಬಳಿ ನಿಂತು, ಪರೀಕ್ಷೆಯ ಕೊಠಡಿಯಲ್ಲಿದ್ದ ಆತನ ಸ್ನೇಹಿತನಿಗೆ ಉತ್ತರ ಪತ್ರಿಕೆಗಳನ್ನು ಹೊರಗಡೆಯಿಂದ ಕೊಟ್ಟು ಹೋಗುವಾಗ ನಾನು ಮತ್ತು ಆಗಿನ

ಮುಖ್ಯೋಪಾಧ್ಯಾಯರಾದ ಶ್ರೀ ಕೆ.ವಿ.ಎಸ್. ರವರನ್ನು ಕಂಡು ಆತನು ಗಾಬರಿಯಿಂದ ಗ್ರೌಂಡ್ ಫ್ಲೋರ್‌ನಲ್ಲಿದ್ದ ಆಸ್‌ಬೆಸ್ಟಾಸ್ ಶೀಟ್ ಮೇಲೆ ದುಮುಕಿ ಓಡಿ ಹೋಗುತ್ತಿದ್ದಾಗ ಆತನನ್ನು ಹಿಡಿದು ಬುದ್ಧಿ ಹೇಳಿ ಇನ್ನು ಮುಂದೆ ಈ ಕೆಲಸ ಮಾಡಬೇಡೆಂದು ಹೇಳಿದಾಗ್ಯೂ ಸಹ ಮಾರನೇ ದಿನವೂ ಕೂಡ ನಾನು ಬರುವುದಕ್ಕೆ ಅರ್ಧ ಗಂಟೆ ಮುಂಚೆ ಆತ ಅದೇ ಸಾಹಸಕ್ಕೆ ಕೈಹಾಕಿ ಉತ್ತರ ಪತ್ರಿಕೆಗಳನ್ನು ತನ್ನ ಸ್ನೇಹಿತರಿಗೆ ಕೊಟ್ಟು ಕೆಳಗೆ ದುಮುಕಲು ಹೋಗಿ ಆಸ್‌ಬೆಸ್ಟಾಸ್ ಶೀಟ್ ಹೆಂಚಿನ ಕೊನೆಗೆ ಜಿಗಿದು ಆ ಹೆಂಚಿನ ಕೊನೆಯು ಮುರಿದು ಆತ ಕೆಳಗೆ ಬಿದ್ದು ಸ್ಥಳದಲ್ಲೇ ಸತ್ತು ಹೋದ ಪ್ರಸಂಗವನ್ನು ನಾನು ಬಹಳ ದುಃಖದಿಂದ ಹೇಳಬೇಕಾಗಿದೆ. ಇಷ್ಟೆಲ್ಲಾ ಅಶಿಸ್ತಿಗೆ ಕಾರಣ ವಿದ್ಯಾರ್ಥಿ ಯೂನಿಯನ್ ಎಂದು ತಿಳಿದು ಬಂದು ಈ ಯೂನಿಯನ್‌ಗಳನ್ನೇ ಕೊನೆಗಾಣಿಸಬೇಕೆಂದು ಸಂಸ್ಥೆಯ ಮುಖ್ಯಸ್ಥರು, ಅಧ್ಯಾಪಕರು ಸೇರಿ ವಾದವಿವಾದಗಳನ್ನು ನಡೆಸಿ ದಿನಾಂಕ 3–6–1982ರಲ್ಲಿ ನಡೆದ ಸಭೆಯಲ್ಲಿ ಈ ಯೂನಿಯನ್‌ಗಳನ್ನು ರದ್ದು ಮಾಡಲು ದೃಢವಾದ ನಿರ್ಣಯವನ್ನು ತೆಗೆದುಕೊಂಡ ದಿನವನ್ನು ಈ ದಿವಸ ನಾನು ನೆನಪು ಮಾಡಿಕೊಳ್ಳುತ್ತೇನೆ.

ಎರಡನೆಯದಾಗಿ ಒಂದು ದಿನ ಯಾವುದೋ ಕ್ಷುಲ್ಲಕ ಕಾರಣಕ್ಕಾಗಿ ಪಿ.ಯು.ಸಿ. ಕಾಲೇಜಿನಲ್ಲಿ ಗಲಾಟೆ ನಡೆದು ಪೊಲೀಸನವರು ಕಾಲೇಜಿನ ಒಳಕ್ಕೆ ಬಂದು ಲಾಟಿ ಚಾರ್ಜ್ ಮಾಡಿ 10–15 ಜನ ವಿದ್ಯಾರ್ಥಿಗಳನ್ನು ಅರೆಸ್ಟ್ ಮಾಡಿಕೊಂಡು ಹೋಗಿದ್ದನ್ನು ನಾನು ನೋಡಿದ್ದೇನೆ. ಇನ್ನೊಂದು ಸಣ್ಣ ಕಾರಣಕ್ಕಾಗಿ ವಿದ್ಯಾರ್ಥಿ ಸಂಘದವರೊಡನೆ ಕಾಲೇಜಿನ ಆವರಣದಲ್ಲೇ ಡೇರೆ ಹಾಕಿ 4–5 ದಿವಸಗಳ ಕಾಲ ಉಪವಾಸ ಸತ್ಯಾಗ್ರಹಗಳನ್ನು ನಡೆಸಿದ್ದನ್ನು ನೋಡಿದ್ದೇನೆ. ಒಂದು ದಿನ ನೂರಾರು ವಿದ್ಯಾರ್ಥಿಗಳು ಗುಂಪುಗೂಡಿ ಕಾಲೇಜಿನೊಳಗೆ ಜಮಾಯಿಸಿ ಕಿಟಕಿ ಬಾಗಿಲುಗಳನ್ನು ಮತ್ತು ಗ್ಲಾಸುಗಳನ್ನು ಒಡೆದು ದತ್ತಿಯ ಆಫೀಸು ಬಳಿ ಬಂದು ದತ್ತಿಯ ಬಾಗಿಲು ಒಡೆಯಬೇಕೆಂದು ಹಠ ಮಾಡಿದಾಗ ಅವರನ್ನು ಗದರಿಸಿ, ಬೆದರಿಸಿ, ಹೆದರಿಸಿ ಈ ಕೊಠಡಿಯನ್ನು ಒಡೆಯಬೇಕಾದರೆ, (ಯು ಮಸ್ಟ್ ಡು ಇಟ್ ಆನ್ ಮೈ ಡೆಡ್ ಬಾಡಿ) ಎಂದು ದಿಟ್ಟತನದಿಂದ ಹೇಳಿದ ಒಬ್ಬ ಪ್ರಾಂಶುಪಾಲರನ್ನು ನಾನು ಈ ದಿನ ನೆನಪಿಸಿಕೊಳ್ಳುತ್ತೇನೆ.

ಇದಲ್ಲದೆ ಸುಮಾರು 130 ಜನ ವಿದ್ಯಾರ್ಥಿಗಳಿಗೆ ಪದವಿ ಕಾಲೇಜಿನಲ್ಲಿ ಹಾಜರಾತಿ ಕೊರತೆಯಿದ್ದಾಗ ಪರೀಕ್ಷೆಗೆ ಕೂರಿಸಲು ಸಾಧ್ಯವಿಲ್ಲವೆಂದು ಧೈರ್ಯದಿಂದ ಹೇಳಿ ಅವರ ಪ್ರತಿಭಟನೆಯನ್ನು ಲೆಕ್ಕಿಸದೆ ದಿಟ್ಟತನದಿಂದ ಹೆದರಿಸಿದ ಪ್ರಾಂಶುಪಾಲರನ್ನು ನಾನು ಕಂಡಿದ್ದೇನೆ.

ಆ ದುರ್ದಿನಗಳೆಲ್ಲಾ ಈಗ್ಗೆ 10-12 ವರ್ಷಗಳ ಹಿಂದೆಯೇ ಕಳೆದು ಈ ದಿನ ಈ ಸಂಸ್ಥೆಯ ಸುದಿನಗಳನ್ನು ಯಾವ ಅಡ್ಡಿ ಆತಂಕವೂ ಇಲ್ಲದೆ ಶಾಂತ ವಾತಾವರಣದಲ್ಲಿ ಒಳ್ಳೆಯ ಶಿಕ್ಷಣ ಗುಣಮಟ್ಟದೊಂದಿಗೆ ನಡೆದು ವಿದ್ಯಾರ್ಥಿಗಳ ಪ್ರತಿಭೆಗಳನ್ನು ಹೆಚ್ಚಿಸು

ವುದಕ್ಕೋಸ್ಕರ ಅವರುಗಳನ್ನು ಉತ್ತಮ ಪ್ರಜೆಗಳನ್ನಾಗಿ ಮಾಡುವುದಕ್ಕಾಗಿ ಉತ್ತಮ ಫಲಿತಾಂಶ ತರುವುದರಲ್ಲಿ ನಿರಂತರವಾಗಿ ಶ್ರಮಿಸುತ್ತ ನಗರದಲ್ಲಿ ಉತ್ತಮ ಶಿಕ್ಷಣ ಸಂಸ್ಥೆಯಾಗಿ ಕಾರ್ಯಮಾಡಿವೆ. ಇದು ನನ್ನ ಸುದೈವ ಮತ್ತು ನನಗೆ ಆತ್ಮತೃಪ್ತಿಯನ್ನೂ ಸಹ ತಂದಿದೆ.

ನಮ್ಮ ಶಿಕ್ಷಣ ಸಂಸ್ಥೆಗಳಲ್ಲಿ ಇಂದು ಪರೀಕ್ಷೆಗಳಲ್ಲಿ ಅವ್ಯವಹಾರವಾಗಲೀ, ಅಶಿಸ್ತಾಗಲೀ, ಕಾಪಿ ಹಿಡುಗಾಗಲಿ ಇಲ್ಲವೇ ಇಲ್ಲವೆಂದು ಹೇಳಬಹುದು. ಈ ಸಂಸ್ಥೆಯ ಎಲ್ಲಾ ಭಾಗಗಳಲ್ಲಿ ಕೊಠಡಿಯ ಸೌಕರ್ಯಕ್ಕಾಗಿ 2 ಮತ್ತು 3ನೇ ಮಹಡಿಗಳನ್ನು ಕಟ್ಟಿಸಿ ಅಗತ್ಯವಾದ ಶೌಚಾಲಯ, ಕುಡಿಯುವ ನೀರಿನ ಸೌಕರ್ಯ ಮತ್ತು ಉಪಾಹಾರ ಗೃಹಗಳನ್ನು ನಿರ್ಮಿಸಲಾಗಿದೆ. ಅಲ್ಲದೆ ಸುಮಾರು 8 ಲಕ್ಷ ರೂಗಳ ವೆಚ್ಚದಲ್ಲಿ ಸುಸಜ್ಜಿತವಾದ ಆಡಿಟೋರಿಯಮನ್ನೂ ಸಹ ಕಟ್ಟಿಸಲಾಗಿದೆ. ಶಿಕ್ಷಕ ವೃಂದವು 3ನೇ ಮಹಡಿಗೆ ಹತ್ತಲು ಕಷ್ಟವಾಗಬಹುದೆಂದು ಅವರ ಅಭಿಪ್ರಾಯ ಪಡೆದು ಒಂದು ಲಿಫ್ಟ್ ಸೌಕರ್ಯವನ್ನು ಸಹ ಒದಗಿಸಿದ್ದೇವೆ.

ಒಟ್ಟಿನಲ್ಲಿ ಒಳ್ಳೆಯ ವಿದ್ಯಾಸಂಸ್ಥೆಗಳಿಗಿರಬೇಕಾದ ಶಿಸ್ತು ಮತ್ತು ಉತ್ತಮ ಗುಣಮಟ್ಟ ಫಲಿತಾಂಶವನ್ನು ಕಾಪಾಡಿಕೊಂಡು ಇಂದು ನಮ್ಮ ದತ್ತಿಯ ಶಾಲೆ ಕಾಲೇಜುಗಳು ವಿದ್ಯಾಕ್ಷೇತ್ರದಲ್ಲಿ ಹೆಸರು ಮಾಡಿವೆ. ಈ ಸಂದರ್ಭದಲ್ಲಿ ಕೀರ್ತಿಗೆ ನಾನು ನೆಪ ಮಾತ್ರ. ಈ ಸಂಸ್ಥೆಯ ಅಭಿವೃದ್ಧಿಗೆ ಈ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಕೆ. ಎಂ. ನಂಜಪ್ಪನವರ ಮಾರ್ಗದರ್ಶನ ಧರ್ಮದರ್ಶಿಗಳ ಸಹಕಾರ, ಸಂಸ್ಥೆಯ ಮುಖ್ಯಸ್ಥರುಗಳು, ಶಿಕ್ಷಕ ವರ್ಗದ ಹಾಗೂ ವಿದ್ಯಾರ್ಥಿಗಳ ಹಾಗೂ ಅವರ ಪೋಷಕ ವರ್ಗದವರಿಂದ ಸಹಕಾರ ಸಹಾಯ ಮಾರ್ಗದರ್ಶನವೇ ಈ ಸಂಸ್ಥೆಯ ಅಭಿವೃದ್ಧಿಗೆ ಮುಖ್ಯಕಾರಣವೆಂದು ಹೇಳಲು ಸಂತೋಷವಾಗುತ್ತದೆ.

ನನಗೆ ಈ ವಿದ್ಯಾಸಂಸ್ಥೆಯಲ್ಲಿ ಸೇವೆ ಮಾಡಲು ಅವಕಾಶ ಮಾಡಿಕೊಟ್ಟ ಅತಿ ಮುಖ್ಯರೆಂದರೆ ಶ್ರೀಮಾನ್ ಕೆ. ಎಂ. ನಂಜಪ್ಪನವರು. ಇವರು ಬೆಂಗಳೂರು ಮಹಾನಗರದ ಮಾಜಿ ಮೇಯರ್ ಆಗಿ ಬೆಂಗಳೂರು ಮಹಾಜನತೆಗೆ ಸೇವೆ ಮಾಡಿದವರು. ಈಗಲೂ ಅನೇಕ ವಿದ್ಯಾಸಂಸ್ಥೆಗಳಲ್ಲಿ ಸಾಮಾಜಿಕ ಹಾಗೂ ಧರ್ಮ ಸಂಸ್ಥೆಗಳಲ್ಲಿ ತಮ್ಮ ಅಮೂಲ್ಯವಾದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ನನಗೆ ಪರಮ ಹಿತೈಷಿಗಳು, ಸದ್ಗುಣ ಸಂಪನ್ನರು ಹಾಗೂ ಉದಾರಭರಿತರು. "ಆಡು ಮುಟ್ಟದ ಸೊಪ್ಪಿಲ್ಲ" ಎಂಬ ಗಾದೆಯಂತೆ ಬೆಂಗಳೂರಿನಲ್ಲಿ ಅನೇಕ ಸಂಘ ಸಂಸ್ಥೆಗಳ ಜೀವನಾಡಿಯಾಗಿ ತಮ್ಮ ನಿಸ್ವಾರ್ಥ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ನಾನು ಈ ಮಹಾನ್ ಸಂಸ್ಥೆಯಲ್ಲಿ ಪ್ರಧಾನ ಕಾರ್ಯದರ್ಶಿಯಾಗಿ 1976ರಿಂದಲೂ ಕಾರ್ಯನಿರ್ವಹಿಸುತ್ತಿದ್ದು ಒಂದು ಒಳ್ಳೆಯ ಶಿಕ್ಷಣ ಸಂಸ್ಥೆಯಲ್ಲಿ ಪ್ರಧಾನ ಕಾರ್ಯದರ್ಶಿಯಾಗಬೇಕಾದರೆ ಅವರಿಗೆ ಇರತಕ್ಕ ಕೆಲವು

ಗುಣಗಳನ್ನು ನಾನು ಇಲ್ಲಿ ಗುರುತಿಸಿದ್ದೇನೆ. ಅವುಗಳನ್ನು ತಮ್ಮ ಮುಂದೆ ಇಡಲು ನಾನು ಇಚ್ಛಿಸುತ್ತೇನೆ. ಅವು ತಪ್ಪೋ ಸರಿಯೋ ಓದುಗರೇ ನಿರ್ಧರಿಸಿಕೊಳ್ಳಬಹುದು.

"ಸತ್ಯಂ ಭ್ರೂಯಾತ್ ಪ್ರಿಯಂ ಭ್ರೂಯಾತ್ ;
ನಭ್ರೂಯಾತ್ ಸತ್ಯಂ ಮಪ್ರಿಯಂ,

'ಸತ್ಯವನ್ನೇ ಹೇಳು, ಪ್ರಿಯವಾದುದನ್ನೇ ಹೇಳು,
ಆದರೆ ಅಪ್ರಿಯವಾದ ಸತ್ಯವನ್ನು ಹೇಳಬೇಡ'

ನಾನು ನಮ್ಮದೇ ಆದ ಒಂದು ಅವಿಭಕ್ತ ಕುಟುಂಬವನ್ನು ಕಳೆದುಕೊಂಡೆನಾದರೂ ಎಸ್.ಇ.ಟಿ. ಎಂಬ ಒಂದು ಅವಿಭಕ್ತ ಕುಟುಂಬದ ಸದಸ್ಯನಾಗಿದ್ದೇನೆ. ಈ ಕುಟುಂಬದಲ್ಲಿ ಸುಮಾರು 200-300 ಅಧ್ಯಾಪಕ - ಅಧ್ಯಾಪಕಿಯರು ಸುಮಾರು 150 ಮಂದಿ ಸಿಬ್ಬಂದಿಯವರು ಸುಮಾರು 8000 ಮಂದಿ ವಿದ್ಯಾರ್ಥಿ-ವಿದ್ಯಾರ್ಥಿನಿಯರು ದೊಡ್ಡ ಕುಟುಂಬದ ನೆನಪನ್ನು ಮರೆಯುವಂತೆ ಮಾಡಿದೆ. ಇದನ್ನು ಎಂದೆಂದಿಗೂ ಒಡೆಯದಿರುವಂತೆ ಸದಾ ನನಗೆ ಎಚ್ಚರಿಕೆ ನೀಡುತ್ತಿದೆ. ನಮ್ಮ ಎಸ್.ಇ.ಟಿ. ಪ್ರತಿ ವರ್ಷವೂ ಆಚರಿಸುವ ಸಂತೋಷಕೂಟವು ಸಮರಸದ ಸಾಧನೆಯ ಸೌಭಾಗ್ಯದ ಸಂಕೇತ. ಸಾಮಾನ್ಯವಾಗಿ ನಾವು ಪ್ರತಿನಿಧಿಸುವ ವಿಭಾಗಗಳ ಬಗ್ಗೆ ಮೋಹ ಆಸೆ ಹೆಚ್ಚಾದಾಗ ವಿರಸದ ಬೀಜ ಮೊಳೆಯುತ್ತದೆ. ಸಣ್ಣಪುಟ್ಟ ವಿಷಯಗಳೇ ಬೆಳೆದು ಬೃಹದಾಕಾರವಾಗಿ ವಿರಸದ ವಸ್ತುಗಳಾಗುತ್ತವೆ. ಅದ್ದರಿಂದ ವಿರಸ ಬೆಳೆಯದಂತೆ ತಡೆಗಟ್ಟುವುದು, ಕಾರ್ಯದರ್ಶಿಯಾದವರ ಕರ್ತವ್ಯ. ಎಲ್ಲೇ ವಿರಸದ ಕಿಡಿ ಕಾಣಿಸಿಕೊಂಡರೂ ಅದು ಮನೆಯೊಳಗಣ ಕಿಚ್ಚಾಗುವುದರಲ್ಲಿ ಸಂದೇಹವಿಲ್ಲ. ವಿರಸ ಉಲ್ಬಣಿಸದಂತೆ ಸಮರಸ ಮೂಡುವಂತೆ ಪ್ರಯತ್ನಿಸುವುದೇ ಕಾರ್ಯದರ್ಶಿಯ ದೊಡ್ಡ ಸಾಹಸವಾಗುತ್ತದೆ. ಆದರೆ ಸಮಯಪ್ರಜ್ಞೆ ಮಾನಸಿಕ ಸಮತೋಲನ ಮುಖ್ಯವಾಗಿ ಎಲ್ಲರನ್ನೂ ಸಮಭಾವದಿಂದ ಕಾಣುವುದು ಕಾರ್ಯದರ್ಶಿಯವರ ಕೆಲಸ. ತಮ್ಮ ಮನಸ್ಸಿನಲ್ಲಿ ಏನೇ ಕ್ಲೇಶಗಳಿದ್ದರೂ ಮುಖ ಸಿಂಡರಿಸಿಕೊಂಡಿರದೆ ಅಂದಿನದನ್ನು ಅಲ್ಲೇ ಮರೆತುಬಿಟ್ಟು ನಗುನಗುತ್ತಲೇ ಕೆಲಸಕಾರ್ಯಗಳನ್ನು ಮಾಡಿಸುವುದು ಕಾರ್ಯದರ್ಶಿಯಾದವರ ಬಹು ಮುಖ್ಯವಾದ ಕರ್ತವ್ಯ. ಕಾರ್ಯದರ್ಶಿಯವರು ಯಾರಿಗಾದರೂ ಹೇಗಾದರೂ ಸ್ವಲ್ಪ ಹತ್ತಿರವಾದರೆ ಕೂಡಲೆ ಮುಂದಿಯ ವಾಕ್‌ಸರಣಿ ಪ್ರಾರಂಭವಾಗುತ್ತದೆ. "ಚಾಲ, ಚೀಲ, ಚಮಚ" ಹೀಗೆ ಎಲ್ಲರ ಬಾಯಿಯಲ್ಲೂ ಓಡಾಡುತ್ತಿರುತ್ತದೆ. ಇವಕ್ಕೆಲ್ಲಾ ಅವಕಾಶ ಕೊಡದೆ ಇವನ್ನೆಲ್ಲಾ ನೋಡಿದರೂ ನೋಡದಂತೆ ಇದ್ದು ವ್ಯಂಗ್ಯೋಕ್ತಿಗಳನ್ನು ಕೇಳಿದರೂ ಕೇಳದಂತಿದ್ದು ಎಲ್ಲರ ಮನದಲ್ಲಿದ್ದು ಇಲ್ಲದಂತಿದ್ದು ಎಲ್ಲರೂ ಹೇಳಿದ್ದನ್ನು ಕೇಳಿ ತನ್ನ ಬುದ್ಧಿಯನ್ನು ತನ್ನ ಕೈಯೊಳಗೆ ಇಟ್ಟುಕೊಂಡಿರಬೇಕು ಹಾಗೂ ಮನಸ್ಸಿಗೆ ಬಂದದ್ದನ್ನೆಲ್ಲಾ ಬಡಬಡಿಸದೆ ಮನಸ್ಸು ಹೇಳಿದ್ದನ್ನೆಲ್ಲಾ

ಮಾಡದೆ ತನ್ನ ಅಂತರಾತ್ಮಕ್ಕೆ ಮೋಸಮಾಡದೆ ತನ್ನ ಪಾಡಿಗೆ ತಾನಿದ್ದರೆ ಸಾಕು. ಇನ್ನೊಬ್ಬರಿಗೆ ತೊಂದರೆ ಮಾಡುವುದು, ಸರ್ವಥಾ ಸಲ್ಲದು, ಚಾಡಿಮಾತು ಕೇಳುವವರಾದರೆ, ದೇವರೇ ಗತಿ, ಅವರು ಬಂದು ಇವರ ಮೇಲೆ ಇವರು ಬಂದು ಅವರ ಮೇಲೆ ಚಾಡಿ ಹೇಳುತ್ತಿರುತ್ತಾರೆ. ಆಗ ಕಾರ್ಯದರ್ಶಿಯಾದವನು ತನ್ನ ವಿವೇಕ ವಿವೇಚನೆಯನ್ನು ಉಪಯೋಗಿಸಬೇಕು, 'ತಾವರೆ ಮೇಲಿನ ಹನಿಯಂತಿರಬೇಕು'.

ಕಾರ್ಯದರ್ಶಿಯವರ ಮತ್ತೊಂದು ಮುಖ್ಯವಾದ ಕೆಲಸ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸುವುದರ ಜೊತೆಗೆ ಶೈಕ್ಷಣಿಕ ಜವಾಬ್ದಾರಿ ಹಾಗೂ ಸಿಬ್ಬಂದಿಯ ಉಸ್ತುವಾರಿ ಮತ್ತು ಕಾಲೇಜು ಅಭಿವೃದ್ಧಿಗೆ ಬೇಕಾದ ನಿಧಿ ಸಂಗ್ರಹಣೆ ಬಹು ಮುಖ್ಯವಾದದ್ದು.

ಇಂತಹ ಮಹಾ ಸಂಸ್ಥೆಗಳಲ್ಲಿ ಹಣಕಾಸಿನ ವ್ಯವಹಾರವನ್ನು ಲವಲೇಶವೂ ಪ್ರಮಾದವಾಗದಂತೆ ದಕ್ಷತೆಯಿಂದ ಪ್ರಾಮಾಣಿಕವಾಗಿ ನೋಡಿಕೊಳ್ಳುತ್ತಿರುವ ಶ್ರೀಯುತರಾದ ಪಿ. ಲಿಂಗಪ್ಪ, ಗೋಪಾಲಕೃಷ್ಣ, ಶ್ರೀರಾಮಯ್ಯ, ಗುರುರಾಜ್, ಕೆಂಪರಸ, ಸಿ. ವೀರಹನುಮಯ್ಯ, ಪ್ರಾಣೇಶ್‌ಬಾಪು, ಲಿಲ್ಲಿಮೇರಿ, ಶಾಂತಿನಿಶೇಷನ್, ಶ್ರೀಮತಿ ವಿದ್ಯಾ ಇವರ ಕಾರ್ಯದಕ್ಷತೆಯನ್ನು ಎಷ್ಟು ಸ್ಮರಿಸಿದರೂ ಸಾಲದು.

# ದೇವಸ್ಥಾನಗಳ ನಿರ್ಮಾಣ ಕಾರ್ಯ

ನಾನು ಸರ್ಕಾರಿ ಸೇವೆಯಲ್ಲಿ ಬೇರೆ ಬೇರೆ ಸ್ಥಳದಲ್ಲಿ ಕಾರ್ಯ ಮಾಡುತ್ತಿದ್ದರೂ ಆಗಾಗ್ಗೆ ನಮ್ಮ ಊರಿಗೆ ಭೇಟಿ ಕೊಡುತ್ತಿದ್ದೆ. ಕಾರಣ ನಮ್ಮ ತಂದೆಯವರು ತೀರಿಕೊಂಡ ನಂತರ ನಮ್ಮ ಸೋದರ ಮಾವಂದಿರು ಮತ್ತು ಅವರ ಮಕ್ಕಳು ಮನೆಯಲ್ಲಿ ಒಮ್ಮತವಾಗಿ ಇದ್ದು 1964ರ ವರೆಗೂ ಸಹಬಾಳ್ವೆಯನ್ನು ನಡೆಸಿದರು. ಅನಂತರ ಆಸ್ತಿಯನ್ನು ಬೇರೆ ಬೇರೆ ಮಾಡಿಕೊಂಡು ವಾಸ ಮಾಡುವ ಪ್ರಸಂಗ ಹೇಗೆ ಬಂತು ಎಂಬುದನ್ನು ನಾನು ವಿವರಿಸಲು ಸಾಧ್ಯವಿಲ್ಲ. ವಿವರಿಸುವ ಪ್ರಯತ್ನಕ್ಕೆ ಹೋಗಲೂ ಬಾರದು. ಯಾವ ಕಾಲದಲ್ಲಿ ಏನು ನಡೆಯಬೇಕೋ ಅದು ನಡೆದೇ ತೀರುತ್ತದೆ. ಅದು ಯಾರ ಕೈಯಲ್ಲೂ ಇಲ್ಲ. ದೈವ ನಿಯಮದಂತೆ ನಡೆಯಬೇಕಾದ ಕಾರ್ಯಗಳನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ. 1965 ರಿಂದ ಈಚೆಗೆ ನನ್ನ ಭಾಗದ ಆಸ್ತಿಯ ಉಸ್ತುವಾರಿಯನ್ನು ನೋಡುವುದಕ್ಕಾಗಿ ಆಗಾಗ್ಗೆ ಊರಿಗೆ ಭೇಟಿ ಮಾಡುತ್ತಿದ್ದೆ. ನಾನು ಊರಿಗೆ ಹೋದಾಗಲೆಲ್ಲಾ ಅಲ್ಲಿನ ಜನರು ನನ್ನನ್ನು ಕುರಿತು ಈ ಊರಿಗೆ ಒಂದು ದೇವಸ್ಥಾನವನ್ನು ಕಟ್ಟಿಸಿಕೊಡಲು ಏರ್ಪಾಡು ಮಾಡಿ "ದೇವಸ್ಥಾನವಿಲ್ಲದ ಊರಿನಲ್ಲಿ ಊಟ ಮಾಡಬಾರದು" ಎಂಬ ನಾಣ್ಣುಡಿಯಿದೆ ಎಂದು ಆಗಾಗ ಹೇಳುತ್ತಿದ್ದರು. ನಾನು ಕೆಲವು ವರ್ಷಗಳ ಕಾಲ ಆ ಕಡೆ ಮನಸ್ಸು ಕೊಡಲಾಗಲಿಲ್ಲ. ಕೆಲಸದ ಒತ್ತಡ ದಿಂದಾಗಿ ಉದಾಸೀನನಾಗಿದ್ದೆ. ಹೋಪಾಳ್ಯದ ರೈತರೂ ಅಂತಹ ಶ್ರೀಮಂತ ರಾಗಿರಲಿಲ್ಲ. ಎಲ್ಲರೂ ಬಡ ರೈತರೇ. ದೇವಸ್ಥಾನ ಕಟ್ಟಿಸುವಂತಹ ಸಾಮರ್ಥ್ಯವುಳ್ಳವ ರಾಗಿರಲಿಲ್ಲ. ಅವರಲ್ಲಿ ಅನೇಕರು ನನ್ನ ಬಾಂಧವರು, ಬಂಧುಗಳು ಅಹುದು.

1969ರಲ್ಲಿ ನಾನು ಸರ್ಕಾರಿ ಸೇವೆಯಿಂದ ನಿವೃತ್ತನಾದಮೇಲೆ ನಾನು ಊರಿನ ವ್ಯವಸಾಯದ ಕಡೆ ಹೆಚ್ಚು ಹೆಚ್ಚು ಆಸಕ್ತಿ ವಹಿಸತೊಡಗಿದೆ. ಅಲ್ಲದೆ ಊರಿನಲ್ಲಿ ಕೆಲವು ದಿನಗಳನ್ನು ಕಳೆಯುತ್ತಿದ್ದೆ. ಆ ಸಂದರ್ಭದಲ್ಲಿ ಪೂಜೆ ಸಲ್ಲಿಸಲು ಊರಿನಲ್ಲಿ ದೇವಸ್ಥಾನ ವಿಲ್ಲದಿರುವುದನ್ನು ನಾನು ಕೂಡ ಸ್ವಾನುಭವದಿಂದ ಅರಿತು ಇದಕ್ಕಾಗಿ ಯೋಚಿಸ ತೊಡಗಿದೆ. ಈ ದಿಶೆಯಲ್ಲಿ ನಾನು ಮತ್ತು ನನ್ನ ಮಕ್ಕಳು ಸೇರಿ ಬೆಂಗಳೂರಿನಲ್ಲಿರುವ ನನ್ನ ಅನೇಕ ಮಿತ್ರರ, ಹಿತೈಷಿಗಳ ಸಹಕಾರದಿಂದ ಆ ಊರಿನಲ್ಲಿ ಶ್ರೀ ಶ್ರೀ ವೀರಾಂಜನೇಯ ಸ್ವಾಮಿ ಹಾಗೂ ಶ್ರೀ ಶ್ರೀ ಮಹಾಗಣಪತಿಯ ದೇವಸ್ಥಾನವನ್ನು ನಿರ್ಮಿಸಲು ಪ್ರಯತ್ನ ಮಾಡಿದೆವು.

ಈ ಸಮಯದಲ್ಲಿ ನಮ್ಮ ಮನೆಯ ದೇವರು ತಿಪಟೂರು ತಾಲ್ಲೂಕು ಕಿಬ್ಬನಹಳ್ಳಿ

ಬಳಿ ಇರುವ ಶ್ರೀ ಶ್ರೀ ಲಕ್ಷ್ಮೀನರಸಿಂಹಸ್ವಾಮಿಯು ದೇವಸ್ಥಾನದ ಕನ್ವೀನರ್ ಆಗಿದ್ದ ಶ್ರೀ ರಂಗಣ್ಣನವರ ಮೂಲಕ ನಾಟಕ ರತ್ನಾಕರ ಮಾಸ್ಟರ್ ಹಿರಣ್ಣಯ್ಯನವರನ್ನು ನೋಡಿ ಈ ದೇವಸ್ಥಾನದ ಸಹಾಯಾರ್ಥ "ಲಂಚಾವತಾರ" ನಾಟಕವನ್ನು ಆಡಿಸಲಾಯ್ತು. ಇದರಿಂದ ಸುಮಾರು ರೂ. 30,000-00 ನಿಧಿ ಸಂಗ್ರಹವಾಯಿತು. ದೇವರ ವಿಗ್ರಹಗಳನ್ನು ತಮ್ಮ ಬಂಧುಗಳು ಹಾಗೂ ಆತ್ಮೀಯ ಸ್ನೇಹಿತರೂ ಆದ ಶ್ರೀ ಡಬ್ಲ್ಯು. ಪಿ. ಶಿವಕುಮಾರ್‌ರವರ ಸಹಾಯದಿಂದ ಮಾಡಿಸಲಾಯ್ತು. ದೇವರ ಪೀಠಗಳನ್ನು ತಯಾರಿಸಲೂ ಸಹ ಶ್ರೀ ಶಿವಕುಮಾರ್‌ರವರೇ ತಮ್ಮ ಹೆಚ್ಚಿನ ಸಹಕಾರವನ್ನು ಕೊಟ್ಟರು. ಇದಕ್ಕಾಗಿ ನಾನು ಮತ್ತು ನಮ್ಮ ಹಳ್ಳಿಯ ಜನರು ಎಂದೆಂದೂ ಅವರಿಗೆ ಚಿರಋಣಿಯಾಗಿರಬೇಕು. ದೇವಸ್ಥಾನದ ಪೀಠಸ್ಥಾಪನೆ ಮಾಡಿಸಲು ಶ್ರೀ ಆದಿಚುಂಚನಗಿರಿ ಮಠಾಧೀಶರಾದ ಶ್ರೀ ಶ್ರೀ ಬಾಲಗಂಗಾಧರಸ್ವಾಮಿಗಳನ್ನು ಬರಮಾಡಿಕೊಳ್ಳಲು ಬಹಳ ಪ್ರಯತ್ನಿಸಿದೆವು. ಆದರೆ ಅವರು ದೇಹಾಲಸ್ಯದಿಂದಾಗಿ ಬರಲು ಸಾಧ್ಯವಿಲ್ಲವೆಂದು ಇನ್ನೆರಡು ತಿಂಗಳು ಅವಕಾಶ ಕೊಟ್ಟರೆ ದಿನಾಂಕವನ್ನು ಹೇಳುವೆನೆಂದು ಅಪ್ಪಣೆಕೊಟ್ಟರು. ಆದರೆ ದೇವಸ್ಥಾನದ ಪ್ರತಿಷ್ಠಾಪನೆಗೆ ಎಲ್ಲಾ ಸಿದ್ಧತೆಗಳೂ ನಡೆದಿದ್ದವು. ಆಗ ಶ್ರೀ ಸಿದ್ಧಗಂಗಾ ಮಠಾಧಿಪತಿಗಳಾದ ಶ್ರೀ ಶ್ರೀ ಶಿವಕುಮಾರಸ್ವಾಮಿಗಳನ್ನು ಭೇಟಿಮಾಡಿ ಅವರನ್ನು ನೂತನವಾಗಿ ಕಟ್ಟಿರುವ ದೇವಸ್ಥಾನದ ಉದ್ಘಾಟನೆ ಮಾಡಿಕೊಡಲು ಪ್ರಾರ್ಥಿಸಿಕೊಂಡೆವು. ಶ್ರೀ ಶ್ರೀಗಳವರು ಆ ದಿವಸ ದಯಮಾಡಿಸಿ ತಮ್ಮ ಅಮೃತ ಹಸ್ತದಿಂದ ದೇವಸ್ಥಾನವನ್ನು ಉದ್ಘಾಟಿಸಿ ನಮ್ಮ ಜನರಿಗೆಲ್ಲಾ ಆಶೀರ್ವಾಚನವನ್ನು ನೀಡಿದರು. ಬೆಂಗಳೂರಿನಿಂದ ಅನೇಕ ಜನರು ದಯಮಾಡಿಸಿದ್ದರು. ಪ್ರಯಾಣದ ಸೌಲಭ್ಯ, ಒಳ್ಳೆಯ ರಸ್ತೆ, ಇಲ್ಲದಿದ್ದಾಗ್ಯೂ ಬಹಳಷ್ಟು ಜನ ಹಿತೈಷಿಗಳು ಭಕ್ತಾದಿಗಳು ಆ ದಿವಸ ಆಗಮಿಸಿ ಕಾರ್ಯಕ್ರಮವನ್ನು ಬಹು ವಿಜೃಂಭಣೆಯಿಂದ ನಡೆಸಿಕೊಟ್ಟರು. ಅಂದಿನಿಂದ ನಿತ್ಯವೂ ಪೂಜೆ ಕಾರ್ಯಗಳು ದೇವಸ್ಥಾನದಲ್ಲಿ ನಿರಂತರವಾಗಿ ನಡೆಯುತ್ತಿದ್ದು ಪ್ರತಿಯೊಂದು ಮನೆಯವರೂ ತಲಾ ಒಂದೊಂದು ತಿಂಗಳುಗಳ ಕಾಲ ತಮ್ಮ ತಮ್ಮ ಸರದಿಯ ಪ್ರಕಾರ ಪೂಜಾ ಕಾರ್ಯಗಳನ್ನು ನಡೆಸಿಕೊಂಡು ಹೋಗುತ್ತಿದ್ದಾರೆ. ಇದು ನನಗೆ ಅತ್ಯಂತ ಪರಮ ಸಂತೋಷವನ್ನು ಉಂಟುಮಾಡಿದೆ. ಕೊಡಿಗೇಹಳ್ಳಿಯ ಆಂಜನೇಯಸ್ವಾಮಿ ದೇವಸ್ಥಾನದ ಖಾಯಂ ಅರ್ಚಕರೇ ಇಲ್ಲಿಯೂ ಪ್ರತಿದಿನ ಬಂದು ಬಹು ಶ್ರದ್ಧೆಯಿಂದ ಭಕ್ತಿಯಿಂದ ಪೂಜೆಯನ್ನು ನಡೆಸಿಕೊಂಡು ನಮ್ಮೂರಿನ ಜನತೆಯು ಬಹುದಿನದಿಂದ ಕಾಣದೇ ಇದ್ದ ಈ ದೇವರ ಪೂಜಾ ಸೇವೆ ಭಾಗ್ಯಗಳನ್ನು ನಿತ್ಯವೂ ದೊರಕುವಂತೆ ಮಾಡಿದೆ. ಇನ್ನೂ ಮಾಡಬೇಕಾದ ದೇವಸ್ಥಾನದ ಕೆಲಸಗಳು ಸಾಕಷ್ಟಿವೆ. ಉತ್ಸವ ಮೂರ್ತಿಯ ವಿಗ್ರಹಗಳನ್ನು ಇನ್ನೂ ಮಾಡಿಸಿಲ್ಲ. ಈ ಕೆಲಸವನ್ನು ಹೊಸಪಾಳ್ಯದ ಭಕ್ತಾದಿಗಳು ಮಾಡಿಯಾರು ಎಂದು ತಿಳಿದುಕೊಂಡಿದ್ದೇನೆ.

ಈ ಸಮಯದಲ್ಲಿ ಒಂದು ವಿಚಾರವನ್ನು ತಮ್ಮ ಮುಂದಿಡಲು ನನಗೆ ಸಂತೋಷ ವಾಗುತ್ತದೆ. ಕೊಡಿಗೇಹಳ್ಳಿಯಲ್ಲಿರುವ ಆಂಜನೇಯ ದೇವಸ್ಥಾನವು ಬಹಳ ಪುರಾತನ ವಾದುದು. ಆ ದೇವಸ್ಥಾನವನ್ನು ಕಟ್ಟಲು ನಮ್ಮ ಪೂರ್ವಿಕರು ಕಾರಣ. ಅದರಲ್ಲಿ ನಮ್ಮ ತಂದೆಯವರದು ಒಂದು ಪಾತ್ರವಿತ್ತೆಂದು ಕೇಳಿದ್ದೆ. ಶತಮಾನದ ಹಿಂದೆ ಕಟ್ಟಿದ್ದ ಈ ದೇವಸ್ಥಾನ ಶಿಥಿಲವಾಗಿ ಹೆಗ್ಗಣಗಳ ತೌರಾಗಿತ್ತು ಎಂದು ಹೇಳಲು ತುಂಬಾ ದುಃಖವಾಗುತ್ತದೆ. ಕೊಡಿಗೇಹಳ್ಳಿಯಲ್ಲಿಯೂ ಕೂಡ ನಾನು ಊರಿಗೆ ಹೋದಾಗಲೆಲ್ಲಾ ಜನರು ದೇವಸ್ಥಾನದ ಜೀರ್ಣೋದ್ಧಾರದ ವಿಚಾರವನ್ನು ಆ ಗ್ರಾಮದ ಪಟೇಲ್ ಗಂಗಪ್ಪನವರು ಅವರ ತಮ್ಮ ನಾರಾಯಣಪ್ಪ ಶಿವಣ್ಣ ಗಂಗ ನರಸಯ್ಯ ಮಾಸ್ಟರ್ ಕರಿಹನುಮಯ್ಯ ನಮ್ಮ ಊರಿನವರೇ ಆಗಿದ್ದ ಬೆಂಗಳೂರಿನಲ್ಲಿ ಈಗ ಪೋಲೀಸ್ ಇಲಾಖೆಯಲ್ಲಿರುವ ನರಸಿಂಹಮೂರ್ತಿ ಮತ್ತು ಇತರೆ ಯುವಕ ರೈತ ಸಂಘದ ಪದಾಧಿಕಾರಿಗಳು ಹಾಗೂ ಊರಿನ ಎಲ್ಲಾ ಜನರೂ ಕೂಡ ಈ ದೇವಸ್ಥಾನ ತುಂಬಾ ಹಳೆಯದಾಗಿದೆ ಈಗಲೋ ಆಗಲೋ ಬೀಳುವ ಸ್ಥಿತಿಯಲ್ಲಿದೆ ಇದನ್ನು ಸರಿಮಾಡಿಸಿಕೊಡಿ ಎಂದು ಕೇಳುತ್ತಿದ್ದರು. ಒಂದು ದಿನ ನಾನು ಮತ್ತು ಆಗಿನ ನೆಲಮಂಗಲ ತಾಲ್ಲೂಕು ತಹಸೀಲ್ದಾರ್ ಬೈಯಪ್ಪರೆಡ್ಡಿ ಮತ್ತು ಬಿ.ಡಿ.ಒ. ನಾರಾಯಣ ಗೌಡರು ಹಳ್ಳಿಗೆ ಭೇಟಿಮಾಡಿ ದೇವಸ್ಥಾನದ ಗರ್ಭಗುಡಿಗೆ ಹೋದಾಗ ದೇವರ ಮುಂದೆ ಗರ್ಭಗುಡಿಯಲ್ಲಿ ಒಂದು ಲಾರಿಯಷ್ಟು ಮಣ್ಣು ತುಂಬಿತ್ತು. ಇದಕ್ಕೆ ಕಾರಣ ಕೇಳಿದರೆ ರೈತರು ಹೇಳಿದರು ಇಲ್ಲಿ ಇಲಿ-ಹೆಗ್ಗಣಗಳು ತುಂಬಾ ಸೇರಿಕೊಂಡಿವೆ. ಆ ಹೆಗ್ಗಣಗಳು ಮಾಡಿರುವ ಕೆಲಸ ಇದು ಎಂದು ತಿಳಿಸಿದರು. ಇದನ್ನು ಕಣ್ಣಾರೆ ಕಂಡ ನನಗೆ ತುಂಬಾ ವೇದನೆಯಾಯಿತು. ಕೂಡಲೆ ಅಲ್ಲಿಯೇ ಗ್ರಾಮಸ್ಥರ ಸಭೆ ಸೇರಿಸಿ ಊರಿನ ದೇವಸ್ಥಾನವನ್ನು ಈ ರೀತಿಯಾಗಿ ಇಟ್ಟುಕೊಂಡಿರುವುದು ಊರಿನವರಾದ ನಮಗೆಲ್ಲರಿಗೂ ನಾಚಿಕೆಗೇಡಿನದು. ಇದನ್ನು ಕೂಡಲೆ ಸರಿಪಡಿಸುವ ಕೆಲಸವನ್ನು ಪ್ರಾರಂಭಿಸಿ. ನಾನು, ಬಿ.ಡಿ.ಒ. ಸಾಹೇಬರು ಮತ್ತು ತಹಸೀಲ್ದಾರ್‌ರವರು ಸೇರಿ ಬೇಕಾದ ಸಹಾಯವನ್ನು ಶಕ್ತಿಮೀರಿ ಮಾಡುತ್ತೇವೆ ಎಂದು ತಿಳಿಸಿದೆ. ಮುಖ್ಯವಾಗಿ ಪಟೇಲರು ಕರಿಯಪ್ಪ, ಮೇಸ್ತ್ರು ನರಸಿಂಹಮೂರ್ತಿ, ನಾರಾಯಣಪ್ಪ ಹಾಗೂ ಶಿವಣ್ಣ ಮತ್ತು ಯುವಕ ರೈತ ಸಂಘದ ಸದಸ್ಯರುಗಳು, ಊರಿನ ಬಹು ಜನರು ತಮ್ಮ ಸಲಹೆಯನ್ನು ಸಂತೋಷದಿಂದ ಒಪ್ಪಿ ಒಂದು ಒಳ್ಳೆಯ ದಿನ ನೋಡಿ ಪಾಯದ ಕೆಲಸ ನಡೆಸಲು ಆಗಿನ ಎಂ.ಎಲ್.ಎ. ಆಗಿದ್ದ ಶ್ರೀ ಸಿ. ವೀರಣ್ಣನವರನ್ನು ವಿನಂತಿಸಿ ಕೊಂಡರು. ಕಾರಣಾಂತರದಿಂದ ಎಂ.ಎಲ್.ಎಯವರು ಬರಲಿಲ್ಲವಾಗಿ ನಾನೇ ಆ ದಿನದ ಎಲ್ಲಾ ಕಾರ್ಯಕ್ರಮಗಳನ್ನು ನಡೆಸಿದೆ. ಗ್ರಾಮಸ್ಥರೆಲ್ಲರೂ ತುಂಬಾ ಶ್ರದ್ಧೆ ಯಿಂದ ಕೈಲಾದ ಸಹಾಯವನ್ನು ನೀಡಿದರು. ಈ ಕೆಲಸದಲ್ಲಿ ಮುಖ್ಯವಾಗಿ ಕರಿಹನುಮಯ್ಯ ಮಾಸ್ಟರ್ ಮತ್ತು ಪೋಲೀಸ್ ನರಸಿಂಹಮೂರ್ತಿ, ಪಟೇಲ್ ಗಂಗಪ್ಪ

ನಾರಾಯಣಪ್ಪ, ಕೆಂಪಣ್ಣ ಎಲ್ಲರೂ ಗ್ರಾಮಸ್ಥರೊಡನೆ ಐಕ್ಯಮತ್ಯದಿಂದ ಕೇವಲ ಒಂದು ವರ್ಷದೊಳಗೆ ಸುಮಾರು ಒಂದು ಲಕ್ಷ ರೂಪಾಯಿಗಳಷ್ಟು ಕೆಲಸ ಮಾಡಿಸಿ ಜೀರ್ಣೋದ್ಧಾರ ಕಾರ್ಯವನ್ನು ಯಶಸ್ವಿಯಾಗಿ ಮುಗಿಸಿದರು. ಹೊಸ ದೇವಸ್ಥಾನ ವನ್ನೇ ನಿರ್ಮಾಣ ಮಾಡಿದಂತೆ ಮಾಡಿದರು. ಈ ಕೆಲಸವನ್ನು ನೋಡಿ ನನಗಂತೂ ತುಂಬಾ ಸಂತೋಷವಾಯ್ತು. ಅಷ್ಟು ಕೆಲಸವನ್ನು ಅತಿ ಶೀಘ್ರದಲ್ಲೇ ಮುಗಿಸಿದುದು ನನಗೆ ಅತ್ಯಾಶ್ಚರ್ಯವನ್ನುಂಟುಮಾಡಿತು. ಈ ಕಾರ್ಯಕ್ಕಾಗಿ ಘನ ಸರ್ಕಾರದಿಂದ ಧನಸಹಾಯವೂ ದೊರೆಯಿತು. ಇದಕ್ಕಾಗಿ ನಮ್ಮ ಊರಿನ ಗ್ರಾಮಸ್ಥರು ಸರ್ಕಾರಕ್ಕೆ ತುಂಬಾ ಋಣಿಯಾಗಿರುತ್ತಾರೆ.

ಇಷ್ಟು ತ್ವರಿತವಾಗಿ ದೇವಸ್ಥಾನದ ಕೆಲಸ ಮುಗಿಸುತ್ತಾರೆಂದು ನಾನು ಭಾವಿಸಿರ ಲಿಲ್ಲ. ದೇವಸ್ಥಾನದ ಪ್ರವೇಶೋತ್ಸವಕ್ಕೆ ಆದಿಚುಂಚನಗಿರಿಯ ಮಠಾಧೀಶರಾದ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳನ್ನು ಆಹ್ವಾನಿಸಿ ದೇವಸ್ಥಾನದ ಉದ್ಘಾಟನೆ ಯನ್ನು ಊರಿನ ಜನರೆಲ್ಲಾ ಸೇರಿ ಬಹು ವಿಜೃಂಭಣೆಯಿಂದ ಅನ್ನಸಂತರ್ಪಣೆಯೊಂದಿಗೆ ನಡೆಸಿಕೊಟ್ಟರು. ಜಗದ್ಗುರುಗಳ ಆಶೀರ್ವಾದ ಹಾಗೂ ಆಶೀರ್ವಚನ ನಡೆಯಿತು. ನಾನು ಮತ್ತು ನನ್ನ ಕುಟುಂಬದವರು ಜಗದ್ಗುರುಗಳ ಪಾದ ಸೇವೆ ಮಾಡಲು ಅವಕಾಶ ದೊರೆಯಿತು.

ನನ್ನ ಕಾಲದಲ್ಲಿ ನನ್ನ ಕಣ್ಣಮುಂದೆಯೇ ಈ ಎರಡು ದೇವಸ್ಥಾನದ ಕೆಲಸಗಳು ನಡೆದಿದ್ದು ನನಗೆ ಹೆಮ್ಮೆ. ಇದು ನನಗೆ ನೆಮ್ಮದಿಯನ್ನು ತಂದಿದೆ. ಈ ಸಮಯದಲ್ಲಿ ನನಗೆ ಸಹಕಾರವಿತ್ತ ಎಲ್ಲಾ ಮಹನೀಯರುಗಳಿಗೂ ನನ್ನ ಹೃತ್ಪೂರ್ವಕ ವಂದನೆಗಳು. ಈ ಎರಡೂ ದೇವಸ್ಥಾನಗಳ ಕೆಲಸಕ್ಕೂ ನಾನು ಸೂತ್ರಧಾರಿಯಾಗಿ ಕೆಲಸ ಮಾಡಲು ಅವಕಾಶ ಮಾಡಿಕೊಟ್ಟ ನಮ್ಮ ಊರಿನ ಬಂಧುಗಳಿಗೂ ಮತ್ತು ಆರ್ಥಿಕ ಸಹಾಯ ಮಾಡಿದ ಬೆಂಗಳೂರಿನ ನನ್ನ ನೆಚ್ಚಿನ ಹಿತೈಷಿಗಳಿಗೂ, ಬಂಧುಗಳಿಗೂ, ಸ್ನೇಹಿತರು ಗಳಿಗೂ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಾಯ ಮಾಡಿದ ಎಲ್ಲಾ ಭಕ್ತಾದಿ ಗಳಿಗೂ ನಾನು ತುಂಬಾ ಆಭಾರಿಯಾಗಿದ್ದೇನೆ.

ಈ ಸಂದರ್ಭದಲ್ಲಿ ವಿಶೇಷವಾಗಿ ಹೇಳಬೇಕೆಂದರೆ ನನ್ನ ಅಳಿಯಂದಿರಾದ ಶ್ರೀ ಕೆ. ಎಲ್. ಪುಟ್ಟಯ್ಯನವರು ಆಗತಾನೆ ಸರ್ಕಾರದ ಅಧೀನಕಾರ್ಯದರ್ಶಿಯಾಗಿ ನಿವೃತ್ತರಾಗಿದ್ದರು. ಹೊಸಪಾಳ್ಯದಲ್ಲಿ ದೇವಸ್ಥಾನ ಕಟ್ಟುವ ಕೆಲಸದಲ್ಲಿ ಸುಮಾರು ಎರಡು ವರ್ಷಗಳ ಕಾಲ ತಮ್ಮದೇ ಆದ ಪಾತ್ರ ವಹಿಸಿ, ದೇಹಾರೋಗ್ಯ ಸರಿಯಿಲ್ಲ ದಿದ್ದರೂ ತಿಂಗಳುಗಟ್ಟಲೆ ಹಳ್ಳಿಯಲ್ಲೇ ಇದ್ದು ನಿದ್ದೆ, ಅನ್ನ-ಆಹಾರವೊಂದನ್ನೂ ಗಮನಿಸದೆ ಶ್ರಮ ವಹಿಸಿ ಶ್ರದ್ಧಾಭಕ್ತಿಯಿಂದ ದೇವಸ್ಥಾನದ ಕೆಲಸವನ್ನು ಎಲ್ಲರಿಗೂ ಮಾರ್ಗದರ್ಶನ ಮಾಡಿ ನಡೆಸಿಕೊಟ್ಟರು. ಅವರ ಸಹಾಯ ಸಹಕಾರಗಳನ್ನು ನಾವು ಎಂದೂ ಮರೆಯುವಂತಿಲ್ಲ. ಈಗ ಅವರು ಅಮರರಾಗಿದ್ದಾರೆ. ಈ ಸಮಯದಲ್ಲಿ

ಶ್ರೀ ಶ್ರೀ ಆಂಜನೇಯಸ್ವಾಮಿ ಮತ್ತು ಪ್ರಸನ್ನ ಗಣಪತಿಯವರು ಅವರ ಆತ್ಮಕ್ಕೆ ಚಿರಶಾಂತಿಯನ್ನು ಕರುಣಿಸಲಿ ಎಂದು ಪ್ರಾರ್ಥಿಸಿ ಅವರ ಕುಟುಂಬಕ್ಕೆ ಅವರ ಅಗಲಿಕೆಯ ದುಃಖವನ್ನು ಭರಿಸುವ ಶಕ್ತಿಯನ್ನು ಮತ್ತು ಒಳ್ಳೆಯ ಆರೋಗ್ಯ ದೀರ್ಘಾಯುಸ್ಸು ಸಕಲ ಸಂಪತ್ತುಗಳನ್ನು ಕರುಣಿಸಲೆಂದು ನಾನು ಪ್ರಾರ್ಥಿಸುತ್ತೇನೆ. ಹೊಸಪಾಳ್ಯದಲ್ಲಿ ಕಟ್ಟಿದ ದೇವಸ್ಥಾನದ ಸ್ಥಳವೂ ಸಹ ಅವರದೆ. ಅವರು ಈ ಸ್ಥಳವನ್ನು ದೇವಸ್ಥಾನಕ್ಕಾಗಿ ಉದಾರವಾಗಿ ದಾನವಾಗಿ ಬಿಟ್ಟುಕೊಟ್ಟಿರುತ್ತಾರೆ. ಇವರನ್ನು ಮತ್ತು ಇವರ ತಮ್ಮಂದಿರನ್ನು ಮತ್ತೊಮ್ಮೆ ಗ್ರಾಮಸ್ಥರ ಪರವಾಗಿ ಹಾಗೂ ವೈಯಕ್ತಿಕವಾಗಿ ಅಭಿನಂದಿಸಿ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಎರಡು ದೇವಸ್ಥಾನಗಳಿಗೆ ಸಹಾಯ ಸಹಕಾರ ಮಾಡಿದವರ ಕೆಲವು ಮಹನೀಯರುಗಳನ್ನು ಹೆಸರಿಸಿದ್ದೇನೆ. ಮತ್ತೆ ಕೆಲವರನ್ನು ಬಿಟ್ಟಿರಬಹುದೆಂಬ ಭಯವೂ ಇದೆ. ಅವರಲ್ಲಿ ಯಾರಿಗೇ ಆಗಲಿ ಮನಸ್ಸಿಗೆ ನೋವಾಗಬಾರದು. ಇಲ್ಲಿ ಹರಿಶ್ಚಂದ್ರ ಕಾವ್ಯವನ್ನು ಬರೆದಿರುವ ಶ್ರೇಷ್ಠ ಕವಿ ರಾಘವಾಂಕನು ಹೇಳಿದ ಒಂದು ಮಾತು ನನಗೆ ಜ್ಞಾಪಕಕ್ಕೆ ಬರುತ್ತದೆ. ಅದನ್ನು ಇಲ್ಲಿ ಉದಾಹರಿಸಿ ನಾನು ಮಾಡಿರಬಹುದಾದ ತಪ್ಪನ್ನು ಒಪ್ಪು ಮಾಡಲು ಪ್ರಯತ್ನಿಸುತ್ತೇನೆ. "ಪಂಪಾ ವಿರೂಪಾಕ್ಷಸ್ವಾಮಿಯು ಹರಿಶ್ಚಂದ್ರನಿಗೆ ಪ್ರತ್ಯಕ್ಷನಾದಾಗ ಕವಿಯು ಶ್ರೀ ವಿರೂಪಾಕ್ಷಸ್ವಾಮಿಯ ದರ್ಶನಕ್ಕೆ ಬಂದ ಕೆಲವು ದೇವರುಗಳನ್ನು ಹೆಸರಿಸ ಹೊರಟು ಅವನ ತಪ್ಪು ಅರಿವಾಗಿ, 'ಅವರಿವರೆನ್ನಲೇಕೆ, ಸರ್ವದೇವರೂ ಬಂದರು ಹಂಪಾ ವಿರೂಪಾಕ್ಷನೆಡೆಗೆ" ಎಂದು ಹೇಳಿದ್ದಾನೆ. ಹಾಗೆಯೇ ನನಗೂ ಸಹ ನನ್ನ ತಪ್ಪು ಅರಿವಾಗಿದೆ. ಸಹಾಯ ಸಹಕಾರ ನೀಡಿದ ಕೆಲವರ ಹೆಸರನ್ನು ಮಾತ್ರ ನೆನಪು ಮಾಡಿಕೊಂಡಿದ್ದೇನೆ. ಇದರಿಂದ ಸಹಾಯ ಮಾಡಿದ ಮತ್ತೆ ಕೆಲವರ ಮನಸ್ಸಿಗೆ ನೋವಾಗಬಹುದು. ಅದು ನನಗೆ ಸರ್ವಥಾ ಇಷ್ಟವಿಲ್ಲ. ಆದ್ದರಿಂದ ನೂತನವಾಗಿ ಕಟ್ಟಿರುವ ದೇವಸ್ಥಾನದ ಹಾಗೂ ಮತ್ತೊಂದು ದೇವಸ್ಥಾನದ ಜೀರ್ಣೋದ್ಧಾರ ಕಾರ್ಯದಲ್ಲಿ ನೆರವಾದ ಸರ್ವರಿಗೂ ನನ್ನ ಹೃದಯ ತುಂಬಿದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**ಆತ್ಮೀಯರೆ,**

ಬಾಳ ಹಾದಿಯಲ್ಲಿ ನಾನೊರ್ವ ಪಯಣಿಗನಾಗಿ ಇಷ್ಟು ದೂರ ಸಾಗಿ ಬಂದಿದ್ದೇನೆ. ಅಂತೆಯೇ ಗುರಿ ಮುಟ್ಟುವವರೆಗೂ ನನ್ನ ಕಾಲುಗಳು ಸೋಲದಂತೆ ನನ್ನ ಕುಲದೈವವಾದ ಶ್ರೀ ಲಕ್ಷ್ಮೀನರಸಿಂಹ ಸ್ವಾಮಿಯು ನನ್ನ ಕೈ ಹಿಡಿದು ನಡೆಸಲಿ. ನಿತ್ಯ ದಾಸೋಹ ನಡೆಸಿ, ಅನೇಕಾನೇಕ ಧಾರ್ಮಿಕ ಕಾರ್ಯಗಳನ್ನು ಅನವರತವೂ ಮಾಡಿಕೊಂಡು ಬಂದ, ನೆರೆಹೊರೆಯ ಗ್ರಾಮಗಳ ದೀನದಲಿತರ ಕಣ್ಮಣಿಗಳಾಗಿದ್ದ, ನಿರ್ಮಲ ಹೃದಯದ ನನ್ನ ತಂದೆ ತಾಯಿಯರಿಗೆ, ಅತ್ತೆ ಮಾವಂದಿರಿಗೆ, ನನ್ನ ಬಾಳ ಬೆಳಕಾಗಿ ಬಂದ ಎಲ್ಲ ಬಂಧು ಮಿತ್ರ ವೃಂದಕ್ಕೆ ನನ್ನ ಅನಂತಾನಂತ ನಮನಗಳು.

# ಕನ್ನಡ ಚಂಪೂ : ಕೆಲವು ಚಿಂತನೆಗಳು

---

ಡಾ. ಪಿ. ವಿ. ನಾರಾಯಣ

ಚಂಪೂ ಪ್ರಕಾರವು ಮೂಲದಲ್ಲಿ ಕನ್ನಡ ನೆಲೆಯದ್ದೆಂದೂ, ಅನಂತರ ಸಂಸ್ಕೃತದೆಡೆಗೂ ಸಾರಿತೆಂದೂ ವಾದಿಸುವ ಡಾ. ರಂ. ಶ್ರೀ. ಮುಗಳಿಯಂತಹವರ ವಾದವನ್ನು ಅಲ್ಲಗಳೆಯುವಾಗ ಡಾ. ಸಿ. ಆರ್. ದೇಶಪಾಂಡೆಯವರು ಮುಂದಿಡುವ ಒಂದು ಅಂಶವೆಂದರೆ, ಕಾವ್ಯಮಾರ್ಗದಲ್ಲಿ ಸಂಸ್ಕೃತಕ್ಕೆ ಕನ್ನಡದಂತಹ ಭಾಷೆಗಳು ಏನಾದರೂ ಕಾಣಿಕೆ ನೀಡಬಲ್ಲವೇ ಎಂಬ ಸಂಶಯ. ಸಂಸ್ಕೃತ ಭಾಷೆಯಲ್ಲಿನ ಮೊದಲ ಚಂಪೂ ಕಾವ್ಯಗಳು ಕನ್ನಡ ನಾಡಿನವರಿಂದ ರಚಿತವಾಗಿವೆ ; ಹಾಗೂ ಅತ್ಯಂತ ಪ್ರಾಚೀನ ಉಪಲಬ್ಧ ಸಂಸ್ಕೃತ ಚಂಪೂ ಕಾವ್ಯಗಳ ಕಾಲವು ಕ್ರಿ. ಶ. ಹತ್ತನೆಯ ಶತಮಾನದವು ; ಕನ್ನಡದಲ್ಲಿ ಬೆಳೆದಂತೆ ಸಂಸ್ಕೃತದಲ್ಲಿ ಉತ್ಕೃಷ್ಟ ಚಂಪೂ ಪರಂಪರೆಯು ಬೆಳೆಯಲಿಲ್ಲ—ಇತ್ಯಾದಿ ವಾದಗಳು ಕನ್ನಡ ಪರ ಮನಸ್ಸಿನ ಕಾರಣದಿಂದಾಗಿ ಹೊಳೆದಿರಬಹುದಾದರೂ ಅವು ಸತ್ಯವಾಗಿರುವುದರಿಂದ ತಳ್ಳಿಹಾಕುವಂತಿಲ್ಲ. ಕನ್ನಡ ಸಂಸ್ಕೃತಕ್ಕೆ ಯಾವುದಾದರೂ ಮಾರ್ಗವನ್ನು ತೋರಿಸಬಲ್ಲುದೇ ಎಂದು ಕೇಳಿದರೆ ಯಾಕಾಗಬಾರದು ಎಂಬ ಮರುಪ್ರಶ್ನೆ ಹಾಕಬೇಕೆನ್ನಿಸುತ್ತದೆ.

ಕ್ರಿ.ಶ. ಆರೆಂಟನೆಯ ಶತಮಾನದ ಹೊತ್ತಿಗೆ ಸಂಸ್ಕೃತವು ಅಡುಭಾಷೆಯಾಗಿ ಸಂಪೂರ್ಣ ನಿಲುಗಡೆಯಾಗಿದ್ದಂತೆ ಕಾಣುತ್ತದೆ. ಅತ್ಯಂತ ಪ್ರಸಿದ್ಧರಾದ ಸಂಸ್ಕೃತ ಕವಿಗಳೆಲ್ಲ ಆ ಹೊತ್ತಿಗಾಗಲೇ ಆಗಿ ಹೋಗಿದ್ದರು. ದೇಶದಲ್ಲಿ ಹಳೆಯ ವ್ಯವಸ್ಥೆಯ ವಿರುದ್ಧ ಪ್ರತಿಭಟನೆಗಳು ಪ್ರಾರಂಭವಾಗಿ ದೀರ್ಘಕಾಲವೇ ಸಂದಿದ್ದಿತು. ಹೊಸ ಮತಗಳು ಉದಯವಾಗಿ ಬುದ್ಧ–ಮಹಾವೀರರಂತಹವರಿಂದ ಜನರನ್ನು ಹೊಸ ಮಾರ್ಗದತ್ತ ಕೊಂಡೊಯ್ಯುವ ಪ್ರಯತ್ನಗಳು ಬಹು ಹಿಂದೆಯೇ ಯಶಸ್ವಿಯಾಗಿದ್ದವು ; ಅಲ್ಲದೆ ಕ್ರಿ.ಶ. ಆರೆಂಟನೆಯ ಶತಮಾನಗಳ ಹೊತ್ತಿಗೆ ಅವೂ ಹಳೆಯವಾಗಿ, ಮತ್ತೊಮ್ಮೆ ಚಿರುಸಿನಿಂದ ವಿವಿಧ ಮಾರ್ಗಗಳು ಜನರನ್ನು ತಲುಪಲು ಪ್ರಾರಂಭಿಸಿದ್ದವು. ಜನರನ್ನು ತಲುಪುವುದು ಅವರಿಗೆ ಅರ್ಥವಾಗುವ ಭಾಷೆಗಳ ಮೂಲಕ ಮಾತ್ರ ಸಾಧ್ಯ. ಹೀಗಾಗಿ ತಮ್ಮ ತಮ್ಮ ಪಂಥಗಳನ್ನು ಜನರ ಎದುರಿಗೆ ಮಂಡಿಸಲು ಜನಭಾಷೆಗಳನ್ನು ಬಳಸುವುದು

ಅನಿವಾರ್ಯವೇ ಆಯಿತು. ಹೀಗಾಗಿಯೇ ಬುದ್ಧ-ಮಹಾವೀರರಿಂದ ಪಾಲಿಪ್ರಾಕೃತಗಳು ಹೊಸಹುಟ್ಟು ಪಡೆದಂತೆ ಈ ಕಾಲದಲ್ಲಿ ಕನ್ನಡ ತಮಿಳುಗಳಂತಹ ಆಡುನುಡಿಗಳು ಕಾವ್ಯ ಮಾಧ್ಯಮವಾಗಲು ಕಾರಣವಾಯಿತೆನಿಸುತ್ತದೆ. ಆದ್ದರಿಂದಲೇ ತಮಿಳು-ಕನ್ನಡಗಳ ಅತ್ಯಂತ ಪ್ರಾಚೀನ ಕಾವ್ಯಮಾದರಿಗಳು ಬೌದ್ಧ-ಜೈನರಿಂದ ಪ್ರಾರಂಭವಾಗಿವೆ. ನೆಲೆನಿಂತ ಸಂಸ್ಕೃತವು ಜನರನ್ನು ತಲುಪುವುದು ಅಸಾಧ್ಯವಾದಾಗ ಮತ್ತು ಜನರನ್ನು ತಲುಪುವುದೇ ಮುಖ್ಯೋದ್ದೇಶವಾದಾಗ, ಜನಭಾಷೆಗಳ ಪರಿಣಾಮಕಾರಿತನವು ಬುದ್ಧ-ಮಹಾವೀರರಿಂದ ಬಹು ಹಿಂದೆಯೇ ಸಾಬೀತಾಗಿರುವಾಗ, ಸಹಜವಾಗಿಯೇ ಈ ಕಾಲದಲ್ಲಿ ಹೊಸದನ್ನು ಹೇಳ ಹೊರಟ ಕವಿಗಳು ಜನಭಾಷೆಯನ್ನು ತಮ್ಮ ಮಾಧ್ಯಮವಾಗಿ ಆರಿಸಿಕೊಂಡರು. ನಮ್ಮ ಕನ್ನಡದ ಮಟ್ಟಿಗೆ ಹೇಳುವುದಾದರೆ, ಎಲ್ಲ ಹಿಂದಿನ ಕವಿಗಳೂ ಉಭಯಭಾಷಾ ವಿಶಾರದರು. ಬೇಕೆನ್ನಿಸಿದ್ದರೆ ಸಂಸ್ಕೃತದಲ್ಲಿ ಕಾವ್ಯ ರಚಿಸುವುದೇನೂ ಅವರಿಗೆ ಕಷ್ಟಕರವಾದ ಕೆಲಸವಲ್ಲ. ಆದರೂ ಅವರು ಸಂಸ್ಕೃತವನ್ನು ಬಿಟ್ಟು ಕನ್ನಡವನ್ನು ಹಿಡಿದದ್ದೇಕೆ? ಪ್ರಾಯಶಃ ಜನರನ್ನು ತಲುಪುವ ಹಂಬಲ.

ಜನರನ್ನು ತಲುಪುವ ಉದ್ದೇಶ ಹೊಂದಿದ ಕವಿಗೆ ಜನಭಾಷೆಯಲ್ಲಿ ಬರೆಯುವುದು ಅನಿವಾರ್ಯವಾದ ಹಾಗೆಯೇ, ಜನರನ್ನು ತಲುಪುವ ಮಾರ್ಗದಲ್ಲಿ ರಚಿಸುವುದೂ ಅನಿವಾರ್ಯ. ಬಹುತೇಕ ಸಾಮಾನ್ಯರಾದವರಿಗೆ ಹೇಳಬೇಕಾದುದನ್ನು ದೃಶ್ಯಶ್ರವ್ಯಗಳ ಸಮ್ಮಿಶ್ರ ಮಾಧ್ಯಮದಲ್ಲಿ ಹೇಳುವುದು ಅತ್ಯಂತ ಪರಿಣಾಮಕಾರಿ. ಜಾನಪದವು ಇಂತಹ ಅನೇಕ ಮಾರ್ಗಗಳನ್ನು ಒಳಗೊಂಡಿರುವುದು ಸರ್ವವೇದ್ಯ ವಿಚಾರ. ಯಕ್ಷಗಾನ, ಬಹುರೂಪ, ತಲಕೇತ, ಕೋಡಂಗಿಯಾಟ, ಕೇಳಿಕೆ ಮುಂತಾದ ಜನಪದ ಕಲೆಗಳು ಎದುರಿಗಿರುವ ಜನರ ಕಣ್ಣು-ಕಿವಿಗಳ ಮೂಲಕ ಮನಸ್ಸನ್ನು ತಲುಪುವಂತಹವು. ಹಾಗಾಗಿ ಯಾವುದೇ ಅಭಿವ್ಯಕ್ತಿ ಮಾಧ್ಯಮವನ್ನು ಅವಲಂಬಿಸುವ ವ್ಯಕ್ತಿಯು ಆದಷ್ಟೂ ಈ ಎರಡರ ಅಂಶಗಳನ್ನೊಳಗೊಂಡ ರೀತಿಯನ್ನು ಅನುಸರಿಸುವುದು ಅಪೇಕ್ಷಣೀಯವಾಗುತ್ತದೆ. ಆದ್ದರಿಂದ ಸಾಹಿತ್ಯವು ಪ್ರಮುಖವಾಗಿ ಕಾವ್ಯ ಮಾಧ್ಯಮವಾದರೂ, ತನ್ನಲ್ಲಿಯೇ ನಾಟಕೀಯತೆಯನ್ನು ಹುದುಗಿಸಿಕೊಳ್ಳುವ ಮೂಲಕ ಹೆಚ್ಚು ರಂಜನೀಯವೂ ಪರಿಣಾಮಕಾರಿಯೂ ಆಗಬಲ್ಲುದು. ಅಂತೆಯೇ ಜನರನ್ನು ತಲುಪುವ ಉದ್ದೇಶದ ತಮ್ಮ ಕಾವ್ಯಗಳಲ್ಲಿ ವೈವಿಧ್ಯವನ್ನು ತಂದು ಏಕತಾನತೆಯನ್ನು ನಿವಾರಿಸಿಕೊಳ್ಳುವುದೂ, ನಿರೂಪಣೆಯ ಮಧ್ಯೆ ನಾಟಕೀಯತೆಯನ್ನು ಸೇರಿಸುವುದೂ ಸಹಜವಾದುದು. ಇಂತಹ ರೀತಿಯ ಕಲಾಪ್ರಸಾರಗಳು ಜನರಲ್ಲಿ ಪರಿಣಾಮಕಾರಿ ರೀತಿಯಲ್ಲಿ ಬಳಕೆಯಲ್ಲಿರುವಾಗ, ಅವುಗಳು ಕವಿಗಳ ಮೇಲೆ ಪ್ರಭಾವ ಬೀರುವುದಾಗಲೀ, ಕವಿಗಳು ಅವುಗಳ ಧಾಟಿಯನ್ನು ತಮ್ಮ ಕಾವ್ಯರಚನೆಯಲ್ಲಿ ಬಳಸಿಕೊಳ್ಳುವುದಾಗಲೀ ಹಿಂದಿನಿಂದಲೂ ನಡೆದು ಬಂದಿರುವುದೇ ಆಗಿದೆ.

ಈ ಕಾರಣದಿಂದಾಗಿ ಕನ್ನಡದ ಅತ್ಯಂತ ಪ್ರಾಚೀನ ಬರವಣಿಗೆಯ ಮಾದರಿಗಳಲ್ಲಿ

ಹೊರನೋಟಕ್ಕೆ ಸಂಸ್ಕೃತದ ಪ್ರಭಾವ ದಟ್ಟವಾಗಿರುವಂತೆ ಕಾಣಬಹುದಾದರೂ, ಆಂತರ್ಯದಲ್ಲಿ ಜಾನಪದ ಅಭಿವ್ಯಕ್ತಿ ಮಾಧ್ಯಮಗಳ ಪ್ರಭಾವವನ್ನು ಅರಗಿಸಿಕೊಂಡ ಬಗೆಯನ್ನು ಗುರುತಿಸಬಹುದೆನ್ನಿಸುತ್ತದೆ. ಶಿಷ್ಟ ಸಾಹಿತ್ಯಕ್ಕೆ ತನ್ನದೇ ಆದ ಬಿಗುಮಾನಗಳಿರುತ್ತವೆಂಬುದು ನಿಜವಾದರೂ, ಜನಪರ ಧೋರಣೆಯ ಕವಿಗಳ ಮೇಲೆ ಜನಪದದ ಪ್ರಭಾವ ತಂತಾನೆ ಆಗಿ ಅವರ ಶಿಷ್ಟ ಅಭಿವ್ಯಕ್ತಿಯಲ್ಲಿಯೂ ಹೊಕ್ಕಿರುವುದು ಅಸಂಭವವಲ್ಲ.

ಈ ದೃಷ್ಟಿಯಿಂದ ಚಂಪೂ ಪ್ರಕಾರದ ಚರ್ಚೆಯನ್ನು ಆರಂಭಿಸಬಹುದೆನ್ನಿಸುತ್ತದೆ. 'ಕವಿರಾಜಮಾರ್ಗ'ದಲ್ಲಿ ಆಗಲೇ ಕನ್ನಡನಾಡಿನಲ್ಲಿ ಪ್ರಚಲಿತವಾಗಿದ್ದ ಸಾಹಿತ್ಯ ಪ್ರಕಾರಗಳ ಉಲ್ಲೇಖವಿದೆ. ಅವುಗಳಲ್ಲಿ 'ಚತ್ತಾಣ', 'ಬೆದಂಡೆ'ಗಳೂ ಇವೆ. ಇದರ ಸ್ವರೂಪದ ಬಗ್ಗೆ ಅನೇಕ ವಿದ್ವಾಂಸರು ಸಾಕಷ್ಟು ಚರ್ಚೆ ನಡೆಸಿದ್ದಾರೆ. ಅದನ್ನು ಪುನರುಕ್ತಿಗೊಳಿಸುವುದಾಗಲೀ, ಮತ್ತೊಂದು ವಾದವನ್ನು ಮಂಡಿಸುವುದಾಗಲೀ ನನ್ನ ಉದ್ದೇಶವಲ್ಲ. ಆದರೆ ಅವುಗಳಲ್ಲಿ ಯಾವುದನ್ನು, ಮೇಲಿನ ಆಲೋಚನೆಯ ಹಿನ್ನೆಲೆಯಲ್ಲಿ, ಪುಷ್ಟಗೊಳಿಸಬಹುದು ಎಂಬ ಬಗ್ಗೆ ಯೋಚಿಸುತ್ತೇನೆ. ಇವೆರಡೂ ಕನ್ನಡಿಗರ ಎರಡು ಕಾವ್ಯದೃಷ್ಟಿಗಳೆಂದೂ, ಚತ್ತಾಣವು ಕತೆಯನ್ನವಲಂಬಿಸಿ ವಸ್ತುಕವಾದರೆ, ಬೆದಂಡೆಯು ವರ್ಣನೆಯನ್ನವಲಂಬಿಸಿ ವರ್ಣಕವಾಯಿತೆಂದೂ ಕಲಬುರ್ಗಿ ಊಹಿಸುತ್ತಾರೆ.[1] ಬೆದಂಡೆಯು ವಾದ್ಯದೊಡನೆ ಹಾಡುವ ಕಾವ್ಯಜಾತಿಯೆಂದು ವಿದ್ವಾಂಸರು ಹೇಳುತ್ತಾರೆ. ಹೀಗಾಗಿ ವಿವಿಧ ಮಟ್ಟುಗಳಲ್ಲಿ ಹಾಡುವ ಪದ್ಯಗಳೂ, ನಿರೂಪಣೆಗಾಗಿ ಗದ್ಯವೂ ಇರುವ ಇಂತಹವು ಚಂಪೂ ಪ್ರಕಾರದ ಮೂಲವಾಗಿರಬಹುದು.2 ಕನಿಷ್ಠ ಪಕ್ಷ, ಅಂತಹ ಜಾನಪದ ಕಾವ್ಯಸ್ವರೂಪಗಳು ಚಂಪೂ ಈಗಿರುವ ಆಕಾರವನ್ನು ಪಡೆಯುವಲ್ಲಿ ಪ್ರಭಾವ ಬೀರಿರಬಹುದು.

ಚಂಪೂ ಮೇಲುನೋಟಕ್ಕೆ ಕಾಣುವಂತೆ ಗದ್ಯಪದ್ಯಗಳಿಂದ ಕೂಡಿರುವಂತಹುದು. 'ಗದ್ಯಪದ್ಯಮಯೀ ಕಾಚಿತ್ ಚಂಪೂರಿತ್ಯಭಿಧೀಯತೇ' ಎಂಬ ದಾಕ್ಷಿಣಾತ್ಯನೇ ಆದ

---

1. ಎಂ. ಎಂ. ಕಲಬುರ್ಗಿ : ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ. ಪು. ೭೮

2. ದೋಸಮನೆ ಗುಣದವೊಲುದ್ಭಾವಿಸಿ
ಕನ್ನಡದೊಳೊಲ್ದು ಪೂರ್ವಾಚಾರ್ಯರ್ ।
ದೇಸಿಯುನೆ ನಿಜಿಸಿ ಖಂಡಪ್ರಾಸಮ
ನತಿಶಯಮಿದೆಂದು ಯತಿಯುಂ ಮಿಕ್ಕರ್ ॥—ಇಲ್ಲಿ 'ಪೂರ್ವಾಚಾರ್ಯರ್ ದೇಸಿಯುನೆ ನಿಜಿಸಿ'ದರು ಎಂಬ ಕವಿರಾಜಮಾರ್ಗಕಾರನ ಮಾತನ್ನು ಗಮನಿಸಿ.

ದಂಡಿಯ ಮಾತು ಅತ್ಯಂತ ಪ್ರಾಚೀನವಾದ ಹಾಗೂ ಮಾನ್ಯವಾದ ಚಂಪೂ ವ್ಯಾಖ್ಯೆ. ಈ ವಾಕ್ಯದ ಇನ್ನೊಂದು ಪಾಠಭೇದವಾದ 'ಗದ್ಯಪದ್ಯಮಯೀ ಕಾಚಿತ್ ಚಂಪೂರಿತ ಭಿಧೀಯತೇ' ಎಂಬುದನ್ನಾಧರಿಸಿ ಬಲದೇವ ಉಪಾಧ್ಯಾಯರು "ಈ ಲಕ್ಷಣವಾಕ್ಯದಲ್ಲಿರುವ 'ಕಾಚಿತ್' ಮತ್ತು 'ವಿದ್ಯತೇ' ಎಂಬ ಪದಗಳು ಚಂಪೂ ಕಾವ್ಯವು ಆ ಕಾಲದಲ್ಲಿ ಅವಶ್ಯ ವಾಗಿದ್ದನ್ನೂ, ಆದರೆ ದಂಡಿಗೆ ಅದರ ವಿಶದವಾದ ಜ್ಞಾನವಿಲ್ಲದುದನ್ನೂ, ಸೂಚಿಸುತ್ತದೆ" ಎಂದು ಹೇಳುತ್ತಾರೆ.3 ಎಂದರೆ ದಂಡಿಯು ಚಂಪೂ ಕಾವ್ಯವನ್ನು ಕಣ್ಣಾರೆ ಕಂಡಿರದೆ, ತಾನು ಕೇಳಿದಂತೆ ಅದರ ಸ್ವರೂಪವನ್ನು ಹೇಳುತ್ತಿದ್ದಾನೆಂಬುದು ಅವರ ಅಭಿಪ್ರಾಯ. ಹೀಗಿದ್ದರೆ, ಆ ಪ್ರಕಾರವು ಎಲ್ಲಿತ್ತು ? ಕನ್ನಡದಲ್ಲಿದ್ದಿತೆಂಬ ಅರ್ಥ ಹುದುಗಿದೆಯೇ ? ದಂಡಿಯ ಕಾವ್ಯಾದರ್ಶವನ್ನು ಅನುಸರಿಸುವ ಕವಿರಾಜಮಾರ್ಗಕಾರನು "ಮಿಗೆ ಕನ್ನಡ ಗಬ್ಬಂಗಳೊಳಗಣೆತಗುಣ ಗದ್ಯಪದ್ಯ ಸಮ್ಮಿಶ್ರಿತಮಂ ನಿಗದಿಸುವರ್ಗದ್ಯಕಥಾಪ್ರಗೀತಿಯಿಂ ತಚ್ಚಿರತಂನಾಚಾರ್ಯರ್ಕಳ್" ಎಂದು ಗದ್ಯ ಕಥೆಯು ಕನ್ನಡಗಬ್ಬವೆಂದು ಸೂಚಿಸು ತ್ತಿರುವುದನ್ನು ಕಂಡರೆ ಕನ್ನಡ ಜಾನಪದ ಪ್ರಕಾರಗಳ ಹಿನ್ನೆಲೆಯಲ್ಲಿ ದಂಡಿಯು ಚಂಪೂವಿನ ಸ್ವರೂಪವನ್ನು ಹೇಳಿರಬಹುದೇನೋ ಎನ್ನಿಸುತ್ತದೆ.

ಚಂಪೂ ಎಂಬ ಪದವೇ ಕನ್ನಡದಂತಿದೆ ; ಅತ್ಯಂತ ಪ್ರಾಚೀನವಾದ ಉಪಲಬ್ಧ ಸಂಸ್ಕೃತ ಚಂಪೂಗಳು ಕನ್ನಡ ನಾಡಿನ ಪರಿಸರದ ಕವಿಗಳಿಂದ ರಚಿತವಾಯಿತು ; ಕನ್ನಡ ದಲ್ಲಿಯೂ ಅದೇ ಕಾಲದಲ್ಲಿ ಚಂಪೂ ಕೃತಿಗಳು ಕಾಣುತ್ತವೆ ; ಚಂಪೂ ಪರಂಪರೆ ಕನ್ನಡದಲ್ಲಿ ಗಟ್ಟಿಯಾದ ನೆಲೆಯೂರಿ ಮುಂದುವರೆಯಿತು—ಈ ಎಲ್ಲ ಕಾರಣಗಳಿಂದ ಈ ಪ್ರಕಾರವು ಕನ್ನಡ ಮೂಲದ್ದು ಎಂದು ಕನ್ನಡದಲ್ಲಿ ಚಂಪೂವಿನ ಮೂಲವನ್ನು ಹುಡುಕುವ ವಿದ್ವಾಂಸರ ಜೊತೆ ನಾವೂ ದನಿಗೂಡಿಸುವಂತಾಗುತ್ತದೆ. ಇದಕ್ಕೆ ಕಾರಣ ನಮ್ಮ ಕನ್ನಡದ ಕಡೆಗೆ ಓಲುವ ಮನೋಭಾವವಿರಬಹುದು. ಆದರೆ ಮೊಟ್ಟಮೊದಲ ಚಂಪೂ ಕೃತಿಯು ಸಂಸ್ಕೃತದಲ್ಲಿಯೇ ರಚಿತವಾಯಿತು, ಅದರ ಸ್ಫೂರ್ತಿಯಿಂದ ಕನ್ನಡ ದಲ್ಲಿಯೂ ಸಮಾನಾಂತರವಾಗಿ ಈ ಪ್ರಕಾರವು ಬೆಳೆಯಿತು ಎಂಬ ಅಂಶವೇ ಸಾಬೀ ತಾಯಿತು ಎಂದಿಟ್ಟುಕೊಳ್ಳೋಣ. ಆದರೆ ಅದರಿಂದ ಕನ್ನಡ ಕಾವ್ಯದ ಸ್ವಂತಿಕೆಯನ್ನು ಅಲ್ಲಗಳೆಯುವುದು ಸಾಧ್ಯವಿಲ್ಲ. ಕಥಾವಸ್ತು, ವರ್ಣನ ಸಂಪ್ರದಾಯ, ಕೆಲವು ವೃತ್ತಗಳು ಸಂಸ್ಕೃತ ಮೂಲದಿಂದ ಬಂದು ಕನ್ನಡ ಕವಿಗಳಿಗೆ ಸಹಾಯ ಮಾಡಿವೆ ಎಂದಾಕ್ಷಣ ಕನ್ನಡ ಕಾವ್ಯದ ಸ್ವೋಪಜ್ಞತೆಯನ್ನು ಅಲ್ಲಗಳೆದಂತಲ್ಲ. ಕಚ್ಚಾವಸ್ತು ಯಾವುದಾದರೂ, ಎಲ್ಲಿಂದ ಬಂದರೂ ಅದನ್ನು ಸಿದ್ಧವಸ್ತುವಾಗಿ ಮಾರ್ಪಡಿಸಿ ನೀಡುವುದರಲ್ಲಿಯೇ ಅಲ್ಲವೇ ಕೌಶಲ ಅಡಗಿರುವುದು ? ಹೀಗಾಗಿ ಚಂಪೂವಿಗೆ

---

3. ಬಲದೇವ ಉಪಾಧ್ಯಾಯ : 'ಸಂಸ್ಕೃತ ಸಾಹಿತ್ಯದ ಇತಿಹಾಸ' (ಅನು : ಎಸ್. ರಾಮ ಚಂದ್ರಶಾಸ್ತ್ರೀ) : ಪು. ೬೪೭

ಕನ್ನಡವೋ ಸಂಸ್ಕೃತವೋ ಯಾವುದಾದರೂ ಹುಟ್ಟುನೆಲೆಯಾಗಿರಲಿ, ಕನ್ನಡದ ಚಂಪೂಗಳು ಸಂಸ್ಕೃತ ಚಂಪೂಗಳಿಗಿಂತ ಭಿನ್ನವಾಗಿ ಕನ್ನಡತನವನ್ನು ಮೆರೆಯುತ್ತವೆ. ಇದನ್ನೇ 'ದೇಸಿ' ಎನ್ನುವುದು. ಹೀಗೆ ಕಾವ್ಯ ಪರಂಪರೆಯ ನಿರ್ಮಾಣದಲ್ಲಿ ಒಟ್ಟು ಕನ್ನಡ ಕಾವ್ಯದ ಮಟ್ಟಿಗೆ ಹೇಗೋ ಹಾಗೆಯೇ ಚಂಪೂವಿನ ಮಟ್ಟಿಗೆ ದೇಸಿಯು ಸತ್ವ ತುಂಬಿ ನಮ್ಮ ಕಾವ್ಯವು ಮುಂದೆ ಹರಿಯಬೇಕಾದ ಮಾರ್ಗವನ್ನು ಖಚಿತವಾಗಿ ಹಾಕಿ ಕೊಟ್ಟವನು ಪಂಪ.

ಪಂಪನು ತನ್ನ ಕಾವ್ಯವು ಇರಬೇಕಾದ ಬಗೆಯನ್ನು ಈ ಪದ್ಯದಲ್ಲಿ ಘೋಷಿಸಿ ಕೊಂಡಿದ್ದಾನೆ ;

ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದೊಂದಿ
ದೇಸಿಯೊಳ್
ಪುಗುವುದು ಪೊಕ್ಕ[4]ಮಾರ್ಗದೊಳೆ ತಳ್ವುದು. ತಳ್ತೊಡೆ
ಕಾವ್ಯಬಂಧಮೊ
ಪ್ಪುಗುಮೆಳಮಾವು ಕೆಂದಳಿರ ಪೂವಿನ ಬಿಣ್ಪೊಱೆಯಿಂ
ಬಱಲ್ದು ತುಂ
ಬಿಗಳಿನೆ ತುಂಬಿ ಕೋಗಿಲೆಯೆ ಬಗ್ಗಿಸೆ ಸುಗ್ಗಿಯೊಳೊಪ್ಪ
ವಂತೆವೋಲ್ (I.8)

ಕಾವ್ಯಬಂಧವು ಒಪ್ಪುವುದು ಬಗೆ ಹೊಸದಾಗಿರುವುದು, ಮೃದುಶಬ್ದಗಳಿಂದ ಕೂಡಿರುವುದು, ದೇಸಿಯಲ್ಲಿ ಸೇರಿರುವುದು ಇದೆಲ್ಲ ನಡೆದಾಗ ; ಹೇಗೆಂದರೆ, ಸುಗ್ಗಿಯಲ್ಲಿ ಎಳಮಾವು ಕೆಂದಳಿರ ಹೂಭಾರದಿಂದ ಜೋತು, ತುಂಬಿಗಳಿಂದ ತುಂಬಿ, ಕೋಗಿಲೆ ಕುಕಿಲಿನಿಂದ ಕೂಡಿದಾಗ ಒಪ್ಪುವ ರೀತಿಯಲ್ಲಿ. ಕಾವ್ಯವು ಸುಗ್ಗಿಯಂತೆ ಹೊಸಸೃಷ್ಟಿಯನ್ನುಳ್ಳುದು ; ಮಾವು ಹಳೆಯದಾದರೂ (ಸುಗ್ಗಿಯಲ್ಲಿ) ಕೆಂದಳಿರಿನಿಂದ ಹೂವಿನಿಂದ ಹೊಸತಾಗುತ್ತದೆ, ತುಂಬಿಗಳಿಂದ ಕೂಡಿ ಫಲವಂತಿಕೆಗೆ ಕಾರಣವಾಗುತ್ತದೆ, ಕೋಗಿಲೆಯ ಇಂಪಾದ ಧ್ವನಿಯಂತೆ ಗೇಯವಾಗಿರುತ್ತದೆ. ಪಂಪನು 'ದೇಸಿಯೊಳ್ ಪುಗುವುದು ಪೊಕ್ಕ ಮಾರ್ಗದೊಳೆ ತಳ್ವುದು' ಎಂಬೆಡೆಯಲ್ಲಿ ವಿಶೇಷಾರ್ಥವಿಟ್ಟಿರುವಂತೆ ತೋರುತ್ತದೆ. ಹೊಸ ಚಿಂತನೆಗಳು ಕಾವ್ಯದಲ್ಲಿ ಮೃದುಬಂಧದೊಳೊಂದಿ ದೇಸಿಯಲ್ಲಿ ಹೊಗಬೇಕು ;

4. ಡಿ. ಎಲ್.ಎನ್. 'ಪೊಕ್ಕು' ಎಂಬ ರೂಪ ಬಳಸುತ್ತಾರೆ (ಪಂ. ಭಾ. ಟೀಪಿಕೆ) ಆದರೆ ಯಾವ ಹಸ್ತಪ್ರತಿಯಲ್ಲೂ ಆ ರೂಪವಿಲ್ಲ.

ಹಾಗೆ ದೇಸಿಯಲ್ಲಿ ಹೊಕ್ಕ ಮಾರ್ಗದಲ್ಲಿ ತಳ್ವುದು ಎಂದರೆ ತಂಗಬೇಕು. ಎಂದರೆ ದೇಸಿಯ ಮಾರ್ಗದಲ್ಲಿ ಕಾವ್ಯವು ತಂಗಿದಾಗಲೇ ಕಾವ್ಯವು ಸುಗ್ಗಿಯ ಕಾಲದ ಮಾವಿನಂತೆ ಶೋಭಿಸುವುದು. ಇಲ್ಲಿ ಹಳೆಯದು ಹೊಸತಾಗುವುದು ದೇಸಿಯಿಂದ ಎಂಬ ಭಾವನೆಯನ್ನು ಪಂಪನು ಸೂಚಿಸುತ್ತಿರುವಂತಿದೆ. ಸರಿಯಾದ ಮಾರ್ಗವಾವುದೆಂದರೆ 'ದೇಸಿಯ ಮಾರ್ಗ' ಎಂಬುದು ಅವನ ಅಭಿಪ್ರಾಯ. ಎಂದರೆ ತನ್ನ ಭಾರತವು ಪಳೆಯ ಮಾವಿನ ಮರದಂತಹುದೇ ; ಆದರೆ ಅದು ಸುಗ್ಗಿಯ ಕಾಲದಲ್ಲಿರುವಂತೆ ಶೋಭಾಯಮಾನವಾಗಿರುವುದು ಮೃದುಬಂಧ, ದೇಸಿಯ ಮಾರ್ಗ, ಪೊಸಬಗೆ—ಇವುಗಳಿಂದಾಗಿ ಎಂದು ಅವನು ಹೇಳುತ್ತಿದ್ದಾನೆ.

ಒಟ್ಟಾರೆ ಪಂಪನ ದೃಷ್ಟಿಯಲ್ಲಿ ದೇಸಿಯ ಕಾರಣದಿಂದಾಗಿ ಕಾವ್ಯವು ಸರಿಯಾದ ಮಾರ್ಗವನ್ನು ಸೇರಿದಂತಾಗುತ್ತದೆ ; ಹೀಗೆ ಎನ್ನುವಾಗ, 'ಮಾರ್ಗ' ಶಬ್ದವನ್ನು ಶ್ಲೇಷೆಯಿಂದ ಬಳಸುತ್ತಿದ್ದಾನೆ ; ಅವನು. ಭಾರತದ ಕೊನೆಯಲ್ಲಿ ಪಂಪನು ತನ್ನ ಕಾವ್ಯವು ಮುನ್ನಿನ ಕಬ್ಬಗಳನ್ನೆಲ್ಲ ಇಕ್ಕಿ ಮೆಟ್ಟಲು ಕಾರಣ, ಇತರ ಅಂಶಗಳೊಂದಿಗೆ, 'ಕೈತ ದೇಸಿ' ಎನ್ನುತ್ತಾನೆ (xiv. 59). ಹಾಗೆಯೇ ತಾನು 'ನಾಡೊಪಜ'ನಾದುದು 'ಉಣ್ಮೆ ಪೊಣುವ ದೇಸಿಗಳಿಂದ' ಎಂದೂ ಹೇಳಿಕೊಳ್ಳುತ್ತಾನೆ. (xiv. 62) ಎಂದರೆ ಪಂಪನಿಗೆ ತನ್ನ ಕಾವ್ಯದ ವೈಶಿಷ್ಟ್ಯವೆಂದರೆ ತನ್ನ ದೇಸಿಗಳೇ ಎಂದೂ, ಅದು ಹಿಂದೆ ಇರದುದರಿಂದ ತಾನು ಕನ್ನಡದಲ್ಲಿ ಅದನ್ನು ತಂದು 'ನಾಡೊವಜ' ನಾದೆನೆಂದೂ ಪ್ರಜ್ಞಾಪೂರ್ವಕವಾದ ತಿಳಿವಳಿಕೆಯಿದೆ. ಮುಂದೆ ಬಂದ ಚಂಪೂಕವಿಗಳೆಲ್ಲರೂ ಪಂಪನ ದೇಸಿಯ ವೈಶಿಷ್ಟ್ಯವನ್ನು ಮನವಾರೆ ಪ್ರಶಂಸಿಸುತ್ತಾರೆ.

ಹಾಗಾದರೆ ಪಂಪನ ದೇಸಿಯ ಸ್ವರೂಪವೇನು ? ಕೃತಿ "ದೇಸಿಯೊಳ್ ಪುಗುವುದು" ಹೇಗೆ ಎಂಬ ಪ್ರಶ್ನೆ ಏಳುತ್ತದೆ. ಪಂಪನು ಆದಿಪುರಾಣಕ್ಕೆ ಜಿನಸೇನಾಚಾರ್ಯರ ಕತೆ ಹಾಗೂ ವಿವರಗಳು ಚೌಕಟ್ಟನ್ನು ಒದಗಿಸಿವೆ ; ಅಲ್ಲಿ ಕವಿಗೆ ಸ್ವಾತಂತ್ರ್ಯ ಕಡಿಮೆ ; ಹೇಳುತ್ತಿರುವುದೇ ಅಲೌಕಿಕ ವ್ಯಕ್ತಿಯ ಕತೆಯಾದ್ದರಿಂದ ಸಾಮಾನ್ಯ ವ್ಯಕ್ತಿಗಳ ಜೀವನ ನಿರೂಪಣೆಯ ಶೈಲಿ ಅದಕ್ಕೆ ಒಗ್ಗದು. ಹೀಗಾಗಿ ಪಂಪನ ದೇಸಿಗೆ ಅಲ್ಲಿ ಅವಕಾಶವಿಲ್ಲ. ಆದರೆ ತಾನು ಹೇಳುವ ಸಮಸ್ತ ಭಾರತ ಕತೆಯು ಶುದ್ಧ ಲೌಕಿಕವಾದ್ದರಿಂದ, ಪಂಪನ ಜೀವನಾನುಭವ ಹಾಗೂ ಜೀವನದೃಷ್ಟಿಗಳು ಅಭಿವ್ಯಕ್ತಿ ಪಡೆಯಲು ಅವಕಾಶ ಅಪಾರವಾಗಿದೆ. ಕೇವಲ ಶಬ್ದಗಳು, ಪದ ಸಮುಚ್ಚಯಗಳು, ಸಂಭಾಷಣೆಯ ರೀತಿ ಇವುಗಳು ಮಾತ್ರವೇ ಪಂಪನ ದೇಸಿಯ ಸತ್ವವಲ್ಲ. ಭಾಷೆಯ ಮೂಲಕವಾಗಿಯೇ ಒಂದು ಜನಾಂಗದ ಸಂಸ್ಕೃತಿಯು ಮುಖ್ಯವಾಗಿ ಹೊರಹೊಮ್ಮುತ್ತದೆಯಾದ್ದರಿಂದ ಪಂಪನು ತನ್ನ ಕಾವ್ಯದ ಬಹು ಹಿಂದಿನ (ಒಂದು ಬಗೆಯಲ್ಲಿ ಪೌರಾಣಿಕ) ಪಾತ್ರಗಳ ಬಾಯಲ್ಲಿ ಕನ್ನಡ ಮಾತನಾಡಿಸುತ್ತಾನೆ, ಸರಿ. ಆದರೆ ವ್ಯಾಸ ಸೃಷ್ಟಿಸಿದ ಸನ್ನಿವೇಶಗಳ ಹೊರರೂಪ ಅದೇ ರೀತಿಯಿದ್ದರೂ, ಅಲ್ಲಿ ಕನ್ನಡ ಮಾತಾಡುವ

ಪಾತ್ರಗಳು ಕೇವಲ ಸಂಸ್ಕೃತದಲ್ಲಿದ್ದ ಮಾತುಗಳನ್ನು ಕನ್ನಡದಲ್ಲಿ ಭಾಷಾಂತರಿಸಿ ಹೇಳುವುದಿಲ್ಲ. 'ಕತೆಯ ಮೆಯ್ಗಿಡಲೀಯದೆ' ಪಂಪನು ಭಾರತವನ್ನು ಹೇಳಿದ್ದರೂ, ಅದನ್ನು ದೇಸಿಯಲ್ಲಿ ಎಂದರೆ ಕನ್ನಡತನದಲ್ಲಿ ಅದ್ದಿ ತೆಗೆದಿದ್ದಾನೆ. ಹೀಗಾಗಿ ಒಟ್ಟು ಆಕಾರ ವ್ಯಾಸನಿರ್ಮಿತ ಭಾರತವಾದರೂ, ಅದರ ವಿವರಗಳು, ಬಣ್ಣ ಹಾಗೂ ಸತ್ವಗಳು ಕನ್ನಡದವು. ಈ ಭಾರತ ಕತೆಯನ್ನು 'ವರ್ಣಕಂ ಕತೆಯೊಳೊಡಂಬಡಂ ಪಡೆಯೆ ಪೇೞ್ವೊಡೆ ಪಂಪನೇ ಪೇೞ್ಗುಂ' (I.XI) ಎಂದು ಪಂಡಿತರು ಹೇಳಿದರಂತೆ. ಇಲ್ಲಿನ 'ವರ್ಣಕ'ವು ಈ ದೇಸಿಯನ್ನೇ ಸೂಚಿಸುತ್ತದೆ. ಭಾರತದ ಪಾತ್ರೆಯಲ್ಲಿ ಕನ್ನಡತನದ ದ್ರವವನ್ನು ಪಂಪ ತುಂಬಿದ್ದಾನೆ.

ಮಾತುಗಳು ಹಾಗಿರಲಿ ;ಅದರ ಬಗ್ಗೆ ಈಗಾಗಲೇ ಸಾಕಷ್ಟು ಜನರು ಹೇಳಿದ್ದಾರೆ. ಅದರೊಡನೆ ಸನ್ನಿವೇಶಗಳ ನಿರೂಪಣೆ, ಮೌಲ್ಯಗಳ ಮೇಲೆ ನೀಡುವ ಒತ್ತು, ಸಂಘರ್ಷ ಚಿತ್ರಣ–ಇಂಥ ಸಂದರ್ಭಗಳನ್ನು ಪಂಪನು ನಿರ್ವಹಿಸುವ ರೀತಿ ಅನನ್ಯವಾದದ್ದು. 'ಪೋಲಿಪೊಡೆನಗಟ್ಟಿಯಾದುದು ಗುಣಾರ್ಣವ–ಭೂಭುಜನಂ ಕಿರೀಟಿಯೊಳ್' ಎಂದ ಪಂಪನು ಕೇವಲ ರಾಜಯಕೀಯ ಶ್ಲೇಷೆಯನ್ನು ಮಾತ್ರ ತನ್ನ ಭಾರತದಲ್ಲಿ ಸಾಧಿಸಿಲ್ಲ ; ಭಾರತ ಕತೆಯಲ್ಲಿ ಅವನು ತನಗೆ ದಕ್ಕುವಷ್ಟು ಕನ್ನಡಿಗರ ಜೀವನವನ್ನೂ ಸೇರಿಸಿ ಸಾಂಸ್ಕೃತಿಕ ಶ್ಲೇಷೆಯನ್ನೂ ಸಾಧಿಸಿದ್ದಾನೆ. ಇದು ಪಂಪನು ಮಾತ್ರ ಸಾಧಿಸಿರುವ ಗುಣವೇನೂ ಅಲ್ಲ ; ಎಲ್ಲ ದೊಡ್ಡ ಕವಿಗಳೂ ಮಾಡುವುದು ಅದನ್ನೇ–ಹಳೆಯ ಕಥಾವಸ್ತುವಿನಲ್ಲಿ ಹೊಸ ಜೀವನ ದ್ರವ್ಯವನ್ನು ಸುರಿಯುವುದು. ಆದರೆ ಪಂಪನು ಈ ಕೆಲಸವನ್ನು ಕನ್ನಡದ ಮಟ್ಟಿಗೆ ದೊಡ್ಡ ರೀತಿಯಲ್ಲಿ ಮೊದಲ ಬಾರಿಗೆ ಮಾಡಿದ್ದಾನೆಂಬುದೇ ಅವನಿಗಿರುವ ಹೆಗ್ಗಳಿಕೆ. ಅಥವಾ ಕನ್ನಡಿಗರು ಸಾಹಿತ್ಯದ ಮೂಲಕ ತಮ್ಮತನವನ್ನು ಗುರುತಿಸಿಕೊಳ್ಳಲು ತೊಡಗಿದಂದಿನಿಂದ ಆರಂಭವಾದ ಈ ಕಾರ್ಯವು ಪಂಪನಲ್ಲಿ ಶಿಖರವನ್ನು ಮುಟ್ಟಿದೆಯಾದ್ದರಿಂದ, ಪಂಪನ ಈ 'ದೇಸಿ' ಮುಂದಿನವರಿಗೆ ಮಾದರಿಯಾಯಿತು.

ಶಂತನು–ಸತ್ಯವತಿಯರ ಮದುವೆಯ ಪ್ರಸಂಗ (I.70–73) ಯುದ್ಧಕಾಲದಲ್ಲಿ ಸಾವು–ಮುತ್ತೈದೆತನ ಇವುಗಳ ಬಗ್ಗೆ ಮಾತನಾಡಿಕೊಳ್ಳುವ ಸೈನಿಕ ಕುಟುಂಬಗಳ ಚಿತ್ರಣ (X.44–47)—ಇಂತಹ ಸನ್ನಿವೇಶಗಳಲ್ಲಿ ಸಂಗ್ರಹವಾಗಿಯಾದರೂ ಚಿತ್ರಿತವಾಗಿರುವ ನಿತ್ಯಜೀವನ ರೀತಿಯಲ್ಲಿ ಕಾಣುವುದು ಪಂಪನ ಕಾಲದ ಕನ್ನಡ ಮನೆಗಳ ಜೀವನ. ತನ್ನ ಕಾಲದ ಜನಗಳ ಮೌಲ್ಯಗಳನ್ನು ಪಂಪನು ಭಾರತದಲ್ಲಿ ಹೇಗೆ ಪ್ರತಿಪಾದಿಸಿದ್ದಾನೆಂಬುದು ಈಗಾಗಲೇ ವಿಸ್ತಾರವಾಗಿ ಚರ್ಚಿತವಾಗಿದೆ.5 ಹಾಗೆಯೇ 'ಚಲದೊಳ್

5. ನೋಡಿ : ಎಂ. ಚಿದಾನಂದಮೂರ್ತಿ : 'ಪಂಪಭಾರತದಲ್ಲಿ ಮೌಲ್ಯ ಪ್ರಸಾರ' (ಸಂಶೋಧನ ತರಂಗ) ಲೇಖನ.

ದುರ್ಯೋಧನಂ' ಎಂದು ಆರಂಭವಾಗುವ ಪದ್ಯದಲ್ಲಿ ಪಂಪನು ಭಾರತದ ಮುಖ್ಯ ಪಾತ್ರಗಳನ್ನು ವಿವಿಧ ಮೌಲ್ಯಗಳೊಂದಿಗೆ ಸಮೀಕರಿಸಿರುವುದು ತನ್ನ ಕಾಲದ ಜೀವನ ನೋಟಕ್ಕೆ ಅನುಗುಣವಾಗಿಯೇ ಎಂಬುದು ಈಗಾಗಲೇ ಸಾಕಷ್ಟು ಚರ್ಚಿತವಾಗಿರುವ ವಿಷಯ.

ಒಂದು ಕಾವ್ಯದ ಶ್ರೇಷ್ಠತೆಯಿರುವುದು ಹಾಗೂ ಕವಿಯ ಪ್ರತಿಭೆಗೆ ನಿಕಷವಾಗುವುದು ಅವನು ನಿರ್ವಹಿಸುವ ಸಂಘರ್ಷಗಳ ಚಿತ್ರಣದಲ್ಲಿ. ಮಹಾಭಾರತದ ಸಂಘರ್ಷಗಳು ದಟ್ಟವಾಗಿರುವುದು ಯುದ್ಧದ ಹಿಂದುಮುಂದಿನ ಸನ್ನಿವೇಶಗಳಲ್ಲಿ. ಹುಟ್ಟು, ನಿಷ್ಠೆ, ಮೌಲ್ಯ—ಇವುಗಳ ಸ್ವರೂಪ ನಿರ್ಧಾರವಾಗುವ ಬಗೆಯೇ ಈ ಸ್ವರೂಪ. ಪಂಪಭಾರತದಲ್ಲಿ ಇಂತಹ ಸಂಘರ್ಷದ ಭಾಗಗಳು ಉಜ್ವಲವಾಗಿರುವ ಕಾರಣವೆಂದರೆ ಅಲ್ಲಿ ಕವಿಯು ತೋರ್ಪಡಿಸುವ ಸ್ವಂತಿಕೆ ಮತ್ತು ದೇಸೀತನ. ಕನ್ನಡ ಜನಪದ ಪ್ರಜ್ಞೆಯು ಆ ಕಾಲದಲ್ಲಿ ಎದುರಿಸುತ್ತಿದ್ದ ತೊಳಲಾಟದ ಚಿತ್ರಣ ದಟ್ಟವಾಗಿ ಕಾಣುವುದು ಪಂಪಭಾರತದ ಒಂಬತ್ತನೇ ಆಶ್ವಾಸದಿಂದ ಮುಂದೆ. ಗಾತ್ರದ ದೃಷ್ಟಿಯಿಂದಲೂ ವಿರಾಟಪರ್ವದವರೆಗಿನ ಕತೆಯು ಮುಂದಿನ ಕತೆಗೆ ಸಮಾನವಾಗಿದೆ. ಮೊದಲ ಎಂಟು ಆಶ್ವಾಸಗಳು ೨೨೨ ಪುಟಗಳಲ್ಲಿ ಹರಿದರೆ, ಕೊನೆಯ ಐದು ಆಶ್ವಾಸಗಳೇ ೧೮೭ ಪುಟಗಳಷ್ಟು ದೀರ್ಘವಾಗಿದೆ. ಈ ಎರಡನೆಯ ಭಾಗದಲ್ಲಿಯೇ ಸಂಘರ್ಷಗಳು ಹೆಚ್ಚಿರುವುದು. ಪಂಪನು ಹಿತಮಿತ ಮೃದುವಚನನಾದರೂ, ಇದ್ದುದರಲ್ಲಿ ಅವನು ದೀರ್ಘವಾಗುವುದು ಇಂಥ ಸಂಘರ್ಷ ಚಿತ್ರಣದಲ್ಲಿ.

ಭೀಷ್ಮನಿಗೆ ವೀರಪಟ್ಟ ಕಟ್ಟುವ ಸನ್ನಿವೇಶ ಪತ್ತನೆಯ ಆಶ್ವಾಸದ ಪ್ರಾರಂಭದಲ್ಲಿದೆ. ಆಗಿನ ಸಂಘರ್ಷ ಭೀಷ್ಮ–ದ್ರೋಣರಂತಹ ಹಳೆಯ ಪೀಳಿಗೆ–ಕರ್ಣನಂತಹ ಹೊಸ ಪೀಳಿಗೆಯ ನಡುವಣದ್ದು. ಅಂತೆಯೇ ಬದಲಾಗುತ್ತಿರುವ ಮೌಲ್ಯಗಳ ಸಂಬಂಧದ್ದು. ಕರ್ಣನು ಜಾತಿಯ ಬಗ್ಗೆ ನೀಡುವ ವ್ಯಾಖ್ಯಾನವಾಗಲಿ, ಕುಲವು ಆಕುಲವನ್ನು ಉಂಟುಮಾಡುವುದೆಂದು ಎಚ್ಚರಿಸುವುದಾಗಲೀ (X.21) ಎಲ್ಲ ಕಾಲಕ್ಕೂ ಅನ್ವಯಿಸಬಹುದಾದರೂ, ಪಂಪನ ಕಾಲದ ಬದಲಾಗುತ್ತಿದ್ದ ಜಾತಿನೆಲೆಗಳಿಗೆ ನೇರವಾಗಿ ಸಂಬಂಧಿಸಿದಂತಿದೆ. ತನ್ನ ಮೂವತ್ತೊಂಬತ್ತನೆಯ ವರ್ಷದಲ್ಲಿ ಭಾರತವನ್ನು ಬರೆದ ಕವಿ ಇನ್ನೂ ಯೌವನದ ಆದರ್ಶ–ಪ್ರೌಢನ ವಿವೇಕಗಳನ್ನು ಹೊಂದಿದ್ದ ಪ್ರಜ್ಞೆಯ ಸಂಕೇತವಾಗಿ ಕುಲದ ಟೊಳ್ಳುತನವನ್ನು ಕುರಿತು ಹೇಳುತ್ತಿರುವ ಸನ್ನಿವೇಶ ಇದಾಗಿದೆ.

ಭಾರತದ ಕತೆಯ ನಡುವೆಯೇ ಜಾನಪದ ಪದ್ಧತಿಗಳಿಗೆ ಅನುಗುಣವಾದ ಸನ್ನಿವೇಶಗಳನ್ನೂ ಪಂಪ ಬೆಸೆಯುತ್ತಾನೆ. ಎಂಟನೆಯ ಆಶ್ವಾಸದಲ್ಲಿ ಬರುವ ಯಕ್ಷಪ್ರಶ್ನೆಯ ಪ್ರಸಂಗದಲ್ಲಿ ಒಂದು ಸನ್ನಿವೇಶವಿದೆ. ದುರ್ಯೋಧನನ ಪುರೋಹಿತ ಕನಕಸ್ವಾಮಿಯು ಮಾಟಮಾಡಿ ಕೀರ್ತಿಗೆಯೆಂಬ ಕ್ಷುದ್ರ ದೇವತೆಯನ್ನು ಆವಾಹಿಸಿ ಪಾಂಡವರನ್ನು ಕೊಲ್ಲಲು ಪ್ರಯತ್ನಿಸುತ್ತಾನೆ; ಅವರೆ ಪ್ರಸಂಗವಶಾತ್ ಆ ದೇವತೆಯು ಕನಕ

ಸ್ವಾಮಿಯನ್ನೇ ತಿನ್ನುತ್ತದೆ–'ಕನಕನ ಬೇಳ್ವೆ ತಗುಳ್ದುದು ಕನಕನನ್ ಎಂಬೊಂದು ಮಾತು ಧರೆಗೆಸೆಯೆ' ಎಂದರೆ ಕನ್ನಡ ಜನಪದರಲ್ಲಿ ರೂಢಿಯಲ್ಲಿದ್ದ ಮಾಟ, ತಾನು ಬಯಸುವ ಕೇಡು ತನ್ನನ್ನೇ ಆಹುತಿಗೊಳ್ಳುವುದೆಂಬ ನಂಬಿಕೆ, ಗಾದೆ ಮಾತು ಎಲ್ಲ ಇಲ್ಲಿ ಸೇರಿದೆ. 'ತಾನಿಟ್ಟ ಬೇತಾಳ ತನ್ನ ತಿಂದಿತು' ಎಂಬ ಗಾದೆಯು ವಚನಗಳಲ್ಲಿ ಅನುರಣಿಸಿದೆ. ಹೀಗಾಗಿ ಗಾದೆಯ ಹಿಂದಿನ ಜನಪದ ಕತೆಯನ್ನು ಪಂಪ ಅಳವಡಿಸಿ ಈ ಸನ್ನಿವೇಶಕ್ಕೆ ಹೊಸ ಆಯಾಮವನ್ನು ನೀಡುತ್ತಾನೆ.

ಒಟ್ಟಾರೆ, ಪಂಪನು ತನ್ನ ಭಾರತದಲ್ಲಿ ಭಾಷೆ, ಮೌಲ್ಯಪ್ರತಿಪಾದನೆ, ಜೀವನ ದೃಷ್ಟಿ, ಜೀವನವಿಧಾನ, ಸಂಘರ್ಷ ಚಿತ್ರಣ–ಈ ಎಲ್ಲ ರೀತಿಯಿಂದಲೂ ದೇಸಿಯನ್ನು ಕತೆಯಲ್ಲಿ ತುಂಬಿದ್ದಾನೆ. ಆದಿಪುರಾಣದಲ್ಲಿಯೂ ತನಗಿದ್ದ ಸ್ವಾತಂತ್ರ್ಯದ ಮಿತಿಯಲ್ಲಿಯೇ, ಭರತ–ಬಾಹುಬಲಿಯರ ಪ್ರಸಂಗದಂತಹ ಕತೆಯಲ್ಲಿ ತನ್ನ ಕಾಲದ ರಾಜಕೀಯವನ್ನು ಚಿತ್ರಿಸಿದ್ದಾನೆ. ರಾಜ್ಯಲಕ್ಷ್ಮಿಯ ಬಗ್ಗೆ ಅವನು ಹೇಳುವ ಅಭಿಪ್ರಾಯಗಳು ಸೈನ್ಯ–ರಾಜ ರಾಜ–ರಾಣಿ, ರಾಜ ಕುಟುಂಬ, ಈ ನೆಲೆಯಲ್ಲಿ ಆ ಕಾಲದ ಕನ್ನಡನಾಡನ್ನು ಪ್ರತಿಬಿಂಬಿ ಸುತ್ತದೆ. ಹೀಗೆ ಪಂಪ ಚಂಪೂವಿಗೆ ಮಾತು, ಕರ್ನಾಟಕ ವಿಷಯ ಜಾತಿಗಳ ಬಳಕೆ, ಸನ್ನಿವೇಶ ರಚನೆ, ನಿರೂಪಣಶೈಲಿ, ಪ್ರಸಂಗ(ಪೂರಣ)ಸೇರಿಸುವಿಕೆ, ಮೌಲ್ಯಪ್ರತಿಪಾದನೆ, ಸಂಘರ್ಷ ಚಿತ್ರಣ–ಈ ಎಲ್ಲದರ ಮೂಲಕ ದೇಸೀತನವನ್ನು ತುಂಬಿ ಚಂಪೂವನ್ನು ಕನ್ನಡದ್ದೇ ವಿಶಿಷ್ಟಪ್ರಕಾರವಾಗಿ ಮಾಡಿರುವುದಲ್ಲದೆ, ಮುಂದಿನ ಕನ್ನಡ ಕಾವ್ಯವು ಅನು ಸರಿಸಬೇಕಾದ ಸ್ವಂತಿಕೆಯ ಜಾಡನ್ನು ತೋರಿಸಿದ್ದಾನೆ.

ಪಂಪನ ನಂತರ ಚಂಪು ಪ್ರಕಾರವು ಎರಡು ಟಿಸಿಲಾಯಿತು ; ಕೆಲಕಾಲ ಈ ಎರಡೂ ಸಮಾನಾಂತರವಾಗಿ ಹರಿದವು. ಪಂಪನ ನೇರ ವಾರಸುದಾರರಾಗಿ ಪೊನ್ನ–ರನ್ನರು ಕಾವ್ಯ ರಚಿಸಿದರು, ಚಂಪೂ ಮಾರ್ಗದಲ್ಲಿಯೇ ಹರಿದರು. ಅವನಂತೆ ಲೌಕಿಕ ಧಾರ್ಮಿಕ ಕಾವ್ಯಜೋಡಿ, ರಾಜಕೀಯ ಶ್ಲೇಷೆ–ಇವುಗಳ ಸ್ಪಷ್ಟ ಅನುಸರಣೆಯಿದ್ದರೂ, ಪಂಪನ ದೇಸಿ ಅವರಲ್ಲಿ ಇಳಿಮುಖವಾಗಿತ್ತು. ಇನ್ನೊಂದು ಎಸಳಿನಲ್ಲಿ, ಮೊದಲನೆಯ ನಾಗವರ್ಮನು ಬಾಣನ 'ಕಾದಂಬರಿ'ಯನ್ನು ಗದ್ಯದಿಂದ ಚಂಪೂ ರೂಪಕ್ಕೆ ತಿರುಗಿಸಿ ದನು ; ದುರ್ಗಸಿಂಹನು ವಸುಭಾಗಭಟ್ಟನನ್ನು ಅನುಸರಿಸಿ 'ಪಂಚತಂತ್ರ' ವನ್ನು ರಚಿಸಿದ. ಇವರಿಬ್ಬರಲ್ಲಿ 'ದೇಸಿ' ಎಂಬುದನ್ನು ಪ್ರಯಾಸದಿಂದ ಹುಡುಕಬೇಕು. ಕಾದಂಬರಿಯು ಸಾಮಾನ್ಯರಿಗೆ ಸಂಬಂಧಿಸಿದ ಸನ್ನಿವೇಶಗಳನ್ನು ಹೊಂದದೇ ಇರುವುದ ರಿಂದಾಗಿ, ಕೇವಲ ಕಲ್ಪಕತೆಯನ್ನು ಅವಲಂಬಿಸಿರುವುದರಿಂದಾಗಿ, ಅಲ್ಲಿ ಹೊಸ ರೂಪದ ಮಾರ್ಪಾಟನ್ನು ಕಾಣಬಹುದೇ ವಿನಾ ಪಂಪನು ಹಳೆಯ ಕತೆಗೆ ತನ್ನ ನಾಡುತನವನ್ನು ತುಂಬುವ ಕಾಯಕಲ್ಪವನ್ನು ಕಾಣಲಾರೆವು. 'ಪಂಚತಂತ್ರ'ವು ಅನ್ಯೋಕ್ತಿ ಕಾವ್ಯವಾದ್ದ ರಿಂದ ನೇರವಾದ ಜನರ ನಡವಳಿಕೆಯ ಚಿತ್ರಣಕ್ಕೆ ಅವಕಾಶವಿಲ್ಲ. ಅಲ್ಲದೆ, ಈ ಎರಡೂ ಕಾವ್ಯಗಳಿಗೆ ಜನರನ್ನು ಯಾವುದೇ ಉದ್ದೇಶಕ್ಕಾಗಿ ತಲುಪುವ ಹಂಬಲು ಇರಲಿಲ್ಲ.

ಹಾಗಾಗಿ ತಮ್ಮ ಕಾಲದ ಜನರ ಅಂತಃಸತ್ವದ ಅನುರಣನೆ ಆ ಕಾವ್ಯಗಳಲ್ಲಿ ಮೊಳಗಲಿಲ್ಲ.

ಪೊನ್ನ-ರನ್ನರು ಪಂಪನಂತೆಯೇ ತಮ್ಮ ಪ್ರಭುಗಳನ್ನು ಕಾವ್ಯನಾಯಕರೊಂದಿಗೆ ಸಮೀಕರಿಸಿದ್ದರಿಂದಾಗಿ ದೇಸಿತನಕ್ಕೆ ಅವಕಾಶವಿದ್ದಿತಾದರೂ, ಈ ಕವಿಗಳಿಗೆ ಪಂಪತನವಿಲ್ಲದ್ದರಿಂದಾಗಿ ಅದನ್ನು ಅವನಂತೆ ಮೈಗೂಡಿಸಿಕೊಳ್ಳಲಿಲ್ಲ. ಜೊತೆಗೆ, ತಮ್ಮ ಪುರಾಣಗಳಲ್ಲಿ ಪೆಡಸುತನವನ್ನು ತಂದುಕೊಂಡರು. ನಾಗಚಂದ್ರನು ತನ್ನ ವೈಯಕ್ತಿಕ ದೃಷ್ಟಿಕೋನದಿಂದಾಗಿಯೂ, ತಾನು ಆದರ್ಶವೆಂದು ತಿಳಿದ ಕಾರ್ಯವನ್ನು ಸಾಧಿಸುವುದಕ್ಕಾಗಿಯೂ ಪಂಪನ ಚಂಪೂ ದಾರಿಯಿಂದ ಕೊಂಚ ಭಿನ್ನವಾದ ಜಾಡನ್ನು ತುಳಿದ. ತನ್ನ ನಂಬುಗೆಯ ಮತವು ಜನರಿಂದ ದೂರವಾಗುತ್ತಿದೆಯೆಂಬ ತಿಳಿವಳಿಕೆಯಿಂದಾಗಿಯೋ ಏನೋ, ಪಂಪನಂತೆ ಕಾವ್ಯಯುಗಳವನ್ನು ರಚಿಸಿದರೂ, ಅವುಗಳು ಒಂದೇ ಉದ್ದೇಶವನ್ನು ಪಡೆದವು: ಎರಡೂ ಜೈನಪರವಾದವು. ಭಾಷೆ ತಿಳಿಯಾಯಿತು, ಅವನು ನವಿರು ಚಿತ್ರಣಗಳನ್ನು ಮಾಡಲಿಲ್ಲ, ಆದರೆ ಅವನು ಜನರ ಸತ್ವವನ್ನು ತನ್ನ ಕಾವ್ಯಗಳಲ್ಲಿ ತಿಳಿಸುವ ಮಣಿಹವನ್ನು ಪಡೆದಿರದ್ದರಿಂದಾಗಿ, ಜನರಿಗೆ ತಾನು ಯಾವುದರ ವಿಷಯವನ್ನೋ ಹೇಳಬೇಕೆಂದಿದ್ದರಿಂದಾಗಿ, ಅಲ್ಲದೆ ಅವನ ಕಾವ್ಯಭಿತ್ತಿಯು ಜನರನ್ನು ಪ್ರತಿಬಿಂಬಿಸದೆ ಅವರೆಡೆಗೆ ಉದ್ದೇಶಿಸಿದ್ದದರಿಂದ ಸಾಂಪ್ರದಾಯಿಕತೆಯನ್ನೇ ಆಶ್ರಯಿಸಿತು. ಕಾವ್ಯವಾಗಿ ಅವನ ರಚನೆಗಳು ಸೌಕುಮಾರ್ಯದಿಂದ ಆಕರ್ಷಕವಾದರೂ ಜನಪರತೆಯ ದೃಷ್ಟಿಯಿಂದ ದೂರವಾಗಿ ಉಪದೇಶಾತ್ಮಕವಾಯಿತು. ಕರ್ಣಪಾರ್ಯನಂತಹ ಕವಿಗಳದೂ ಇದೇ ರೀತಿ. ಅವನ ಶೈಲಿ ದೇಸಿಯನ್ನು ಕೊಂಚಮಟ್ಟಿಗೆ ಒಳಗೊಂಡಿತಾದರೂ, ಅವನು ಹರಿವಂಶವನ್ನು ನೇಮಿನಾಥ ಪುರಾಣವಾಗಿ ಜೈನ ಸಂಪ್ರದಾಯದ ಪರಿಕಲ್ಪನೆಗೊಳಪಡಿಸಿ ರಚಿಸಿದ್ದ. ಹೀಗಾಗಿ "ಪುರಾಣ ರಚನೆಯಲ್ಲಿಯೇ ಕವಿಯ ಸ್ವಾತಂತ್ರಕ್ಕೆ ಹೆಚ್ಚು ಅವಕಾಶವಿಲ್ಲ ; ಅದರಲ್ಲಿಯೂ ಸ್ವಾತಂತ್ರ್ಯವನ್ನು ವಹಿಸಲೂ ಇಷ್ಟಪಡದ ಕರ್ಣಪಾರ್ಯನ ಈ ಕಾವ್ಯದಲ್ಲಿ ಕಾವ್ಯಧರ್ಮವನ್ನು ನಾವು ಹೆಚ್ಚಾಗಿ ನಿರೀಕ್ಷಿಸಲೂ ಸಾಧ್ಯವಿಲ್ಲ."

ಮುಂದೆ ಬಂದ ಅಗ್ಗಳನು ತನ್ನ 'ಚಂದ್ರಪ್ರಭ ಪುರಾಣ'ದಲ್ಲಿ; ನೇಮಿಚಂದ್ರನ 'ಲೀಲಾವತಿ', 'ಅರ್ಧನೇಮಿ'ಗಳಲ್ಲಿ ; ಆಚಣ್ಣನ 'ವರ್ಧಮಾನ ಪುರಾಣ'ದಲ್ಲಿಯೂ ನಾವು ಕಾಣುವುದು ಪ್ರೌಢಿಮೆಯಿಂದಾಗಿ ಜನದೂರವಾದ ಕಾವ್ಯರಚನೆಯನ್ನು. ತಮ್ಮ ವಿದ್ವತ್ತಿನ ಪ್ರದರ್ಶನ, ಅದ್ಭುತರಮ್ಯ ಕಥನದಿಂದ ರೋಚಕತೆಯನ್ನು ಸಾಧಿಸುವ ಇಂತಹ ಕವಿಗಳಿಂದ ಜನಮುಖಿಯಾದ ಬರವಣಿಗೆಯನ್ನು ನಿರೀಕ್ಷಿಸಲಾದೀತೇ ? ಅವರು ಚಂಪೂ ಸಾಹಿತ್ಯದ ನಡುವಣ ಕೆಲವು ಕೊಂಡಿಗಳೆಂದು ಪರಿಗಣಿಸಬೇಕಾದ ಕವಿಗಳಷ್ಟೆ ಆಗಿ ಉಳಿಯುತ್ತಾರೆ.

ಈ ದೃಷ್ಟಿಯಿಂದ ನಯಸೇನನಿಗೆ ಒಂದು ವಿಶಿಷ್ಟ ಸ್ಥಾನವನ್ನು ಚಂಪೂ ಕವಿಗಳ ಸಾಲಿನಲ್ಲಿ ನೀಡಬೇಕು. ತನ್ನ ಮತವನ್ನು ಪ್ರಚಾರ ಮಾಡುವ ಧ್ಯೇಯ ಹೊಂದಿದ ನಯಸೇನನ ಮಿತಿಗಳೇನೇ ಇರಲಿ, ಅವನ ಉದ್ದೇಶ ಜನಗಳಿಗೆ ತಾನು ಹೇಳುವುದನ್ನು ತಲುಪಿಸಬೇಕೆಂಬುದೇ ಆಗಿದೆ. ಅದಕ್ಕಾಗಿ ಅವನು ಸಣ್ಣ ಕತೆಗಳನ್ನು ಹೆಣೆಯುವ ಮೂಲಕ ತನ್ನ 'ಧರ್ಮಾಮೃತ'ವನ್ನು ರಚಿಸುತ್ತಾನೆ. ತನ್ನ ಹಿಂದಿನ ಕವಿಗಳ ದೀರ್ಘ ಕಥಾನಕವನ್ನು ಅವನು ಕೈಬಿಟ್ಟಿದ್ದಾನೆ, ಮಿಕ್ಕ ಅನೇಕ ಕವಿಗಳಿಗಿಂತ ಹೆಚ್ಚಿನ ಗದ್ಯವನ್ನು ಬಳಸುತ್ತಾನೆ, ಅವನ ಭಾಷೆ ಸರಳವಾಗುತ್ತದೆ. ವರ್ಣನೆಗಳಿಗಿಂತ ಪರಿಣಾಮಕ್ಕೆ ಅವನು ಹೆಚ್ಚು ಗಮನ ಹರಿಸುತ್ತಾನೆ. ಅವನ ಆದರ್ಶದ ಕಾವ್ಯದಲ್ಲಿ 'ನಾಣ್ನುಡಿ ದೇಸಿವೆತ್ತ ಪೊಸನುಡಿ' ಸೇರಿರುತ್ತದೆ. ದೇಸಿಯ ಮೂಲಕವಾಗಿಯೇ ಜನರನ್ನು ತಲುಪುವುದು ಸಾಧ್ಯವೆಂದು ಅವನ ಭಾವನೆ. ಮೊದಲ ಬಾರಿಗೆ ಸಂಸ್ಕೃತ ಪ್ರಾಚುರ್ಯದ ಬಗ್ಗೆ ನಯಸೇನನು ನೇರವಾಗಿ ಪ್ರತಿಭಟನೆ ಸಲ್ಲಿಸುತ್ತಾನೆ ; 'ಕನ್ನಡವನ್ನು ಕೂಡಲಾಱದೆ' 'ಮಿಸುಕದ ಸಕ್ಕದ'ವನ್ನಿಕ್ಕುವ ಕವಿಗಳ ಬಗ್ಗೆ ತಿರಸ್ಕಾರದಿಂದ ಮಾತನಾಡುತ್ತಾನೆ ; ಕನ್ನಡವನ್ನು ತುಪ್ಪಕ್ಕೂ, ಸಂಸ್ಕೃತವನ್ನು ಎಣ್ಣೆಗೂ ಹೋಲಿಸಿ ತನ್ನ ಆಕ್ರೋಶವನ್ನು ವ್ಯಕ್ತಪಡಿಸುತ್ತಾನೆ. ಕವಿಯೊಬ್ಬ ನೇರವಾಗಿ ತನ್ನ ಕಾವ್ಯದಲ್ಲಿ ಹೀಗೆ ಭಾಷಾಧೋರಣೆಯನ್ನು ಪ್ರಕಟಪಡಿಸಬೇಕಾದರೆ ಅವನ ಕಾಲದಲ್ಲಿನ ಜನಮನೋಭಾವದ ಮುಖ್ಯವಾಹಿನಿ ಇಂಥದೇ ಆಗಿದ್ದಿರಬೇಕು. ಅವನಾದ ಮೇಲೆ ಅನತಿ ಕಾಲದಲ್ಲಿ ಪ್ರಾರಂಭವಾದ ವಚನ ಚಳುವಳಿಯು ತಳೆದಿದ್ದ ಜನಪರ ಧೋರಣೆಯ ಬೀಜರೂಪವು ನಯಸೇನನ ಸಂಸ್ಕೃತ ಪ್ರಾಚುರ್ಯದ ವಿರುದ್ಧದ ಪ್ರತಿಭಟನೆಯಲ್ಲಿ ಸ್ಪಷ್ಟವಾಗಿ ವ್ಯಕ್ತವಾಗಿದೆ. ಜನರನ್ನು ಭಾಷಾ ಪ್ರೌಢಿಮೆಯಿಂದ ಡಂಗುಬಡಿಸಿ ವಂಚಿಸುವುದನ್ನು ಅಲ್ಲಗಳೆಯುವ ಮೂಲಕ ನಯಸೇನ ಮುಂದೆ ಕನ್ನಡ ಕಾವ್ಯವು ತಳೆಯಬೇಕಾದ ಭಾಷಾನೀತಿಯ ಬಗ್ಗೆ ಎಚ್ಚರಿಕೆ ನೀಡುತ್ತಾನೆ. ತನ್ನ ಬರವಣಿಗೆಯಲ್ಲಿ, ಶಿಷ್ಟಸಾಹಿತ್ಯದ ಬಿಗುಮಾನಗಳ ಇರುಕಿನ ಕಾರಣದಿಂದ ಅದು ಮಿತಿಗೊಂಡಿತಾದರೂ, ಜನಕ್ಕೆ ಹತ್ತಿರವಾಗಲು ಬಯಸುತ್ತಾನೆ. ಹಾಗಾಗಿ ಅವನ ರಚನೆ ಕನಿಷ್ಠ ಪಕ್ಷ ಭಾಷೆಯ ನೆಲೆಯಲ್ಲಿ ಪೆಡಸಾಗಲಿಲ್ಲ. ಜನರ ಮಿಡಿತಕ್ಕೆ ಅನುಗುಣವಾದ ಭಾಷಾಶೈಲಿಯನ್ನು ಅವನು ರೂಢಿಸಿಕೊಳ್ಳುತ್ತಾನೆ. ಆದರೆ ಅವನದು ಮಿತಪ್ರತಿಭೆ, ಉದ್ದೇಶವೂ ಪ್ರಜ್ಞಾಪೂರ್ವಕವಾದ ನೆಲೆಯದು, ಯಾದೃಚ್ಛಿಕವಾದದ್ದು, ಅವನ ಕಾವ್ಯ ಚೌಕಟ್ಟು ಸಂಘರ್ಷಕ್ಕೆ ಅವಕಾಶವಿಲ್ಲದ್ದು—ಹೀಗಾಗಿ 'ಧರ್ಮಾಮೃತ'ವು ಅನೇಕ ಮಿತಿಗಳಿಗೊಳಗಾಗಿ ಅದರ ಗುಣವೂ ಮಿತಿಗೊಂಡಿದೆ. ಆದರೆ ಅವನು ತನ್ನ ಬರಹವನ್ನು ಜನತೆಯ ಹತ್ತಿರ ತರಲು ಪ್ರಯತ್ನಿಸಿದ್ದು, ಕನ್ನಡದ ಪರವಾಗಿ ಎತ್ತರದ ಧ್ವನಿಯಲ್ಲಿ ಮಾತನಾಡಿದ್ದು ಜನಪರರಾದವರಿಗೆ ಆತ್ಮವಿಶ್ವಾಸವನ್ನುಂಟುಮಾಡಲು ಸಹಾಯಕವಾಗಿರಬೇಕು ಎಂದು ಊಹಿಸಬಹುದು.

ಜನ್ನನೂ ನಾಗಚಂದ್ರನಂತೆಯೇ ತನ್ನೆರಡೂ ಕಾವ್ಯಗಳಲ್ಲಿ ಜೈನಮತ ವಿಶಿಷ್ಟವಾದ ವಸ್ತುಗಳನ್ನೇ ನಿರೂಪಿಸುತ್ತಾನೆ. ಆದರೆ ಅವನದು ಗಣನೀಯ ಪ್ರಮಾಣದ ಪ್ರತಿಭೆಯಾದುದರಿಂದ 'ಅನಂತನಾಥ ಪುರಾಣ'ದ ವಸುಷೇಣ–ಸುನಂದೆಯರ ಪ್ರಸಂಗದಲ್ಲಿ ವರ್ಗ ವರ್ಣಮತಾತೀತವಾದ ವಸ್ತುವಿರುವುದರಿಂದ ಅದು ಎಲ್ಲರನ್ನು ಆಕರ್ಷಿಸುತ್ತದೆ. ಇನ್ನು, 'ಯಶೋಧರ ಚರಿತೆ', ಜನ್ನನದು ಎಂತಹ ರೂಪಾಂತರ ಪ್ರತಿಭೆಯೇ ಆಗಿರಲಿ, ಅವನಿಗೆ ಮೂಲನಾದ ವಾದಿರಾಜನಿಗೇ ಈ ಕಾವ್ಯದ ಬಹುಪಾಲು ಯಶಸ್ಸು ದೊರೆಯಬೇಕಾದದ್ದು ನ್ಯಾಯ. ಯಶೋಧರನ ಕಥೆಯನ್ನು ಸೋಮದೇವನ ಮಾರ್ಗವನ್ನನುಸರಿಸಿ ನಿರೂಪಿಸದೆ ವಾದಿರಾಜನು ಹೊಸಹಾದಿ ಹಿಡಿದನು ; ಅದನ್ನು ಜನ್ನನು ಅನುಸರಿಸಿದ. 'ಯಶೋಧರ ಚರಿತೆ'ಯು ಕಂದ ಪದ್ಯಗಳಿಂದಲೇ (ಒಂದೆರಡು ವೃತ್ತಗಳನ್ನು ಬಿಟ್ಟರೆ) ಕೂಡಿದ ಕಾವ್ಯ : ಗದ್ಯವೇ ಇಲ್ಲ. ಈ ಕಾವ್ಯವನ್ನು ಚಂಪೂ ಎನ್ನಲಾದೀತೇ ? ವಾದಿರಾಜನೂ ತನ್ನ ಇಡೀ ಕಾವ್ಯವನ್ನು ಶ್ಲೋಕ, ಸ್ವಾಗತ, ವಂಶಸ್ಥಗಳಿಂದ ರಚಿಸಿದ, ಗದ್ಯವನ್ನು ಬಳಸಲಿಲ್ಲ. ಚಿಕ್ಕ ಚಿಕ್ಕ ಛಂದೋರೂಪಗಳಾದ ಇವೆಲ್ಲಕ್ಕೂ ಪರ್ಯಾಯವಾಗಿ ಜನ್ನನು ಕಂದವನ್ನು ಬಳಸಿದ. ಹಾಗಾಗಿ ಈ ಕಾವ್ಯವು ಚಂಪೂ ಪರಂಪರೆಗೆ ಹೊಸ ತಿರುವನ್ನೇನೂ ನೀಡಿದಂತಾಗಲಿಲ್ಲ. ವಸುಷೇಣ ಪ್ರಸಂಗದಂತೆಯೇ ಧರ್ಮವಿರುದ್ಧ ಪ್ರಣಯವು ಜನ್ನನ ಮನಸ್ಸನ್ನು ಕೆಣಕಿದ್ದರಿಂದಾಗಿಯೂ, ಅಹಿಂಸೆಯ ವೈಶಿಷ್ಟ್ಯವನ್ನು ಪ್ರತಿಪಾದಿಸಲು ಸಹಾಯಕವಾಗಿದ್ದುದರಿಂದಲೂ ಅವನು ಈ ಕಾವ್ಯವನ್ನು ಅಳವಡಿಸಿಕೊಂಡಿರಬೇಕು. ವಸ್ತುವು ಸರ್ವತಃ ಜನರಿಗೆ ಹತ್ತಿರವಾದದ್ದರಿಂದಲೂ, ತನ್ನ ನಿರೂಪಣಾ ಕೌಶಲದಿಂದಲೂ ಜನಪ್ರಿಯನಾದ ಜನ್ನ.

ಆಂಡಯ್ಯನದೊಂದು ವೀರಮಾರ್ಗ. ಸಂಸ್ಕೃತದ ಶಬ್ದಗಳನ್ನು ಬಳಸದೆ ಕಾವ್ಯ ರಚಿಸುವ ಹಟ. ಆದರೆ ಅವನಲ್ಲಿ ವಿಚಿತ್ರ ದ್ವಂದ್ವಗಳನ್ನು ಕಾಣುತ್ತೇವೆ. ಅವನು ಬದುಕಿದ್ದದ್ದು ಹದಿಮೂರನೆಯ ಶತಮಾನದ ಪ್ರಾರಂಭದಲ್ಲಿ ; ಸರಿ ಸುಮಾರು ಹರಿಹರನ ಸಮಕಾಲೀನ. ಅವನ ಬೆನ್ನ ಹಿಂದೆ ಪಂಪಾದಿಗಳ ಚಂಪೂ ಪರಂಪರೆಯಿತ್ತು ; ಜೊತೆಗೆ ನೆನಪಲ್ಲಿ ಆಗಿನ್ನೂ ಹಸರಾಗಿದ್ದಿರಬಹುದಾದ ವಚನ ಚಳುವಳಿಯ ಗುಡುಗು–ಸಿಡಿಲುಗಳ ಅನುರಣನವಿತ್ತು. ಆದರೆ ಆಂಡಯ್ಯ (ತನ್ನ ಮತದ ಕಾರಣದಿಂದ ಇರಬಹುದೇ ?) ವೀರ ಕನ್ನಡವ್ರತವನ್ನು ತೊಟ್ಟರೂ ವಚನಕಾರರ ಸತ್ವಯುತವಾದ ಧೋರಣೆಯನ್ನು ಬಿಟ್ಟು ಘೋಷಣೆಯಲ್ಲಿ ತೊಡಗಿದ್ದರಿಂದಾಗಿ ತನ್ನ ಭಾಷೆಯನ್ನು ಕೃತಕಗೊಳಿಸಿದ. ಅವನ ನಾಡು–ನುಡಿಗಳ ಕ್ಷೇಮ ಶ್ಲಾಘ್ಯವಾದರೂ ಬೀದಿ ಚಳುವಳಿಯ ಮಾದರಿಯನ್ನು ಅವನು ಅನುಸರಿಸಿದ್ದರಿಂದಾಗಿ, ಹೆಚ್ಚೇನ್ನು ಸಾಧಿಸಲೂ ಇಲ್ಲ ; ಅವನನ್ನು ಬೇರಾರೂ ಅನುಸರಿಸಲು ಸಾಧ್ಯವಾಗದೆ ಒಂಟಿಯಾಗಿಯೂ ಉಳಿದ. ಅಲ್ಲದೆ ಮಡಿವಂತಿಕೆಯ ಕಾರಣದಿಂದಾಗಿ ಸಂಸ್ಕೃತದಿಂದ ಕೂಡಿದ್ದರೂ ಸಹಜವಾದ ಕನ್ನಡವು ಮಾಡುತ್ತಿದ್ದ ಸಂವಹನವನ್ನು ಅವನ ಭಾಷೆಯು ಮಾಡದೆ, ಅನೇಕ ವೇಳೆ ಗೊಂದಲವನ್ನೇ ಉಂಟು

ಮಾಡುವಂತಾಯಿತು. ಆದರೆ "ಅವನ ಕಟ್ಟಾ ಕನ್ನಡದ ಅಭಿಮಾನವು ಆ ಕಾಲದ ಅತಿರೇಕವಾದ ಸಂಸ್ಕೃತ ವ್ಯಾಮೋಹಕ್ಕೆ ಪ್ರತಿಭಟನೆಯಾಗಿ ಬಂದು ವಾಸ್ತವತೆ ಯೆಡೆಗೆ ಜನರ ಗಮನವನ್ನು ಸೆಳೆಯಲು ಸಹಾಯ ಮಾಡಿರಬಹುದು ; ಜೊತೆಗೆ ಮುಂದಿನ ಕವಿಗಳ ಭಾಷಾ ಧೋರಣೆಯ ಮೇಲೆ ಪ್ರಭಾವವನ್ನು ಬೀರಿರ ಬಹುದು."

ಹರಿಹರನು ತನ್ನ 'ಗಿರಿಜಾ ಕಲ್ಯಾಣ'ದಲ್ಲಿ ಚಂಪೂ ಕಾವ್ಯ ಪ್ರಕಾರಕ್ಕೆ ಅಗತ್ಯ ವಾಗಿದ್ದ ಹೊಸ ತಿರುವನ್ನೇನೋ ನೀಡಿದ ; ಆದರೆ ಅದನ್ನು ಮುಂದುವರೆಸಲು ಅವನ ಪ್ರತಿಭೆ ತಿರಸ್ಕರಿಸಿತು. ಸುಮಾರು ಎಂಬತ್ತು ಭಾಗದಷ್ಟು ಕಂದಪದ್ಯಗಳಿಂದ ಕೂಡಿದ ಈ ಕಾವ್ಯವು ವಿಶಿಷ್ಟವಾಗಿರುವುದು ಅದರ ಪ್ರಕಾರಕ್ಕಿಂತ ಮಿಗಿಲಾಗಿ ಅದರ ವಸ್ತು ವಿನ್ಯಾಸದಲ್ಲಿ. ಸರಳ ಭಕ್ತಿಗೆ, ಶರಣಾಗತಿತತ್ವಕ್ಕೆ ಬೆಲೆಯೀಯುವ ಕವಿಯು ಆ ಭಾವಕ್ಕೆ ಭಾಷಾಶೈಲಿಗಳನ್ನು ನೇರವಾಗಿಯೂ ಸರಳವಾಗಿಯೂ ಮಾಡಿಕೊಳ್ಳುವಲ್ಲಿ ಸಫಲನಾದ ನಿಜ, ಆದರೆ ಅದರಲ್ಲಿಯೂ ಕೊರತೆಯನ್ನನುಭವಿಸಿದ. ಬಸವಾದಿಗಳ ಧೋರಣೆ ಯನ್ನು ಅದರ ಸಮಷ್ಟಿರೂಪದಲ್ಲಿ ಆರಾಧಿಸುವ ಈ ಕವಿಯು ಪಂಜರದಲ್ಲಿಟ್ಟ ಸಿಂಹದ ಸ್ವಾತಂತ್ರ್ಯವನ್ನು ತಿರಸ್ಕರಿಸಿದ. ಕಾವ್ಯರಚನೆಗೆ ಅದುವರೆಗೂ ಇದ್ದ ಮಾರ್ಗವೆಂದರೆ ಚಂಪುವೇ, ವಚನಗಳು ಕಾವ್ಯವೆಂಬಂತೆ ರಚಿತವಾದವಲ್ಲ. ಹಾಗಾಗಿ ಹರಿಹರನು ಕಾವ್ಯ ರಚನೆಗೆ ಪ್ರಾರಂಭಿಸಿದಾಗ ಸಿಕ್ಕದ್ದು ಚಂಪೂ. ಎಳೆತನದಲ್ಲಿಯೇ ಅವನಲ್ಲಿ ಆಳವಾಗಿದ್ದ ಹೊಸದೃಷ್ಟಿಯಿಂದಾಗಿ ಹಳೆಯ ಪ್ರಕಾರವನ್ನು ತನ್ನ ಎತ್ತರಕ್ಕೆ ಬಗ್ಗಿಸಿಕೊಂಡ. ಆದರೆ ಕೊಂಬೆಯನ್ನು ಬಗ್ಗಿಸಿಕೊಳ್ಳಬಹುದೇ ಹೊರತು, ಮರವನ್ನಲ್ಲ ಎಂಬ ಅರಿವು ಅವನಿಗಾಗಿ ಬಹುಬೇಗ ಅದನ್ನು ಬಿಟ್ಟು, ರಗಳೆಗಳ ಕಡೆಗೆ ತಿರುಗಿದ. ದೀರ್ಘ ಕಥಾನಕ, ಘೋರ ವರ್ಣನೆಗಳ ಕಾಡುಮೃಗಗಳಿಂದ ಕೂಡಿದ ಚಂಪೂ ಅರಣ್ಯ ಅವನ ಪ್ರತಿಭಾ ವಿಶಿಷ್ಟತೆಗೆ ಬೇಡ ; ಅವನಿಗೆ ಅನುಗುಣವಾದದ್ದು ನೇರ-ಸರಳ ನಿರೂಪಣೆಯ ಭಕ್ತಿ ನಿರ್ಭರತೆ ಯೆಂಬ ಜಿಂಕೆಗಳಂತಹ ಮೃದು ಪ್ರಾಣಿಗಳೂ, ಕುಕಿಲುವ ವಿವಿಧ ಪಕ್ಷಿಗಳು. ಚಂಪೂ ವನ್ನಾರಿಸಿಕೊಂಡು ಸಂಪ್ರದಾಯಕ್ಕೂ ಕೊಂಚ ಜೋತುಬೀಳಬೇಕಾಗಿ ಬಂದ ಹರಿಹರನು, ಅದನ್ನು ಬಿಟ್ಟದ್ದು ಅವನ ಮನೋಭಾವಕ್ಕೆ ತಕ್ಕುದಾಗಿತ್ತು, ಅನಿವಾರ್ಯ ವಾಗಿತ್ತು.

ಮುಂದೆ ಚಂಪೂ ಷಡಕ್ಷರದೇವ, ತಿರುಮಲಾರ್ಯ, ಚಿಕುಪಾಧ್ಯಾಯರಂತಹವರ ಕೈಯಲ್ಲಿ ಸಿಕ್ಕಿತು. ಷಡಕ್ಷರದೇವನು ಹರಿಹರನಾದ ಮೇಲೆ ನಾನ್ನೂರು ವರ್ಷಗಳಿಗೂ ಹೆಚ್ಚು ಈಚೆಗೆ ಬಂದ ಕವಿಯಾದರೂ ಅವನ ಕಾವ್ಯಗಳು ಹರಿಹರನ ರಚನೆಗಿಂತ ಪೆಡಸಾಗಿವೆ ಎಂಬುದೇ ಅವನ ಕಾವ್ಯಸ್ವರೂಪವನ್ನು ವಿವರಿಸುತ್ತವೆ. ರಾಜಶೇಖರ ವಿಳಾಸವಂತೂ ಪ್ರಕಾರ ಪಳಯುಳಿಕೆಯಂತೆ ಇರುವ ಕಾವ್ಯ. ಯುಗಧರ್ಮಕ್ಕೂ ಕಾವ್ಯ ರಚನೆಗೂ ಸಂಬಂಧವಿಲ್ಲದೆ, ಜನರನ್ನು ಕಡೆಗಣಿಸಿ ಬರೆದರೆ ಇಂತಹ ಕಾವ್ಯಗಳೇ

ಬರುವುದು. ಈ ಕಾವ್ಯ ಈಚಿನವರೆಗೆ ವ್ಯಕ್ತಿಯೊಬ್ಬನ ಭಾಷಾವೈದುಷ್ಯವನ್ನು ಪರೀಕ್ಷಿಸಲು ಒಂದು ಸಾಧನವಾಗಿತ್ತು. ಈ ಸ್ಥಿತಿಯು ದಿನಚರಿಯ ಜೀವಂತಿಕೆಯನ್ನು ಮರೆಯದೆ, ಪರೀಕ್ಷಾಕಾಲದ ಬಿಗಿವಿನಿಂದ ಕೂಡಿದಂತಹ ಕಾವ್ಯರೀತಿಗೆ ಪ್ರತಿಮೆಯಾಗಿದೆ. ವಸ್ತುವಿಗೂ ಶೈಲಿಗೂ ಅಜಗಜಾಂತರವೆನ್ನಿಸುವ ರಚನೆ ಅವರದ್ದು. ಹೋಗಲಿ, 'ಬಸವರಾಜ ವಿಜಯ'? ಪಾಲ್ಕುರಿಕೆ ಸೋಮನಾಥ–ಭೀಮಕವಿಗಳನ್ನು ಇವನು ಕಾವ್ಯಾರಂಭದಲ್ಲಿ ಭಕ್ತಿಯಿಂದ ನೆನೆದು, ಅವರ ಪರಂಪರೆಯಲ್ಲಿ ತಾನು ಕಾವ್ಯರಚನೆ ಮಾಡುವುದಾಗಿ ಹೇಳಿಕೊಂಡರೂ ಅವನ ಕಾವ್ಯದೃಷ್ಟಿಯು ಅವರದಕ್ಕೆ ವಿರುದ್ಧವಾದದ್ದು. ವರ್ಣಕಕ್ಕೆ ಹಾಗೂ ಜನಪರತೆಗೆ ಅವರು ಮಾನ್ಯತೆಯಿತ್ತರೆ ಷಡಕ್ಷರದೇವ ಪಾಂಡಿತ್ಯಕ್ಕೇ ಮಾನ್ಯತೆ ನೀಡುವವನು. ತನ್ನ ಕಾವ್ಯದ ವಸ್ತುವಾದ ಬಸವಣ್ಣನ ವ್ಯಕ್ತಿತ್ವದ ಸರಳತೆಯಾಗಲೀ, ಅವನ ವಚನಗಳ ಆರ್ದ್ರತೆಯಾಗಲೀ ಈ ಕಾವ್ಯದಲ್ಲಿ ಕಾಣದು. ಬಸವಣ್ಣನ ವ್ಯಕ್ತಿತ್ವ–ಆದರ್ಶಗಳು ಐನೂರು ವರ್ಷಗಳಲ್ಲಿ ಜನರಲ್ಲಿ ನೆಲೆನಿಂತ ರೀತಿಯನ್ನೇ ಇದು ಧ್ವನಿಸುತ್ತದೆ. 'ಇವ ನಮ್ಮವ, ಇವ ನಮ್ಮವ'ನೆಂದೆನಿಸಿಕೊಂಡಿದ್ದ ಹನ್ನೆರಡನೇ ಶತಮಾನದ ಬಸವಣ್ಣ ಇಲ್ಲಿ ಪುರಾಣ ಪುರುಷನಾಗಿದ್ದಾನೆ, 'ಇವನಾರವ' ಎನ್ನಿಸಿಬಿಟ್ಟಿದ್ದಾನೆ. ಅವನ ಕೈಯಲ್ಲಿ ಕನ್ನಡವು ಶಿವ–ಜೀವರನ್ನು ಬೆಸೆದಿದ್ದುದು, ಷಡಕ್ಷರನ ಕೈಯಲ್ಲಿ ಬಿದಿರುಮೆಳೆಯನ್ನು ಸೇರಿಬಿಟ್ಟಿದೆ. ಭೀಮಕವಿಯದಕ್ಕಿಂತ ಇವನ ಭಾಷೆ–ಶೈಲಿಗಳು ಕಠಿಣವಾಗಿರುವುದರಿಂದ ಬಸವಣ್ಣನನ್ನು ಕಾಣಲು ಹೋಗುವವರು ಸಹಜವಾಗಿಯೇ ಷಡಕ್ಷರನನ್ನು ಬಿಟ್ಟು ಭೀಮಕವಿಯ ಬಳಿಗೇ ಹೋಗಬೇಕು.

ತಿರುಮಲಾರ್ಯ, ಚಿಕುಪಾಧ್ಯಾಯರೂ ಇದಕ್ಕಿಂತ ಜನದೂರರಾದ್ದರಿಂದ ಸುಲಿದ ಬಾಳೆಯ ಹಣ್ಣಿನಂತಹ ಕನ್ನಡವನ್ನು ಮತ್ತೆ ಕಪ್ಪೆಯ ಚಿಪ್ಪಿನಲ್ಲಿಟ್ಟಂತೆ ಇವರು ಮಾಡಿದ್ದಾರೆ. ಪಂಪ ಚಂಪೂವನ್ನು ತನ್ನ ಕಾವ್ಯಾಭಿವ್ಯಕ್ತಿಗೆ ಆರಿಸಿಕೊಂಡು, ಅದರಲ್ಲಿ ದೇಸಿಯ ಹೂರಣವನ್ನು ತುಂಬಿದ ಮನೋಭಾವಕ್ಕೂ ಇವರ ಮನೋಭಾವಕ್ಕೂ ಇರುವ ವ್ಯತ್ಯಾಸ ಎರಡು ಧ್ರುವಗಳ ನಡುವಣದ್ದು. ಚಂಪೂ ಹರಿಹರನ ನಂತರ ಈ ಗತಿ ಕಂಡರೂ, ನಮ್ಮ ಪುಣ್ಯವಶಾತ್ ಕನ್ನಡ ಕಾವ್ಯವು ಕಾಲಕಾಲಕ್ಕೆ ಜನರ ನಾಡಿಮಿಡಿತಕ್ಕೆ ಅನುಗುಣವಾಗಿ ಸ್ಪಂದಿಸುತ್ತ, ವಸ್ತು–ಧೋರಣೆ–ಶೈಲಿ–ಭಾಷೆಗಳ ನೆಲೆಯಲ್ಲಿ ಮಾರ್ಪಡುತ್ತ ಜನರಿಗಾಗಿ ಸೃಷ್ಟಿಗೊಂಡಿತು, ಅದು ಬೇರೆಯ ಕತೆ ; ಸುಂದರವಾದ ಕತೆ.

ಸಂಸ್ಕೃತದ ದಟ್ಟ ಪ್ರಭಾವದ ನಡುವೆ ಕನ್ನಡದ ಬರಹ ಕಲ್ಲುಗಳ ಮೇಲೆ ಮೂಡಿ, ಕ್ವಚಿತ್ತಾಗಿದ್ದದ್ದು ಹೇರಳವಾಗುತ್ತ, ಓಲೆಗರಿಗಳ ಮೇಲೆ ಮೆರೆವ ಬಗೆಯು ಒಟ್ಟಾರೆ ಕನ್ನಡ ಜನಪದವು ತನ್ನತನವನ್ನೇ ಅಭಿವ್ಯಕ್ತಿಗೊಳಿಸಿಕೊಂಡ ಬಗೆ. ಪಂಪನ ಹೊತ್ತಿಗೆ ಕನ್ನಡತನವನ್ನು ಮೆರೆದ ರೀತಿ ಎಂದರೆ ಅವನ ಕಾವ್ಯಗಳಲ್ಲಿ ದೇಸಿಯು ಕಾಣಿಸಿಕೊಂಡ ರೀತಿಯೇ ಆಗಿದೆ. ಕಚ್ಚಾವಸ್ತು ಬೇರೆಡೆಯಿಂದ ಬಂದಿರಬಹುದು, ಆದರೆ ಅದನ್ನು

ಸಿದ್ಧವಸ್ತುವನ್ನಾಗಿ ಮಾಡುವುದರಲ್ಲಿಯೇ ಕೌಶಲ ಅಡಗಿರುವುದು, ಉಪಯುಕ್ತತೆ ಕಾಣುವುದು. ಈ ಜನಪರತೆ-ಜನಹಿತಗಳೆಂದರೆ ಜನಪದಕ್ಕೆ ಸಮಾಂತರವಾಗಿ ಕಾವ್ಯ ರಚನೆ ಮಾಡುವುದು. ಹಾಗಾಗಿ ಪಂಪ ಕನ್ನಡ ಕಾವ್ಯದಲ್ಲಿ ಕನ್ನಡತನವನ್ನು ತುಂಬಿದ ನಾಡೋಜ, ಅವನ ಮಾರ್ಗವನ್ನು ಅನುಸರಿಸಿ ಮುಂದಿನ ನಮ್ಮ ಶ್ರೇಷ್ಠ ಕವಿಗಳು ನಮ್ಮತನವನ್ನು ಜನಹೃದಯ ಸ್ಪಂದನಕ್ಕೆ ಅನುಗುಣವಾಗಿ ತಮ್ಮ ಕಾವ್ಯಗಳಲ್ಲಿ ತುಂಬಿದ್ದಾರೆ. ಹೀಗಾಗಿ ಚಂಪೂವಿನ ಉಗಮ ಎಲ್ಲೇ ಆಗಿರಲಿ, ಕನ್ನಡ ಚಂಪೂ ಕನ್ನಡ ಚಂಪೂವೇ ವಿನಾ ಬೇರೆಯಲ್ಲ. ಈಮಾತನ್ನು ಇಡೀ ಕನ್ನಡ ಸಾಹಿತ್ಯ ಪರಂಪರೆಗೇ ಅನ್ವಯಿಸಬಹುದು.



# ಓದುಗ ; ಕೃತಿ – ಧ್ವನಿ ; ಮೌನ : ಕೆಲವು ಟಿಪ್ಪಣಿಗಳು

ಬಿ. ಎಸ್. ರಾಮಪ್ರಸಾದ್

ಭಾರತೀಯ ಕಾವ್ಯ ಮೀಮಾಂಸೆಯ ಧ್ವನಿ ಪ್ರಸ್ಥಾನದಲ್ಲಿ ಮಂಡಿಸಲಾಗಿರುವ ಚಿಂತನೆಗಳು : ಮತ್ತು ತತ್ವಜ್ಞಾನಿ, ಕಾದಂಬರಿಕಾರ, ನಾಟಕಕಾರ, ರಾಜಕೀಯ ಪತ್ರಕರ್ತ ಈ ಎಲ್ಲವೂ ಆಗಿದ್ದ ಜೀನ್‌ಪಾಲ್ ಸಾರ್‌ತ್ರೆಯ 'ಬರವಣಿಗೆ ಏಕೆ ?' ಲೇಖನದಲ್ಲಿ ವ್ಯಕ್ತವಾಗಿರುವ ವಿಚಾರಗಳಲ್ಲಿ ಕಾಣಿಸುವ ಕೆಲವು ಸಮಾನ ಅಂಶಗಳು ಹಾಗೂ ವ್ಯತ್ಯಾಸಗಳನ್ನು ಈ ಟಿಪ್ಪಣಿಗಳಲ್ಲಿ ಗುರುತಿಸಲಾಗಿದೆ.

ಭಾರತೀಯ ಕಾವ್ಯ ಮೀಮಾಂಸೆಯಲ್ಲಿ ಹಾಗೂ ಪಾಶ್ಚಾತ್ಯ ಕಾವ್ಯ ಮೀಮಾಂಸೆಯಲ್ಲಿ ಓದುಗ–ಕೃತಿ ಸಂಬಂಧವು, ಹಲವು ಕುತೂಹಲಕಾರಿ ವಿಚಾರಗಳ ಜನನಿಯಾಗಿದೆ. ಭಾರತೀಯ ಕಾವ್ಯ ಮೀಮಾಂಸೆಯ ಧ್ವನಿ ಪ್ರಸ್ಥಾನದಲ್ಲಿ ಕವಿ–ಕೃತಿ–ಸಹೃದಯ ತ್ರಿಕೋನ ಸಂಬಂಧದ ಬಗೆಗೆ ಸಾಕಷ್ಟು ಚಿಂತನೆ ನಡೆದಿದೆ. ಖಚಿತವಾದ ನಿಲವುಗಳು ಮೂಡಿ ಬಂದಿವೆ. ಈ ನಿಲುವುಗಳನ್ನು ಕೆಳಗಿನ ಮಾತುಗಳಲ್ಲಿ ಸಂಗ್ರಹಿಸಲಾಗಿದೆ.*

ಧ್ವನಿವಾದಿಗಳ ಅಭಿಪ್ರಾಯದಲ್ಲಿ ಕಾವ್ಯಾರ್ಥದ ಪರಿಕಲ್ಪನೆಯು ವ್ಯಾಪಕವಾದುದಾಗಿದೆ, ಸಹೃದಯನು ಗ್ರಹಿಸುವ ಅರ್ಥವೆಲ್ಲವೂ ಧ್ವನ್ಯರ್ಥವೂ ಸೇರಿದಂತೆ–ಕೃತಿಯಲ್ಲಿಯೇ ನಿಕ್ಷಿಪ್ತವಾಗಿರುತ್ತದೆ. ಹೀಗೆ ನಿಕ್ಷಿಪ್ತವಾಗಿರುವ ಅರ್ಥವನ್ನು ಸರಿಯಾಗಿ ಗ್ರಹಿಸಿಕೊಳ್ಳುವುದಷ್ಟೇ ಸಹೃದಯನ ಕಾರ್ಯ. "ಯೇಷಾಂ ಕಾವ್ಯಾನುಶೀಲನವಶಾತ್

---

*ಸಾರ್‌ತ್ರೆಯ 'ಸಾಹಿತ್ಯವೆಂದರೇನು' ಕೃತಿಯ ಎರಡನೆಯ ಅಧ್ಯಾಯವಾಗಿ ಪ್ರಕಟವಾಗಿರುವ 'ಬರವಣಿಗೆ ಏಕೆ ?' ಒಂದು ಸ್ವತಂತ್ರ ಲೇಖನವೂ ಆಗಿದೆ. ಡೇವಿಡ್‌ಲಾಜ್ ಅವರು ಸಂಪಾದಿಸಿರುವ "ಟ್ವೆಂಟಿಯೆತ್ ಸೆಂಚುರಿ ಲಿಟರರಿ ಕ್ರಿಟಿಸಿಸ್ಮ್–ಎ ರೀಡರ್" ಸಂಗ್ರಹದಲ್ಲಿಯೂ ಪ್ರಸಕ್ತ ಲೇಖನ ಪ್ರಕಟವಾಗಿದೆ. ಈ ಟಿಪ್ಪಣಿಗಳಲ್ಲಿ ಹೋಲಿಕೆಗಾಗಿ ಗ್ರಹಿಸಿರುವ ಮುಖ್ಯ ಅಂಶಗಳನ್ನು ಈ ಆಕರದಿಂದ ಸ್ವೀಕರಿಸಲಾಗಿದೆ. ಫ್ರೆಂಚ್ ಲೇಖನದ ಇಂಗ್ಲಿಷ್ ಅನುವಾದ ಬರ್ನಾರ್ಡ್ ಫ್ರೆಚ್ ಮ್ಯಾನ್ ಅವರದು.

ವಿಶದೀಭೂತೇ ಮನೋಮುಕುರೇ ವರ್ಣನೀಯ ತನ್ಮಯೀಭವನ ಯೋಗ್ಯತಾ ತೇ ಹೃದಯ ಸಂವಾದ ಭಾಜಃ ಸಹೃದಯಾ" (ತೀ.ನಂ.ಶ್ರೀ. 1968. ಪು. 221) ಎಂಬ ಸುಪ್ರಸಿದ್ಧವಾದ ಸೂತ್ರವು ಈ ವಿಚಾರವನ್ನು ಖಚಿತಪಡಿಸುತ್ತದೆ. ಕಾವ್ಯ ಕೃತಿಯೇ ಬಿಂಬ ; ಸಹೃದಯನ ಮನಸ್ಸಿನ ಕನ್ನಡಿಯಲ್ಲಿ ಮೂಡುವುದು ಪ್ರತಿಬಿಂಬ ಮಾತ್ರ. ಈ ವಿಚಾರವನ್ನೆ 'ಕಾರಯಿತ್ರೀ' ಪ್ರತಿಭೆ ಮತ್ತು 'ಭಾವಯಿತ್ರೀ' ಪ್ರತಿಭೆ ಎಂಬ ಪಾರಿಭಾಷಿಕ ಪದಗಳು ಪುನಃ ಸ್ಪಷ್ಟಪಡಿಸುತ್ತವೆ.*

ಧ್ವನ್ಯರ್ಥದ ನೆಲೆ ಯಾವುದು ಎಂಬುದನ್ನು ಸ್ವಲ್ಪವೂ ಅನುಮಾನಕ್ಕೆ ಆಸ್ಪದ ವಿಲ್ಲದಂತೆ ಧ್ವನ್ಯಾಲೋಕದ ಈ ಕಾರಿಕೆಯು ಸ್ಪಷ್ಟಪಡಿಸುತ್ತಿದೆ.

ಪ್ರತೀಯಮಾನಂ ಪುನರನ್ಯದೇವ
ವಸ್ತ್ವಸ್ತಿ ವಾಣೀಷು ಮಹಾಕವೀನಾಂ ।
ಯತ್ ತತ್ ಪ್ರಸಿದ್ಧಾವಯವಾತಿರಿಕ್ತಂ
ವಿಭಾತಿ ಲಾವಣ್ಯಮಿವಾಂಗನಾಸು ॥

"ಮಹಾಕವಿಗಳ ವಾಣಿಯಲ್ಲಿ (ವಾಚ್ಯಾರ್ಥಕ್ಕಿಂತ) ಬೇರೆಯಾಗಿಯೇ 'ಪ್ರತೀಯ ಮಾನ'ವಾಗುವ (= ಅರಿವಿಗೆ ಬರುವ) ಅರ್ಥವೊಂದು ಇದ್ದೇ ಇರುತ್ತದೆ ; ಲಲನೆ ಯರಲ್ಲಿ ಸ್ಫುಟವಾದ ಅವಯವಗಳಿಗಿಂತ ಬೇರೆಯಾಗಿರುವ ಲಾವಣ್ಯದಂತೆ ಅದು ಹೊಳೆ ಯುತ್ತದೆ." ಲಾವಣ್ಯವನ್ನು ಅಳೆಯಲು ಮಾನದಂಡಗಳಿಲ್ಲ ; ಅದನ್ನು ವಿವರಿಸುವುದೂ ಕಷ್ಟ ; ಅರಿವಿಗೆ ಮಾತ್ರ ಅದು ಗೋಚರವಾಗುವಂತಹುದು. ಆದರೆ ಲಾವಣ್ಯದ ನೆಲೆ ಎಲ್ಲಿ ಎನ್ನುವುದು ಸ್ಪಷ್ಟವಾಗಿ ಉಕ್ತವಾಗಿದೆ. ಹಾಗೆಯೇ ಧ್ವನ್ಯರ್ಥದ ನೆಲೆ ಕೂಡ ಮಹಾಕವಿಗಳ ವಾಣಿ ಎಂಬುದು ಸ್ಪಷ್ಟವಾಗಿದೆ. ಎಂದರೆ ಮಹಾಕವಿಗಳ ವಾಣಿಯಾದ ಕಾವ್ಯಕೃತಿಯ ಪರಮಾಧಿಕಾರವು ಉಲ್ಲಂಘಿಸಲಾಗದಂತಹುದೂ, ಅನನ್ಯವಾದುದೂ ಆಗಿದೆ. ಕವಿಯ ಸ್ಥಾನಮಾನಗಳು ಪ್ರಶ್ನಾತೀತವಾದುವು. ಕಾವ್ಯಪ್ರಪಂಚದಲ್ಲಿ

---

*"ಪ್ರತಿಭೆ ಉಕ್ಕಲು ರಸಾವೇಶ ಆವಶ್ಯಕ ; ಆದರೆ ರಸಿಕರೆಲ್ಲರೂ ಕವಿಗಳಾಗಿಲ್ಲ. ಕಾವ್ಯ ನಿರ್ಮಾಣಕ್ಕೆ ಅವಶ್ಯವಾದ ರಚನಾತ್ಮಕ ಪ್ರತಿಭೆಗೆ ಕಾರಯಿತ್ರೀ ಎಂಬ ಹೆಸರನ್ನು ರಾಜಶೇಖರನು ಕೊಡುತ್ತಾನೆ. ಇದು ಇರುವುದು ಕೆಲವರಲ್ಲಿ ಮಾತ್ರ"—[ತೀ.ನಂ.ಶ್ರೀ.-ಪೂರ್ವೋಕ್ತ ಪು. 176]

"ಕವಿಯ ಪ್ರತಿಭೆಗಿಂತ ಸಹೃದಯನ ಪ್ರತಿಭೆ ಕೆಳಮಟ್ಟದೆಂಬುದು ನಿಜ. ಏಕೆಂದರೆ ಕವಿಯದು ಸೃಷ್ಟಿಕಾರ್ಯವಾದರೆ ಇವನದು ಅನುಸೃಷ್ಟಿ ಮಾತ್ರ. ಆದರೆ ಇವೆರಡೂ ಪ್ರತಿಭೆಗಳ ಸಹಕಾರವಿಲ್ಲದೆ ಕಾವ್ಯ ಪೂರ್ಣವಾಗಲಾರದು. ಸಹೃದಯನಿಗೆ ಅಗತ್ಯವಾದ ಪ್ರತಿಭೆಗೆ ರಾಜಶೇಖರನು 'ಭಾವಯಿತ್ರೀ' ಎಂದು ಹೆಸರು ಕೊಡುತ್ತಾನೆ"— (ಪೂರ್ವೋಕ್ತ ಪು. 224)

ಸಹೃದಯನದು ಕವಿಯ ನಂತರದ ಸ್ಥಾನ. ಮೂರ್ತ ಚಿತ್ರವೊಂದನ್ನು ವಿಚಾರದ ಸ್ಪಷ್ಟೀಕರಣಕ್ಕಾಗಿ ನೀಡುವುದಾದರೆ, ಕವಿ ಸದಾ ಕಾಲವೂ ಮುಂದೆ. ಸಹೃದಯನೂ ಅವನ ಜೊತೆಯಲ್ಲಿಯೇ, ಆದರೆ ಒಂದು ಹೆಜ್ಜೆ ಹಿಂದೆ. ಭಾವನೆಗಳು ಸ್ಫುರಿಸದೆ ಕಾವ್ಯ ಸೃಷ್ಟಿ ಸಾಧ್ಯವಿಲ್ಲವಾದುದರಿಂದ ಕವಿಯ 'ಕಾರಯಿತ್ರೀ' ಪ್ರತಿಭೆಯು ಮೇಲ್ಮಟ್ಟದ್ದಾಗಿದೆ. 'ಭಾವಯಿತ್ರೀ' ಪ್ರತಿಭೆಯ ಅಂಶಗಳೆಲ್ಲವನ್ನೂ ಇದು ಒಳಗೊಳ್ಳುವಂತಹುದೇ ಆಗಿದೆ. ಆದರೆ 'ಭಾವಯಿತ್ರೀ' ಪ್ರತಿಭೆಯಲ್ಲಿ 'ಕಾರಯಿತ್ರೀ' ಪ್ರತಿಭೆಯಲ್ಲಿರುವ ಸೃಜನಾತ್ಮಕ ಶಕ್ತಿ ಇರುವುದಿಲ್ಲ. ಇಲ್ಲಿನ ಸೃಜನಶೀಲತೆಯು ಕೊಂಚ ಕಡಿಮೆ ಮಟ್ಟದ್ದು ಎನ್ನಬಹುದು.

ತತ್ವಜ್ಞಾನ ಮತ್ತು ಕಾವ್ಯಮೀಮಾಂಸೆ ; ಈ ಜ್ಞಾನ ಶಿಸ್ತುಗಳ ಸಂಬಂಧವು ಅನೂಚಾನವಾಗಿ ಬೆಳೆದು ಬಂದಿದೆ. ಭಾರತೀಯ ಕಾವ್ಯ ಮೀಮಾಂಸೆಯಲ್ಲಿ ಮೇಲೆ ವಿವರಿಸಲಾಗಿರುವ ಚಿಂತನೆಗಳು ಮೂಡಿಬಂದದ್ದು ರಸ–ಧ್ವನಿವಾದಿಗಳು ಕಾವ್ಯದ ಆತ್ಮ ಯಾವುದು ? ಎಂಬ ಅನ್ವೇಷಣೆಯಲ್ಲಿ ತೊಡಗಿದಾಗ. ಕಾವ್ಯದ ಆತ್ಮ ಎಂಬ ಪರಿಕಲ್ಪನೆಯೇ ಉಪನಿಷತ್ತುಗಳ ಆತ್ಮ ಸಿದ್ಧಾಂತಕ್ಕೆ ಋಣಿಯಾಗಿದೆ.*

"(ಭಾರತೀಯ ತತ್ತ್ವ ಶಾಸ್ತ್ರದಲ್ಲಿ) ಜಗತ್ತಿನ ವೈವಿಧ್ಯತೆಗೆ ಆಧಾರವಾಗಿರ ಬಹುದಾದಐಕ್ಯತೆಯ ತತ್ತ್ವಕ್ಕಾಗಿ ಶೋಧ ಮೊದಲಾಯಿತು...................... ಅಂತಿಮವಾಗಿ ಉಪನಿಷತ್ತುಗಳ 'ಆತ್ಮ' ಸಿದ್ಧಾಂತದಲ್ಲಿ ಸ್ಥಿರವಾದ ತೀರ್ಮಾನ ವೊಂದನ್ನು ತಲುಪಲಾಯಿತು. ಈ ಸಿದ್ಧಾಂತದ ಪ್ರಧಾನ ಅಂಶವೆಂದರೆ, ಏನಿದೆಯೋ ಅದು, ಒಂದೇ ; ಇದರ ಸತ್ವವು ಬಾಹ್ಯ ಜಗತ್ತಿಗಿಂತಲೂ ಮಾನವನ ಒಳ ವ್ಯಕ್ತಿತ್ವದಲ್ಲಿ ಸ್ಪಷ್ಟವಾಗಿ ತೋರುತ್ತದೆ. [ಎಂಬುದಾಗಿದೆ]" (ಹಿರಿಯಣ್ಣ—ಎಂ. 1954 ಪು. 2–3)

ರಸ-ಧ್ವನಿ ಸಿದ್ಧಾಂತಕ್ಕೂ, ಆತ್ಮ ಸಿದ್ಧಾಂತಕ್ಕೂ ಸಂಬಂಧವಿರುವಂತೆಯೇ, ಕೃತಿ ; ಓದುಗ ಮತ್ತು ಕೃತಿಯ ತಿರುಳಿನ ಸ್ವರೂಪವನ್ನು ಕುರಿತ ಸಾರ್ತ್ರೆಯ ವಿಚಾರಗಳಿಗೆ 'ವಿದ್ಯಮಾನವಾದ'ದ ಹಿನ್ನೆಲೆ ಇದೆ. "ಈ ದಾರ್ಶನಿಕ ಚಿಂತನೆಯ ಪ್ರಕಾರ ನಮ್ಮ ಪ್ರಜ್ಞೆ 'ಯಾವುದೋ ಒಂದರ' ಪ್ರಜ್ಞೆಯಾಗಿರುತ್ತದೆ. ನಮಗೆ 'ಸತ್ಯ'ವಾಗುವುದು ನಮ್ಮ ಪ್ರಜ್ಞೆಯಲ್ಲಿ ಮೂಡಿಬರುವುದು ಮಾತ್ರ ; ಮತ್ತು ನಮ್ಮ ಪ್ರಜ್ಞೆಯಲ್ಲಿ ಮೂಡಿ ಬರುವ ವಸ್ತು ಅಥವಾ ವಿಷಯಗಳಲ್ಲಿ ನಾವು ಅವುಗಳ ಸಾರವನ್ನು ಅಥವಾ ಸಾರ್ವತ್ರಿ

---

*A quest began thereafter whose aim was to discover the unity underlying the diversity of the world. A conclusion was reached in the 'Atman' doctrine of the upanishads. The central point of this doctrine is that whatever is, is one ; and that its essence is manifested more clearly in the inner-self of man than in the outer world"

ಕತೆಯನ್ನು ಗ್ರಹಿಸುತ್ತೇವೆ. ಈ ಚಿಂತನೆಯ ಪ್ರಕಾರ 'ಅರ್ಥ'ದ ಉಗಮ ಮತ್ತು ಕೇಂದ್ರ ಇವೆರಡೂ ವ್ಯಕ್ತಿಯ ಚಿತ್ತವೆ". (ರಾಮಚಂದ್ರನ್ ಸಿ. ಎನ್. 1989 ಪುಟ 127, 128) ಸಾರ್ತ್ರೆಯು ತನ್ನ ವಿಚಾರಗಳಲ್ಲಿ ಕಾವ್ಯ ಕೃತಿಗಳನ್ನು ಗದ್ಯ ಸಾಹಿತ್ಯ ಕೃತಿಗಳಿಂದ ಬೇರ್ಪಡಿಸಿಯೇ ನೋಡುತ್ತಾನೆ. ಕಾವ್ಯವನ್ನು ಚಿತ್ರಕಲೆ, ಸಂಗೀತ ಈ ಕಲಾ ಪ್ರಕಾರಗಳೊಂದಿಗೆ ಪರಿಗಣಿಸಿ ಪ್ರಸ್ತುತ ಲೇಖನದಲ್ಲಿ ತನ್ನ ವಿಚಾರಗಳನ್ನೂ ತೀರ್ಮಾನಗಳನ್ನೂ ಗದ್ಯ ಕೃತಿಗಳಿಗೆ ಮಾತ್ರ ಸೀಮಿತಗೊಳಿಸಿದ್ದಾನೆ.

ಓದುವುದೆಂದರೆ ಗ್ರಹಿಕೆ ಮತ್ತು ಸೃಜಿಸುವಿಕೆಗಳ ಒಂದು ಸಂಯೋಜನೆ ಎನ್ನುತ್ತಾನೆ ಸಾರ್ತ್ರೆ. ಓದುಗ ಮತ್ತು ಕೃತಿಗಳ (ಜ್ಞಾತೃ ಮತ್ತು ಜ್ಞೇಯ) ಅವಶ್ಯಕತೆಯು ಇಲ್ಲಿ ಗೃಹೀತವಾದುದಾಗಿದೆ. ಕೃತಿಯು ಆವಶ್ಯಕ ; ಏಕೆಂದರೆ ಅದು ಅತಿಶಯವಾದುದಾಗಿದೆ, ತನ್ನದೇ ಆದ ರಾಚನಿಕ ಸ್ವರೂಪವೊಂದನ್ನು ವಿಧಾಯಕವಾಗಿಸುವಂತಹುದಾಗಿದೆ. ನಿರೀಕ್ಷಿಸಿ, ಲಕ್ಷ್ಯಕ್ಕೆ ತೆಗೆದುಕೊಳ್ಳಬೇಕಾದುದಾಗಿದೆ. ಆದರೆ ಓದುಗನೂ ಅಗತ್ಯ. ಏಕೆಂದರೆ ಓದುಗನಿಲ್ಲದೆ ಕೃತಿಯು ತೆರೆದುಕೊಳ್ಳುವುದಿಲ್ಲ. ಕೃತಿಯು ಅಸ್ತಿತ್ವಕ್ಕೆ ಬರುವುದು ಎಂದರೆ ಉತ್ಪಾದಿತವಾಗುವುದು ಓದುಗನಿಂದ. ಒಂದು ಮಾತಿನಲ್ಲಿಯೇ ಹೇಳುವುದಾದರೆ ಓದುಗನಲ್ಲಿ (ಕೃತಿಯ ಸತ್ವವನ್ನು) ಬಯಲಾಗಿಸುತ್ತಲೆ ಸೃಜಿಸುವ, ಸೃಜಿಸುತ್ತಲೇ ಬಯಲಾಗಿಸುವ ಎಚ್ಚರ ತುಂಬಿರುತ್ತದೆ. [ಡೇವಿಡ್ ಲಾಜ್ (ಸಂ.) ಲಂಡನ್—1990 ಪು. 373–374]

ರಸ-ಧ್ವನಿವಾದಿಗಳಾಗಲಿ, ಸಾರ್ತ್ರೆ ಅಥವಾ ಇತರ ವಿದ್ಯಮಾನವಾದಿಗಳಾಗಲಿ ಓದುಗನಲ್ಲಿ ಆಸಕ್ತಿವಹಿಸಿದ್ದಾರೆ. ಓದುಗನಿಗಾಗುವ ಅನುಭವದ ಮೂಲಕ ಸಾಹಿತ್ಯದ ಸ್ವರೂಪವನ್ನು ಅರಿತು ವಿವರಿಸಲು ಪ್ರಯತ್ನಿಸುತ್ತಾರೆ. ಇದು ಮುಖ್ಯವಾದ ಒಂದು ಸಮಾನ ಅಂಶ. ಆದರೆ ಸಾರ್ತ್ರೆ ಲೇಖಕನಿಗೆ ನೀಡುವ ಸ್ಥಾನವು ಧ್ವನಿವಾದಿಗಳು ಕವಿಗೆ ನೀಡುವ ಸ್ಥಾನಕ್ಕಿಂತ ಕಡಿಮೆಯದಾಗಿದೆ. ಸಾರ್ತ್ರೆ ತನ್ನ ವಿಚಾರದಲ್ಲಿ ಉತ್ಪಾದನೆಯ ಮಾತನ್ನು ಪ್ರಸ್ತಾಪಿಸುತ್ತಾನೆ. ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯಲ್ಲಿ ಉತ್ಪಾದಕನೇ ಭೂಸುರನಾಗಿರುವುದು ಸಹಜ. ಮುಖ್ಯವಾದ ಸಂಗತಿ ಎಂದರೆ ಸಾರ್ತ್ರೆಯ ವಿವರಣೆಯಲ್ಲಿ ಲೇಖಕ ಉತ್ಪಾದಕನಲ್ಲದಿರುವುದು ; ವ್ಯಾವಹಾರಿಕವಾಗಿ ಪುಸ್ತಕವನ್ನು ಕೊಂಡರೂ ಓದುಗ ಗ್ರಾಹಕನಾಗದೆ ಉತ್ಪಾದಕನಾಗುವುದು. ಧ್ವನಿವಾದಿಗಳ ಅಭಿಪ್ರಾಯವನ್ನು ಸಾರ್ತ್ರೆಯ ಪರಿಭಾಷೆಯಲ್ಲಿ ವಿವರಿಸುವುದಾದರೆ ನಿರ್ದಿಷ್ಟವಾಗಿ ಕವಿ ಉತ್ಪಾದಕನ ಸ್ಥಾನವನ್ನು ಸಹೃದಯನು ಗ್ರಾಹಕನ ಸ್ಥಾನವನ್ನು ತುಂಬಿಸುತ್ತಾರೆ ಎಂದು ಹೇಳಬೇಕಾಗಿದೆ. ಹಾಗೆ ನೋಡಿದರೆ ಧ್ವನಿವಾದಿಗಳ ದೃಷ್ಟಿಯಲ್ಲಿ ಕವಿಯೇ ಕಾವ್ಯಪ್ರಪಂಚದ ಸಾರ್ವಭೌಮ "ಕವಿರೇವ ಪ್ರಜಾಪತಿಃ", ಅವನ ಉತ್ಪಾದನೆ ಎಂದರೆ ಕಾವ್ಯದಲ್ಲಿ ನಿರ್ಮಿತವಾದ 'ಪ್ರತಿಸೃಷ್ಟಿ'.

ಓದುಗನೇ ಉತ್ಪಾದಕನೆಂದು ಸಾರ್ತ್ರೆ ಹೇಳಲು ಕಾರಣವೆಂದರೆ ಓದುವ ಕ್ರಿಯೆಯ ಮೂಲಕವಾಗಿ ಮಾತ್ರ ಕೃತಿಗೆ ಅರ್ಥ ದಕ್ಕುವುದು. ಎಚ್ಚರದ ಓದಿಗೆ ಪಕ್ಕಾಗದ ಕೃತಿಯು ಕಾಗದದ ಮೇಲೆ ಮೂಡಿಸಿದ ಸಂಕೇತಗಳ ಒಂದು ಮೊತ್ತ ಮಾತ್ರ.

ಆಧುನಿಕ ಪಾಶ್ಚಾತ್ಯ ಕಾವ್ಯ ಮೀಮಾಂಸೆಯ ಮತ್ತೊಂದು ಪಂಥ ನಿರಚನವಾದಿಗಳದು. (ಡಿಕನ್‌ಸ್ಟ್ರಕ್ಷನ್) ಈ ವಿಚಾರ ಪಂಥದವರ ದೃಷ್ಟಿಯಲ್ಲಿ ಬರಹಗಾರನ ಅನುಭವ ಮತ್ತು ಬರಹಗಳ ನಡುವೆ ಕಂದರವಿದ್ದೇ ಇರುತ್ತದೆ. ಅನುಭವಿಸಿದ್ದನ್ನು ಬರಹದಲ್ಲಿ ಮೂಡಿಸುವ ಕ್ರಿಯೆಯಲ್ಲಿಯೇ, ಅನಿಸಿದ್ದು ತಲೆಕೆಳಗಾಗಿರುತ್ತದೆ. ಆದುದರಿಂದ ಸಾಹಿತ್ಯ ಪ್ರಪಂಚದಲ್ಲಿ ಕೃತಿಕಾರನಿಗಿರಲಿ ಕೃತಿಗೆ ಕೂಡ ಹೆಚ್ಚಿನ ಅಧಿಕಾರವಿಲ್ಲ. ಈ ವಿಚಾರ ಪಂಥದವರ ದೃಷ್ಟಿಯಲ್ಲಿ ಓದುಗನೇ ಸಾಹಿತ್ಯ ಪ್ರಪಂಚದ ಸಾರ್ವಭೌಮ. ಕೃತಿಯೊಂದನ್ನು ಸಾವಿರ ಓದುಗರು ಬೇರೆ ಬೇರೆಯಾದ ಸಾವಿರ ರೀತಿಗಳಲ್ಲಿ ಅರ್ಥೈಸಿದರೆ ಅವೆಲ್ಲವೂ ಸರಿಯಾದ ಅರ್ಥಗಳೆ. ಯಾವುದೇ ಸಾಹಿತ್ಯ ಕೃತಿಗೆ ನಿರ್ದಿಷ್ಟವಾದ ಅರ್ಥ ಕೇಂದ್ರವೊಂದನ್ನೆ ನಿರಾಕರಿಸುವ ಈ ವಾದದಲ್ಲಿ ಒಂದು ದ್ವಂದ್ವ ಒಳಸೇರಿಹೋಗುತ್ತದೆ. ಕೃತಿಯೊಂದಕ್ಕೆ ದತ್ತವಾಗುವ ಬೇರೆ ಬೇರೆಯಾದ ಸಾವಿರ ಅರ್ಥಗಳು ಸರಿ ಎಂದು ಒಪ್ಪಿದ ಕೂಡಲೆ ಅದರಲ್ಲಿ ಯಾವ ಒಂದು ಅರ್ಥವೂ ಸರಿಯಾದುದಲ್ಲ ಎಂದೂ ಒಪ್ಪಿದಂತಾಗುತ್ತದೆ. ತರ್ಕಶಾಸ್ತ್ರದಲ್ಲಿ ಇದನ್ನು 'ಎಪಿಮಿನೈಡಿಸ್ ವಿರೋಧಾಭಾಸ' ಎನ್ನುತ್ತಾರೆ.

ಕಾವ್ಯ ಮೀಮಾಂಸೆಯಲ್ಲಿ ಓದುಗನ ಕಡೆಯಿಂದ ವಿಶ್ಲೇಷಣೆ ಪ್ರಾರಂಭಿಸಿದಾಗ ಕವಿಯ ಸ್ಥಾನವು ಅನಿವಾರ್ಯವಾಗಿಯೇ ಗೌಣವಾದುದಾಗುತ್ತದೆ. ಇದನ್ನು ಸಾರ್ತ್ರೆ ಮತ್ತು ನಿರಚನವಾದಿಗಳು ಒಪ್ಪಿಕೊಳ್ಳುತ್ತಾರೆ. ಧ್ವನಿವಾದಿಗಳೂ ಸಹ ಓದುಗನ ಕಡೆಯಿಂದ ವಿಶ್ಲೇಷಣೆ ಪ್ರಾರಂಭಿಸಿದರೂ ಕಾವ್ಯವನ್ನು ಕವಿಯ ವಾಣಿಯೆಂದು ಪರಿಗಣಿಸುವ ಮೂಲಕ ವಿಶ್ಲೇಷಣೆಯ ಪರಿಧಿಯೊಳಗೆ ಕವಿಯನ್ನೂ ಸೆಳೆದುಕೊಂಡು ಮೇಲೆ ವಿವರಿಸಲಾಗಿರುವ ವಿರೋಧಾಭಾಸದಿಂದ ಪಾರಾಗುತ್ತಾರೆ.

ಸಾಹಿತ್ಯ ಕೃತಿಯನ್ನು ಓದುಗ ಅರ್ಥೈಸಿಕೊಳ್ಳುವ ಪ್ರಕ್ರಿಯೆಯನ್ನು ವಿವರಿಸುವಾಗ ಸಾರ್ತ್ರೆಯು 'ಮೌನ'ದ ಪರಿಕಲ್ಪನೆಯನ್ನು ಮುಂದಿರಿಸುತ್ತಾನೆ. ಇದು 'ಧ್ವನಿ'ಯ ಪರಿಕಲ್ಪನೆಗೆ ಪೂರ್ತಿ ಸಮಾನವಾದುದು ಎಂದು ಹೇಳುವುದು ಸಾಧ್ಯವಿಲ್ಲವಾದರೂ, ಇರುವ ಸಮಾನ ಅಂಶಗಳ ಕಡೆಗೆ ಗಮನ ಹರಿಸುವ ಮೂಲಕ ಮುಂದಿನ ಚರ್ಚೆಗೆ ಅವಕಾಶ ಮಾಡಿಕೊಳ್ಳಬಹುದಾಗಿದೆ.

"ಸಾಹಿತ್ಯ ಕೃತಿಯು ಭಾಷೆಯ ಮೂಲಕವೇ ಸಿದ್ಧಿಸಿದರೂ ಸಹ ಭಾಷೆಯಲ್ಲಿ

---

*The literary object, though realised through language, is never given in language it is by nature a silence and opponent of the word''—David Lodge (Ed.) 1990—P. 374

ದತ್ತವಾಗುವುದಿಲ್ಲ. ತದ್ವಿರುದ್ಧವಾಗಿ ಅದು ಸ್ವಾಭಾವಿಕವಾಗಿಯೇ ಮೌನವಾದುದು ಮತ್ತು ಶಬ್ದಕ್ಕೆ ವಿರುದ್ಧವಾದುದು."*

ಕೃತಿ ವಸ್ತುವಲ್ಲ, ಕೃತಿಯನ್ನು ಓದುವವನಿಂದ ಉತ್ಪಾದಿತವಾಗುವ ಮೌನವು ಒಂದು ವಸ್ತುವಾಗಿದೆ. ಈ ವಸ್ತುವಿನ ಅಂತರಾಳದಲ್ಲಿ ಮತ್ತಷ್ಟು ಮೌನಗಳಿವೆ. ಇವು ಲೇಖಕ ಹೇಳಿರುವಂತಹುದಲ್ಲ ; ಹೇಳದಿರುವಂತಹವು ಎನ್ನುವುದೂ ಪೂರ್ತಿ ಸರಿಯಾದುದಲ್ಲ. ಅವು ಖಚಿತವಾಗಿ ಹೇಳಲು ಸಾಧ್ಯವೇ ಆಗದಂತಹವು. ಆದುದರಿಂದಲೇ ಓದುವ ಪ್ರಕ್ರಿಯೆಯ ನಿರ್ದಿಷ್ಟವಾದ ಯಾವುದೇ ಒಂದು ಹಂತದಲ್ಲಿ ಈ ಮೌನಗಳು ಪ್ರತ್ಯಕ್ಷವಾಗುತ್ತವೆ ಎಂದು ಹೇಳುವಂತಿಲ್ಲ. ಅವು ಕೃತಿಯಲ್ಲಿ ಎಲ್ಲೆಲ್ಲಿಯೂ ಇರುತ್ತವೆ, ಹಾಗೂ ಎಲ್ಲಿಯೂ ಇರುವುದಿಲ್ಲ. 'ಮೌನ'ದ ತುತ್ತತುದಿಯಲ್ಲಿ ತನ್ನನ್ನಿರಿಸಿಕೊಳ್ಳುವುದರ ಮೂಲಕ ಓದುಗನು ಕೃತಿಯ ಅರ್ಥವನ್ನು ಪುನಃ ಆವಿಷ್ಕರಿಸಿಕೊಳ್ಳುತ್ತಾನೆಂದು ಸಾರ್ತ್ರೆ ವಿವರಿಸಿದ್ದಾನೆ. ಪುನಃ ಆವಿಷ್ಕರಣ (reinvent) ಎಂಬ ಮಾತು ಮುಖ್ಯವಾದುದಾಗಿದೆ. ಓದುಗನ ಗ್ರಹಿಕೆಯು ಹೊಸ ಶೋಧವಲ್ಲ. ಕೃತಿಯಲ್ಲಿ ಯಾವುದು ನಿಕ್ಷಿಪ್ತವಾಗಿದೆಯೋ ಅದರ ಪುನಃ ಶೋಧ ಎಂದರೆ ಮೌನವೂ ಕೂಡ ಧ್ವನ್ಯರ್ಥದಂತೆಯೆ ಕೃತಿಯಲ್ಲಿಯೋ ಅಂತರ್ಗತವಾಗಿರುವಂತಹುದು. ಓದುಗ ಆವಿಷ್ಕರಿಸಿಕೊಳ್ಳುವ ಮೌನವೇ ಕೃತಿ.

"ಈ ಕೃತಿಯ ಅಂತರಾಳದಲ್ಲಿ ಮತ್ತಷ್ಟು ಮೌನಗಳಿರುತ್ತವೆ. ಇವು ಲೇಖಕ ಹೇಳಿದಂತಹವುಗಳಲ್ಲ. ಓದುವ ಕ್ರಿಯೆಯಿಂದ ಉಂಟಾಗುವ ಕೃತಿಯ ಆಚೆಗೆ ಈ ಮೌನಗಳೂ ಯಾವ ಅರ್ಥವನ್ನು ಉಳಿಸಿಕೊಳ್ಳುವುದಿಲ್ಲ. ಆದರೆ ಕೃತಿಗೆ ಸಾಂದ್ರತೆಯನ್ನೂ ವಿಶಿಷ್ಟ ಮುಖವನ್ನೂ ನೀಡುವಂತಹವು ಈ ಮೌನಗಳು"*

ಬರಹಗಾರ ಸಿದ್ಧಪಡಿಸಿ ನೀಡುವುದು 'ಶಬ್ದ'ಗಳನ್ನು. ಆದರೆ ಓದುಗನಿಗೆ ಕೃತಿ ದಕ್ಕುವುದು 'ಮೌನ'ದಲ್ಲಿ ಎಂಬ ಮೇಲಿನ ವಿವರಣೆಯೊಂದಿಗೆ ಧ್ವನ್ಯರ್ಥದ ಸ್ವರೂಪವನ್ನು ವಿಶ್ಲೇಷಿಸುವ ತೀ. ನಂ. ಶ್ರೀಯವರ ವಾಕ್ಯಗಳನ್ನು ಇರಿಸಿದಾಗ ಎರಡು ವಿಚಾರಧಾರೆಗಳ ಸಮಾನಾಂಶಗಳು ತನ್ನಂತೆಯೇ ಸ್ಪಷ್ಟವಾಗುತ್ತವೆ.

"ಕವಿಯು ಉಪಯೋಗಿಸುವ ಶಬ್ದವೂ ಅದರಲ್ಲಿ ಅವನು ಕಂಠೋಕ್ತವಾಗಿ

---

*"And at very interior of this object there are more silences which the author does not tell. It is a question of silences which are so particular that they could not retain any meaning outside of the object which the reading causes to appear. However, it is these which give it its density and its particular face,

ಹೇಳಿರುವ ಅರ್ಥವೂ ಕಾವ್ಯದ ಸಾರವಲ್ಲ. ಇವೆರಡರ ಮೂಲಕ ಅವನು ಮತ್ತೊಂದು ಅರ್ಥದ ಕಡೆಗೆ ಬೆರಳು ನೀಡಿ ಸೂಚಿಸುತ್ತಿದ್ದಾನೆ. ಅದನ್ನು ಅವನು ಮಾತಿನಲ್ಲಿ ಹೇಳಲೇ ಆರನು, ಹೇಳಲು ಸಾಧ್ಯವಾದ ಕಡೆಗಳಲ್ಲೂ ಸೂಚಿಸುವುದೇ ಉತ್ತಮ...... ಯಾವುದು ಕಾವ್ಯದ ಆತ್ಮವೋ ಅದು ಮೇಲು ನೋಟಕ್ಕೆ ಕಾಣಿಸುವುದಿಲ್ಲ. ಸಹೃದಯನು ಅದನ್ನು ಅರಿತುಕೊಳ್ಳಬೇಕು. ಅದನ್ನು ಅರಿಯುವುದಕ್ಕೆ ಕಾವ್ಯದ ಶಬ್ದ ವಾಚ್ಯಾರ್ಥಗಳು ದೀವಿಗೆಯಂತೆ" [ಪೂರ್ವೋಕ್ತ ಪು. 51–52]

ಮೇಲೆ ಕಾಣಿಸಿರುವ ಎರಡು ವಿವರಣೆಗಳಲ್ಲಿ ಸಾಹಿತಿ : ಕವಿ, ಶಬ್ದದ ಮೂಲಕ ಅಭಿವ್ಯಕ್ತಿಸಲಾಗದ್ದು ಏನಿದೆಯೊ ಅದೇ–ಕೃತಿಯ ಸಾಂದ್ರತೆ ಮತ್ತು ವಿಶಿಷ್ಟ ಮುಖ : ಕಾವ್ಯದ ಆತ್ಮ ಎಂಬ ವಿಚಾರವು ವ್ಯಕ್ತವಾಗಿದೆ. ಒಂದೇ ಪ್ರಕ್ರಿಯೆಯನ್ನು ಬೇರೆ ಬೇರೆ ವಿಧಾನಗಳಲ್ಲಿ ವಿವರಿಸಿರುವಂತೆ ತೋರುತ್ತದೆ.

ಓದುವ ಕ್ರಿಯೆಯಿಂದ ಉಂಟಾಗುವ ಕೃತಿಯಲ್ಲಿನ ಮೌನಗಳನ್ನು ಓದುಗನು ಗ್ರಹಿಸಿಕೊಳ್ಳುವ ವಿಧಾನದ ಬಗೆಗೆ ಸಾರ್ತ್ರೆ ಹೀಗೆ ಹೇಳುತ್ತಾನೆ. "ಓದುಗನು ಬರಹದಲ್ಲಿರುವ ವಸ್ತುವನ್ನು ಅವಿಚ್ಛಿನ್ನವಾಗಿ ಆವರಿಸಿಕೊಳ್ಳುವ ಮೂಲಕ ಈ ಮೌನಗಳನ್ನು ಕಂಡುಕೊಳ್ಳಬೇಕು. ಲೇಖಕನು ಅವನಿಗೆ ಮಾರ್ಗದರ್ಶಿ ಮಾತ್ರ."* (ಪೂರ್ವೋಕ್ತ–ಪು. 374)

ಆನಂದವರ್ಧನನು ಗುರುತಿಸಿರುವ ಕಾವ್ಯ ಸಂವಹನದ ಸಾಧ್ಯತೆಗಳನ್ನು ಡಾ. ಕೆ. ವಿ. ನಾರಾಯಣ ಅವರು ಈ ರೀತಿ ವಿವರಿಸಿದ್ದಾರೆ "ಅ) ವಾಚ್ಯಾರ್ಥ ಪ್ರತೀತಿ ಆ) ವಾಚ್ಯಾರ್ಥದಿಂದ ವ್ಯಂಗ್ಯಾರ್ಥ ಪ್ರತೀತಿ ಇ) ವಾಚ್ಯಾರ್ಥದಿಂದ ರಸಾದಿಗಳ ಪ್ರತೀತಿ. ಹೀಗೆ ಕಾವ್ಯ ಸಂವಹನದ ಸಾಧ್ಯತೆಗಳನ್ನು ಆನಂದವರ್ಧನನು ಗುರುತಿಸಿದ್ದಾನೆ. ಹಾಗೂ ಆಯಾ ಅರ್ಥ ಪ್ರತೀತಿಗಳ ನಡುವೆ ಒಂದು ತುಯ್ತವನ್ನು ರೂಪಿಸಿ ಕಾವ್ಯ ಸಂವಹನವನ್ನು ಒಂದು ಚಲನಶೀಲ ಚಟುವಟಿಕೆಯನ್ನಾಗಿ ರೂಪಿಸುತ್ತಾನೆ...... ಹೀಗೆ ಕಾವ್ಯ ಸಂವಹನ ನಮಗೆ ತಟಕ್ಕನೆ ಆದಂತೆ ಕಂಡರೂ ಭಾಸವಾದರೂ ಅದು ಗತಿಶೀಲತೆಯ ನೆಲೆಯನ್ನು ಹೊಂದಿರುವುದರಿಂದ ವೈರುಧ್ಯಗಳನ್ನು–ಬಿಡದೆ ಮುಂದುವರಿಯುತ್ತದೆ. (ಡಾ. ನಾರಾಯಣ ಕೆ. ವಿ.–1988 ಪು. 274, 275) ಸಾರ್ತ್ರೆಯ ಚಿಂತನೆಯಾದ 'ಕಂಟಿನ್ಯೂಅಲ್ ಎಕ್ಸೀಡಿಂಗ್' ಮತ್ತೆ ಮೇಲೆ ವಿವರಿಸಲಾಗಿರುವ 'ಕಾವ್ಯ ಸಂವಹನದ ಗತಿಶೀಲ ನೆಲೆ'ಗಳಲ್ಲಿ ಕಾಣಿಸುವ ಸಮಾನಾಂಶಗಳು ಮತ್ತಷ್ಟು ಚಿಂತನೆಯನ್ನು ಅಪೇಕ್ಷಿಸುವಂತಹವಾಗಿವೆ.

---

*The reader must invent them all in a continual exceeding of the written thing. To be sure the author guides him, but all he does is guide him.

ಸಾಹಿತ್ಯದ ಅಧ್ಯಯನದಿಂದ ಓದುಗನಿಗೆ ಉಂಟಾಗುವ ಅನುಭವದ ರೀತಿ ಮತ್ತು ಸ್ವರೂಪಗಳ ಬಗೆಗೆ ಸಾರ್ತ್ರೆ ಮಂಡಿಸಿರುವ ವಾದದ ಸುಸೂಕ್ಷ್ಮ ಎಳೆಗಳನ್ನು ಸ್ವಲ್ಪ ಬದಿಗಿರಿಸಿ, ಅವನ ಒಟ್ಟು ಅಭಿಪ್ರಾಯವನ್ನು ಗ್ರಹಿಸಿದಾಗ, ಸಾರ್ತ್ರೆಯ ವಿವರಣೆಗೂ ಭಾರತೀಯ ಕಾವ್ಯಮೀಮಾಂಸೆಯಲ್ಲಿನ ರಸಾನುಭವದ ಸ್ವರೂಪ ವಿವರಣೆಗೂ ಸಾಮ್ಯಗಳು ಕಂಡುಬರುತ್ತವೆ,

ಸಾರ್ತ್ರೆಯ ವಿವರಣೆ ಈ ರೀತಿ ಇದೆ. ಸಾಹಿತ್ಯ ಕೃತಿಯನ್ನು ರಚಿಸುವ ಲೇಖಕನು ಕಾರ್ಯವೊಂದನ್ನು ಪ್ರಾರಂಭ ಮಾಡುತ್ತಾನೆ. ಈ ಕಾರ್ಯವನ್ನು ಪೂರ್ಣಗೊಳಿಸಿ ಅದನ್ನು ಮುಕ್ತಾಯದ ಹಂತಕ್ಕೆ ತಲುಪಿಸುವವನು ಓದುಗ. ಆದುದರಿಂದ ಸಾಹಿತ್ಯ ಕೃತಿಗಳೆಲ್ಲವೂ ಮನವಿಗಳಾಗಿವೆ. ಕೃತಿಯ ಸೃಜನದಲ್ಲಿ ಸಹಭಾಗಿಯಾಗುವಂತೆ ಲೇಖಕನು ಓದುಗನ ಸ್ವಾತಂತ್ರ್ಯಕ್ಕೆ ಮನವಿ ಮಾಡುತ್ತಾನೆ. ಓದುಗನನ್ನು ಲೇಖಕನು ಅಪ್ಪಟ ಸ್ವಾತಂತ್ರ್ಯದ ಸಾಕಾರ ಎಂದು ಪರಿಗಣಿಸಬೇಕಾಗುತ್ತದೆ. ಆದುದರಿಂದ ಲೇಖಕನು ಓದುಗನ ಜಡತೆಯನ್ನು–ಎಂದರೆ ಅವನ ವ್ಯಕ್ತಿತ್ವದಲ್ಲಿ ಅಂತರ್ಗತವಾಗಿರುವ ತಾಮಸಿಕ ಅಂಶಗಳನ್ನು ಉದ್ದೇಶಿಸುವುದು ಸಾಧ್ಯವಿಲ್ಲ. ಭಯ, ಕೋಪ, ಬಯಕೆ ಮೊದಲಾದ ಭಾವನೆಗಳನ್ನು ಉದ್ರೇಕಿಸುವುದನ್ನೇ ಸಂವಹನದ ಗುರಿಯಾಗಿಸಿಕೊಳ್ಳಲಾಗುವುದಿಲ್ಲ. ಭಾವೋದ್ರೇಕವೇ ಸಂವಹನದ ಗುರಿಯಾದಾಗ ಓದುಗ ಮತ್ತು ಲೇಖಕನ ವಿಶ್ವಾಸವು ಭಂಗವಾಗುವುದು. ಸಾಹಿತ್ಯ ಕೃತಿಯ ನಿಜವಾದ ಉದ್ದೇಶವು ಮರೆಯಾಗುವುದು. ಕೃತಿಯು ತನಗೆ ತಾನೇ ಗುರಿಯಾಗುವುದರ ಬದಲು ಬೇರೊಂದು ಉದ್ದೇಶ ಸಾಧನೆಗೆ ಸಾಧನ ಮಾತ್ರವಾಗಿ ಪರಿಣಮಿಸುವುದು. ಎಂದರೆ ಸಾಹಿತ್ಯ ಕೃತಿಗಳು ಭಾವನಾರಹಿತವಾಗಿರಬೇಕೆಂದು ಅರ್ಥವಲ್ಲ. ಕೃತಿಯ ನಿರ್ಮಾಣದಲ್ಲಿ ಭಾವನೆಗಳ ಕಾರ್ಯವಿದ್ದೇ ಇದೆ. ಆದರೆ ಈ ಭಾವನೆಗಳು ಒಂದು ವಿಶೇಷ ವರ್ಗಕ್ಕೆ ಸೇರಿದಂತಹವುಗಳಾಗಿವೆ. ಈ ಭಾವನೆಗಳ ಮೂಲ ಸ್ವಾತಂತ್ರ್ಯದಲ್ಲಿದೆ. ಲೇಖಕನು ಓದುಗನ ಸ್ವಾತಂತ್ರ್ಯವನ್ನು ಉದ್ದೇಶಿಸುತ್ತಾನೆ ; ಈ ಸಲುವಾಗಿ ಸ್ವತಃ ಪೂರ್ಣ ಸ್ವತಂತ್ರನಾಗಿರುತ್ತಾನೆ. (ಪೂರ್ವೋಕ್ತ ಪು. 376–380)

ಸಾರ್ತ್ರೆಯ ಲೇಖನದ ಇಂಗ್ಲಿಷ್ ಅನುವಾದದಲ್ಲಿ ಬಳಕೆಯಾಗಿರುವ 'ಫ್ರೀಡಮ್' ಪದಕ್ಕೆ ಸಂವಾದಿಯಾಗಿ ಮೇಲಿನ ಸ್ಥೂಲ ನಿರೂಪಣೆಯಲ್ಲಿ 'ಸ್ವಾತಂತ್ರ್ಯ' ಪದವನ್ನು ಬಳಸಲಾಗಿದೆ. ಸಂದರ್ಭಕ್ಕೆ ಅದು 'ಮುಕ್ತ' ಪದಕ್ಕಿಂತಲೂ ಹೆಚ್ಚು ಹೊಂದಿಕೊಳ್ಳುತ್ತದೆ ಎಂಬ ಕಾರಣದಿಂದ.

ಕಾವ್ಯ ಕೃತಿಯಿಂದ ಓದುಗ ಪಡೆಯುವುದು ರಸಾನುಭವವನ್ನು ಎಂಬುದು ಭಾರತೀಯ ಕಾವ್ಯಮೀಮಾಂಸೆಯ ನಿಲುವು. ರಸಾನುಭವವು ತಾರ್ಕಿಕವಾದ ಸವಿವರ ನಿರೂಪಣೆಗೆ ನಿಲುಕದ ಆನಂದದ ಮನಃಸ್ಥಿತಿ, ಈ ಆನಂದದ ಸ್ವರೂಪವನ್ನು ಬ್ರಹ್ಮಾನಂದ ಸೋದರ ಎಂದೂ ವಿವರಿಸಲಾಗಿದೆ. ಬ್ರಹ್ಮಾನಂದದ ಅನುಭವವೇ

ಮೋಕ್ಷವಷ್ಟೇ. ಮೋಕ್ಷ ಸ್ಥಿತಿಯನ್ನು "ಪೂರ್ಣ ಸ್ವಾತಂತ್ರ್ಯದ ಸಾಧನೆ"—"ಅಚೀವ್ಮೆಂಟ್ ಆಫ್ ಟ್ರೂ ಫ್ರೀಡಮ್"—(ಹಿರಿಯಣ್ಣ ಎಮ್-1954—ಪು. 1) ಎಂದು ವರ್ಣಿಸಲಾಗಿದೆ. ಈ ಪೂರ್ಣ ಸ್ವಾತಂತ್ರ್ಯ ಸಾಧನೆಯೇ ಜೀವನದ ಅಂತಿಮ ಗುರಿಯೆಂದು, ಇದನ್ನು ಸಾಧಿಸಲು ಕಲಾನುಭವವು ಹತ್ತಿರದ ದಾರಿಯಾಗಿದೆಯೆಂದು ವಿವರಿಸಲಾಗಿದೆ. (ಅದೇ, ಪು. 44) ರಸಾನುಭವವು ಸಾಧ್ಯವಾಗುವುದು ಸ್ವಾರ್ಥ ಸಹಿತವಾದ ಭಾವೋದ್ರೇಕದಿಂದಲ್ಲ ಸ್ವಾರ್ಥರಹಿತವಾದ ಸತ್ವೋದ್ರೇಕದಿಂದ ಎಂಬ ವಿವರಣೆಯೂ ಭಾರತೀಯ ವಿಚಾರಧಾರೆಯಲ್ಲಿ ಕಾಣಸಿಗುತ್ತದೆ.

ಒಟ್ಟಿನಲ್ಲಿ ಸಾಹಿತ್ಯ ಸೃಷ್ಟಿ ಹಾಗೂ ಸಾಹಿತ್ಯಾನುಭವಕ್ಕೆ ಕಾರಣವಾಗುವ ಮನಸ್ಥಿತಿಯನ್ನು, ಸ್ವಾರ್ಥರಹಿತ, ಭಾವನಾರಹಿತವಲ್ಲ ಆದರೆ ಭಾವೋದ್ರೇಕ ರಹಿತ ಮತ್ತು ಪೂರ್ಣಮುಕ್ತ ಎಂದು ಗುರುತಿಸಿದರೆ ಈ ಹೇಳಿಕೆಗೆ ಸಾರ್ತ್ರೆಯ ಮತ್ತು ರಸ-ಧ್ವನಿವಾದಿಗಳ ಒಪ್ಪಿಗೆಯಿರುತ್ತದೆ.

ವಿಭಿನ್ನ ಸಾಂಸ್ಕೃತಿಕ ಪರಿಸರದಲ್ಲಿ ಸಾವಿರ ವರ್ಷಗಳ ಅಂತರದಲ್ಲಿ, ಸಾಹಿತ್ಯಾನುಭವದ ಸ್ವರೂಪವನ್ನು ಕುರಿತು ನಡೆಸಿದ ಚಿಂತನೆಗಳಲ್ಲಿ ಕಾಣಸುವ ಈ ಸಾಮ್ಯಗಳು ವಿಸ್ಮಯಕಾರಿಯಾಗಿರುವಂತೆಯೇ ಮತ್ತಷ್ಟು ಚಿಂತನೆಯನ್ನು ಅಪೇಕ್ಷಿಸುವಂತಹವಾಗಿವೆ.

**ಸಂಕ್ಷಿಪ್ತ ಗ್ರಂಥ ಸೂಚಿ :**


1. ಪ್ರೊ. ಹಿರಿಯಣ್ಣ ಎಮ್.
   ಆರ್ಟ್ ಎಕ್ಸ್‌ಪೀರಿಯನ್ಸ್
   ಮೈಸೂರು-1954

2. ಪ್ರೊ. ಶ್ರೀಕಂಠಯ್ಯ, ತೀ. ನಂ.
   ಭಾರತೀಯ ಕಾವ್ಯ ಮೀಮಾಂಸೆ
   ಮೈಸೂರು-1968

3. ಡಾ॥ ಶಿವರುದ್ರಪ್ಪ, ಜಿ. ಎಸ್.
   ಕಾವ್ಯಾರ್ಥ ಚಿಂತನ
   ಬೆಂಗಳೂರು-1980

4. ಡಾ. ನಾರಾಯಣ ಕೆ. ವಿ.
   ಧ್ವನ್ಯಾಲೋಕ-ಒಂದು ಅಧ್ಯಯನ
   ಬೆಂಗಳೂರು-1988

5. ರಾಮಚಂದ್ರನ್ ಸಿ. ಎನ್.
ಸಾಹಿತ್ಯ ವಿಮರ್ಶೆ
ಬೆಂಗಳೂರು–1989

6. ಡೇವಿಡ್ ಲಾಜ್ (ಸಂ.)
ಟ್ವೆಂಟಿಯೆತ್ ಸೆಂಚುರಿ
ಲಿಟರರಿ ಕ್ರಿಟಿಸಿಸ್ಮ್—ಎ ರೀಡರ್
ಲಂಡನ್–1990

# ಮೈಸೂರು ಜಿಲ್ಲೆಯ ಮಧ್ಯಕಾಲೀನ ಜೈನಸಾಹಿತ್ಯ

ವೈ. ಸಿ. ಭಾನುಮತಿ

ಮಧ್ಯಕಾಲೀನ ಜೈನಸಾಹಿತ್ಯವನ್ನು ಅವಲೋಕಿಸುವ ಮುನ್ನ ಈ ಅವಧಿಯ ಜೈನಕವಿಗಳ ಸೃಜನಶೀಲತೆಯ ಹಿಂದಿದ್ದ ವಿಶಿಷ್ಟ ಸಾಂದರ್ಭಿಕ ಒತ್ತಡಗಳಾವುವೆಂಬುದನ್ನು ಅರಿಯಬೇಕಾಗುತ್ತದೆ. ಪ್ರಾಚೀನ ಸಾಹಿತ್ಯಕ್ಕೆ ಧರ್ಮವೆ ಪ್ರೇರಕ ಶಕ್ತಿಯಾಗಿದ್ದುದರಿಂದ ಆದರ ಸ್ಥಿತ್ಯಂತರಗಳು ಆಯಾ ಗುಂಪಿನ ಸಾಹಿತ್ಯದ ಮೇಲೂ ಪರಿಣಾಮ ಬೀರದಿರಲಿಲ್ಲ. ಹಿಂದಿನ ಶತಮಾನಗಳಲ್ಲಿ ವೈಭವದಿಂದ ಮೆರೆದ ಜೈನಧರ್ಮ ಈ ಕಾಲದಲ್ಲಿ ಅದು ತನ್ನ ಅಸ್ತಿತ್ವವನ್ನುಳಿಸಿಕೊಳ್ಳಲು ವೈದಿಕಧರ್ಮವಷ್ಟೇ ಅಲ್ಲದೆ ಹೊಸದಾಗಿ ಬಂದ ವೀರಶೈವಧರ್ಮದೊಂದಿಗೂ ಹೋರಾಡಬೇಕಾದಂಥ ಸ್ಥಿತಿ ಉಂಟಾಗಿತ್ತು. ಒಂದೆಡೆ ವೀರಶೈವಧರ್ಮ ತನ್ನ ಕ್ರಾಂತಿಕಾರಕ ಧೋರಣೆಗಳಿಂದ ಜನಸಾಮಾನ್ಯರನ್ನು ಆಕರ್ಷಿಸುತ್ತಿತ್ತು. ಉತ್ತರ ಕರ್ನಾಟಕ ಭಾಗದಲ್ಲಿ ಅದು ಈಗಾಗಲೇ ಪ್ರಬಲಧರ್ಮವಾಗಿ ತಳವೂರಿತ್ತು. ಜೈನಧರ್ಮಕ್ಕೆ ಈಗ ಮೊದಲಿನಂತೆ ದೊಡ್ಡ ದೊಡ್ಡ ಚಕ್ರವರ್ತಿಗಳ ಆಶ್ರಯ ತಪ್ಪಿಹೋಗಿತ್ತು. ಆದರೆ ಹಳೆಯ ಮೈಸೂರು ಮತ್ತು ಕರಾವಳಿ ಭಾಗದಲ್ಲಿ ಮಾತ್ರ ಜೈನಧರ್ಮ ಉತ್ತಮಸ್ಥಿತಿಯಲ್ಲಿತ್ತು. ಈ ದೃಷ್ಟಿಯಿಂದ ಮಧ್ಯಕಾಲೀನ ಯುಗವು ಜೈನಧರ್ಮದ ಸಂಘರ್ಷದ ಕಾಲವೆಂದು ಹೇಳಬಹುದು. ಇಂಥ ಬದಲಾದ ಕಾಲಧರ್ಮಕ್ಕನುಗುಣವಾಗಿ ಜೈನಕವಿಗಳೂ ಕೂಡ ತಮ್ಮ ಧೋರಣೆಗಳಲ್ಲಿ ವ್ಯತ್ಯಾಸ ಮಾಡಿಕೊಳ್ಳಬೇಕಾಯಿತು. ಧರ್ಮಸ್ಪರ್ಧೆ ತೀವ್ರವಾಗಿದ್ದುದರಿಂದ ಸ್ವಧರ್ಮದ ಹಿರಿಮೆಗೆ ಒತ್ತುಕೊಡಬೇಕಾಯಿತು. ಜನಸಾಮಾನ್ಯರ ಬೆಂಬಲವಿಲ್ಲದೆ ತಮ್ಮ ಧರ್ಮಕ್ಕೆ ಉಳಿಗಾಲವಿಲ್ಲವೆಂದರಿತ ಜೈನಕವಿಗಳು ಸಾಮಾನ್ಯರಿಗೂ ಅರ್ಥವಾಗುವಂತಹ ಚೌಕಟ್ಟಿನಲ್ಲಿ ಕಾವ್ಯ ರಚಿಸಬೇಕಾಯಿತು.

ಈ ಅವಧಿಯ ಆರಂಭದ ಕವಿಗಳು ತೀರ್ಥಂಕರ ಚರಿತೆಗೆ ಪ್ರಾಶಸ್ತ್ಯವನ್ನಿತ್ತಿರುವುದು ಕಂಡುಬರುತ್ತದೆ. ಮೈಸೂರು ಜಿಲ್ಲೆಯ ಮಧ್ಯಕಾಲೀನ ಜೈನಸಾಹಿತ್ಯದ ಪ್ರಥಮ

ಕವಿ ಹಸ್ತಿಮಲ್ಲಿಷೇಣ ಅಥವಾ ಹಸ್ತಿಮಲ್ಲಿಷೇಣ ಸೂರಿ. ಈತನ ಕಾಲ ಖಚಿತವಿಲ್ಲ. ಕ್ರಿ.ಶ. 1319ರಲ್ಲಿದ್ದ ಆರ್ಯಪಾರ್ಯನ ಜಿನೇಂದ್ರಕಲ್ಯಾಣಾಭ್ಯುದಯದಲ್ಲಿ ಕಂಡು ಬರುವ ಹಸ್ತಿಮಲ್ಲನ ಉಲ್ಲೇಖ ಮತ್ತು ಕೃತಿಯಲ್ಲಿ ಬರುವ 'ಪೌಜು' ಎಂಬ ಶಬ್ದದ ಬಳಕೆಯನ್ನು ಆಧರಿಸಿ ವಿದ್ವಾಂಸರು ಈತನ ಕಾಲವನ್ನು 1290ರಿಂದ 1319ರ ವರೆಗೆ ಊಹಿಸಿದ್ದಾರೆ. ಈತನನ್ನು ಕ್ರಿ.ಶ. 1047ರಷ್ಟು ಹಿಂದಕ್ಕೆ ಕೊಂಡೊಯ್ಯುವ ಪ್ರಯತ್ನವೂ ನಡೆದಿದೆ.* ಸದ್ಯದಲ್ಲಿ ಈತನ ಕಾಲವನ್ನು ಕ್ರಿ.ಶ. 1300 ಎಂದೇ ಅಂಗೀಕರಿಸಿದೆ. ಹಸ್ತಿಮಲ್ಲನು ತಂಜಾವೂರಿನ ದ್ವೀಪಂಗುಡಿಯಲ್ಲಿ ಪಾಂಡ್ಯರಾಜನ ಆಶ್ರಯದಲ್ಲಿದ್ದು, ಮಗ ಪಾರ್ಶ್ವಪಂಡಿತನೊಂದಿಗೆ ಮೈಸೂರು ಜಿಲ್ಲೆಯ ಛತ್ರತ್ರಯಪುರಕ್ಕೆ ವಲಸೆ ಬಂದ ಸಂಗತಿ ರಾಜಾವಳಿಕಥಾಸಾರದಿಂದ ತಿಳಿದು ಬರುತ್ತದೆ. ಈತ ಉಭಯಭಾಷಾಚಕ್ರವರ್ತಿ. ಕನ್ನಡದಲ್ಲಿ ಪೂರ್ವಪುರಾಣ ಎಂಬ ಗದ್ಯಕೃತಿಯನ್ನೂ ಸಂಸ್ಕೃತ ಭಾಷೆಯಲ್ಲಿ ವಿಕ್ರಾಂತ ಕೌರವ, ಮೈಥಿಲೀ ಕಲ್ಯಾಣ, ಅಂಜನಾಪವನಂಜಯ ಮತ್ತು ಸುಭದ್ರಾಹರಣ ಎಂಬ ನಾಲ್ಕು ನಾಟಕಗಳನ್ನೂ ರಚಿಸಿದ್ದಾನೆ. ಈತ ಚಂಪೂ ಯುಗದಲ್ಲಿ ಗದ್ಯಕ್ಕೆ ಒಲಿದದ್ದು ವಿಶೇಷ. ಹಸ್ತಿಮಲ್ಲನ ಪೂರ್ವ ಪುರಾಣ ಅಥವಾ ಆದಿಪುರಾಣದಲ್ಲಿ ಆದಿಜಿನನ ಚರಿತ್ರೆಯನ್ನು ಹತ್ತು ಅಧ್ಯಾಯಗಳಲ್ಲಿ ಹೇಳಿದೆ. ಇದು ಪಂಪನ ಆದಿಪುರಾಣ ಮತ್ತು ಚಾವುಂಡರಾಯನ ತ್ರಿಷಷ್ಟಿಶಲಾಕಾ ಚರಿತಗಳಿಗೆ ಬಹಳಷ್ಟು ಋಣಿಯಾಗಿದೆ. ಆದಿಜಿನನ ಚರಿತ್ರೆಯನ್ನು ತೀರ ಸಂಕ್ಷಿಪ್ತವಾಗಿ ಹೇಳಿರುವುದರಿಂದ ಇದು ಪಾರಾಯಣ ಮಾಡುವವರಿಗೆ ಯೋಗ್ಯವಾಗಿದೆ.

ಚಂಪೂಯುಗ ಅಂತ್ಯವಾಯಿತು ಎಂಬಂಥ ಕಾಲದಲ್ಲಿ ಧರ್ಮನಾಥ ಪುರಾಣ ಎಂಬ ವಿಸ್ತಾರವಾದ ಚಂಪೂಕಾವ್ಯವನ್ನು ರಚಿಸಿದ ಕೀರ್ತಿ ಬಾಹುಬಲಿ ಪಂಡಿತನದು. ಈತ ನಂಜನಗೂಡು ತಾಲ್ಲೂಕಿನ ವಿಚನಗನಹಳ್ಳಿಯವನು. ಕಾಲ ಕ್ರಿ.ಶ. 1352. ವಿಚಗನಹಳ್ಳಿಯ ನೇಮೀಶ್ವರ ಜಿನಾಲಯದ ಶಾಸನದಲ್ಲಿ ಕಂಡುಬರುವ ಚಿತ್ರ ಬಾಹುಬಲಿ ಪಂಡಿತನದೆಂದೂ ಮೇಘಚಂದ್ರ ಮತ್ತು ಬಾಹುಬಲಿಯನ್ನು ಸ್ತುತಿಸುವ ಪದ್ಯಗಳು ಧರ್ಮನಾಥ ಪುರಾಣಕ್ಕೆ ಸೇರಿದವನೆಂದೂ ವಿದ್ವಾಸರು ಗುರುತಿಸಿದ್ದಾರೆ. ಬಾಹುಬಲಿ ಪಂಡಿತ ಸಂಸ್ಕೃತದಲ್ಲಿ ಗುಮ್ಮಟನಾಥ ಚರಿತೆಯನ್ನು ಬರೆದಿದ್ದಾನೆ. ಕನ್ನಡ ಧರ್ಮನಾಥ ಪುರಾಣಕ್ಕೆ ಆಕರ ಹರಿಚಂದ್ರಕವಿ ಸಂಸ್ಕೃತದಲ್ಲಿ ರಚಿಸಿದ ಧರ್ಮಶರ್ಮಾಭ್ಯುದಯ. ಧರ್ಮನಾಥ ಪುರಾಣದಲ್ಲಿ ಹದಿನೈದನೆಯ ತೀರ್ಥಂಕರನಾದ ಧರ್ಮನಾಥನ ಪಂಚ ಕಲ್ಯಾಣಗಳನ್ನು ವರ್ಣಿಸಿದೆ. ಇಲ್ಲಿ ಬರುವ ದೀರ್ಘ ಮಧುಪಾನಗೋಷ್ಠಿಯ ವಿವರಗಳು ಕನ್ನಡ ಜೈನಸಾಹಿತ್ಯದಲ್ಲಿ ವಿರಳವೆನಿಸಿದೆ. ಕವಿ ತನ್ನ ಕಾವ್ಯದಲ್ಲಿ ಛಂದೋವೈವಿಧ್ಯವನ್ನು

---

*ನೋಡಿ. ಗುರುದೇವ ಸಂ 32 ಸಂ 66-67, 1988 ಎಂ.ಡಿ. ವಸಂತ್‌ರಾಜ್ ಅವರ ಲೇಖನ

ತರಲೋಸುಗ ಕೆಲವು ಅಪರೂಪದ ವೃತ್ತಗಳನ್ನು ಬಳಸಿದ್ದಾನೆ. ಧರ್ಮನಾಥ ಪುರಾಣ ದಲ್ಲಿ ಚಂಪು ತನ್ನ ಪ್ರೌಢತೆಯನ್ನು ಕಳೆದುಕೊಂಡು ಸರಳ ಸುಂದರವಾಗಿ ಸಾಗಿದೆ. ಇದು ಒಂದು ಘಟ್ಟ. ಮುಂದೆ ಬಂದ ಬಹಳಷ್ಟು ಕವಿಗಳು ಸಾಂಪ್ರದಾಯಿಕ ಚಂಪೂವನ್ನು ಕೈಬಿಟ್ಟು ದೇಸಿ ಛಂದಸ್ಸುಗಳತ್ತ ಗಮನ ಹರಿಸಿದರು.

ಇದೇ ಮಾರ್ಗದಲ್ಲಿ ಅಡಿಯಿಟ್ಟ ಮೈಸೂರು ಜಿಲ್ಲೆಯ ಶಿಶುಮಾಯಣನೆಂಬ ಕವಿ ತ್ರಿಪುರದಹನ ಸಾಂಗತ್ಯ ಮತ್ತು ಅಂಜನಾ ಚರಿತೆ ಎಂಬ ಕೃತಿಗಳನ್ನು ರಚಿಸಿದ್ದಾನೆ. ಈತನ ಪೂರ್ವಿಕರು ಕಾವೇರಿ ತೀರದ ನಯನಪುರದವರೆಂದು ತಿಳಿದು ಬರುತ್ತದೆ. ಕ್ರಿ.ಶ. 1233–1660 ರ ವರೆಗೆ ಈತನ ಕಾಲದ ಗಡುವು. ಬೆಳುಕೆರೆಯ ಪುರದರಸು ಗೊಮ್ಮಟದೇವನು ಈತನ ಕಾವ್ಯರಚನೆಗೆ ಪ್ರೋತ್ಸಾಹಿಸಿದ್ದನು. ಶಿಶುಮಾಯಣ ತನ್ನ ಕಾವ್ಯಗಳಿಗೆ ತೀರ್ಥಂಕರ ಚರಿತೆಯನ್ನು ಆದರಿಸದೆ ಭಿನ್ನ ವಸ್ತುವನ್ನು ಆಯ್ದುಕೊಂಡಿದ್ದಾನೆ. ತ್ರಿಪುರದಹನ ಸಾಂಗತ್ಯನಲ್ಲಿ ಜನನ ಜರಾ ಮರಣ ಎಂಬ "ಅತಿಖ್ಯಾತಿ ಪಡೆದ ತ್ರಿಪುರವನ್ನು ಜಾತರೂಪನಾದ ಆದೀಶ್ವರನು ಸುಟ್ಟ ಕೌತುಕವನ್ನು" 282 ಪದ್ಯಗಳಲ್ಲಿ ನಿರೂಪಿಸಲಾಗಿದೆ.

ಶಿಶುಮಾಯಣನ ಮತ್ತೊಂದು ಕೃತಿ ಅಂಜನಾ ಚರಿತೆ ಕೂಡ ಸಾಂಗತ್ಯದಲ್ಲಿ ರಚಿತವಾಗಿದ್ದು ರವಿಷೇಣನ ಪದ್ಮಪುರಾಣದ ಅಂಜನೆಯ ಕಥೆಯನ್ನು ಆಧಾರವಾಗಿಟ್ಟುಕೊಂಡಿದೆ. ಜೈನ ಸಂಪ್ರದಾಯದ ಅಂಜನೆಯ ಕಥೆ ಹೃದಯಂಗಮವಾಗಿದೆ. ಇಲ್ಲಿಯ ಪವನಕುಮಾರ ಅಂಜನೆಯನ್ನು ವಿವಾಹವಾಗಿ ಒಂದೇ ಸೂರಿನಡಿ ವಾಸಿಸುತ್ತಿದ್ದರೂ ತಪ್ಪು ತಿಳಿವಳಿಕೆಯಿಂದಾಗಿ ದೂರವಿರುತ್ತಾನೆ. ಒಮ್ಮೆ ಯುದ್ಧಕ್ಕೆ ಹೋದಾಗ ಚಕ್ರವಾಕದ ವಿರಹವನ್ನು ಕಂಡು ಆತನಿಗೆ ಪತ್ನಿಯ ನೆನಪು ಬರುತ್ತದೆ. ಆ ರಾತ್ರಿಯೆ ಆಕೆಯನ್ನು ಗುಪ್ತವಾಗಿ ಸಂಧಿಸಿ ಹೊರಟು ಹೋಗುತ್ತಾನೆ. ಇದರಿಂದ ಅಂಜನೆ ಗರ್ಭಿಣಿಯಾಗಿ ಲೋಕಾಪವಾದಕ್ಕೆ ಗುರಿಯಾಗಿ ಮನೆಯಿಂದ ಹೊರದೂಡಲ್ಪಟ್ಟು ಋಷ್ಯಾಶ್ರಮದಲ್ಲಿ ಹನುಮಂತನಿಗೆ ಜನ್ಮವೀಯುತ್ತಾಳೆ. ಸುಖಾಂತವಾಗಿ ಮುಕ್ತಾಯವಾಗುವ ಅಂಜನಾಚರಿತೆ 2000 ಸಾಂಗತ್ಯ ಪದ್ಯಗಳಲ್ಲಿ ಬಿಚ್ಚಿಕೊಂಡಿದೆ. ಅಂಜನೆಯ ಬದುಕಿನ ಕಷ್ಟಕಾರ್ಪಣ್ಯಗಳು ಜನಪದ ಸಾಹಿತ್ಯದಲ್ಲಿ ಪ್ರಚಲಿತವಿರುವ ಗುಣಸಾಗರಿ ಕಥೆಯೊಂದಿಗೆ ಸಾದೃಶ್ಯ ಪಡೆಯುತ್ತವೆ.

ಚಾಮರಾಜನಗರ ತಾಲ್ಲೂಕಿನ ಮಲೆಯೂರು ಒಂದು ಕಾಲಕ್ಕೆ ಪ್ರಸಿದ್ಧ ಜೈನ ಕೇಂದ್ರವಾಗಿದ್ದು ಹಲವು ಕೃತಿಗಳಿಗೆ ಆಶ್ರಯ ನೀಡಿದ ತಾಣವಾಗಿತ್ತು. ಕ್ರಿ. ಶ. 1450ರಲ್ಲಿ ಮಲೆಯೂರಿನಲ್ಲಿದ್ದ ವಿದ್ಯಾನಂದ ಮುನಿ ಪ್ರಾಯಶ್ಚಿತ್ತ ಎಂಬ ಸಂಸ್ಕೃತ ಗ್ರಂಥಕ್ಕೆ ಟೀಕೆಯನ್ನು ರಚಿಸಿದ ಸಂಗತಿ ತಿಳಿದು ಬರುತ್ತದೆ. ಈ ಗ್ರಂಥವನ್ನು ಕುರಿತು ಕವಿಚರಿತೆಕಾರರು "ಈತನ ವ್ಯಾಖ್ಯಾನ ಪ್ರೌಢವಾಗಿದೆ. ಅಲ್ಲಲ್ಲಿ ಕಂದ ವೃತ್ತಗಳೂ

ಬಂದಿವೆ. ಇದು ಭಾಷಾಂತರದಂತೆ ತೋರುವುದಿಲ್ಲ ; ಕವಿಕೃತವಾಗಿರಬೇಕು" ಎಂದು ಅಭಿಪ್ರಾಯಪಟ್ಟಿದ್ದಾರೆ.

ಹುಣಸೂರು ತಾಲ್ಲೂಕಿನ ಚಪ್ಪರದ ಹಳ್ಳಿಯ ಆದಿನಾಥಬಸ್ತಿ ಮತ್ತು ನೈದಿಲು ಗ್ರಾಮದ ಅನಂತನಾಥಸ್ವಾಮಿ ಬಸ್ತಿಗಳಿಗೆ ಅರ್ಚಕನಾಗಿದ್ದ ಆದಿಯಪ್ಪ ಕವಿ ನಗಿರೆಯ ಭೈರವರನ ಗುರು ವೀರಸೇನನ ಪ್ರೋತ್ಸಾಹದಿಂದ ಸಾಂಗತ್ಯದಲ್ಲಿ ಪಟಹಸ್ತಚರಿತೆ, ಧನ್ಯಕುಮಾರಚರಿತೆ ಮತ್ತು ಅನಂತವ್ರತಚರಿತೆ ಎಂಬ ಕಿರುಕೃತಿಗಳನ್ನು ರಚಿಸಿದ್ದಾನೆ. ಈತನ ಕಾಲ ಕ್ರಿ. ಶ. 1462. ಪಟಹಸ್ತ ಚರಿತೆಯಲ್ಲಿ ನೂರು ಪದ್ಯಗಳಿವೆ. ಇದರಲ್ಲಿ ಪಟಹಸ್ತನೆಂಬ ಲೋಭಿ ಆರ್ಜಿಸಿದ ಹಣವು ವ್ಯರ್ಥವಾಗಿ ಹೋದುದನ್ನು ಹೇಳುವ ಮೂಲಕ ದಾನದ ಮಹತ್ವವನ್ನು ಎತ್ತಿಹಿಡಿಯಲಾಗಿದೆ. ಕಾವ್ಯದಲ್ಲಿ ಕೆಲವೆಡೆ ಸ್ತ್ರೀ ವಿರೋಧಿ ಧೋರಣೆಗಳೂ ವ್ಯಕ್ತವಾಗಿವೆ. ಅನಂತವ್ರತ ಚರಿತೆ ಅನಂತನೋಂಪಿಯನ್ನು ಕುರಿತದ್ದು. ಆದಿಯಪ್ಪನ ಕಾವ್ಯಗಳಲ್ಲಿ ಅತ್ಯುತ್ತಮವಾದುದೆಂದರೆ ಧನ್ಯಕುಮಾರ ಚರಿತೆ. ಇದರಲ್ಲಿ 400 ಪದ್ಯಗಳಿದ್ದು ಸಾಂಗತ್ಯ ವೃತ್ತ ಗದ್ಯಗಳಿಂದ ಕೂಡಿ ವಿಶಿಷ್ಟವಾಗಿದೆ. ಅಪುಣ್ಯನೆಂಬ ಕರು ಕಾಯುವ ಹುಡುಗ ಆಹಾರದಾನ ಮತ್ತು ಅಣುವ್ರತಗಳ ಮಹಿಮೆಯಿಂದ ಧನ್ಯಕುಮಾರನಾಗಿ ಜನಿಸಿ ಸದ್ಗತಿ ಪಡೆಯುವುದು ಇಲ್ಲಿನ ವಸ್ತು.

ಅನಂತರ ಕ್ರಿ. ಶ. ಸು. 1485ರಲ್ಲಿ ಕಂಡುಬರುವ ತೆರಕಣಾಂಬಿ ಬೊಮ್ಮರಸನು ಜೀವಂಧರಚರಿತೆ ಮತ್ತು ಸನತ್ಕುಮಾರ ಚರಿತೆ ಎಂಬ ಎರಡು ಕಾವ್ಯಗಳನ್ನು ನೀಡಿದ್ದಾನೆ. ಬೊಮ್ಮರಸ ವಿದ್ವಾಂಸರ ಮನೆತನದಿಂದ ಬಂದವನು. ಈತನ ತಾತ ನೇಮಿಚಂದ್ರ ಪ್ರಚಂಡ ತಾರ್ಕಿಕ ರತ್ನ. ತಂದೆ ಬೊಮ್ಮರಸ ಉಪಾಧ್ಯಾಯ. ಬೊಮ್ಮರಸನ ಜೀವಂಧರ ಚರಿತೆಯು ಸಂಸ್ಕೃತದ ಕ್ಷತ್ರ ಚೂಡಾಮಣಿಯನ್ನು ಮುಖ್ಯ ಆಕರವಾಗಿಟ್ಟುಕೊಂಡು ರಚಿತವಾದ ಸಾಂಗತ್ಯ ಕೃತಿ. ಇದರಲ್ಲಿ ಅಧಿಕಾರ ಲಾಲಸಿಯಾದ ಕಾಷ್ಠಾಂಗಾರನೆಂಬ ಮಂತ್ರಿ ರಾಜನನ್ನು ಕೊಲ್ಲುತ್ತಾನೆ. ಗರ್ಭಿಣಿಯಾಗಿದ್ದ ರಾಣಿ ದಿಕ್ಕಿಲ್ಲದೆ ಶ್ಮಶಾನದಲ್ಲಿ ಜನ್ಮವೀಯುತ್ತಾಳೆ. ಅರಮನೆಯಲ್ಲಿ ಹುಟ್ಟಿ ಬೆಳೆಯಬೇಕಾದ ಶಿಶು ಜೀವಂಧರನಾಮದಿಂದ ಬೇರೊಬ್ಬರ ಮನೆಯಲ್ಲಿ ಬೆಳೆದು ಪರಾಕ್ರಮದಿಂದ ತಂದೆಯ ರಾಜ್ಯವನ್ನು ಮರಳಿ ಪಡೆಯುವುದು ಜೀವಂಧರಚರಿತೆಯ ಕಥಾಹಂದರ. ಈ ಕೃತಿಯನ್ನು ಪ್ರತಿಭಾಶಾಲಿಯಾದ ಬೊಮ್ಮರಸ ಜಾನಪದ ಸತ್ವ ಮತ್ತು ಪೌರಾಣಿಕ ಪ್ರಸಂಗಗಳಿಂದ ರೋಚಕಗೊಳಿಸಿದ್ದಾನೆ.

ಸನತ್ಕುಮಾರಚರಿತೆ ಭಾಮಿನಿಷಟ್ಪದಿಯಲ್ಲಿ ರಚಿತವಾಗಿದೆ. ವಡ್ಡಾರಾಧನೆಯಲ್ಲಿ ಪುಟ್ಟ ಕಥೆಯಾಗಿ ಬಂದಿರುವ ಸನತ್ಕುಮಾರ ಕಥೆ ಬೊಮ್ಮರಸನಲ್ಲಿ ಸಮಗ್ರಕಾವ್ಯವಾಗಿ ಹೊರಹೊಮ್ಮಿದೆ. ಸನತ್ಕುಮಾರ ಹದಿನೈದನೆಯ ಧರ್ಮತೀರ್ಥಂಕರನ ಕಾಲದಲ್ಲಿ ಜನಿಸಿದ ಕಾಮದೇವ. ಈತನ ಸೌಂದರ್ಯವನ್ನು ನೋಡಲು ದೇವತೆಗಳೂ ಆಗಮಿಸು

ತ್ತಾರೆ. ಕವಿ ಇಂಥ ಕಾಮದೇವನ ರೂಪವೂ ಕ್ಷಣಿಕವಾದುದೆಂಬುದನ್ನು ನಿರೂಪಿಸುತ್ತ ಶರೀರದ ಬಗ್ಗೆ ನಿರಹಂಕಾರಭಾವವನ್ನು ಪ್ರತಿಪಾದಿಸುತ್ತಾನೆ. ನಾಯಕ ಸನತ್ಕುಮಾರ ದುಷ್ಟ ಕುದುರೆಯನ್ನೇರುವುದು, ಅದು ಮನ ಬಂದತ್ತ ಕೊಂಡೊಯ್ಯುವುದು, ನಾಯಕನ ಮಿತ್ರ ಹುಡುಕುತ್ತ ಬರುವುದು, ಸನತ್ಕುಮಾರ ಅಷ್ಟ ಸ್ತ್ರೀಯರನ್ನು ವಿವಾಹವಾಗುವುದು, ಸೌಧಾಗ್ರದಲ್ಲಿ ಮಲಗಿದ್ದ ನಾಯಕನನ್ನು ಯಕ್ಷಿ ಅಪಹರಿಸುವುದು ಇವೇ ಮೊದಲಾದ ಅತಿಮಾನುಷ ಅಂಶಗಳು ಜಾನಪದ ಆವರಣವನ್ನುಂಟುಮಾಡಿವೆ. ಅಣ್ಣನನ್ನು ಕೊಂದವನ ಮೇಲೆ ಸೇಡು ತೀರಿಸಿಕೊಳ್ಳಲು ಬಂದ ಸಂಧ್ಯಾವಳಿ ಆತನನ್ನೆ ಮೋಹಿಸುವುದು ರಾಮಾಯಣದ ಶೂರ್ಪನಖಿಯ ಪ್ರಸಂಗವನ್ನು ನೆನಪಿಸುತ್ತದೆ. ಪ್ರಮುಖನೃಪನು ಮೆಚ್ಚಿ ಮದುವೆಯಾದ ವಿಷ್ಣುಶ್ರೀಗೆ ಆತನ ಇತರ ಹೆಂಡತಿಯರು ವಿಷಾನ್ನ ಉಣಬಡಿಸುವುದು ಜನಪದದಲ್ಲಿ ಬರುವ ಕಾಡುಸಿದ್ದಮ್ಮನ ಕಥೆಯೊಂದಿಗೆ ಸಂವಾದಿಯಾಗಿ ನಿಲ್ಲುತ್ತದೆ. ಹೀಗೆ ಬೊಮ್ಮರಸನ ಕೃತಿಗಳ ವಸ್ತು ಧಾರ್ಮಿಕವಾದರೂ ಅಂತಃಸ್ಸತ್ವದಿಂದ ವಿಶಿಷ್ಟವಾಗಿವೆ.

ಮೈಸೂರು ಜಿಲ್ಲೆಯ ಕೆಲಸೂರು ಕೂಡ ಪ್ರಸಿದ್ಧ ಜೈನ ಕೇಂದ್ರಗಳಲ್ಲಿ ಒಂದಾಗಿತ್ತು. ಆದಿದೇವ ಮತ್ತು ಪದ್ಮರಸ ಕವಿಗಳು ತಮ್ಮ ಕೃತಿಗಳನ್ನು ರಚಿಸಿದ್ದು ಇಲ್ಲಿನ ಚಂದ್ರನಾಥ ಬಸದಿಯಲ್ಲಿಯೆ. ಇವರಿಬ್ಬರ ವಂಶಜರ ಹೆಸರಿನಲ್ಲಿ ಕಂಡುಬರುವ ಸಾಮ್ಯತೆಯಿಂದ ಇವರು ದಾಯಾದಿಗಳಾಗಿದ್ದಿರಬಹುದೆ ಎಂಬ ಊಹೆಯೂ ಇದೆ. ಆದಿದೇವನ ಕಾಲ ಕ್ರಿ. ಶ. ಸು. 1500. ಪ್ರತಿಯೊಂದು ಶತಮಾನದಲ್ಲೂ ತಮ್ಮ ಹಿಂದಿನ ಚಂಪೂ ಕಾವ್ಯವನ್ನು ಸಾಂಗತ್ಯಕ್ಕೆ ಅಳವಡಿಸಿದಂತೆ ಈತ ಕೂಡ ಶಾಂತಿನಾಥನ ಸುಕುಮಾರ ಚರಿತಂ ಕೃತಿಯನ್ನು ಸಾಂಗತ್ಯದಲ್ಲಿ ಸೊಗಸಾಗಿ ನಿರೂಪಿಸಿದ್ದಾನೆ. ಇಲ್ಲಿ ಬರುವ ಅಗ್ನಿಭೂತಿ ವಾಯುಭೂತಿ ಕಥೆ ಜನಪ್ರಿಯವಾದುದು. ಗುರುನಿಂದೆಗೈದ ವಾಯುಭೂತಿ ಭವಭವದಲ್ಲಿ ತೊಳಲುತ್ತ ಕಡೆಯಲ್ಲಿ ಅಣುವ್ರತಗಳನ್ನು ಕೈಕೊಂಡು ಸುಕುಮಾರನಾಗಿ ಜನಿಸಿ ಭೋಗದ ತುತ್ತತುದಿಗೇರುತ್ತಾನೆ. ಸುಕುಮಾರನಿಗೆ ಮೃದು ಪಾದ ಆಸನವಲ್ಲದೆ ಬೇರೆಡೆ ಕುಳಿತು ತಿಳಿಯದು. ಅವನು ಮಾಣಿಕ್ಯ ದೀಪವನ್ನಲ್ಲದೆ ಬೇರೆ ಬೆಳಕನ್ನು ನೋಡುತ್ತಿರಲಿಲ್ಲ. ಕಮಲ ತಂಡುಲಗಳನ್ನು ಸೇರಿಸಿ ಹಿಂದಿನ ದಿನವೇ ಕುಟ್ಟಿ ಕಟ್ಟಿದ ಅಕ್ಕಿಯನ್ನಲ್ಲದೆ ಅವನಿಗೆ ಬೇರೊಂದು ಅಕ್ಕಿಯನ್ನು ತಿನ್ನುವ ಅಭ್ಯಾಸವಿರಲಿಲ್ಲ. ಇಂಥ ಸುಕುಮಾರನ ತ್ರಿಲೋಕ ಪ್ರಜ್ಞಪ್ತಿಯನ್ನು ಕೇಳಿ ವೈರಾಗ್ಯ ಪರನಾಗಿ ಮೋಕ್ಷ ಪಡೆಯುವುದು ಇಲ್ಲಿನ ವಸ್ತು. ಕವಿ ಯೋಗಭೋಗಗಳ ಸಮನ್ವಯವನ್ನು ಮತ್ತು ಪಂಚಾಣುವ್ರತಗಳ ಸಂದೇಶವನ್ನು ಸುಕುಮಾರನ ಕಥೆಯ ಮೂಲಕ ಸಾರಿದ್ದಾನೆ.

ಈ ಅವಧಿಯ ಮೈಸೂರು ಜಿಲ್ಲೆಯ ಜೈನ ಸಾಹಿತ್ಯಕ್ಕೆ ಅಧಿಕ ಸಂಖ್ಯೆಯ ಕೃತಿಗಳನ್ನು ನೀಡಿದ ಗಟ್ಟಿ ಕವಿಯೆಂದರೆ ಮೂರನೆಯ ಮಂಗರಸ. ಈತ ಹುಣಸೂರು

ತಾಲ್ಲೂಕಿನ ಕಲ್ಲಹಳ್ಳಿಯ ಪ್ರಭುವಾಗಿದ್ದ. ಪ್ರಭುರಾಜ, ಪ್ರಭುಕುಲದೀಪಕ, ಪ್ರಭುಕುಲರತ್ನದೀಪ ಎಂಬಿವು ಈತನ ಬಿರುದುಗಳು. ಈತನ ಕಾಲ ಕ್ರಿ. ಶ. 1508.* ಈತ ಕಲ್ಲಹಳ್ಳಿ, ಚಿಲುಕುಂದ, ಮಲ್ಲರಾಜಪಟ್ಟಣ, ಕಟ್ಟೆ ಮಳಲುವಾಡಿ, ದೊಡ್ಡ ಹುಣಸೂರು, ಹನಗೂಡು, ಹೆಬ್ಬಿನಗುಪ್ಪೆ, ತಮ್ಮಡಿಹಳ್ಳಿ, ಪಾಲುಪಾರೆ ಈ ಊರುಗಳಿಗೆ ಹೂಡ್ಯಗಳನ್ನು ಕಟ್ಟಿಸಿದ್ದನೆಂದು ತಿಳಿದುಬರುವುದರಿಂದ ಇವು ಈತನ ಆಡಳಿತಕ್ಕೆ ಒಳಪಟ್ಟಿದ್ದವೆಂದು ಭಾವಿಸಬಹುದು. ಅಂತೆಯೆ ಅನೇಕ ಚೈತ್ಯಾಲಯ ಗಳನ್ನು ನಿರ್ಮಿಸಿದ್ದ ಬಗೆಗೂ ಉಲ್ಲೇಖಗಳಿವೆ.

ನಂಜುಂಡ ಕವಿ ಮಂಗರಸನ ದಾಯಾದಿ. ಕುಮಾರ ರಾಮನನ್ನು ವಸ್ತುವಾಗುಳ್ಳ ರಾಮನ ಸಂಗೀತ ಎಂಬ ಕೃತಿಯನ್ನು ಮಂಗರಸನು ರಚಿಸಿದ್ದನೆಂದೂ ಈತನ ಗುರುಗಳು "ನೀಂ ರಚಿಸಿದ ಮಿಥ್ಯಾ ಕಥೆಯಿಂ ಪಾಪ ಸಂಪಾದನೆಗಾಗಿ ಕೆಟ್ಟು ಪೋಪೆ ಎನಲದರ ಪ್ರಾಯಶ್ಚಿತ್ತಕ್ಕೆ ಹರಿವಂಶಮಂ ಪ್ರಭಂಜನ ಕಥೆಯುಂ ಶ್ರೀಪಾಲಚರಿತೆಯುಂ ಜಯ ಕುಮಾರ ಪರಿವರ್ಧಿನೀ ಷಟ್ಪದಿಯುಂ ಸಮ್ಯಕ್ತ್ವಕೌಮುದೀ ಷಟ್ಪದಿ ಎಂಬೀ ಪಂಚ ಕಾವ್ಯಮಂ ಸಂಸ್ಕೃತ ವಸ್ತುಕಂಗಳಂ ತೆಗೆದು ಕನ್ನಡದಿ ಪಂಚಕೃತಿಯುಂ" ಮಾಡಿದ ವಿಚಾರ ರಾಜಾವಳಿ ಕಥಾಸಾರದಲ್ಲಿ ವ್ಯಕ್ತವಾಗಿದೆ.

ಮಂಗರಸನ ಕೃತಿಗಳು ಆರು. ಪ್ರಭಂಜನ ಚರಿತೆ, ಶ್ರೀಪಾಲ ಚರಿತೆ, ನೇಮಿಜಿನೇಶ ಸಂಗತಿ, ಜಯನೃಪಕಾವ್ಯ, ಸೂಪಶಾಸ್ತ್ರ ಮತ್ತು ಸಮ್ಯಕ್ತ್ವಕೌಮುದಿ. ಇವುಗಳಲ್ಲಿ ಮೊದಲ ಮೂರು ಕೃತಿಗಳು ಸಾಂಗತ್ಯದಲ್ಲಿಯೂ ಉಳಿದವು ಷಟ್ಪದಿಯಲ್ಲಿಯೂ ರಚಿತವಾಗಿವೆ. ಪ್ರಭಂಜನಚರಿತೆ ಕನ್ನಡದಲ್ಲಿ ಪ್ರಭಂಜನನ ಬಗೆಗೆ ದೊರೆಯುವ ಏಕೈಕ ಕೃತಿ. ಪ್ರಭಂಜನಚರಿತೆಯಲ್ಲಿ ಶೃಂಗಾರ ವರ್ಣನೆಗಳು ಪ್ರಧಾನವಾಗಿ ಕಾಣಿಸಿ ಕೊಂಡಿದ್ದರೂ ಕವಿಯ ಗುರಿ ವೈರಾಗ್ಯ ಪ್ರತಿಪಾದನೆಯಾಗಿದೆ. ಪ್ರಭಂಜನನ ಪತ್ನಿ ಪೃಥ್ವೀಮತಿ ತನ್ನ ಪತಿ ಪುತ್ರರನ್ನು ತೊರೆದು ಹೋಗುವ ಸನ್ನಿವೇಶ ಜನ್ನನ ಅಮೃತಮತಿ ಪಾತ್ರಕ್ಕೆ ಸಂವಾದಿಯಾಗಿದ್ದು ಸ್ತ್ರೀವಾದಿ ದೃಷ್ಟಿಯಿಂದಲೂ ಅಧ್ಯಯನ ಮಾಡಲು ಅವಕಾಶವಿದೆ. ಶ್ರೀಪಾಲಚರಿತೆಯಲ್ಲಿ ಕಾವ್ಯನಾಯಕ ಶ್ರೀಪಾಲನ ಶೌರ್ಯ ಸಾಹಸ ಗಳನ್ನು 14 ಸಂಧಿ 1527 ಪದ್ಯಗಳಲ್ಲಿ ಬಿತ್ತರಿಸಲಾಗಿದೆ. ಮಂಗರಸನ ವರ್ಣನಾ ಪ್ರಿಯತೆ ಈ ಕೃತಿಯಲ್ಲಿಯೂ ಪ್ರಕಟವಾಗಿದೆ.

ಜಯನೃಪಕಾವ್ಯ ಜಯಕುಮಾರನ ಶೌರ್ಯ ಮತ್ತು ವೈರಾಗ್ಯವನ್ನು ನಿರೂಪಿಸುವ ಪರಿವರ್ಧಿನಿ ಷಟ್ಪದಿ ಕಾವ್ಯವಾಗಿದೆ. ಕನ್ನಡದಲ್ಲಿ ಪರಿವರ್ಧಿನಿ ಷಟ್ಪದಿಯಲ್ಲಿ ರಚಿತ ವಾದ ಮತ್ತೊಂದು ಕಾವ್ಯ ಕಂಡುಬರುತ್ತಿಲ್ಲ.

---

*ಸಮ್ಯಕ್ತ್ವ ಕೌಮುದಿಯಲ್ಲಿ ಬರುವ ಕಾಲಸೂಚಕ ಪದ್ಯದ ಪಾಠಾಂತರದಿಂದಾಗಿ ಈತನ ಕಾಲ ವಿಚಾರದಲ್ಲಿ ಚರ್ಚೆಯಿದೆ.

ನೇಮಿಜಿನೇಶ ಸಂಗತಿ ಮಂಗರಸನ ಶ್ರೇಷ್ಠ ಕೃತಿ. ಇದು 35 ಸಂಧಿ, 5035 ಪದ್ಯಗಳ ಒಂದು ಬೃಹತ್ಕಾವ್ಯ. ಇದರಲ್ಲಿ 22ನೆಯ ನೇಮಿತೀರ್ಥಂಕರನ ವೃತ್ತಾಂತವಿದೆ. ನೇಮಿನಾಥ ಮತ್ತು ಶ್ರೀಕೃಷ್ಣರಿಗೆ ಸೋದರ ಸಂಬಂಧವನ್ನು ಕಲ್ಪಿಸಿರುವುದರಿಂದ ಹರಿವಂಶ ಕುರುವಂಶ ಕಥೆಗಳೂ ಸೇರಿಕೊಂಡು ದೀರ್ಘವಾಗಿ ಬೆಳೆದಿದೆ. ಸಾಮಾನ್ಯವಾಗಿ ತೀರ್ಥಂಕರರ ಬದುಕಿನಲ್ಲಿ ವೈರಾಗ್ಯ ಮೂಡಲು ಮೋಡಗಳೊ ಅಥವಾ ನರೆಗೂದಲೊ ಕಾರಣವಾದರೆ ನೇಮಿನಾಥನಿಗೆ ಪಾಕಶಾಲೆಯಲ್ಲಿ ಅಡುಗೆಗೆಂದು ಕೊಲ್ಲುತ್ತಿದ್ದ ಪ್ರಾಣಿಗಳನ್ನು ನೋಡಿ ವೈರಾಗ್ಯ ಮೂಡುತ್ತದೆ. ಇದರಿಂದ 'ಅಹಿಂಸೆಯೆ ಪರಮಧರ್ಮ' ಎಂಬ ಮಾತು ಪ್ರಾಯಃ ನೇಮಿ ತೀರ್ಥಂಕರನ ಕಾಲದಿಂದ ಬಂದಿರಬೇಕೆಂದು ಊಹಿಸಲು ಅವಕಾಶವಿದೆ. ಕನ್ನಡ ನೇಮಿ ತೀರ್ಥಂಕರನ ಪುರಾಣಗಳೆಲ್ಲ ಚಂಪುವಿನಲ್ಲಿರುವುದರಿಂದ ಮಂಗರಸನ ನೇಮಿಜಿನೇಶಸಂಗತಿ ಸಾಮಾನ್ಯ ಓದುಗರನ್ನು ಆಕರ್ಷಿಸುವಂತಿದೆ. ಸಮ್ಯಕ್ತ್ವ ಕೌಮುದಿಯಲ್ಲಿ 12 ಸಂಧಿ 747 ಪದ್ಯಗಳಿವೆ. ರತ್ನತ್ರಯದ ಹಿರಿಮೆಯನ್ನು ಕಥೆಗಳ ಮೂಲಕ ಬೋಧಿಸಿರುವುದು ಇಲ್ಲಿನ ವೈಶಿಷ್ಟ್ಯ. ಮಂಗರಸನ ಸೂಪಶಾಸ್ತ್ರ ಕನ್ನಡದಲ್ಲಿ ಬಂದ ಪಾಕಶಾಸ್ತ್ರಗಳಲ್ಲಿ ಮೊತ್ತಮೊದಲನೆಯದು. ಈ ಕಾವ್ಯದ ಬಗೆಗೆ ಕವಿ—

ರಸದಾಳಿಯಂತೆ ರಮಣಿಯರ ಚೆಂದುಟಿಯಂತೆ  
ಪೊಸಜೇನ ಕೊಡದಂತೆ ಪೊಣ್ಮುವೆಳ ಜವ್ವನೆಯ  
ರೊಸೆದೀವ ತಾಂಬೂಲದಂತೆ ಕಾದಿಳಿಪಿಯಾಜ್ಯದ ಬಟ್ಟವಾಲಿನಂತೆ  
ಅಸಿಯಳೊಡನಾಟದಂತರ ಮಾವಿನಿನಿವಣ್ಣ  
ರಸದಂತೆಯಮೃತದಂತತಿ ರುಚಿಯ ಪಡೆದುದರ  
ರಸಿಕನತಿ ನಿಪುಣ ಮಂಗರಸನುಸುರಿದ ಸೂಪಶಾಸ್ತ್ರದ ಕವಿತೆಯ ಮಾತು

ಎಂದು ಹೇಳಿಕೊಂಡಿದ್ದಾನೆ. ಹೀಗೆ ವೈವಿಧ್ಯಮಯ ವಸ್ತುವನ್ನೊಳಗೊಂಡ ಮಂಗರಸನ ಕೃತಿಗಳು ಕವಿಯ ಸಾಮರ್ಥ್ಯಕ್ಕೆ ಕನ್ನಡಿ ಹಿಡಿದಿವೆ.

ಕನ್ನಡ ಸಾರಸ್ವತಲೋಕಕ್ಕೆ ಜಿನಭಾರತವನ್ನು ನೀಡಿದ ಮೈಸೂರು ಜಿಲ್ಲೆ ಜಿನರಾಮಾಯಣಕ್ಕೂ ಇಂಬು ನೀಡಿದೆ. ಕ್ರಿ.ಶ. ಸು. 1540ರಲ್ಲಿದ್ದ ದೇವಪ್ಪ ಕವಿ ರಾಮವಿಜಯ ಕಾವ್ಯವನ್ನು ಸಾಂಗತ್ಯದಲ್ಲಿ ರಚಿಸಿದ್ದಾನೆ. ಕನ್ನಡದಲ್ಲಿ ರಾಮಾಯಣವೊಂದು ಮೊದಲ ಬಾರಿಗೆ ರಚಿತವಾದದ್ದು ಇಲ್ಲಿಯೆ. ದೇವಪ್ಪ ಕವಿ ರಾಮಂದೂರಿನ ಬುಕ್ಕರಸ–ಪಾಯಮ್ಮ ದಂಪತಿಗಳ ಪುತ್ರ. ಈತ ತನ್ನ ಹುಟ್ಟೂರನ್ನು ಜಿನಮತದ ತಾಣ ಎಂದು ಬಣ್ಣಿಸಿದ್ದಾನೆ. ಈತನ ಮನೆತನದವರು ಚಂಗಾಳ್ವರಿಗೆ ಸಚಿವರಾಗಿದ್ದರು. ಈತನೂ ನಂಜರಾಜಪಟ್ಟಣದ ನಂಜುಂಡ ಅರಸನಲ್ಲಿ ಮಂತ್ರಿಯಾಗಿದ್ದ. ರಾಮವಿಜಯ ಕಾವ್ಯದಲ್ಲಿ 20 ಸಂಧಿ 2913 ಪದ್ಯಗಳಿವೆ. ಇದು ವಿಮಲಸೂರಿಯ ಸಂಪ್ರ

ದಾಯಕ್ಕೆ ಸೇರಿದ್ದರೂ ಗುಣಭದ್ರಚಾರ್ಯರ ಉತ್ತರ ಪುರಾಣದ ರಾಮಲಕ್ಷ್ಮಣರ ಚರಿತೆಯನ್ನು ಆದರ್ಶವಾಗಿಟ್ಟುಕೊಂಡಿದೆ. ಪೂರ್ವಕವಿಗಳಲ್ಲಿ ಪಂಪ ರನ್ನ ನಾಗಚಂದ್ರರ ಪ್ರಭಾವ ಈ ಕಾವ್ಯದ ಮೇಲೆ ಗಾಢವಾಗಿದೆ. ನಂಜುಂಡನ ರಾಮನಾಥಚರಿತೆಯ ಪದ್ಯಗಳಿಗೂ ಇಲ್ಲಿನ ಪದ್ಯಗಳಿಗೂ ಸಾಮ್ಯತೆಯಿದೆ. ಶ್ರುತಕೀರ್ತಿ ಕವಿಯ ವಿಜಯ ಕುಮಾರಿ ಚರಿತೆಯ ಮೇಲೂ ಈ ಕಾವ್ಯದ ಪ್ರಭಾವ ಕ್ವಚಿತ್ತಾಗಿ ಆಗಿದೆ. ಶ್ರೇಷ್ಠ ಕಾವ್ಯದ ಗುಣಲಕ್ಷಣವನ್ನು ಹೊಂದಿರುವ ರಾಮವಿಜಯ ಕಾವ್ಯ ವಸ್ತು ಮತ್ತು ಶೈಲಿಯ ದೃಷ್ಟಿಯಿಂದ ಉತ್ಕೃಷ್ಟವೆನಿಸಿದೆ.

ಪ್ರಾಚೀನ ಜೈನ ಸಾಹಿತ್ಯದಲ್ಲಿ ಹಲವು ಕಡೆ ಸಂಬಂಧಪಟ್ಟ ಕಥೆಯನ್ನು ಗೌತಮ ಗಣಧರರು ಶ್ರೇಣಿಕ ಮತ್ತು ಚೇಳಿನಿಗೆ ನಿರೂಪಿಸಿದಂತೆ ಬರುತ್ತದೆ. ಅಲ್ಲೆಲ್ಲ ಈ ಅಂಶ ಒಂದುಮಾತಿನಲ್ಲಿ ಬಂದು ಹೋಗುತ್ತದೆ. ಆದರೆ ರಾಮ ವಿಜಯ ಕಾವ್ಯದಲ್ಲಿ ಇದು ಒಂದು ತಂತ್ರವಾಗಿ ಮೂಡಿ ಬಂದಿದೆ. ಇಲ್ಲಿನ ಪ್ರತಿಸಂಧಿಯ ಶ್ರೇಣಿಕ ಮತ್ತು ಚೇಳಿನಿಯರ ಸಂಭಾಷಣೆಯಿಂದ ಆರಂಭಗೊಳ್ಳುತ್ತದೆ :– ಮೃದು ನುಡಿಯಳೆ ಮೃದು ಹೃದಯಳೆಯತ್ಯಂತ । ಮೃದು ನಡೆಯಳೆ ಮದಿರಾಕ್ಷಿ ಮೃದುಪದತಳೆ ಮೃದ್ವಂಗಿ ಲಾಲಿಸು ನಿನ್ನ । ಹೃದಯ ಶುದ್ದಿಯೊಳೀ ಕಥೆಯ (೧೬–೬) ಎಂಬ ಭಾವದಿಂದ ಶ್ರೇಣಿಕ ಕಥಾರಂಭ ಮಾಡಿದರೆ ಚೇಳಿನಿ— ಚೆಲುವರ ಗಂಡ ಚೆನ್ನಿಗ ವೀರ ವಿಕ್ರಮ । ಕುಲಜಾತಿ ಶೀಲ ಸಂಪನ್ನ ಬಲಯುತ ಬಣ್ಣಮಾತಿನ ನೀಜಿ ನಿರವಿಪು । ದಲರಂಬ ವಿಜಯನ ಕಥೆಯ (೧೬–೭) ಎಂದು ಸ್ಫೂರ್ತಿ ನೀಡುತ್ತಾಳೆ. ಇದರಿಂದಾಗಿ ಕಾವ್ಯಕ್ಕೆ ಕಾಂತಾ ಸಂಹಿತೆಯ ಚೌಕಟ್ಟು ಒದಗಿದಂತಾಗಿದೆ. ಇಲ್ಲಿ ಚೇಳನಿ ಸಹೃದಯ ವಿಮರ್ಶಕ ಪ್ರಜ್ಞೆ ಯಾಗಿ ನಿಲ್ಲುತ್ತಾಳೆ. ರಾಮವಿಜಯ ಕಾವ್ಯದ ಶ್ರೇಣಿಕ ಮತ್ತು ಚೇಳಿನಿಯರ ಪ್ರಸಂಗ ಮುಂದೆ ಮುದ್ದಣ್ಣ ಮನೋರಮೆಯರ ಸರಸಸಲ್ಲಾಪಕ್ಕೆ ನಾಂದಿಯಾಗಿರಬಹುದೆ ?

ಪ್ರಾಚೀನ ಚಂಪೂ ಕಾವ್ಯಗಳನ್ನು ಸಾಂಗತ್ಯದಲ್ಲಿ ಮರುಸೃಷ್ಟಿಗೊಳಿಸುವ ಪರಂಪರೆಯಲ್ಲಿ ಬಂದ ಮತ್ತೊಂದು ಕೃತಿ ದೊಡ್ಡಯ್ಯನ ಚಂದ್ರಪ್ರಭ ಚರಿತೆ. ಈತ ಚಂಗನಾಡ ಪಿರಿಯಪಟ್ಟಣವನ್ನು ಆಳುತ್ತಿದ್ದ ವಿರುಪ ರಾಜೇಂದ್ರನ ಆಸ್ಥಾನದಲ್ಲಿ ಕರಣಿಕನಾಗಿದ್ದ. ಈತನ ಕಾಲ ಕ್ರಿ.ಶ. 1550. ಈತ ಸಂಸ್ಕೃತದಲ್ಲಿ ಭುಜಬಲಿ ಚರಿತೆಯನ್ನು ರಚಿಸಿ ಎರಡು ಭಾಷೆಯಲ್ಲಿಯೂ ತನಗಿರುವ ಪ್ರಭುತ್ವವನ್ನು ತೋರಿ ದ್ದಾನೆ. ಇದರಲ್ಲಿ 102 ಪದ್ಯಗಳಿವೆ. ಅಗ್ಗಳನನ್ನು ಆಧರಿಸಿದ ದೊಡ್ಡಯ್ಯನ ಚಂದ್ರಪ್ರಭಾ ಚರಿತೆಯು ಭವಾವಳಿ, ವೈರಾಗ್ಯ, ಪಂಚ ಕಲ್ಯಾಣ ಮೊದಲಾದ ಅಂಶ ಗಳನ್ನೊಳಗೊಂಡು ತೀರ್ಥಂಕರ ಚರಿತೆಯ ಚೌಕಟ್ಟಿನಲ್ಲಿ ರಚಿತವಾಗಿದೆ. ಇದರಲ್ಲಿ 28 ಸಂಧಿ 4475 ಪದ್ಯಗಳಿವೆ. ಮಂಗರಸನಂತೆ ಕೂಡ ದೊಡ್ಡಯ್ಯ ತನ್ನ ಕಾವ್ಯದ ಬಗೆಗೆ "ರಸದಾಳಿಯ ರಸದಂತೆ ಮಿಸುಪ ರಸಮೊಸರ್ವ ಪಣ್ಣಿನಂತೆ" ಎಂದು ಹೇಳಿಕೊಂಡಿ ದ್ದಾನೆ. ಈ ಹೇಳಿಕೆಯು ಈತನ ಕೆಲವು ವರ್ಣನೆಗಳಲ್ಲಿ ಸಾರ್ಥಕವಾಗಿದೆ. ಮಂಗಳರಸ

ದೇವಪ್ಪ, ದೊಡ್ಡಯ್ಯ ಈ ಮೂವರಿಗೂ ಅನ್ವಯಿಸುವಂಥ ಕೆಲವು ಮಾತು ಹೇಳ ಬಹುದು. ಈ ಕವಿಗಳು ಅನ್ಯಮೂಲದಿಂದ ವಸ್ತುವನ್ನು ಸ್ವೀಕರಿಸಿದ್ದರೂ ಕಾವ್ಯದ ಒಡಲಲ್ಲಿ ಕಂಡುಬರುವ ಜನಪದ ಜೀವನ ಮೈಸೂರು ಜಿಲ್ಲೆಯ ಹುಣಸೂರು ಭಾಗಕ್ಕೆ ಸೇರಿದುದಾಗಿದೆ. ಮಂಗರಸ ಹೇಳುವ ಪ್ರಾಣಿ ಪಕ್ಷಿಗಳಾಗಲಿ, ದೊಡ್ಡಯ್ಯ ಕೊಡುವ ಮರಗಿಡಗಳ ಚಿತ್ರವಾಗಲಿ, ದೇವಪ್ಪ ವರ್ಣಿಸಿರುವ ಪರಿಸರ ಚಿತ್ರವಾಗಲಿ ಈ ನೆಲಕ್ಕೆ ಸೇರಿದುದೆಂಬುದನ್ನು ಗಮನಿಸಿರಬೇಕು.

ಆ ಬಳಿಕ ಕ್ರಿ.ಶ. 1567ರಲ್ಲಿ ಮಲೆಯೂರಿನಲ್ಲಿದ್ದ ಶ್ರುತಕೀರ್ತಿಕವಿ ವಿಜಯ ಕುಮಾರಿ ಚರಿತೆ ಎಂಬ ಸಾಂಗತ್ಯ ಕೃತಿಯನ್ನು ರಚಿಸುವ ಮೂಲಕ ಕನ್ನಡ ಜೈನಸಾಹಿತ್ಯಕ್ಕೆ ಹೊಸ ಆಯಾಮ ನೀಡಿದುದನ್ನು ಕಾಣಬಹುದಾಗಿದೆ. ಜೈನಧರ್ಮೀಯಳಾದ ವಿಜಯಕುಮಾರಿ ವೀರಶೈವಧರ್ಮೀಯನಾದ ತನ್ನ ಮಾವನ ಮಗನನ್ನು ವಿವಾಹವಾಗಲು ನಿರಾಕರಿಸಿ ಬ್ರಹ್ಮಚರ್ಯವ್ರತವನ್ನು ಕೈಗೊಂಡು ವಿಜಿತೇಂದ್ರಿಯಳಾಗುವುದು ಇಲ್ಲಿನ ವಸ್ತು. ಈ ಕೃತಿಗೆ ಆರ್ಯಭಾಷೆಯ ಮೂಲವನ್ನು ಸೂಚಿಸಿದ್ದರೂ ಕಾವ್ಯದ ಒಡಲಿನಲ್ಲಿ ಬರುವ ಬಸವಣ್ಣನ ಕಥೆ ಕವಿಯ ಸ್ವಂತಸೃಷ್ಟಿ. ವಿಜಯಕುಮಾರಿ ಚರಿತೆಯಲ್ಲಿ 1305 ಪದ್ಯ ಗಳಿವೆ. ಕವಿ ತುಂಬ ಜಾಣ್ಮೆಯಿಂದ ವಿಜಯಕುಮಾರಿಚರಿತೆ ಎಂಬ ಶೀರ್ಷಿಕೆ ನೀಡಿ ಸುಮಾರು 700 ಪದ್ಯಗಳಲ್ಲಿ ಬಸವಣ್ಣನ ಕಥೆಯನ್ನು ಜೈನ ವೀರಶೈವಧರ್ಮಗಳ ಘರ್ಷಣೆಯ ಹಿನ್ನೆಲೆಯಲ್ಲಿ ಹೇಳಿದ್ದಾನೆ. ಹೀಗೆ ಧಾರ್ಮಿಕ ಘರ್ಷಣೆಯನ್ನು ಕಾವ್ಯ ದಲ್ಲಿ ತಂದಿರುವುದಕ್ಕೆ ಆ ಕಾಲದ ಸಾಮಾಜಿಕ ಸ್ಥಿತಿಯೆ ಕಾರಣವಾಗಿದೆ. ಶ್ರುತಕೀರ್ತಿಯ ಕಾಲಕ್ಕಾಗಲೆ ಲಕ್ಕಣ್ಣದಂಡೇಶನ ನೂತನಗಣಂಗಳು ಮೈಸೂರು ಜಿಲ್ಲೆಯವರೆಗೂ ವ್ಯಾಪಿಸಿದ್ದರು. ಈ ಭಾಗದಲ್ಲಿ ಉಮ್ಮತ್ತೂರು ಸಂಜರಾಜನಿಂದ ಸುತ್ತೂರು ಕುಂತೂರು ಸಾಲೂರು ಉಮ್ಮತ್ತೂರು ಸರಗೂರುಗಳಲ್ಲಿ ಪಂಚಮಠಗಳು ಸ್ಥಾಪಿತವಾಗಿದ್ದವು. ಮೈಸೂರು ಜಿಲ್ಲೆಯಲ್ಲಿ ವೀರಶೈವಧರ್ಮದ ಚಟುವಟಿಕೆಗಳು ತೀವ್ರವಾಗಿದ್ದವು. ಸ್ವಧರ್ಮೀಯರೂ ಕೂಡ ಹೊಸದಾಗಿ ಬಂದ ವೀರಶೈವಧರ್ಮಕ್ಕೆ ಮತಾಂತರವಾಗುವ ಸಾಧ್ಯತೆಗಳಿದ್ದವು. ವರ್ತಮಾನದ ಈ ಸಂಗತಿಗಳು ಶ್ರುತಕೀರ್ತಿಯ ಮೇಲೆ ಪರಿಣಾಮ ಬೀರದಿರಲಿಲ್ಲ. ವಿಜಯಕುಮಾರಿ ಚರಿತೆಯಲ್ಲಿ ಬಿಜ್ಜಳನನ್ನು ಜೈನಧರ್ಮೀಯನನ್ನಾಗಿ ಮಾಡಿಕೊಂಡು ಬಸವಣ್ಣನ ಕಾಯಕತತ್ವ, ದಾಸೋಹ, ಜಾತ್ಯತೀತತೆಗಳನ್ನು ವಿಡಂಬನೆಗೆ ಗುರಿಪಡಿಸಲಾಗಿದೆ. ಈ ಕೃತಿ ತರುವಾಯದ ಅನಾಮಧೇಯ ಕವಿಯ ವಿಜಯ ಕುಮಾರಿ ಚರಿತೆ, ಧರಣಿಪಂಡಿತನ ಬಿಜ್ಜಳರಾಯಚರಿತೆ, ಚಂದ್ರಸಾಗರವರ್ಣಿಯ ಬಿಜ್ಜಳ ರಾಯ ಪುರಾಣಗಳಿಗೆ ಮಾದರಿಯಾಯಿತೆಂಬುದನ್ನು ಗಮನಿಸಿದಾಗ ಶ್ರುತಕೀರ್ತಿಯ ವಿಜಯಕುಮಾರಿ ಚರಿತೆ ಆ ಕಾಲಕ್ಕೆ ಉಂಟುಮಾಡಿದ್ದ ಸ್ಪಂದನಗಳನ್ನು ಅರಿಯಬಹುದು.

ವಿಜಯಕುಮಾರಿ ಚರಿತೆ ಸ್ತ್ರೀಪರ ಕಾಳಜಿಯನ್ನು ಹೊಂದಿರುವ ವಿರಳಕೃತಿ ಯಾಗಿಯೂ ಗಮನಾರ್ಹವಾಗಿದೆ. ಪ್ರಾಚೀನ ಜೈನ ಸಾಹಿತ್ಯದಲ್ಲಿ ಹೆಣ್ಣು ಸೌಂದರ್ಯ

ವರ್ಣನೆಗೂ, ಗರ್ಹಣೆಗೊ ಗ್ರಾಸವಾಗಿದ್ದಂಥ ಸಂದರ್ಭದಲ್ಲಿ ಇಲ್ಲಿಯ ನಾಯಕಿ ಧಾರ್ಮಿಕ ಆವರಣದ ನಡುವೆಯೂ ದೃಢನಿಲುವಿನ ಹೆಣ್ಣಾಗಿ ಕಂಡುಬರುತ್ತಾಳೆ. ವೀರಶೈವ ಸಾಹಿತ್ಯದಲ್ಲಿ ಬರುವ ಅಕ್ಕಮಹಾದೇವಿ ತಿಲಕವ್ವೆಯರಿಗೆ ಸಂವಾದಿಯಾಗಿ ನಿಲ್ಲುತ್ತಾಳೆ. 'ಸ್ತ್ರೀಯರಿಂದ ಅತಿಕೀರ್ತಿ' ಎಂಬಂಥ ಮಾತು ಇಲ್ಲಿ ಕೇಳಿಬರುತ್ತದೆ. ಹೀಗೆ ವಿಜಯಕುಮಾರಿ ಚರಿತೆ ಸಮಕಾಲೀನ ಸಾಮಾಜಿಕ ಧಾರ್ಮಿಕ ಆಶಯಗಳಿಗೆ ದನಿಗೂಡಿಸಿ ಮೈಸೂರು ಜಿಲ್ಲೆ ನೀಡಿದ ವಿಶಿಷ್ಟ ಕೃತಿಯಾಗಿದೆ.

ಮೋಕ್ಷ ಕಾರಣವಾಗಿ ಕೃತಿ ರಚಿಸುತ್ತಿದ್ದ ಸಂದರ್ಭದಲ್ಲಿ "ಆಸರು ಪರಿಹಾರವಾಗೆ ಪೇಳಿದೆ ಪಾಪನಾಶವೆಂದುಸಿರಿತಿಲ್ಲಿದನು" ಎಂಬ ಧೋರಣೆಯಿಂದ ಕಾವ್ಯರಚನೆಗೆ ತೊಡಗಿದವನೆಂದರೆ ಕ್ರಿ.ಶ. 1599ರಲ್ಲಿದ್ದ ಕೆಲಸೂರಿನ ಪದ್ಮರಸಕವಿ. ಈಗ ಶೃಂಗಾರಕಥೆ ಎಂಬ ಸಾಂಗತ್ಯ ಕೃತಿಯನ್ನು ಬರೆದಿದ್ದಾನೆ. ಚಂದ್ರರಾಜನ ಮದನತಿಲಕ ಕಲ್ಲರಸನ ಜನವಶ್ಯ, ರತ್ನಾಕರವರ್ಣಿಯ ಭರತೇಶ್ವರ ವೈಭವ ಮತ್ತು ನಂಜುಂಡನ ರಾಮನಾಥ ಚರಿತೆಗಳು ತನ್ನ ಕಾವ್ಯಕ್ಕೆ ಆಕರವೆಂದು ಕವಿಯೇ ಹೇಳಿಕೊಂಡಿದ್ದಾನೆ. ಸುಖನಿಲಯ ಪುರದ ರಾಜನಿಗೆ ಪುತ್ರೋತ್ಸವವಾಗುವುದೆ ಕೃತಿಯ ವಸ್ತು. ಈ ವಸ್ತುವನ್ನು 5 ಸಂಧಿ 533 ಪದ್ಯಗಳಲ್ಲಿ ಹಿಗ್ಗಲಿಸುವಾಗ ಕವಿ ಪ್ರಜ್ಞಾಪೂರ್ವಕವಾಗಿಯೆ ಶೃಂಗಾರಕ್ಕೆ ಮನ್ನಣೆ ಯಿತ್ತಿದ್ದಾನೆ.

ಪದ್ಮರಸಕವಿಯ ಬಳಿಕ ಕ್ರಿ.ಶ. 1627ರಲ್ಲಿ ಮಲೆಯೂರಿನ ಪದ್ಮಣಪಂಡಿತ ಹಯಸಾರ ಸಮುಚ್ಚಯ ಎಂಬ ಗ್ರಂಥ ರಚಿಸಿರುವುದಾಗಿ ತಿಳಿದು ಬರುತ್ತದೆ. ಇದಕ್ಕೆ ಚಾಮರಾಜೀಯ ಎಂಬ ಪರ್ಯಾಯನಾಮವೂ ಇದೆ. ಪದ್ಮಣಪಂಡಿತನಿಗೆ ರಾಜ ಒಡೆಯರ ಆಶ್ರಯವೂ ಲಭಿಸಿತ್ತು. ಹಯಸಾರ ಸಮುಚ್ಚಯದಲ್ಲಿ 24 ಅಧ್ಯಾಯ ಗಳಿವೆ. ಇದರಲ್ಲಿ ಕಂದ ಪದ್ಯಗಳ ಮೂಲಕ ಅಶ್ವಶಾಸ್ತ್ರವನ್ನು ನಿರೂಪಿಸಲಾಗಿದೆ.

ವಸ್ತುವಿನ ದೃಷ್ಟಿಯಿಂದ ಕನ್ನಡ ಜೈನ ಕವಿಗಳಿಗೆ ವಡ್ಡಾರಾಧನೆ ಬತ್ತದ ತೊರೆ. ಇಲ್ಲಿನ ಕಥೆಗಳಿಗೆ ಮಾರುಹೋದ ಬಹಳಷ್ಟು ಕವಿಗಳು ವಡ್ಡಾರಾಧನೆಯ ಕಥೆಗಳನ್ನು ವಿಸ್ತರಿಸಿ ಕಾವ್ಯವಾಗಿಸಿದ್ದಾರೆ. ಈ ನಿಟ್ಟಿನಲ್ಲಿ ವಡ್ಡಾರಾಧನೆ ಮತ್ತು ನಯಸೇನನ ಧರ್ಮಾಮೃತದಲ್ಲಿ ಕಂಡುಬರುವ ಗುರುದತ್ತನಕಥೆ ಕ್ರಿ.ಶ.ಸು. 1650ರಲ್ಲಿ ಗುರುದತ್ತ ಚರಿತೆಯಾಗಿ ಸಾಂಗತ್ಯದಲ್ಲಿ ರೂಪುತಳೆದಿದೆ. ಗುರುದತ್ತಚರಿತೆಯ ಕರ್ತೃ ತನ್ನ ನಾಮಧೇಯವನ್ನು ವ್ಯಕ್ತಪಡಿಸಿಸದೆ ದೇವರಸನ ಅಣುಗ ಎಂದಷ್ಟೇ ಹೇಳಿದ್ದಾನೆ. ಕವಿ ತನ್ನ ಸ್ಥಳ 'ಪೂಗತಟಾಕ' ಎಂದು ಸೂಚಿಸಿದ್ದಾನೆ. ಇದು ಮೈಸೂರು ಸಮೀಪದ ಕಡಕೊಳವೆಂದು ಗುರುತಿಸುವ ಪ್ರಯತ್ನ ನಡೆದಿದೆ.* ಆದರೆ ಕಾವ್ಯದಲ್ಲಿ ದೊರೆಯುವ ಪೂಗತಟಾಕದ ಭೌಗೋಳಿಕ ವಿವರಗಳು ಕಡಕೊಳಕ್ಕೆ ಸರಿಹೊಂದುವುದಿಲ್ಲ. ಪೂಗತಟಾಕ

---

*ಡಾ. ಪ. ನಾಗರಾಜಯ್ಯ : ಸಾಂಗತ್ಯ ಕೃತಿಗಳು

ದಲ್ಲೊಂದು ಪರ್ವತ, ಆ ಪರ್ವತಾಗ್ರದಲ್ಲೊಂದು ಪಾರಿಶ್ವಜಿನಬಸದಿ, ಆ ಬೆಟ್ಟದಲ್ಲೇ ಪೂಜ್ಯಪಾದಮುನಿ ಸಿದ್ಧರಸವನ್ನು ರಚಿಸಿ ಖ್ಯಾತನಾದನೆಂಬ ವಿವರಗಳು ಕಾವ್ಯದಲ್ಲಿ ದೊರೆಯುತ್ತವೆ. ಪೂಜ್ಯಪಾದಮುನಿ ಕನಕಗಿರಿಯಲ್ಲಿ ಸಿದ್ಧರಸವನ್ನು ಮಾಡಿದ ಸಂಗತಿ ಅನ್ಯಮೂಲದಿಂದ ತಿಳಿದುಬರುತ್ತದೆ. ಇಲ್ಲಿ ಪಾರಿಶ್ವಜಿನಬಸದಿ ಕೂಡ ಇರುವುದರಿಂದ ಕವಿ ಹೇಳುವ ಪರ್ವತ ಮಲೆಯೂರಿನ ಸಮೀಪದ ಕನಕಗಿರಿ ಎಂಬುದರಲ್ಲಿ ಸಂಶಯ ವಿಲ್ಲ. ಈ ಹಿನ್ನೆಯಲ್ಲಿ ಪೂಗತಟಾಕವು ಮಲೆಯೂರಿನ ಸಮೀಪದ ಕೆರೆಹಳ್ಳಿ ಎಂದು ಹೇಳಬಹುದಾಗಿದೆ. ಗುರುದತ್ತಚರಿತೆ 800 ಪದ್ಯಗಳುಳ್ಳ ಒಂದು ಚಿಕ್ಕ ಕಾವ್ಯ. ಇಲ್ಲಿ ಗುರುದತ್ತನ ನಾಲ್ಕು ಭವದ ಕಥೆಯನ್ನು ಸರಳವಾಗಿ ಹೇಳಿದೆ.

ಈ ಅವಧಿಯ ಅಂತ್ಯದಲ್ಲಿ ಪದ್ಮರಾಜ (ಕ್ರಿ.ಶ.ಸು. 1750) ಕವಿ ವಿಜಯಕುಮಾರನ ಕಥೆ ಎಂಬ ಯಕ್ಷಗಾನವನ್ನು ರಚಿಸಿರುವುದು ಕಂಡುಬರುತ್ತದೆ. ಈತನ ತಂದೆ ಮೈಸೂರಿನಲ್ಲಿದ್ದ ಶಾಂತಪಂಡಿತ. ಗುರು ಅಕಲಂಕಮುನಿ. ವಿಜಯಕುಮಾರನ ಕಥೆಯು ಹರಹು ತೀರ ಚಿಕ್ಕದು. ವನವಿಹಾರಕ್ಕೆ ಹೋಗಿದ್ದ ವಿಜಯಕುಮಾರನನ್ನು ಯಕ್ಷನೊಬ್ಬ ಪೂರ್ವವೈರದಿಂದ ಅಪಹರಿಸುತ್ತಾನೆ. ಜ್ವಾಲಾಮಾಲಿನಿಯ ಕೃಪೆಯಿಂದ ಆತ ಯಕ್ಷನಿಂದ ಪಾರಾಗಿ, ವಿವಾಹವಾಗಿ ಸಂಸಾರ ಸುಖವನ್ನನುಭವಿಸುತ್ತಾನೆ. ಕಮಲದಳದಲ್ಲಿ ಸತ್ತಿದ್ದ ದುಂಬಿಯನ್ನು ನೋಡಿ ವೈರಾಗ್ಯಪರನಾಗಿ ಮೋಕ್ಷಕ್ಕೆ ಸಲ್ಲುತ್ತಾನೆ. ಇಂಥ ತೆಳುವಾದ ವಸ್ತುವನ್ನು ಹೊಂದಿರುವ ಈ ಯಕ್ಷಗಾನ ಕಾವ್ಯವನ್ನು ಸಾಂಪ್ರದಾಯಿಕ ರೀತಿಯಲ್ಲಿ ನಿರ್ವಹಿಸಲಾಗಿದೆ.

ಪ್ರಸ್ತುತ ಮೈಸೂರು ಜಿಲ್ಲೆಯ ಮಧ್ಯಕಾಲೀನ ಸಾಹಿತ್ಯದಲ್ಲಿ 15 ಕವಿಗಳ 24 ಕನ್ನಡ ಕೃತಿಗಳು, 6 ಸಂಸ್ಕೃತ ಗ್ರಂಥಗಳು ಕಂಡುಬರುತ್ತವೆ. ಹಿಂದಿನ ಶತಮಾನಗಳಿಗೆ ಹೋಲಿಸಿದಾಗ ಮಧ್ಯಕಾಲೀನ ಮೈಸೂರು ಜಿಲ್ಲೆಯ ಸಾಹಿತ್ಯ ಹುಲುಸಾಗಿದೆ ಎಂದು ಹೇಳಬಹುದು. ಗುಂಡ್ಲುಪೇಟೆ, ಚಾಮರಾಜನಗರ, ಹುಣಸೂರು ತಾಲ್ಲೂಕುಗಳಲ್ಲಿ ಅಧಿಕಸಂಖ್ಯೆಯ ಕೃತಿಗಳು ಕಂಡುಬರುತ್ತವೆ. ಟಿ. ನರಸೀಪುರ ಹೆಗ್ಗಡದೇವನಕೋಟೆ ಭಾಗಗಳಿಂದ ಯಾವೊಂದು ಕೃತಿಯೂ ದಾಖಲಾಗಿಲ್ಲದಿರುವುದು ಅಚ್ಚರಿಯ ಸಂಗತಿ ಯಾಗಿದೆ. ಉಪಲಬ್ಧ ಕೃತಿಗಳ ಸಮೀಕ್ಷೆಯಿಂದ ಲಭ್ಯವಾಗಿರುವ ಫಲಿತಗಳನ್ನು ಹೀಗೆ ಕ್ರೋಡೀಕರಿಸಬಹುದು :

ಈ ಅವಧಿಯ ಆರಂಭದಲ್ಲಿ ಚಂಪೂಕೃತಿ ಕಂಡುಬಂದರೂ ಅವು ದೀರ್ಘ ಸಮಾಸ ಹಾಗೂ ಸಂಸ್ಕೃತಭೂಯಿಷ್ಠ ಶೈಲಿಯಿಂದ ಪಾರಾಗಲು ಹವಣಿಸಿವೆ. ಅನಂತರ ದಲ್ಲಿ ಬಂದ ಕವಿಗಳು ದೇಸಿ ಛಂದಸ್ಸಿನ ಕಡೆಗೆ ತಿರುಗಿದುದನ್ನು ಗಮನಿಸಬಹುದು. ಅದರಲ್ಲೂ ಷಟ್ಪದಿಗಿಂತ ಸಾಂಗತ್ಯ ಯಶಸ್ವಿ ಮಾಧ್ಯಮವಾಗಿದೆ. ತೆರಕಣಾಂಬಿ ಬೊಮ್ಮರಸ ಮತ್ತು ಮೂರನೆಯ ಮಂಗರಸರನ್ನು ಬಿಟ್ಟರೆ ಬಹಳಷ್ಟು ಕವಿಗಳ್ಳು ಸಾಂಗತ್ಯದಲ್ಲಿ ಕೃತಿ ರಚಿಸಿದ್ದಾರೆ. ಈ ಸಾಂಗತ್ಯದ ಅಲೆಯ ನಡುವೆಯೂ ಗದ್ಯಗ್ರಂಥ

ಹಾಗೂ ಯಕ್ಷಗಾನ ಕಾವ್ಯ ಕಂಡು ಬಂದಿದೆ. ಸಾಹಿತ್ಯಿಕ ಒಲವು ಜನಪರವಾಗುವ ಪ್ರವೃತ್ತಿ ತಲೆದೋರಿದುದರಿಂದ ವಸ್ತುವಿನಲ್ಲಿ ವೈವಿಧ್ಯತೆ, ಭಾಷೆಯಲ್ಲಿ ಸರಳತೆ ಕಾಣಿಸಿಕೊಂಡಿವೆ. ತೀರ್ಥಂಕರರಿಗಿಂತ ಮಿಗಿಲಾಗಿ ಜೈನ ಕಾಮದೇವರು, ಜೈನ ಶ್ರಾವಕರು ಸಾಹಿತ್ಯದ ಸಿಂಹಾಸನವನ್ನೇರಿರುವುದನ್ನು ನೋಡಬಹುದಾಗಿದೆ. ಧನ್ಯಕುಮಾರ, ಜೀವಂಧರ, ಶ್ರೀಪಾಲ, ಪ್ರಭಂಜನ, ಗುರುದತ್ತ, ವಿಜಯಕುಮಾರ, ಸಮ್ಯಕ್ತ್ವ ಕೌಮುದಿ ಮೊದಲಾದ ಭಿನ್ನ ಕಥಾಂಶಗಳು ಮೊದಲಬಾರಿಗೆ ಸಮಗ್ರ ಕಾವ್ಯವಾಗಿ ಕಾಣಿಸಿಕೊಂಡಿವೆ. ರಾಮಾಯಣ ಮಹಾಭಾರತ ಪಾಕಶಾಸ್ತ್ರ ಅಶ್ವಶಾಸ್ತ್ರ ಹೀಗೆ ವಿವಿಧ ಪ್ರಕಾರದ ಕೃತಿಗಳು ಈ ಅವಧಿಯಲ್ಲಿ ರಚಿತವಾಗಿವೆ. ಅಂಜನಾಚರಿತೆ, ವಿಜಯಕುಮಾರಿ ಚರಿತೆಯಂಥ ಸ್ತ್ರೀಪ್ರಧಾನ ಕಾವ್ಯಗಳು ಕನ್ನಡ ಜೈನಸಾಹಿತ್ಯಕ್ಕೆ ಮೈಸೂರು ಜಿಲ್ಲೆ ನೀಡಿದ ಕೊಡುಗೆಗಳಾಗಿವೆ. ತ್ರಿಪುರದಹನ ಮತ್ತು ಬಸವಣ್ಣನ ಕಥೆಗಳನ್ನು ಜೈನ ರೀತಿಗೆ ಅಳವಡಿಸಿದ್ದು ಕೂಡ ಇಲ್ಲಿನ ಕವಿಗಳ ವೈಶಿಷ್ಟ್ಯವಾಗಿದೆ. ಧಾರ್ಮಿಕ ಸಂಘರ್ಷಗಳು ಈ ಕಾಲದ ಸಾಹಿತ್ಯದಲ್ಲಿ ಎಡೆ ಪಡೆದಿದ್ದರೂ ಜೈನಕವಿಯೊಬ್ಬ ಸದಾಶಿವ ಗಣೇಶನನ್ನು ಸ್ತುತಿಸಿರುವುದು "ಹರಿಯಾಗಲಿ ಹರನಾಗಲಿ ವಾಣಿಯ ವರನಾಗಲಿ ನಮಗವರು ಮುಕ್ತಿಪಥಬೋಧಕರಾದರೆ ಸಾಕು" ಎಂಬಂಥ ಉದಾತ್ತ ಭಾವನೆ ವ್ಯಕ್ತಪಡಿಸಿರುವುದು ಈ ಕವಿಗಳ ವಿಶಾಲ ಮನೋಭಾವಕ್ಕೆ ಸಾಕ್ಷಿಯಾಗಿದೆ. ಈ ಅವಧಿಯ ಕೆಲವು ಕಾವ್ಯಗಳು ಆ ಕಾಲದಲ್ಲಿ ಪ್ರಸಿದ್ಧವಾಗಿದ್ದ ಸಂಗತಿ ರಾಜಾವಳಿ ಕಥಾಸಾರದಿಂದ ತಿಳಿದುಬರುತ್ತದೆ—"ಸ್ಯಾದ್ವಾದ ಮಾರ್ಗವಿಡಿದ ಹರಿವಂಶಮಂ ತಂದು ಮುಕ್ಕಾಲುವರಿಗೆ ಓದಿಸಿ ಕೇಳಿ ತೆರಕಣಾಂಬಿ ನೇಮಿಚಂದ್ರಾರ್ಯರ ಮೊಮ್ಮಗನಪ್ಪ ಬೊಮ್ಮರಸಂ ಪೇಳಿದ ಸನತ್ಕುಮಾರ ಷಟ್ಪದಿಯಂ ಪಿರಿಯಾಪಟ್ಟಣದ ದೊಡ್ಡಯ್ಯಂ ಪೇಳ್ದ ಚಂದ್ರಪ್ರಭಚರಿತೆ ಮೊದಲಾಗಿ ಕೇಳ್ದು ಜೈನಮತಂ ದೊಡ್ಡದೆಂದು" ರಾಜಒಡೆಯರು ಮೆಚ್ಚುಗೆ ವ್ಯಕ್ತಪಡಿಸಿದ್ದರು. ಹೀಗೆ ಮೈಸೂರು ಜಿಲ್ಲೆಯ ಮಧ್ಯಕಾಲೀನ ಜೈನಸಾಹಿತ್ಯವು ಸಂಖ್ಯೆ ಮತ್ತು ಸತ್ವದಿಂದ ವಿಶಿಷ್ಟ ಬಗೆಯ ಕೃತಿಗಳನ್ನು ನೀಡಿದೆ. ಕನ್ನಡ ಸಾಹಿತ್ಯವನ್ನು ಸಮೃದ್ಧಗೊಳಿಸಿದೆ.



# ಆಧುನಿಕ ಕನ್ನಡ ಮಹಿಳಾ ಸಾಹಿತ್ಯದಲ್ಲಿ ಬಿಡುಗಡೆಯ ಆಶಯ

ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ

ಮಹಿಳಾ ಜಾಗೃತಿ, ಮಹಿಳಾ ವಿಮೋಚನೆಯ ಮಾತು ಈ ಶತಮಾನದ ಆರಂಭದ ದಶಕಗಳಲ್ಲೆ ಕೇಳಿ ಬಂದಿತಾದರೂ ಮಹಿಳೆಯರು ತಮ್ಮ ಸಮಸ್ಯೆಗಳನ್ನು ಕುರಿತ ಸಾಹಿತ್ಯ ರಚನೆಯಲ್ಲಿ ತೊಡಗಿದುದು ತೀರ ಈಚಿನ ಸಂಗತಿ. ಏಕೆಂದರೆ ಸಂಚಿ ಹೊನ್ನಮ್ಮನ 'ಹದಿಬದೆಯ ಧರ್ಮ'ದಂಥ ಕೃತಿಯನ್ನು ಈ ಗುಂಪಿಗೆ ಸೇರಿಸಲಾಗುವುದಿಲ್ಲ. ಮಹಿಳೆಯರಿಂದ ಸಮಸ್ಯೆಯ ಚಿತ್ರಣದ ಮಾತು ಹಾಗಿರಲಿ ; ಸಮಸ್ಯೆಯ ಅರಿವು ಮೂಡುವುದಕ್ಕೆ ಕೂಡ ಸ್ತ್ರೀ ವಿದ್ಯಾಭ್ಯಾಸವು ಒಂದು ಪೂರ್ವಭಾವೀ ಅಗತ್ಯವಾಗಿತ್ತು. ಮೇಲು ವರ್ಗದ ಕೆಲವರನ್ನು ಹೊರತುಪಡಿಸಿದರೆ ನಮ್ಮ ದೇಶದ ಹೆಣ್ಣುಮಕ್ಕಳಿಗೆ ಬಹುತೇಕ ಅಲಭ್ಯವಾಗಿದ್ದ ವಿದ್ಯಾಭ್ಯಾಸವು–ಅಕ್ಷರಜ್ಞಾನವೆಂಬ ಪ್ರಾಥಮಿಕ ಅರ್ಥವೂ ಕೂಡ–ಸಾರ್ವತ್ರಿಕವಾಗಿ ದೊರೆಯಲಾರಂಭಿಸಿದ್ದು ಈ ಶತಮಾನದ ಮೂರು ನಾಲ್ಕನೆಯ ದಶಕಗಳಲ್ಲಿ. (ಕೇವಲ ಮೂವತ್ತು ವರ್ಷಗಳ ಹಿಂದೆ ಮುಸ್ಲಿಂ ಹುಡುಗಿಯೊಬ್ಬಳು ಶಾಲೆ ಕಲಿತ 'ಸಾಹಸ'ವನ್ನು ಸಾರಾ ಅಬೂಬಕ್ಕರ್ ಮನ ಮಿಡಿಯುವಂತೆ ವರ್ಣಿಸಿದ್ದಾರೆ.) ತಮಗೆ ದೊರೆತ ಶಿಕ್ಷಣ ಸೌಲಭ್ಯಗಳನ್ನು ಬಳಸಿಕೊಂಡು ಸ್ವಂತಕ್ಕೆ ಜ್ಞಾನಾರ್ಜನೆ ಮಾಡಿದುದು ಮಾತ್ರವಲ್ಲದೆ ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿದ ತಿರುಮಲಾಂಬ, ಕಲ್ಯಾಣಮ್ಮನವರಂಥ ಮಹಿಳೆಯರು ಆಧುನಿಕ ಕನ್ನಡದ ಮೊದಲ ಬರಹಗಾರ್ತಿಯರೂ ಆದರು. ವಿಶೇಷವಾಗಿ ಮೇಲು ಜಾತಿಗಳಲ್ಲಿ ಪ್ರಚಲಿತವಿದ್ದ ಕೇಶಮುಂಡನ, ಹೆಂಗಸರ ಮರುಮದುವೆಗೆ ವಿರೋಧ ಮೊದಲಾದವುಗಳ ಕಡೆಗೆ ಪ್ರತಿಷ್ಠಿತರ ಗಮನ ಸೆಳೆಯುವುದು ಇವರ ಬರವಣಿಗೆಯ ಉದ್ದೇಶವಾಗಿತ್ತು.

ಕ್ರಮೇಣ ಶಿಕ್ಷಣ ಸೌಲಭ್ಯಗಳು ಹೆಚ್ಚಿದಂತೆ ಮಧ್ಯಮ ವರ್ಗದ ಸ್ತ್ರೀಯರು ಮನೆಯಿಂದ ಹೊರಬಂದು ಉದ್ಯೋಗ ರಂಗವನ್ನು ಪ್ರವೇಶಿಸಿದಾಗ ಹಿಂದಿನಿಂದ ಬಂದ

ಸಮಸ್ಯೆಗಳ ಜೊತೆಗೆ ಹೊಸ ಸಮಸ್ಯೆಗಳು ತೊಡಕಿಕೊಂಡವು. ಹೊಸಕಾಲದ ಮಹಿಳೆಯರ ಉಡಿಗೆ ತೊಡಿಗೆ ಅಲಂಕಾರಗಳು, ಮಡಿಮೈಲಿಗೆಗಳು, ಅಂತರ್ಜಾತೀಯ ಮತ್ತು ವಿವಾಹೇತರ ಪ್ರೇಮ ಪ್ರಕರಣಗಳು ಹೆಂಗಸರಿಂದಲೆ ತೀಕ್ಷ್ಣ ಟೀಕೆಗೆ ಒಳಗಾದವು. ಕೊಡಗಿನ ಗೌರಮ್ಮ, ಶ್ಯಾಮಲಾದೇವಿ. ಎಚ್. ವಿ. ಸಾವಿತ್ರಮ್ಮನವರಿಂದ ಆರಂಭಿಸಿ ತ್ರಿವೇಣಿ, ಅನುಪಮಾ ನಿರಂಜನ ಮೊದಲಾದವರು ಹೇಗಸು ಜೀವನದ ನಾನಾ ರಂಗಗಳಲ್ಲಿ ಎದುರಿಸುವ ಸಮಸ್ಯೆಗಳನ್ನು ಓದುಗರ ಮುಂದೆ ತೆರೆದಿಟ್ಟಿದ್ದಾರೆ. ಈ ಎಲ್ಲ ಬರವಣಿಗೆಯನ್ನು ಸಮೀಕ್ಷಿಸುವುದಕ್ಕಾಗಲಿ, ಮಹಿಳಾ ಸಾಹಿತ್ಯದ ವಿವಿಧ ಆಯಾಮಗಳನ್ನು ಗುರುತಿಸುವುದಕ್ಕಾಗಲಿ ಇಲ್ಲಿ ಅವಕಾಶವಿಲ್ಲ. ಈಚಿನ ಕೆಲವು ಮಹಿಳೆಯರ ಕಥೆ, ಕವಿತೆಗಳಲ್ಲಿ 'ಬಿಡುಗಡೆಯ ಆಶಯ'ವು ಹೇಗೆ ಮೂಡಿದೆಯೆಂಬುದನ್ನು ಪ್ರಸ್ತಾಪಿಸುವುದಷ್ಟೆ ಸದ್ಯದ ಉದ್ದೇಶ.

ಬಿಡುಗಡೆಯ ಆಶಯವನ್ನು ವ್ಯಕ್ತಪಡಿಸಬೇಕಾದರೆ ಬಂಧನದ ಸ್ವರೂಪವನ್ನು ಅರಿಯುವುದು ಅವಶ್ಯ. ಶಬ್ದ ಸಂಕೇತಗಳನ್ನಷ್ಟೇ ಗಮನಿಸಿದರೆ ನಮ್ಮ ಪೂರ್ವಿಕರು 'ಬಂಧನ–ಬಿಡುಗಡೆ'ಗಳನ್ನು ಬೇರೆಯೆ ಅರ್ಥದಲ್ಲಿ ಬಳಸಿದ್ದುಂಟು. ಇಹಲೋಕದ ಬದುಕೇ ಒಂದು ಬಂಧನ ; ಆದ್ದರಿಂದ ಜೀವನದ ನಿರಾಕರಣೆಯೆ ನಿಜವಾದ ಬಿಡುಗಡೆ ಎಂಬುದು ಅಧ್ಯಾತ್ಮವಾದಿಗಳ, ವಿರಕ್ತ ಪಂಥೀಯರ ನಿಲುವಾಗಿತ್ತು. ಈ ತಾತ್ವಿಕ ಕಲ್ಪನೆಯು ಗಂಡು ಹೆಣ್ಣೆಂಬ ಭೇದವಿಲ್ಲದೆ, ಮನುಷ್ಯರಿಗೆ ಮಾತ್ರವಲ್ಲದೆ ಸಕಲ ತಿರ್ಯಗ್ಜಂತುಗಳಿಗೂ ಸಾಮಾನ್ಯವಾದುದು. ಇಂಥ ಅಧ್ಯಾತ್ಮದ ಚರ್ಚೆ ಇಲ್ಲಿ ಪ್ರಸ್ತುತವಲ್ಲ. ಜೀವನ್ಮುಕ್ತರ ವಿಚಾರ ಹೇಗಾದರೂ ಇರಲಿ ; ನಮಗೆ ಈ ಲೋಕದ ಬದುಕು ವಾಸ್ತವವಾದುದು ; ಇಲ್ಲಿನ ಸುಖದುಃಖಗಳು ನಿಜವಾದವು. ಸುಖದುಃಖಗಳ ಪ್ರಶ್ನೆ ಬಂದಾಗ ಗಂಡು–ಹೆಣ್ಣುಗಳು ಕೂಡಿ ಬಾಳುವ ಸಂದರ್ಭಗಳು ಮುಖ್ಯವಾಗುತ್ತವೆ.

ಮಾನವ ಸಮಾಜದ ಎಲ್ಲ ಚಟುವಟಿಕೆಗಳ ಮೂಲದಲ್ಲಿ ಕಾಮಪ್ರವೃತ್ತಿಯನ್ನೇ ಕಾಣುವ ಫ್ರಾಯ್ಡ್ ಪಂಥೀಯ ಮನೋವಿಶ್ಲೇಷಣೆಯಷ್ಟು ದೂರ ಹೋಗದಿದ್ದರೂ ಹೆಣ್ಣು ಗಂಡಿನ ಲೈಂಗಿಕ ಮಿಲನವು ಮನೋದೈಹಿಕ ಬಿಗಿತಗಳಿಂದ ಬಿಡುಗಡೆ ನೀಡುವ ಅನುಭವವೆಂಬುದನ್ನು ಎಲ್ಲರೂ ಬಲ್ಲರು. ಇಂಥ ಅನುಭವದಲ್ಲಿ ಗಂಡಿನಂತೆ ಹೆಣ್ಣು ಕೂಡ ಆಸಕ್ತಳೇ ಸರಿ. ಎಚ್. ಎಸ್. ಮುಕ್ತಾ ಅವರ 'ನಾನು–ಅವನು' ಕವಿತೆಯ ಸಾಲುಗಳಿವು :

> "ನನ್ನ ಮೈತುಂಬ । ಒಳಹೊರಗೆ ಮುತ್ತ ಒತ್ತಿದ ಪ್ರಿಯನು 'ಮುಕ್ತಾ'
> ಎಂಬ ನನ್ನ ಹೆಸರನು ಸಾರ್ಥಕ ಪಡಿಸಿಕೊಂಡ ! ಈ ಪ್ರೀತಿಗೀತಿ ಮಾತೆಲ್ಲ ।
> ಕಡಲ ಮೇರೆತದಂತೆ ಒಡಲಾಳದ ಮುತ್ತು ಬೇಕಾದರೆ ಆಳಕ್ಕಿಳಿಯಬೇಕು! ಕಡಲ

ಮೇಲಿನ ತೆರೆಯಂತೆ ಅಡ್ಡ ಬರುವುದಲ್ಲಾ ಲಜ್ಜೆ। ತೆರೆ ಹರಿದು ಒಳಗೆ ಹೇಗೆ
ಇಳಿಯುವೆಯೊ ನೋಡು।..."

—ಹೀಗೆ ದ್ವಂದ್ವಾರ್ಥದ ನುಡಿಗಳಲ್ಲಿ ಮಿಲನದ ಉದ್ವೇಗ, ಸುಖಾನುಭವಗಳನ್ನು ಮಹಿಳೆಯೂ ವ್ಯಕ್ತಪಡಿಸಿರುವುದುಂಟು. ಹೇಮಾ ಅವರ 'ಅಂಕುರ' ಕವಿತೆ ಮಿಲನದ ಫಲದ ಬಗ್ಗೆ ಸಂಭ್ರಮಿಸುತ್ತದೆ—

"ಪ್ರೀತಿ ಪಲ್ಲವಿಸಿ ಮನಸು। ಮಗು, ಮೈತುಂಬ ಪುಲಕನಗು। ಸ್ನಿಗ್ಧ
ಹೊದಿಕೆಯಲಿ ಸವಿದ ಸ್ತನ್ಯ। ಧನ್ಯೆನಾ. ಮಗು ಬೆರಳು ಚೀಪಿತು,
ಮುಲುಗಿತು ತೋರಿ। ಕಣ್ಣುಗಳ ವಜ್ರಹರಳ...'
ನಾ ಮಗು ತಾಯಿ ಹೆಂಡತಿ। ದೇವ ದೇವಾಲಯ ಶಿವ, ಶಿವಾ। ಬೇರು
ಬಿಟ್ಟಿದೆ ಪ್ರೀತಿ ನೀತಿಗೋಡೆಯ ಗುಂಟ। ಕುಡಿಯೊಡೆದು। ಕುಲದ ಹೂ
ಬಿಡಿಸಿ। ಬಾ ನಗು, ನನ್ನ ನಾನಾದ ನೀನಗು। ನನ್ನ ಮಗು......"

—ಹೀಗೆ ಜೀವಸೃಷ್ಟಿಯಲ್ಲಿ ತಾದಾತ್ಮ್ಯವನ್ನೂ, ಧನ್ಯತೆಯನ್ನೂ ಕಾಣುವ ನಿರಂತರ ಆಕರ್ಷಣೆಯು ಗಂಡು ಹೆಣ್ಣುಗಳ ಮಿಲನದಲ್ಲಿದೆ. 'The relation of man to woman is the most natural of one person to another'' ಎನ್ನುತ್ತಾನೆ ಕಾರ್ಲ್ ಮಾರ್ಕ್ಸ್.

ಶರೀರ ರಚನೆಯನ್ನಾಧರಿಸಿದ ಗಂಡು-ಹೆಣ್ಣೆಂಬ ಭೇದವು ಸಕಲ ಜೀವಕೋಟಿಗೆ ಸಾಮಾನ್ಯವಾದುದು. ಆದರೆ ಅದರಾಚೆಗೆ ಮೇಲು-ಕೀಳು, ಸಬಲ-ದುರ್ಬಲ, ಉತ್ತಮ-ಹೀನ ಇತ್ಯಾದಿ ತಾರತಮ್ಯಗಳೇನಿದ್ದರೂ, ಕಡೆಗೆ ಸೌಂದರ್ಯದ ಕಲ್ಪನೆ ಕೂಡ ಮಾನವ ಸಮಾಜಕ್ಕೆ ವಿಶಿಷ್ಟವಾದುದು. ಮಾನವರ ಲೈಂಗಿಕ ಪ್ರಕ್ರಿಯೆಗಳು ಇತರ ಪ್ರಾಣಿಗಳಿಂದ ವ್ಯತ್ಯಾಸಗೊಳ್ಳುವುದರ ಮೂಲಕ ಮತ್ತು ಸಾಮಾಜಿಕ, ಆರ್ಥಿಕ ಕಾರಣಗಳಿಂದಾಗಿ ತಾರತಮ್ಯವು ಅಸ್ತಿತ್ವಕ್ಕೆ ಬಂದಿರಬಹುದು. ಕಾಲದೇಶ ಪರಿಸ್ಥಿತಿಗಳಿಗನುಗುಣವಾಗಿ ಗಂಡಸು ಹೆಂಗಸಿನ ಸಾಮಾಜಿಕ ಸ್ಥಾನಮಾನಗಳು ವ್ಯತ್ಯಾಸಗೊಂಡಿರುವುದು ನಿಜ.

ನಮ್ಮ ದೇಶದ ಸಾಮಾಜಿಕ ಮೌಲ್ಯಗಳು, ರೂಢಿಗತ ಆಲೋಚನಾ ವಿಧಾನ, ಸಂಪ್ರದಾಯ ಮೊದಲಾದವು ಬಹುಮಟ್ಟಿಗೆ ಗಂಡಸರ ಪರವಾಗಿವೆ. ಬದುಕಿನ ಸರಿ ತಪ್ಪುಗಳನ್ನು ನಿರ್ಧರಿಸುವವರು, ನೀತಿ-ಅನೀತಿಗಳನ್ನು ರೂಪಿಸುವವರು ಗಂಡಸರೇ ಆಗಿದ್ದಾರೆ. ಹಿಂದಿನಿಂದಲೂ ಶಾಸನಗಳನ್ನು ಮಾಡುವ ಅಧಿಕಾರ ಪಡೆದಿದ್ದ ಪುರುಷ ವರ್ಗ ತನ್ನ ಹಿತರಕ್ಷಣೆಯ ಸಲುವಾಗಿ ಸಾಮಾಜಿಕ ವಿಧಿ ನಿಷೇಧಗಳನ್ನು ಜಾರಿಗೆ

ತಂದಿರುವುದು ಸಹಜ. ಒಮ್ಮೆ ಇಂಥ ಸರಿತಪ್ಪುಗಳ ನಂಬಿಕೆ ಬೆಳೆದುಬಿಟ್ಟಿತೆಂದರೆ, ಅವುಗಳನ್ನು ಬದಲಾಯಿಸುವುದು, ಕಡೆಗೆ ರೂಢಿಯನ್ನು ಬಿಟ್ಟು ಆಲೋಚಿಸುವುದು ಕೂಡ ಸುಲಭ ಸಾಧ್ಯವಲ್ಲ. ಸಾಂಪ್ರದಾಯಿಕ ದೃಷ್ಟಿಯುಳ್ಳವರಿಗೆ ಅವರು, ಗಂಡಸರಿರಲಿ ಹೆಂಗಸರಿರಲಿ ರೂಢಿಗತ ಪದ್ಧತಿಗಳಲ್ಲಿ ತಪ್ಪು ಕಾಣಿಸುವುದಿಲ್ಲ. ಯಾರಾದರೂ ಟೀಕೆ ಮಾಡಿದರೆ 'ಛೆ ! ಎಂಥ ಮಾತು ಸುಶೀಲೆ ! ನಮ್ಮದು ಎಂಥ ಇತಿಹಾಸ' ಎಂಬ ಸಿದ್ಧ ಪ್ರಕ್ರಿಯೆ ಬರುತ್ತದೆ. ಆದ್ದರಿಂದ ಸಂಪ್ರದಾಯದ ಲೋಪದೋಷಗಳನ್ನು ಗುರುತಿಸುವುದಕ್ಕೆ ಕೂಡ ಪ್ರಜ್ಞೆಯ ಒಂದು ಸ್ಥಿತ್ಯಂತರವು ಅಗತ್ಯವಾಗಿತ್ತು. ನಮ್ಮ ದೇಶದಲ್ಲಿ ಹೆಚ್ಚು ಹೆಚ್ಚು ಮಹಿಳೆಯರಿಗ ವಿದ್ಯಾಭ್ಯಾಸ ದೊರೆತುದು ಮತ್ತು ಜಗತ್ತಿನ ಬೇರೆ ಬೇರೆ ಮಾನವ ಸಮುದಾಯಗಳ ಪರಿಚಯುವಾದುದು ಪ್ರಜ್ಞೆಯ ಒಂದು ಸ್ಥಿತ್ಯಂತರಕ್ಕೆ ಕಾರಣವಾಯಿತೆನ್ನಬಹುದು.

ಪ್ರಜ್ಞಾವಂತ ಸ್ತ್ರೀಯರು ಹೊಸ ಸಂವೇದನೆಗಳಿಂದ ತಮ್ಮನ್ನೇ ಗಮನಿಸಿದಾಗ ತಮ್ಮ ಬದುಕು ತಮ್ಮದಲ್ಲದ ಶಕ್ತಿಗಳಿಂದ ನಿಯಂತ್ರಿತವಾಗುವುದನ್ನು ಕಂಡುಕೊಂಡರು. ತಾವು 'ಬಂಧಿತರು' ಎಂಬ ಭಾವನೆ ಅವರಲ್ಲಿ ಮೂಡಿತು. ಈ ಬಂಧನದಿಂದ ಬಿಡುಗಡೆಯ ಆಶಯವನ್ನು ಹಲವು ಬಗೆಯಲ್ಲಿ ವ್ಯಕ್ತಪಡಿಸಿರುವುದುಂಟು. ಮುಖ್ಯವಾಗಿ ಸಾಮಾಜಿಕ, ಸಾಂಸ್ಕೃತಿಕ ಮತ್ತು ಸಾಹಿತ್ಯಕ ಸಂದರ್ಭಗಳಿಗೆ ಲೇಖಕಿಯರು ತೋರಿರುವ ಪ್ರತಿಕ್ರಿಯೆಯ ರೂಪದಲ್ಲಿ 'ಬಿಡುಗಡೆಯ ಆಶಯ'ವನ್ನು ವಿಶ್ಲೇಷಿಸಬಹುದು—

ಬಿ.ಟಿ. ಲಲಿತಾನಾಯಕ್ ಅವರ 'ನಂ ರೂಪ್ಲಿ......' ಸಂಕಲನದ ಹಲವು ಕವಿತೆಗಳು ಶೋಷಣೆಯ ವಿರುದ್ಧ ಆಕ್ರೋಶ, ಪ್ರತಿಭಟನೆಗಳನ್ನು ನೇರವಾಗಿ ಘೋಷಿಸುತ್ತವೆ. ಉದಾ :

'ನಮ್ಮೆದೆಯ ಮೇಲಿಡುವ ನಿಮ್ಮ ಕಾಲಿಗೆ ಪೂಜೆ । ಸಲ್ಲಿಸಬಹುದೆಂಬ
ಕನಸ ಕಾಣದಿರಿ ನೀವು । ಬರುತ್ತಿದ್ದೇವೆ ಬಿರುಗಾಳಿಯಾಗಿ ।
ಗುಡುಗಾಗಿ ಸಿಡಿಲಾಗಿ । ಇನ್ನು ತಡೆಯಲಾರಿರಿ । ಸರಿದು ನಿಲ್ಲಿ......'
(ಮುಂಜಾವು)

ಎಂಬಂಥ ಸಾಲುಗಳನ್ನು ನೋಡಬಹುದು, ಆದರೆ ಈ ಬಗೆಯಲ್ಲಿ ಪ್ರತಿಭಟನೆಯನ್ನು ಘೋಷಿಸುವುದಕ್ಕಿಂತಲೂ ಪರಿಸ್ಥಿತಿಯ ಸ್ವರೂಪವನ್ನು ಸಮಗ್ರವಾಗಿ ಗ್ರಹಿಸುವ, ಸಾಹಿತ್ಯದ ಸೂಕ್ಷ್ಮತೆಗಳೊಂದಿಗೆ ಅಭಿವ್ಯಕ್ತಿಸುವ ರಚನೆಗಳು ವಿಮರ್ಶೆಯ ದೃಷ್ಟಿಯಿಂದ ಮುಖ್ಯವೆನಿಸುತ್ತವೆ.

ಹೆಣ್ಣಿನ ಶೋಷಣೆಯ ವಿವಿಧ ಮುಖಗಳು ಸ್ಪಷ್ಟವಾಗಿ ಗೋಚರಿಸುವುದು ವಿಷಮ ದಾಂಪತ್ಯದ ಚಿತ್ರಣದಲ್ಲಿ. ಇದು ಸ್ವಾಭಾವಿಕವೂ ಹೌದು. ಏಕೆಂದರೆ ಹಿಂದೆ

ಉದ್ಧರಿಸಿದ ಮುಕ್ತಾ ಅವರ, ಹೇಮಾ ಅವರ ಕವಿತೆಗಳಲ್ಲಿ ನೋಡಿದ ಹಾಗೆ ಹೆಣ್ಣು ರತಿಸುಖದ ಅಥವಾ ಸುಖರತಿಯ ಮತ್ತು ಸಂತಾನ ಪ್ರಾಪ್ತಿಯ ಔಚಿತ್ಯ, ಆನಂದ ಗಳನ್ನು ನಿರೀಕ್ಷಿಸುತ್ತಾಳೆ. ಮದುವೆಯಿಂದ ಆರಂಭವಾದ ದಾಂಪತ್ಯವು ಸಮರಸವಾಗಿ ಮುಂದುವರಿದರೆ ಯಾರದೂ ತಕರಾರಿಲ್ಲ. ಆದರೆ ದಾಂಪತ್ಯವಿರಸಕ್ಕೆ ಎಡೆಗೊಡುವ ಕಾರಣಗಳು ಹಲವಾರು.

ನಮ್ಮ ಲೇಖಕಿಯರಲ್ಲಿ ಹಿರಿಯರಾದ ಎಚ್.ವಿ. ಸಾವಿತ್ರಮ್ಮನವರ 'ಅವಳ ದೊಂದು ಕತೆ' (ಈ ಶೀರ್ಷಿಕೆಯೆ ಒಂದು ಮಾದರಿಯನ್ನು ಸೂಚಿಸುತ್ತದೆ) ಯಲ್ಲಿ ಸಂಕಟಕ್ಕೆ ಸಿಕ್ಕಿ ಹುಚ್ಚಳಾದ ಹೆಣ್ಣೊಬ್ಬಳ ಚಿತ್ರವಿದೆ. ನಿರೂಪಣೆಯ ಬಾಲ್ಯದ ಗೆಳತಿ ವಿಮಲೆ ತುಂಬ ಸೂಕ್ಷ್ಮ ಸ್ವಭಾವದವಳು ; ಸುಖದಾಂಪತ್ಯದ ಕನಸು ಕಂಡವಳು. ಆಕೆ ಯನ್ನು ಮದುವೆ ಮಾಡಿಕೊಟ್ಟುದು, ದೊಡ್ಡ ಶ್ರೀಮಂತನೆಂಬ ತಪ್ಪು ತಿಳಿವಳಿಕೆಯಿಂದ ಒಬ್ಬ ಸ್ಕೂಲು ಮೇಷ್ಟರಿಗೆ. ಮದುವೆಯಾದ ಮೇಲೆ ನಿರೂಪಕಿಯು ನೋಡಲು ಹೋದಾಗ ಪುಟ್ಟ ಮನೆಯಲ್ಲಿ ಬಡ ಗಂಡನೊಡನೆ ಬದುಕುತ್ತಿದ್ದ ವಿಮಲೆ ಗೆಳತಿಯನ್ನು ಬರಮಾಡಿಕೊಳ್ಳಲು ಮುಜುಗರ ಪಡುತ್ತಾಳೆ. ಆಮೇಲೆ ಕೆಲವು ವರ್ಷಗಳಲ್ಲಿ ಗಂಡ ತೀರಿಹೋದದ್ದರಿಂದ ವಿಮಲೆಯು ಭಾವನಾದ (ಗಂಡನ ಅಣ್ಣ) ಜಗನ್ನಾಥ ರಾಯನ ಜೊತೆಯಲ್ಲಿ ಹೈದರಾಬಾದಿಗೆ ಹೋಗುತ್ತಾಳೆ. ನಿರೂಪಕಿಯು ಎರಡನೆ ಬಾರಿ ವಿಮಲೆ ಯನ್ನು ಕಂಡದ್ದು ಒಂದು ಸ್ತ್ರೀ ಸಮ್ಮೇಳನದಲ್ಲಿ "...ಆ ಸಮ್ಮೇಳನದಲ್ಲಿ ವಿಮಲೆ ಪ್ರತಿ ನಿಧಿಯ ಬಿಲ್ಲೆ ಧರಿಸಿ ವೇದಿಕೆಯ ಮೇಲೆ ಕುಳಿತಿದ್ದಳು. ಈಗ ಅವಳನ್ನು ನೋಡಿ ಸಂತೋಷವೇ ಆಯಿತು. ಮೊದಲು ಕಂಡಿದ್ದ ಕತ್ತಲು ಮನೆಯಲ್ಲಿ ದುಃಖದ ನೆರಳಿನಲ್ಲಿ ನಲುಗುತ್ತಿದ್ದ ವಿಮ್ಮಿ ಇವಳಲ್ಲ.......ಸೊಗಸಾದ ರೇಷ್ಮೆ ಸೀರೆಯುಟ್ಟು ಅಂದವಾಗಿ ತುರುಬುಕಟ್ಟಿ ಕಳೆತುಂಬಿಕೊಂಡಿದ್ದಳು. ಗಲ್ಲದ ಮೇಲಿನ ಗುಳಿಗಳು ನಗುತ್ತಿದ್ದವು." ಮತ್ತೊಮ್ಮೆ ವಿಮಲೆಯನ್ನು ಕಂಡದ್ದನ್ನು ಲೇಖಕಿ ವರ್ಣಿಸುತ್ತಾರೆ "...ಅವಳ ಗಂಡ ಸತ್ತುಹೋಗಿದ್ದ. ಆದರೂ ಆ ಸೊಗಸು, ಸಡಗರ ಅಲಂಕಾರ ! ಖಂಡಿತ ವಿಮಲೆ ವಿಧವೆ ಯಲ್ಲ. ಅಷ್ಟು ಸೌಂದರ್ಯ ಕಾಡಿನ ಹೂವಾಗಿರಲಾರದು. ನನ್ನ (ನಿರೂಪಕಿಯ) ಹೃದಯ ಮಿಡುಕಿತು... "ಇನ್ನೊಮ್ಮೆ ಮದುವೆ ಮನೆಯಲ್ಲಿ ಕಂಡಾಗ" ಆಹಾ ಎಷ್ಟು ಮುದ್ದಾದ ಹಲ್ಲಿನ ಸಾಲು ! ಕೆಂಪು ತುಟಿ, ಮಾಟವಾದ ಹುಬ್ಬು, ಕನ್ನಡಿಯಂತಿದ್ದ ಕೆನ್ನೆಗಳು. ಹೆಂಗಸಾದ ನನಗೆ ಉಸಿರು ಕಟ್ಟಿದಂತಾಗಲು ಇನ್ನು ಜಗನ್ನಾಥರಾಯರ ಪಾಡೇನು ಎಂದುಕೊಂಡೆ."

ನಿರೀಕ್ಷಿಸಿದ್ದಂತೆಯೆ ವಿಮಲೆಯ ಪ್ರವೇಶದಿಂದ ಜಗನ್ನಾಥರಾಯರ ಕುಟುಂಬದಲ್ಲಿ ವಿರಸ ಶುರುವಾಗುತ್ತದೆ. ಜಗನ್ನಾಥರಾಯರ ಪತ್ನಿ ಸರೋಜಮ್ಮನಿಗೂ ವಿಮಲೆಗೂ ಮನಸ್ತಾಪ. ಇನ್ನಷ್ಟು ವರ್ಷಗಳ ಮೇಲೆ ಜಗನ್ನಾಥರಾಯರು ಸತ್ತು ಹೋದದ್ದರಿಂದ ವಿಮಲೆ ಅನಾಥೆಯಾಗಿ, ಬೀದಿಗೆ ಬಿದ್ದು ಹುಚ್ಚಿಯಾಗುತ್ತಾಳೆ. ಊರ ದೇವಸ್ಥಾನದ

ಎದುರಿಗೆ ನಿಂತ ಹುಚ್ಚಿ ವಿಮಲೆಯನ್ನು ಕಂಡ ನಿರೂಪಕಿಯು ಹಿಂದಿನ ಕಥೆ ಹೇಳುತ್ತಾಳೆ... ವಿಮಲೆಯ ದುರಂತವನ್ನು ಯಾರಾದರೂ ತಪ್ಪಿಸಬಹುದಿತ್ತೆ ಎಂಬ ಪ್ರಶ್ನೆಗೆ ಕಥೆಯಲ್ಲಿ ಸೂಚಿತವಾಗಿರುವ ಉತ್ತರ : "ತಮ್ಮ ಸತ್ತಮೇಲೆ ಅವನ ಹೆಂಡತಿಯನ್ನು ಜಗನ್ನಾಥರಾಯರು ಮನೆಗೆ ಕರೆದುಕೊಂಡು ಬಂದಾಗ, ಆತನ ಕಾರ್ಯವನ್ನು ಕೆಡುಕೆಂದೆಣಿಸದೆ ಸರೋಜಮ್ಮನೂ ವಿಮಲೆಯನ್ನು ಆದರದಿಂದ ಬರಮಾಡಿಕೊಂಡಿದ್ದರೆ... ಅವಳು ಯಾರ ಬಾಯಿಗೂ ಸಿಕ್ಕದೆ ಆ ಮನೆಯ ಮಗಳಾಗಿ ಉಳಿಯಬಹುದಿತ್ತು." ಎಂಬುದು. ಈ ಕಥಾವಸ್ತುವಿನ ಆಲೋಚನಾ ವಿಧಾನ ಮತ್ತು ಅಲ್ಲಿ ಸೂಚಿತವಾದ ಪರಿಹಾರಗಳು ಎಷ್ಟೊಂದು ಅಸಂಬದ್ಧವೆಂಬುದನ್ನು ತಿಳಿದಿರಬೇಕು. ಕಥೆಯನ್ನೂ ವಿವರವಾಗಿ ಪ್ರಸ್ತಾಪಿಸಿದ ಉದ್ದೇಶವೇ ಅದು.

ಈಚಿನ ಪ್ರಮುಖ ಲೇಖಕಿಯರಲ್ಲೊಬ್ಬರಾದ ವೈದೇಹಿಯವರ ಸಂಗ್ರಹದಲ್ಲೂ ಒಬ್ಬಳು ಹುಚ್ಚಿಯ ಕಥೆಯುಂಟು :—

ಅಕ್ಕುವಿಗೆ ದೊಡ್ಡ ಕುಂಕುಮವಿದೆ ; ಆದರೆ ಗಂಡನಿಲ್ಲ. ಗಂಡ ಸನ್ಯಾಸಿಯ ಹಿಂದೆ ಹೋದಲಾಗಾಯ್ತು ಅಕ್ಕು ಬಸಿರಿ ಪಾರ್ಟು ಮಾಡುವ ಹುಚ್ಚಿಯಾಗಿದ್ದಾಳೆ. ಯಾವ ಎಗ್ಗೂ ಇಲ್ಲದೆ ಹಡೆ ಮಾತಾಡುತ್ತಾಳೆ. ಅಂದರೆ, ತಮ್ಮಣ್ಣಯ್ಯನ ಹೆಂಡತಿಯ ಜೊತೆ ವಾಸಣ್ಣಯ್ಯ ಮಲಗಿದ್ದ ಸಂಗತಿಯನ್ನು ಗಂಡಸರು ಹೆಂಗಸರು ಹಿರಿಯರೆದುರಿಗೆ ನಿರ್ಭಿಡೆಯಿಂದ ಒದರುತ್ತಾಳೆ. ಒಮ್ಮೆ ಹೀಗೆ ಮಾತಾಡಿದ್ದಕ್ಕಾಗಿ ಅಕ್ಕು ವಾಸಣ್ಣಯ್ಯನಿಂದ ಮೈಮುರಿಯ ಹೊಡೆತ ತಿನ್ನುತ್ತಾ ಬೊಬ್ಬಿಟ್ಟಳು.

"ಅಯ್ಯಯ್ಯೊ ನನ್ ಜೀವ ತೆಗೀತಾ ವಾಸೂ.... ಅಪ್ಪಯ್ಯ ನಂಗೆ ಹೊಡೀತಾ ನನ್ ಮಗೂನ ಕೊಲ್ತಾ ಕಾಣಿ ಅಪ್ಪಯ್ಯಾ. ಇವನ್ ಮೊನ್ನೆ ತಮ್ಮಣ್ಣಯ್ಯನ್ ಜಗಲೀಮ್ಯಾಲೆ ಯಾಕಿದ್ದ ಕೇಳಿ ಅಪ್ಪಯ್ಯಾ..." ಎಂದು ಗೋಳಿಡುತ್ತಿದ್ದ ಅಕ್ಕುವಿನ ಬಾಯ ಮೇಲೆ ವಾಸಣ್ಣ ಮತ್ತೆ ಮತ್ತೆ ಹೊಡೆದ. ಯಾರೂ ತಡೆಯಲಿಲ್ಲ, ಬಿಡು ಎನ್ನಲಿಲ್ಲ : ಅಕ್ಕುವನ್ನು ಈಚೆಗೆ ಎಳೆದುಕೊಳ್ಳಲಿಲ್ಲ. ಕ್ಷಣಕ್ಷಣಕ್ಕೂ ನೋಡುವ ಜನಸಂಖ್ಯೆ (ಅವರಲ್ಲಿ ಸಾಕಷ್ಟು ಹೆಂಗಸರು) ಬೆಳೆಯುತ್ತ ಇತ್ತು. ಆ ದೃಶ್ಯ ನಿರಂತರವಾಗಿರಬೇಕು ಎಂಬ ಬಯಕೆಯಿಂದ ನಿಂತಂತಿತ್ತು.

ದಾಂಪತ್ಯ ಮುರಿದು ಬಿದ್ದಮೇಲೆ ಗಂಡಸು ಮಾಡಬಹುದಾದ್ದನ್ನು ಈ ಹೆಣ್ಣು ಕೇವಲ 'ಭ್ರಮಿಸಿದ್ದ'ಕ್ಕೆ, ಗಂಡಸು ತೀರ ಸಲೀಸಾಗಿ ಆಡಬಹುದಾದ ಹಡೆಮಾತುಗಳನ್ನು ಆಡಿದ್ದಕ್ಕೆ ಹೆಣ್ಣೊಬ್ಬಳು ಅನುಭವಿಸಿದ ಶಿಕ್ಷೆ ಇದು. 'ಈ ದೃಶ್ಯ ನಿರಂತರವಾಗಿರಬೇಕು ಎಂಬ ಬಯಕೆಯಿಂದ' ಗಂಡಸರು ಹೆಂಗಸರು ನಿಂತು ನೋಡುವುದರಲ್ಲಿ ನಮ್ಮ ಸಂಸ್ಕೃತಿಯ ದುರಂತವಿದೆ. ಮಹಿಳೆಯ ಬಿಡುಗಡೆಯಾಗಬೇಕಾಗಿರುವುದು ಈ ದುರಂತದಿಂದ.

ದಾಂಪತ್ಯದಲ್ಲಿ ಹೆಣ್ಣು ಗಂಡಿಗೆ ದ್ವಿಮುಖಿ ನೀತಿಯೇಕೆ ? ಎಂದು ಪ್ರಶ್ನಿಸುವುದನ್ನು ಶಶಿಕಲಾ ವಸ್ತ್ರದ ಅವರ 'ಗುಬ್ಬಿಮನೆ'ಯಲ್ಲಿ ಕಾಣಬಹುದು. "ಜೇಲಿದಾಟಿ ಹೊರಗ ಬಂದ್ರ । ಕಾಲ ಮುರಿದು ಕಯ್ಯಾಗ್ ಕೊಡ್ತೀನಿ ನೋಡ। ಅಂತ ಹೆದ್ರಿಸ್ತಿದ್ದೆಲ್ಲ। ಮತ್ ಈಗ ನೀ ಮಾಡೋದ್ ಏನು ? ತುಡುಗುದನದಂಗ ಜೇಲಿ ಹಾರಿ । ಸಿಕ್ಕ ಸಿಕ್ಕ ಹೊಲಾ ಎಲ್ಲಾ ಹೊಕ್ಕ । ಹೊರಗೆ ಬರೋದ ನನಗೇಟೇಟು ಪಸಂದಿಲ್ಲ ನೋಡು"

ಈ ಬಗೆಯ ಗಂಡಿನ ಸ್ವೇಚ್ಛಾಚಾರಕ್ಕೆ ಬದಲಾಗಿ ಹೆಣ್ಣು ಬಯಸುವುದಾದರೂ ಏನನು ?

"ನಾ ಗುಬ್ಬಿ ಮನೀ ಕಟ್ಟೇಕು । ನೀ ಜೇಲಿ ಕಟ್ಟೇಕು । ನಾವಿಬ್ರೂ ಆ ಜೇಲಿ ಒಳಗಿನ ಗುಬ್ಬಿ ಮನ್ಯಾಗ್ ಕುಂತು । ಬೆಚ್ಚಗೆ ಜೀಂಕ ಕಾಸ್ಬೇಕು..." ಎನ್ನೂವಲ್ಲಿ 'ಜೇಲಿ ಕಟ್ಟುವ' ಗಂಡಿನ ಅಧಿಕಾರವನ್ನೂ ಪ್ರಶ್ನಿಸದೆ, ಅವನು ಕೂಡ ಆ ಜೇಲಿಯೊಳಗೇ ಇರಬೇಕೆಂಬ ನಿರ್ಬಂಧವನ್ನಷ್ಟೇ ವಿಧಿಸುವ ಹಾಗೆ ತೋರುತ್ತದೆ.

ಸಮಾಜವಾದಿ ಕಿಷನ್ ಪಟ್ನಾಯಕ್ ತಮ್ಮ ಒಂದು ಪ್ರಬಂಧದಲ್ಲಿ 'ಹೆಣ್ಣಿಗೇನು ಬೇಕು ಸ್ವಾತಂತ್ರ್ಯವೋ ಸಮಾನತೆಯೊ ?' ಎಂಬ ಪ್ರಶ್ನೆ ಹಾಕಿಕೊಂಡು ಹೆಣ್ಣಿಗೆ ಬೇಕಾದುದು ಸ್ವಾತಂತ್ರ್ಯ, ಅದರಲ್ಲೂ ಲೈಂಗಿಕ ಸ್ವಾತಂತ್ರ್ಯ–ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ಆದರೆ ನಮ್ಮ ಲೇಖಕಿಯರ ಅಭಿಪ್ರಾಯವನ್ನು ಗಮನಿಸಿದರೆ ಅವರು ಲೈಂಗಿಕ ವಿಚಾರದಲ್ಲೂ ಪೂರ್ಣ ಪ್ರಮಾಣದ ಸ್ವಾತಂತ್ರ್ಯವನ್ನು ಬಯಸದೆ ಸಮರಸ ದಾಂಪತ್ಯದ ಮೇಲೆ ಒತ್ತು ಕೊಡುವ ಹಾಗೆ ತೋರುತ್ತದೆ.

ಅನುಕೂಲ ದಾಂಪತ್ಯವನ್ನು ನಿರೀಕ್ಷಿಸಿ ಅದು ಕೈಗೂಡದಿದ್ದಾಗ ಕಿಡಿಮಿಡಿಗೊಳ್ಳುವ, ದ್ವಂದ್ವದಲ್ಲಿ ಸಿಕ್ಕಿ ಚೀಳುವ ಪಾತ್ರಗಳನ್ನೂ ನಮ್ಮ ಲೇಖಕಿಯರು ಸೃಷ್ಟಿಸಿದ್ದಾರೆ. 'ಮಹಿಳಾ ವರ್ಷದಲ್ಲಿ ಅವ್ವನಿಗೊಂದು ಪತ್ರ'ದ ನಾಯಿಕೆ (ಶಶಿಕಲಾ ವಸ್ತ್ರದ) ತನ್ನ ಬದುಕನ್ನೂ ತನ್ನ ಅವ್ವನ ಬದುಕಿನೊಂದಿಗೆ ಹೋಲಿಸಿಕೊಳ್ಳುತ್ತಾಳೆ. ಕುಡುಕ ಗಂಡನ ಹೊಡೆತಗಳನ್ನು, ಆತ ತನ್ನ ಕಣ್ಣೆದುರಿಗೇ ಬೇರೊಂದು ಹೆಣ್ಣಿನೊಡನೆ ಸರಸವಾಡುವುದನ್ನು ತುಟಿಕಚ್ಚಿ'; ಅಳು ನುಂಗಿ ಸಹಿಸಿದಳಂತೆ ಅವ್ವ. ಅವ್ವನ ಬದುಕಿನ ಮೋಡಿಗೆ ಮಗಳು ಬೆರಗಾಗಿದ್ದಾಳೆ. ಅಂದರೆ, ಆಧುನಿಕಳಾದ ತನ್ನ ಬದುಕಿನ ಸಮಸ್ಯೆಗಳಿಗೆ ಮಗಳು ಅವ್ವನ ಹಾಡಿನ ಲಯದಲ್ಲಿ ಪರಿಹಾರ ಕಾಣುತ್ತಿದ್ದಾಳೆಯೆ ಎಂಬ ಪ್ರಶ್ನೆ ಮಾತ್ರ ಉತ್ತರವಿಲ್ಲದೆ ಉಳಿಯುತ್ತದೆ.

ವಿಷಮ ದಾಂಪತ್ಯದ ಸಮಸ್ಯೆ ಬಂದಾಗ ಅದರಿಂದ ಬಿಡುಗಡೆ ಬಯಸುವ ಆಧುನಿಕ ಮಧ್ಯಮ ವರ್ಗದ ಮಹಿಳೆಯರನ್ನು ಮತ್ತೊಂದು ಸಂದಿಗ್ಧವು ಕಾಡುತ್ತದೆ. ತಮ್ಮ ಹಿರಿಯರು ಮತ್ತೆ ಇದೇ ಸಮಾಜದ ಕೆಳವರ್ಗದ ಜನರ ಹೊಂದಾಣಿಕೆ ತಮಗೇಕೆ ಸಾಧ್ಯವಾಗುತ್ತಿಲ್ಲ ಎಂಬುದೇ ಆ ಸಂದಿಗ್ಧ.

'ಒಂದು ಅಪರಾಧದ ತನಿಖೆ' ಕಥೆಯಲ್ಲಿ (ವೈದೇಹಿ) ಗಂಡನನ್ನು ಬಿಟ್ಟು ತೌರು ಮನೆಗೆ ಬಂದಿರುವ ನಾಯಕಿಯನ್ನು, ಹಿಂದೆ ಆ ಮನೆಯ ಕೆಲಸದವಳಾಗಿದ್ದ ಬಾಬಿ ಪ್ರಶ್ನಿಸುತ್ತಾಳೆ. "ಕುಸುಮಕ್ಕ, ನೀವೀಗ ಇಲ್ಲಿಯೇ ಇರುವಿರಂತೆ! ಗಂಡನನ್ನು ಬಿಟ್ಟಿರಂತೆ ಯಾಕೆ ?" ಅಂತ. ಮುಂದೆ ಇದೇ ಪ್ರಶ್ನೆ ಕುಸುಮಕ್ಕನ ಮನಸ್ಸಿನಲ್ಲಿ ಬೃಹತ್ತಾಗಿ ಬೆಳೆದು, ಆಕೆ ತನ್ನ ಕನಸಿನಲ್ಲಿ ನ್ಯಾಯಾಲಯದ ಕಟಕಟೆಯಲ್ಲಿ ನಿಂತು ವಿಚಾರಣೆ ಎದುರಿಸಬೇಕಾಗುತ್ತದೆ. ತನಿಖೆ ನಡೆಸುವುದು ಕಪ್ಪು ಕೋಟು, ಬಿಳಿ ಪೇಟ ಕಂಕುಳಲ್ಲಿ ರಿಕಾರ್ಡ್‌ಗಳ ಕಟ್ಟನಿಟ್ಟುಕೊಂಡಿದ್ದ–ಪಬ್ಲಿಕ್ ಪ್ರಾಸಿಕ್ಯೂಟರ್–ಬಾಬಿ.

'ನೀವೇ ಗಂಡನನ್ನು ಬಿಟ್ಟು ಬಂದಿರಾ ? ಅಥವಾ ನಿಮ್ಮ ಗಂಡನೆ ನಿಮ್ಮನ್ನು ಬಿಟ್ಟರಾ ? ಅಥವಾ ಅವರೆಲ್ಲ ಸೇರಿ ಬಿಡಿಸಿದರಾ ?—ಎಂಬ ನ್ಯಾಯವಾದಿಯ ಪ್ರಶ್ನೆಗಳಿಗೆ ನಾಯಕಿಯು ಕೊಡಬೇಕೆಂದಿದ್ದ ಉತ್ತರ ಅವಳ ಗಂಟಲಲ್ಲೇ ಸಿಕ್ಕಿಕೊಳ್ಳುತ್ತದೆ.

ಹೀಗೆ ಕುಸುಮಕ್ಕನನ್ನು ಪ್ರಶ್ನಿಸುತ್ತಿರುವ ಬಾಬಿ ಸ್ವತಃ ಒಬ್ಬ ದುಷ್ಟ ಗಂಡಸಿನ ಎರಡನೆಯ ಹೆಂಡತಿಯಾಗಿ ಸಂಸಾರ ಮಾಡಿ, ಮಗಳನ್ನು ಹೆತ್ತು ಬೆಳೆಸಿ ಈಗ ಆ ಹದಿನೈದು ವರ್ಷದ ಹುಡುಗಿಯ ಮದುವೆ ಸಿದ್ಧತೆಯಲ್ಲಿದ್ದಾಳೆ. ಈಗಲೆ ಯಾಕೆ ? ಎಂದರೆ, 'ಆಮೇಲೆ ಅಂಥವ ಬೇಡ ಇಂಥವ ಬೇಡ ಅಂತ ಕೂತುಕೊಳ್ಳುವುದು ಕಡೆಗೆ ಯಾರನ್ನಾದರೂ ಕಟ್ಟಿಕೊಂಡು ಹೋಗುವುದು ; ಇಲ್ಲ ಗಂಡನ ಮನೆಯಲ್ಲಿ ಬೇಯಲಿಕ್ಕಾಗದೆ ಅರ್ಧ ಆಟಕ್ಕೆ ವಾಪಸ್ಸು ಬಂದವರಂತೆ ಬರುವುದು. ಮಕ್ಕಳಿಗೆ ತಲೆ ಪೂರಾ ಬೆಳೆಯುವುದರೊಳಗೆ ಮದುವೆ ಮಾಡಿಬಿಡಬೇಕು. ನನ್ನ ಕೇಳಿದರೆ ಬೇಗ ಬೇಗ ಎರಡು ಮಕ್ಕಳಾಗಬೇಕು. ಮತ್ತೆಲ್ಲ ಸರಿಹೋಗುತ್ತೆ...' ಎಂಬ ದಾಂಪತ್ಯ ಮೀಮಾಂಸೆ ಅವಳ ಬಳಿ ಸಿದ್ಧವಿದೆ.

ಬಾಬಿಯ ಅಪ್ಪ ನಾಗಮ್ಮನೂ ಒಬ್ಬಾತನ ಎರಡನೆಯದೋ ಮೂರನೆಯದೋ ಹೆಂಡತಿಯಾಗಿ ಸಂಸಾರ ನಡೆಸಿದ್ದನ್ನೂ ಜ್ಞಾಪಿಸಿಕೊಂಡ ಕುಸುಮ ತನ್ನ ತಾಯಿಯ ಹತ್ತಿರ 'ಅವರು ಗಟ್ಟಿ ಅಲ್ಲವ ಅಮ್ಮ' ಎಂದರೆ ಥಟ್ಟನೆ 'ಹೂಂ ನಿಮ್ಮ ಹಾಗ ಮತ್ತೆ ?' ಎನ್ನುತ್ತಾರವರು.

'ನೀ ಏನೇ ಹೇಳು ವಿದ್ಯೆ ಕಲಿಯದಿದ್ದಾಗ ಧೈರ್ಯ ಒಂದಿತ್ತು. ಈಗ ಅದೂ ಇಲ್ಲ...' ಎಂದು ಕಥಾ ನಾಯಕಿ ಕುಸುಮಕ್ಕ ತನ್ನ ಆಪ್ತ ಸಖಿಯ ಎದುರು ನಿಟ್ಟುಸಿರು ಬಿಡುತ್ತಾಳೆ.

ಸಂಪ್ರದಾಯಸ್ಥರ ಜೀವನ ವಿಧಾನಗಳು ಹೊಸ ಕಾಲದ ಹುಡುಗಿಯರಿಗೆ ಬಂಧನವೆನಿಸುವ ಸಂದರ್ಭಗಳ ಚಿತ್ರಣಕ್ಕಾಗಿ ವಿ. ಆರ್. ಪ್ರತಿಭಾ ಅವರ 'ನಾವು ಹುಡುಗಿಯರೇ ಹೀಗೆ' ಸಂಕಲನವನ್ನು ನೋಡಬಹುದು.

"ನನ್ನ ಜೀವನ ಎಂದರೆ ಗಂಟೆಗಟ್ಟಲೆ ಕೂತು ಸುಂದರವಾಗಿ ಬಿಡಿಸಿದ್ದ ವರ್ಣ

ಚಿತ್ರದ ಮೇಲೆ ನನ್ನವರೆಸಿಸಿಕೊಂಡವರು ! ಥಟ್ಟನೆ ಚೆಲ್ಲಿದ ಕಪ್ಪು ಮಸಿ..."
(ಗುಟ್ಟು)

"ನಾನೊಬ್ಬನ ಪತ್ನಿ ಮೂರು ಮಕ್ಕಳ ತಾಯಿ । ಇನ್ನೂ ನನ್ನ ಸೀರೆ ಕುಪ್ಪಸ ಬಿಚ್ಚೆ ಬರೆ ಬೈತಲೆ ಎಲ್ಲ ನನ್ನ ಅತ್ತೆ ಮಾವನ ಮರ್ಜಿ " (ನಾನು)

"ಒತ್ತಿ ಒತ್ತಿ ಮೇಲೆದ್ದು ಸೋರದಂತೆ । ತುರುಕಿ ಭದ್ರವಾಗಿ ಅಂಟಿಸಿರುವ ಲೇಬಲ್ಲು ಹೊತ್ತ ಬ್ರಾಂಡು । ಈ ಮಧ್ಯಮ ವರ್ಗದ ಹುಡುಗಿಯರು..."

ಬಿಡುಗಡೆಯ ಆಶಯದ ತೀವ್ರತೆಯಿಲ್ಲದಿದ್ದರೂ, ಈ ವಯಸ್ಸಿನ ಹುಡುಗಿಯರ ಮಾನಸಿಕ ವೇದನೆಯನ್ನೂ, ತಳಮಳವನ್ನೂ ಲಘುವನಾಗಿ ಚಿತ್ರಿಸುವ ಹಾಸ್ಯಪ್ರಜ್ಞೆ ಮೆಚ್ಚುವಂತಿದೆ.

ಒಂದು ಸ್ಥೂಲ ಅರ್ಥದಲ್ಲಿ 'ಸಾಂಸ್ಕೃತಿಕ ಸಂಘರ್ಷ' ಎನ್ನಬಹುದಾದ, ಎರಡು ಮೂರು ತಲೆಮಾರುಗಳ ನಡುವಿನ ಮಹಿಳೆಯರ ದೃಷ್ಟಿಕೋನದ ಅಂತರ ದಟ್ಟವಾಗಿ ಮೂಡಿರುವುದು ವೈದೇಹಿಯವರ 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿ'ಯಲ್ಲಿ. 'ನನ್ನ ಕಾಲದಲ್ಲಿ ಹೀಗಿತ್ತೆ' ಎಂದು ಹಳಹಳಿಸುವ ಮುದುಕಿಯೊಬ್ಬಳ ಸಾಕ್ಷಿಯಲ್ಲಿ, ಮದುವೆ ಮನೆಯಲ್ಲಿ ಸೇರಿದ್ದ ಮೂರುತಲೆಮಾರುಗಳ ಹೆಂಗಸರ ವರ್ತನೆ ಇಲ್ಲಿ ದಾಖಲಾಗಿದೆ.

ರಾಮರಾಯರ ಮಗಳು ತೋಳಿಲ್ಲದ ರವಿಕೆಯಲ್ಲಿ ಬಂದದ್ದು ಹಬ್ಬಾಗಿಲಜ್ಜಿಗೆ ನರಕ್, ನರಕ್ ಎನಿಸಿದೆ. ಅವಳ ಸಂಬಂಧಿ ಮುತ್ತಜ್ಜಿಗಂತೂ 'ಹಸಿಹೇಲು ಮೆಟ್ಟಿದ ಹಾಗಾಗಿದೆ.' ಈಗಿನ ಅಬ್ಬೆಯಂದಿರಿಗೆ ಬುದ್ಧಿಯಿಲ್ಲ ; ಹೆಣ್ಣು ಮಕ್ಕಳಿಗೆ ಜುಟ್ಟು ಬಗ್ಗಿಸಿ ಬುದ್ಧಿ ಕಲಿಸುವುದು ಬಿಟ್ಟು—' ಎಂಬುದು ಈ ಮುದುಕಿಯರ ಒಟ್ಟಭಿಪ್ರಾಯ.

ಅಲ್ಲಿ ಸೇರಿದ್ದ ಹೆಂಗಳೆಯರೆಲ್ಲ ಕಣ್ಣುಬಾಯಿ ಬಿಟ್ಟುಕೊಂಡು ತನ್ನನ್ನೆ ಗಮನಿಸುತ್ತಿರಲು, ಅವರ ನಡುವೆ ಚಿನ್ನಾಭರಣಗಳ ಮುಚ್ಚಳ ಹಾಕಿಕೊಂಡಂತೆ ಕುಳಿತು ಕೇಶಾಲಂಕಾರ ಮಾಡಿಕೊಳ್ಳುತ್ತಿರುವ ಸುಬ್ಬಲಕ್ಷ್ಮಿಯೊಬ್ಬಳಿದ್ದಾಳೆ. ಆಕೆಯನ್ನು 'ನಿನ್ನ ಗಂಡನೇಕೆ ಮದುವೆಗೆ ಬರಲಿಲ್ಲ ? ಎಂದು ಕೇಳಿದರೆ 'ಓಸೋ ಈ ಗಂಡಸರ ವಿಚಾರ ಹೇಗಂತ ಹೇಳುವುದು. ಹೆಂಗಸರ ಹತ್ತಿರ ಹೇಳಿಕೇಳಿ ಒಂದೇ ಒಂದು ಕೆಲಸ ಮಾಡಿದ್ದುಂಟ ಉಂಟಾ ಇವತ್ತಿಗೆ ?—ಎಂದು ನಿರ್ಭಾವುಕಳಾಗಿ ಉತ್ತರ ಕೊಡುತ್ತಾಳೆ.' ಸುಬ್ಬಕ್ಕನ ಧ್ವನಿಯಲ್ಲಿ ನೋವಿದೆ ಎನ್ನುವಂತಿಲ್ಲ. ಅದು ಬೀಗಿದಂತೆ ಕಂಡದ್ದು ಅದರೊಳಗೆ ಪೊಗರು ಹೊಕ್ಕಿಕೊಂಡದ್ದರಿಂದ ಇರಬಹುದು. ಆ ಪೊಗರನ್ನು ಕಿತ್ತು ಬಿಸಾಡಿದರೆ ಒಳಗೇನಿರಬಹುದು ? ಎಂದು ಸಮಾಜಶಾಸ್ತ್ರ ಓದುತ್ತಿರುವ ತರುಣಿ ವಿಶ್ಲೇಷಿಸುತ್ತಾಳೆ. ಅದೇ ಮನೆಯಲ್ಲಿ ಇನ್ನೊಂದು ಮದುವೆಯ ಪ್ರಸ್ತಾಪ ನಡೆಯುತ್ತಿದೆ. ದೊಡ್ಡವರೆಲ್ಲ

ಅತ್ತ ಹೋದ ಮೇಲೆ ಲತಾ ಎಂಬ ಹದಿಹರೆಯದ ಹುಡುಗಿ ಸಮಾಜಶಾಸ್ತ್ರಜ್ಞೆಯನ್ನು ಕೇಳುತ್ತಾಳೆ. 'ಅಲ್ಲ ಹುಡುಗ ಒಪ್ಪಿದ ಮೇಲೆ ಹುಡುಗಿಯದೂ ಒಪ್ಪಿಗೆಯೆ ಎಂದು ವಿಚಾರಿಸಿ, ಆಕೆ ಒಪ್ಪಿದಳೆಂದರೆ ಸ್ವಸ್ಥ ಮದುವೆ ಮಾಡುವುದು ಬಿಟ್ಟು ಇವರಿಗೆಲ್ಲ ಜಾತಕದ ಸುದ್ದಿಯೇಕೆ ?' ಎಂದು ಈ ಒಂದು ಪ್ರಶ್ನೆ ಲತಾಳ ಸ್ವಂತ ಪ್ರಶ್ನೆಯೊ, ಸ್ವಗತವೊ ಎಂಬುದನ್ನು ಸಮಾಜಶಾಸ್ತ್ರಜ್ಞೆ ಮಾತ್ರವಲ್ಲದೆ ಇಡೀ ಸಮಾಜವೇ ವಿಚಾರ ಮಾಡಬೇಕಾಗಿದೆ.

ಸಾಂಸ್ಕೃತಿಕ ನಿರೀಕ್ಷೆಗಳನ್ನೂ ಮೈಗೂಡಿಸಿಕೊಂಡ ಮಹಿಳೆಗೆ, ಅಂಥ ನಿರೀಕ್ಷೆಗಿಂತ ಭಿನ್ನವಾಗಿ ಬದುಕುವುದು ಎಷ್ಟೊಂದು ಮುಜುಗರದ ಸಂಗತಿಯಾಗುತ್ತದೆ ನೋಡಿ : ಒಂದುದಿನ ಮನೆಗೆ ಹೊರಗಿನಿಂದ ಬೀಗ ಹಾಕಿಸಿಕೊಂಡು ಒಳಗೆ ಒಬ್ಬಳೇ 'ಸ್ವತಂತ್ರ' ವಾಗಿರಬೇಕೆಂದು ಬಯಸಿದಳು ಮಾಲತಿ. ಈ ವಿಚಿತ್ರ ಬಯಕೆಯನ್ನ ನೋಡಿ ಆಕೆಯ ಗಂಡ 'ದಿನಾ ಒಬ್ಬ ಗಂಡನೊಡನೆಯೆ ಇದ್ದು ಬೇಜಾರು ಅಂತ ಅಂದರೂ ಅಂದೆ ನೀನು' ಎಂದು ತಮಾಷೆ ಮಾಡಿದರೆ 'ಒಂದು ವೇಳೆ ಹಾಗೆಂದರೂ ಅದಕ್ಕೆ ಏಕೆ ಆಶ್ಚರ್ಯ ಪಡಬೇಕು' ಎಂಬ ದಿಟ್ಟ ನುಡಿಯಾಡುತ್ತಾಳೆ. ಹೀಗೆ ಮೈ ಚಳಿಬಿಟ್ಟು ಮಾತಾಡುವ ಮಾಲತಿಗೆ ಗಂಡ ಮನೆಯಿಂದ ಹೋದಮೇಲೆ ಎಲ್ಲ ಬಟ್ಟೆ ಬಿಚ್ಚಿ ಸ್ನಾನ ಮಾಡಲು ಹೋದರೆ ಏನೋ ಮುಜುಗರ. ಬೀಗ ಹಾಕಿದ ಮನೆಯ ಬಚ್ಚಲಿನಲ್ಲಿ ನೀರು ಸುರಿಯುವುದು ಕೇಳಿ ಯಾರಾದರೂ ಮೇಲಿನಿಂದ ಇಣಿಕಿನೋಡಿದರೆ ! ಕಳ್ಳ ಹೊಕ್ಕಿರ ಬಹುದೆಂದು, ಬಾಗಿಲು ತೆರೆಸಿ ಯಾರಾದರೂ ಒಳಗೆ ಬಂದರೆ ! ಹೀಗೆಲ್ಲ ತಲೆಯಲ್ಲಿ ಭೂತಗಳು ಕುಣಿಯುತ್ತವೆ. (ಕೇರಳದ ಲೇಖಕಿ ಮಾಲತೀದಾಸ್ ಅವರು ಈಚಿನ ಒಂದು ಲೇಖನದಲ್ಲಿ, ಶ್ರೇಷ್ಠ ಕಲಾಕೃತಿಯೊಂದರ ನಗ್ನ ಶಿಲ್ಪದ ಬಗ್ಗೆ ಪ್ರತಿಷ್ಠಿತ ಮಹಿಳೆಯರು ಗುಲ್ಲೆಬ್ಬಿಸಿದ್ದನ್ನೂ ಪ್ರಸ್ತಾಪಿಸಿದ್ದಾರೆ.) 'ಮನುಷ್ಯನು ತನ್ನನ್ನೂ ತಾನೆ ಹೇಗೆ ಬಂಧಿಸಿ ಕೊಳ್ಳುತ್ತಾನೆ, ಕುದುರೆಯಂತೆ ! ಆಡಮ್ ಮತ್ತು ಈವ್ ಇಪ್ಪತ್ತನೆಯ ಶತಮಾನದ ಮನುಷ್ಯರಿಗಿಂತ ಎಷ್ಟೋ ಬುದ್ಧಿವಂತರು'- ಎಂದೆಲ್ಲ ಯೋಚಿಸುವ ಮಾಲತಿ ಗಂಡನ ಷರ್ಟು ಪ್ಯಾಂಟು ತೊಟ್ಟು ಟೀವಿಯಿಂದ ಕೂತು ಸಿಗರೇಟು ಸೇದುವುದರಲ್ಲೂ ಸಫಲ ಳಾಗುವುದಿಲ್ಲ. ಬದುಕು ತೀರ ಇಕ್ಕಟ್ಟಾಗಿದೆ ; ತಾನು ಯಾರಿಗಾಗಿಯೊ ಬದುಕು ತ್ತಿದ್ದೇನೆ ಎಂದು ಸ್ವಾನುಕಂಪೆಯಲ್ಲಿ ದಿನವೆಲ್ಲ ಕಳೆದ ಮಾಲತಿ, ಸಂಜೆಯಾದದ್ದನ್ನು ಗಮನಿಸಿ ಅವಸರದಿಂದ ಎದ್ದು ಸೀರೆಯುಟ್ಟು, ತಲೆಬಾಚಿ, ಹಣೆಗೆ ಕುಂಕುಮವಿಟ್ಟು ಕನ್ನಡಿಯ ಮುಂದೆ ನಿಂತಳು. ಆಗ ಗುರುತುಸಿಕ್ಕಿದಂತೆ ಸಮಾಧಾನವಾಯಿತು. (ಗೂಡಿ ನೊಳಗಿನ ಹಕ್ಕಿ-ವೈದೇಹಿ).

ಸಾಮಾಜಿಕ, ಸಾಂಸ್ಕೃತಿಕ ಸಂದರ್ಭಗಳಿಗಿಂತಲೂ ಆಧುನಿಕ ಲೇಖಕಿಯರಿಗೆ ಹೆಣ್ಣಿನ ಬಂಧನದ ಕಲ್ಪನೆಯೂ ಸ್ಫುಟವಾಗಿ ಕಂಡಿರುವುದು ಪರಂಪರಾಗತ ಸಾಹಿತ್ಯ ಪ್ರತೀಕಗಳಲ್ಲಿ. ಪ್ರಗತಿಪರ ಶಿಕ್ಷಣ ಹಾಗೂ ವೈಚಾರಿಕತೆಯ ಬೆಳಕಿನಲ್ಲಿ ತಮ್ಮ ಸ್ತ್ರೀ ವ್ಯಕ್ತಿತ್ವದ

ಬೇರುಗಳನ್ನು ಗುರುತಿಸಲು ಪ್ರಾಚೀನ ಸಾಹಿತ್ಯದ ಕಡೆಗೆ ದೃಷ್ಟಿ ಹಾಯಿಸಿದ ಮಹಿಳೆಯರಿಗೆ ಅಲ್ಲಿ ನಿರಾಸೆ ಕಾದಿತ್ತು. ಒಂದು ಕಾಲದಲ್ಲಿ ಗಾಢವಾಗಿ ನಂಬಿದ್ದ ಪುರಾಣ ಕತೆಗಳು, ಅವುಗಳಲ್ಲಿ ವ್ಯಕ್ತವಾದ ಮೌಲ್ಯಗಳು ಈಗ ಪೊಟ್ಟಿಯಾಗಿ ಕಾಣಿಸಿದವು. ಈ ಹಿನ್ನೆಲೆಯಲ್ಲಿ, ಪರಂಪರಾಗತ ಕವಿಕಲ್ಪನೆಗಳನ್ನು ಪ್ರಶ್ನಿಸುವಂತಿರುವ ರಚನೆಗಳನ್ನೂ 'ಪುರಾಣಭಂಜನ'ವೆಂದು ವಿಮರ್ಶಕರು ಗುರುತಿಸಿದ್ದಾರೆ. (demythification)

'ದ್ರೌಪದಿಯ ಸ್ವಗತ' ಎಂಬೊಂದು ಕವಿತೆಯಲ್ಲಿ ಸರಸ್ವತೀ ಗೌಡ ಅವರು, ಜಂಬೂಫಲ ಪ್ರಸಂಗದಲ್ಲಿ ದ್ರೌಪದಿ ಆಡಿದಳೆನ್ನುವ ಮಾತುಗಳಲ್ಲಿ 'ಹತ್ತಿಕ್ಕಲ್ಪಟ್ಟ ಪ್ರಬಲ ಆಕಾಂಕ್ಷೆಯೊಂದರ ಅಭಿವ್ಯಕ್ತಿ'ಯನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಈ ಸಂದರ್ಭದಲ್ಲಿ ಬರುವ–

ಪಂಚಮೇ ಪತಯಸ್ಸಂತು ಷಷ್ಠಸ್ತು ಮಮರೋಚತೇ
ಪುರುಷಾಣಾನುಭಾವೇನ ಸರ್ವನಾರ್ಯಾಪತಿವ್ರತಾ ।
ಸುಂದರಂ ಪುರುಷಂ ದೃಷ್ಟ್ವಾ ಪಿತರಂ ಭ್ರಾತರಂ ಸುತಂ
ಯೋನೀಪ್ರವತಿ ನಾರಿಣಾಂ ಸತ್ಯಂ ಬ್ರೂಮೀಹಕೇಶವ

ಎಂಬ ಶ್ಲೋಕಗಳು ದ್ರೌಪದಿಗಾಗಲಿ, ನಾರೀವೃಂದಕ್ಕಾಗಲಿ ಕೀರ್ತಿತರುವ ಮಾತುಗಳೇನಲ್ಲ. ವಾಸ್ತವವಾಗಿ ಇವು ಮೂಲಗ್ರಂಥದಿಂದ ಬಂದುವೇ ಅಥವಾ ಹೆಣ್ಣಿನ ಕಾಮುಕತೆಯನ್ನು ಪರಿಹಾಸ್ಯಮಾಡುವುದಕ್ಕಾಗಿ ಯಾರೋ ಸೇರಿಸಿದ ಕುಹಕವೇ ಎಂಬ ಬಗೆಗೆ ಸಂದೇಹವಿದೆ. ಸರಸ್ವತೀಗೌಡ ಅವರು 'ಹಿರಿಕಿರಿಯ ತಾರತಮ್ಯವಿಲ್ಲದೆ ಮೈ ಕೊಟ್ಟರೂ ಕರ್ಣನ ತಪ್ತ ಬಯಕೆಯಲಿ ಬೆಂದ ಅತೃಪ್ತಾ ಪಾಂಚಾಲಿ..." ಎನ್ನುವಾಗ ಕೂಡ ದ್ರೌಪದಿಯ ವ್ಯಕ್ತಿತ್ವದಲ್ಲಿ 'ಅದಮ್ಯಕಾಮ'ವನ್ನೇ ಎತ್ತಿ ಆಡಿಸಿರುವುದು ಉಚಿತವೆನಿಸುವುದಿಲ್ಲ. ಡಾ॥ ರಾಮಮನೋಹರ ಲೋಹಿಯಾ ಅವರು 'ದ್ರೌಪದಿಯ ಐವರು ಗಂಡಂದಿರು ಮತ್ತು ಇನ್ನೂ ಒಂದೆರಡು ಪ್ರೇಮದ ಸೂಚನೆಗಳು ಪ್ರಚಲಿತವಿರುವ ಗಂಡು ಜಂಬಕ್ಕೆ ಮೆಚ್ಚೆನಿಸದ್ದರಿಂದ ಆಕೆಯ ಬಗ್ಗೆ ಔದಾಸೀನ್ಯ ಬೆಳೆದುಬಿಟ್ಟಿತು" –ಎಂಬಲ್ಲಿ ಆಕೆಯ ವ್ಯಕ್ತಿತ್ವದ ವಿವರಣೆಯು ಹೆಚ್ಚು ಅರ್ಥವತ್ತಾಗಿ ತೋರುತ್ತದೆ.

ಸೀತೆಯ ಅಗ್ನಿ ಪರೀಕ್ಷೆ, ದ್ರೌಪದಿಯ ಅಕ್ಷಯವಸ್ತ್ರ ಪ್ರಸಂಗಗಳು ಗಂಡಿನ ಜಂಬವನ್ನು ಬೆಳೆಸುವ ಸಲುವಾಗಿ ಹುಟ್ಟಿರಬಹುದೆಂದು ಭಾವಿಸುವ ಡಿ. ವಿಜಯಾ ಅವರು,

ನಿರ್ಭಯವಾಗಿರಿ। ನಿಶ್ಚಿಂತೆಯಾಗಿರಿ। ನೀವು ಕತ್ತೆತ್ತಿ ನೋಡದಿರುವವರೆಗೆ
ನಿಮ್ಮ ಕಣ್ಣಾಗಿ ಕಾಯುವ ಗಂಡುಗಳು। ನಿಮ್ಮ ಸುತ್ತಾ ಇರುತ್ತಾರೆ

ಒಂದು ವೇಳೆ ರಾವಣ ದುಶ್ಯಾಸನರು ಹುಟ್ಟಿ। ನಿಮ್ಮ ಹೊತ್ತು ಸೀರೆ ಎಳೆದರೂ
ರಾಮಕೃಷ್ಣರಿದ್ದಾರೆ ನಿಮ್ಮ ವಸ್ತ್ರ ಅಕ್ಷಯವಾಗಿಸಿ, ಅಗ್ನಿಪರೀಕ್ಷೆ ಮಾಡಿ।
ಮೀಸೆ ತಿರುವಿಕೊಳ್ಳುವ ಭೂಪರು' (ನಾರಿಮಣಿಗಳಿಗೊಂದು ಕಿವಿಮಾತು)

—ಎಂದು ವ್ಯಂಗ್ಯವಾಡಿದ್ದಾರೆ. ಶಶಿಕಲಾ ವಸ್ತ್ರದ ಅವರು–

ಮಾಡ್ಕೊಂಡ್ ಹೆಣ್ತೀ ಮನೀಗ್ ಬಂದ್ರು। ಬಾಗಲಾ ಹಾಕಿ। ಕಿಡಕಿ ಸಂದ್ಯಾಗ
ಕುತಗೀ ಹಾಯ್ಸಿ। ಯಾರ ನೀ ಅನ್ನೋ ದುಷ್ಯಂತರು। ಈಗಿಲ್ಲಾಂತೀರಾ
ಸೇರಿದವ್ರ ಚಾಡಿಕೇಳಿ। ಬಸರೀ ಹೆಣ್ತೀನ। ತವರಿಗೆ ಕಳಿಸಿ
ಸಾಜೂಗಾ ಆಡೋ ರಾಮದೇವರು ಈಗಿಲ್ಲಾಂತಿರಾ....

–ಎಂದು ದುಷ್ಯಂತ, ಶ್ರೀರಾಮಚಂದ್ರರ ಹೆಸರಿನಲ್ಲಿ ಇಂದಿನ ಗಂಡಸರನ್ನು ಕುಟುಕಿದ್ದಾರೆ.

ಪ್ರಸಿದ್ಧ ಪ್ರಾಚೀನ ಕೃತಿಯೊಂದಕ್ಕೆ ಆಧುನಿಕ ಮಹಿಳೆಯ ಸಂವೇದನೆಯಿಂದ ಪ್ರತಿಕ್ರಿಯಿಸುತ್ತ ಸೃಷ್ಟಿಶೀಲ ಸಾಹಿತ್ಯ ರಚಿಸಿರುವುದನ್ನು ವೈದೇಹಿಯವರ ಶಕುಂತಳೆಯೊಂದಿಗೆ ಕಳೆದ ಅಪರಾಹ್ನದಲ್ಲಿ ಗುರುತಿಸಬಹುದು.

ಕಣ್ವರ ಆಶ್ರಯದಲ್ಲಿ ಬೆಳೆದ ಈ ಲೋಕೋತ್ತರ ಸುಂದರಿಯು ದುಷ್ಯಂತ ಮಹಾರಾಜನನ್ನು ಕಾಣುವವರೆಗೆ ತನ್ನ ಹೆಣ್ತನದ ಅರಿವೇ ಇಲ್ಲದ ಮುಗ್ಧೆ (ತಪೋವನ ವಿರೋಧಿಯಾದ ವಿಕಾರಕ್ಕೊಳಗಾದೆನಲ್ಲ !....) ಎಂಬುದು ಕಾಳಿದಾಸನ ನಾಟಕದಿಂದ ಪ್ರತೀತವಾಗುವ ಅಭಿಪ್ರಾಯ. (ತನ್ನ ಕಾವ್ಯನಾಯಕನಿಗೆ ಮೀಸಲಾದ ಹೆಣ್ಣಿನ ಕನ್ಯತ್ವ ರಕ್ಷಣೆಗಾಗಿ, ಆಶ್ರಮದ ಋಷಿಕುಮಾರರನ್ನು ಗಂಡುಗಳೆಂದೇ ಪರಿಗಣಿಸಿಲ್ಲ. ಯುವಕರು ಪ್ರತಿಭಟನೆ ಸಲ್ಲಿಸಬಹುದು.) ಆದರೆ ಆ ಶಕುಂತಳೆ ಈಗ ತನ್ನ ಸಖಿಯೊಡನೆ ಮನಸ್ಸನ್ನೂ ತೆರೆದಿಡುತ್ತಾಳೆ :

"ಆಶ್ರಮವೆಂದೊಡನೆ ಆದರ್ಶ ವಾತಾವರಣವೆಂಬ ಕಲ್ಪನೆಯೇನು ನಿನಗೆ ? ತೆಗೆ ತೆಗೆ .. ... ಆಶ್ರಮವಾಸಿಗಳಲ್ಲಿ ಎಲ್ಲರೂ ಪೂರ್ಣ ಮನದಿಂದ ಅಲ್ಲಿರುವರು, ಎಲ್ಲವನ್ನೂ ಗೆದ್ದವರು ಎಂದುಕೊಂಡೆಯಾ ಹೇಗೆ ? ಗೆಲ್ಲುವುದೆಂಬುದು ಅಷ್ಟು ಸುಲಭವೆ ? ಕಣ್ವರ ಹೆದರಿಕೆ ಎಷ್ಟಿದ್ದರೇನು ? ಅವರಿಲ್ಲದ ಸಮಯದಲ್ಲಿ ನನ್ನನ್ನು ಪಡೆಯುವ ಬಯಕೆ ವ್ಯಕ್ತ ಪಡಿಸಿದ ಋಷಿಕುಮಾರರಿಗೇನೂ ಕೊರತೆಯಿಲ್ಲ .. "ಇತ್ಯಾದಿಯಾಗಿ.

ದೂರ್ವಾಸ ಶಾಪವು ಅಭಿಜ್ಞಾನ ಶಾಕುಂತಲದ ಒಂದು ಶ್ರೇಷ್ಠ ಕಾವ್ಯ ಪ್ರತೀಕ. ಮಹಾಭಾರತದಲ್ಲಿ ಬರುವ ದುಷ್ಯಂತ ಶಕುಂತಲೆಯರ ಕಥೆಯಲ್ಲಿ ಈ ಶಾಪದ ಪ್ರಸ್ತಾಪವೇ ಇಲ್ಲವೆಂದೂ, ಕಾಳಿದಾಸ ಮಹಾಕವಿಯ ಪ್ರತಿಭೆಯ ನಿರ್ಮಿತಿಯೆಂದೂ ಸಂಶೋಧಿಸಲಾಗಿದೆ. ದೂರ್ವಾಸ ಶಾಪದ ಕಲ್ಪನೆಯಿಂದಾಗಿ ದುಷ್ಯಂತ ಮಹಾರಾಜನು

ಶಕುಂತಳೆಯನ್ನು ಮರೆತ ಆರೋಪದಿಂದ ವಿಮುಕ್ತನಾಗಿದ್ದಾನೆ. ಇದೆಲ್ಲ 'ಹಸಿಸುಳ್ಳು' ಎನ್ನುತ್ತಾಳೆ ನಮ್ಮ ಶಕುಂತಲೆ–

"...ಆ ದಿನ ದೂರ್ವಾಸಮುನಿ ಬಂದದ್ದೇ ನನಗೆ ತಿಳಿಯಲಿಲ್ಲವೆಂಬಂತೆ ಕತೆ ಕಟ್ಟಿದನಲ್ಲವೆ ಕವಿ ! ಅವನನ್ನು ನಂಬಿತು ಲೋಕ. ಲೋಕಕ್ಕೆ ಸತ್ಯದ ಕಂಪು ಬೇಡ, ಸುಳ್ಳಿನ ಪ್ರಖರತೆ ಬೇಕು. ಪ್ರೇಮದ ನಿಜ ಬೇಡ, ಸುಳ್ಳಿನ ಬಿನ್ನಾಣ ಬೇಕು. ಕವಿಯೊ ಕಾವ್ಯಮಯ ಸುಳ್ಳನ್ನು ಹೇಳಿ ಜಗತ್ತನ್ನು ಮರುಳುಗೊಳಿಸುವ ಅಪ್ರತಿಮ. ಪ್ರಪಂಚ ಇವತ್ತು ಕಾಳಿದಾಸನನ್ನು ನಂಬುವಷ್ಟು ಶಕುಂತಲೆಯನ್ನು ನಂಬುತ್ತದೆಯೇ? ದುಷ್ಯಂತನ ವರ್ತನೆಗೆ ವ್ಯಾಖ್ಯಾನ ನೀಡಬಹುದು. ಶಕುಂತಲೆಯ ಹೃದಯಕ್ಕೆ....?"

ಮಾರೀಚಾಶ್ರಮದಲ್ಲಿ ದುಷ್ಯಂತ ಶಕುಂತಲೆಯರ ಪುನರ್ಮಿಲನದ ಔಚಿತ್ಯವನ್ನು ಕುರಿತು ರವೀಂದ್ರನಾಥ ಠಾಕೂರರಾದಿಯಾಗಿ ವಿಮರ್ಶಕರು ಚರ್ಚೆ ನಡೆಸಿದ್ದಾರಷ್ಟೇ. ಗಂಡನ ಹಂಗಿಲ್ಲದೆ ಬದುಕಿ, ಮಗನನ್ನು ಬೆಳೆಸಿದ ಶಕುಂತಲೆ, ಶತಮಾನಗಳು ಕಳೆದ ಮೇಲೆ ತನ್ನ ಅನಿಸಿಕೆ, ಅನುಭವಗಳನ್ನು ಆಧುನಿಕ ಓದುಗರ ಮುಂದೆ ಬಿತ್ತರಿಸುತ್ತಾಳೆ,

"ನೀನಿಲ್ಲದಿದ್ದರೆ ಸಾಯುತ್ತೇನೆ, ಏಕಾಂಗಿಯಾಗುತ್ತೇನೆ, ಹುಚ್ಚಿಯಾಗುತ್ತೇನೆ. ಅಂತೆಲ್ಲ ಹೇಳಿದ್ದೆನಲ್ಲವೆ ಅಂದು. ಅದೆಲ್ಲ ಎಷ್ಟೊಂದು ಅಸಂಬದ್ಧ ! ಬದುಕೆಂಬುದು ಯಾವ ಹಿಡಿತದೊಳಗೂ ಸಿಕ್ಕದ್ದು. ಸತ್ತೇನೇನೋ ಎಂದುಕೊಳ್ಳುವುದರೊಳಗೆ ಮತ್ತೆ ಕೊನರುವ ಗುಣವುಳ್ಳದ್ದು..." ಇಂಥ ಮನಃ ಪರಿಪಾಕವನ್ನು ಪಡೆದ, ಪ್ರಜ್ಞಾವಂತಳಾದ ಶಕುಂತಲೆಗೆ ದುಷ್ಯಂತನು ತನಗೆ ಮೋಸ ಮಾಡಿದನೆಂಬ ಕೋಪವಿಲ್ಲ. ಪರಿಶುದ್ಧವಾಗಿ ಪ್ರೇಮಿಸುವಂತಹ ಅನುಭವ ನೀಡಿದ ಆತನಿಗೆ ಆಕೆ ಕೃತಜ್ಞತೆ ಅರ್ಪಿಸುತ್ತಾಳೆ.

ಕಾಳಿದಾಸ ಮಹಾಕವಿಯ ಅಲೌಕಿಕ ಸುಂದರಿಗಿಂತಲೂ, ಮಾಸ್ತಿಯವರು ಚಿತ್ರಿಸಿದ ಹೇಮಕೂಟದ ತಪಸ್ವಿನಿಗಿಂತಲೂ ಈ ಶಕುಂತಲೆ ನಮಗೆ ಹೆಚ್ಚು ಆತ್ಮೀಯಳಾಗುತ್ತಾಳೆ.

ಆಧುನಿಕ ಮಹಿಳಾ ಸಾಹಿತ್ಯದಲ್ಲಿ ಅಕ್ಕಮಹಾದೇವಿಯನ್ನು ಕುರಿತ ಹಲವು ರಚನೆಗಳಿರುವುದನ್ನು ಗಮನಿಸಿದ ಡಾ॥ ಬಿ. ಎನ್. ಸುಮಿತ್ರಾದೇವಿಯವರು—

"ಪರಂಪರೆಯ ಸೀತೆ–ದ್ರೌಪದಿಯರಂಥ ಪ್ರತೀಕಗಳನ್ನು ನಿರಾಕರಿಸಿದ ನಂತರ ಈ ಕವಿಗಳು ತಮ್ಮ ಹೊಸ ಬಗೆಯ ಚಿಂತನೆಗಳಿಗೆ, ಹೊಸ ಬದುಕಿನ ನಿರ್ಮಾಣಕ್ಕೆ ಒಂದು ಮುಕ್ತವೂ ವಿಕಸಿತವೂ ಆದ ಸ್ತ್ರೀ ವ್ಯಕ್ತಿತ್ವದ ಮಾದರಿಯನ್ನು ವಚನಕಾರ್ತಿ ಅಕ್ಕನಲ್ಲಿ ಗುರುತಿಸಲು ಯತ್ನಿಸುತ್ತಾರೆ. ಸಾಮಾಜಿಕ ಧಾರ್ಮಿಕ ಕಟ್ಟು ಕಟ್ಟಲೆಗಳನ್ನೆಲ್ಲ ತನ್ನ ವಸ್ತ್ರಗಳೊಂದಿಗೇ ಕಳಚಿ ಎಸೆದು ಆವರೆಗೆ ಹೆಣ್ಣಿಗೆ ತೆರೆದಿರದ ಮೋಕ್ಷಮಾರ್ಗದ ಸಾಧನೆಗೆ ತನ್ನಷ್ಟಕ್ಕೇ ದಾರಿ ಮಾಡಿಕೊಂಡ ಅಕ್ಕನ ಬಗ್ಗೆ ಇಲ್ಲಿ ಗೌರವ ಮೆಚ್ಚುಗೆಗಳಿವೆ ; ಅಷ್ಟೇ ಅಲ್ಲ ಆಕೆಯು ತೋರಿದ ದಿಟ್ಟತನ ತನ್ನ ಬದುಕಿನಲ್ಲಿ ತಾನು ತೋರಲಾಗುತ್ತಿಲ್ಲ

ವಲ್ಲ ಎಂಬ ಕೊರಗು ಈ ಕವಿಗಳನ್ನು ಕಾಡುತ್ತದೆ" ಎಂದಿದ್ದಾರೆ. ಈ ಹಿನ್ನೆಲೆಯಲ್ಲಿ ಒಂದೆರಡು ನಿದರ್ಶನಗಳನ್ನು ಪ್ರಸ್ತಾಪಿಸುವುದಗತ್ಯ.

ಜ. ಸರ್ವಮಂಗಳ ಅವರ 'ಬಿಡುಗಡೆ' ಕವಿತೆಯ ಸಾಲುಗಳಿವು :

"ಗಟ್ಟಿಗಿತ್ತಿ ಕಣಕ್ಕ । ಅಪ್ಪ ಹಾಕಿದಾಲದ ಮರದಾಶ್ರಯ ತೊರೆದು। ನಿಂತೆ ಅರಿವೆ ಕಳಚಿ ಕೂಡಿದ್ದ ಎಲ್ಲ ಬಿಟ್ಟು । ನೀನು ನೀನೆ ಆದೆ । ಜಡ್ಡುಗಟ್ಟಿದ ದೀಪದಲ್ಲಿನ ಜ್ಯೋತಿಗೆ ನೀರೆರೆದು । ಹೊರಟೆ ಬಿಟ್ಟೆಯಲ್ಲವ್ವಾ । ಎಂಥ ದಿಟ್ಟ ಹೆಜ್ಜೆ ಇಟ್ಟೆ ನಮ್ಮವ್ವಾ । ನಿನ್ನ ಹಿಂದೆ ಬಂದ ನಾನಿನ್ನೂ ಕತ್ತಲಲ್ಲೆ ಕೂತು ಬತ್ತಿ ಹೊಸೆಯುತ್ತಿರುವೆ ।"

ಶಶಿಕಲಾ ವಸ್ತ್ರದ ಅವರ 'ಮೇಣದ ಬತ್ತಿ' ಕವಿತೆಯಲ್ಲಿ 'ಸಾವಿಲ್ಲದ ಕೇಡಿಲ್ಲದ ಗಂಡನ್ನ ಕೂಡಿಕೊಂಡು ಗಟ್ಟಿಯಾದ ಅಕ್ಕನ ಪುಣ್ಯವಂತಿಕೆಯ ಜೊತೆ ತನ್ನ ದುರವಸ್ಥೆಯನ್ನು ಹೋಲಿಸಿಕೊಳ್ಳುವ ಚಿತ್ರವಿದ್ದರೆ, ಭಾಗ್ಯ ಅವರ "ಅಕ್ಕಮಹಾದೇವಿ..."ಯಲ್ಲಿ 'ಹೊರಗೆ ಬೆತ್ತಲಾಗದೆ ಒಳಗೆ ಬೆತ್ತಲೆಯಾಗಿ ಚಳಿಗೆ ನಡುಗುವ' ಮಾತಿದೆ. ವಿಜಯಾದಬ್ಬೆ ಯವರ 'ಧನ್ಯೆ' ಕವಿತೆಯು ಮಾತ್ರ ಇವುಗಳಿಗಿಂತ ಭಿನ್ನವಾಗಿದ್ದು ಅಕ್ಕಮಹಾದೇವಿಯ ಮಾದರಿಯನ್ನು ವಿನಯದಿಂದ, ಕ್ಷಮಾಯಾಚನೆಯ ಧ್ವನಿಯಲ್ಲಾದರೂ ತಿರಸ್ಕರಿಸುತ್ತದೆ. ಅಂದರೆ ಬೆತ್ತಲೆಯಾಗಿ ಕೂದಲ ಮರೆಯಲ್ಲೂ ಮಾನಕಾಯ್ದುಕೊಳ್ಳಲೆತ್ನಿಸದೆ, ಬಟ್ಟೆ ಸುತ್ತುಗಳಲ್ಲಿ ಬದುಕುವ ಆಕಾಂಕ್ಷೆಯನ್ನೂ, ದಿಟ್ಟತನವನ್ನೂ ತೋರುವುದು ಗಮನಾರ್ಹ.

ಹಾಗೆ ನೋಡಿದರೆ 'ಸಾವಕೆಡುವ ಗಂಡರನೊಯ್ದು ಒಲೆಯೊಳಗಿಕ್ಕೆಂದ' ಅಕ್ಕಮಹಾದೇವಿಯ ನಿಲುವು ಅಂದರೆ, ಲೋಕದ ಬದುಕು ನಶ್ವರ, ಯಾತನಾಮಯ ; ಆದ್ದರಿಂದ ತ್ಯಾಜ್ಯವೆಂದು ಸಾರುವ ವಿರಕ್ತಿ ಪಂಥದ 'ಬಿಡುಗಡೆ'ಯ ಪರಿಭಾಷೆ ನಮ್ಮ ಸಂಸ್ಕೃತಿಗೇನೂ ಹೊಸದಲ್ಲ. ಈ ಬಿಡುಗಡೆಗೆ ಗಂಡು ಹೆಣ್ಣೆಂಬ ಭೇದವೂ ಸಲ್ಲ. ಆದರೆ ಸದ್ಯಕ್ಕೆ ನಮ್ಮ ಚರ್ಚೆಯ ವಿಷಯವಾಗುವುದು ಅಕ್ಕಮಹಾದೇವಿಯ ಅಥವಾ ಆಕೆಯ ಪ್ರತಿ ಸಂಕೇತವೆನ್ನಬಹುದಾದ ರಾಮಕೃಷ್ಣ ಪರಮಹಂಸರ ಮಾದರಿಯಲ್ಲ. 'ಸಾವ ಕೆಡುವ' ಗಂಡು ಹೆಣ್ಣುಗಳ ಬದುಕಿನಲ್ಲಿ ನಾವು ನಾವೇ ನಿರ್ಮಿಸಿಕೊಂಡ ಬಂಧನಗಳಿಂದ ಪಡೆಯಬೇಕಾದ, ಪಡೆಯಬಹುದಾದ ಬಿಡುಗಡೆಯ ವಿಚಾರ.

ನಮ್ಮ ಸಮಾಜ, ಸಂಸ್ಕೃತಿ, ಸಾಹಿತ್ಯಗಳಿಂದ ದತ್ತವಾದ ನೀತಿ-ಅನೀತಿಗಳ ಕಲ್ಪನೆಯು ಗಂಡು ಹೆಣ್ಣಿನ ತಾರತಮ್ಯವನ್ನು ನಿವಾರಿಸುವುದಕ್ಕೆ, ವೈಯಕ್ತಿಕ ಹಾಗೂ ಸಾಮಾಜಿಕ ಬದುಕನ್ನು ಆರೋಗ್ಯಪೂರ್ಣವಾಗಿಸುವುದಕ್ಕೆ ಸಾಲದೆಂದು ತೋರುತ್ತದೆ.

ಆದ್ದರಿಂದ ಪಾರಂಪರಿತ ಬಂಧನಗಳಿಂದ ಬಿಡಿಸಿಕೊಂಡು ನವ ಸಮಾಜ ನಿರ್ಮಾಣದಲ್ಲಿ ತೊಡಗುವುದು ಅಗತ್ಯವಿದೆ.

ಕೇವಲ ಸಾಹಿತ್ಯ ರಚನೆಯಿಂದ ಇವೆಲ್ಲ ಸಾಧ್ಯವೆಂಬ ಭ್ರಮೆಯನ್ನು ಯಾರೂ ಇಟ್ಟುಕೊಳ್ಳಬೇಕಾಗಿಲ್ಲ. ಆದರೆ ಬಂಧನದ ಸ್ವರೂಪವನ್ನು ಅರಿಯುವುದಕ್ಕೆ ಬಿಡುಗಡೆಯ ದಿಕ್ಕನ್ನೂ ಗುರುತಿಸುವುದಕ್ಕೆ ಸಾಹಿತ್ಯ ರಚನೆ ಮತ್ತು ಚರ್ಚೆಗಳಿಂದ ಸಹಾಯವಾದೀತು.

# ಜನಪದ ನಂಬಿಕೆಗಳು

---

ಡಾ. ಜೀ. ಶಂ. ಪರಮಶಿವಯ್ಯ

ಜನಪದ ಸಂಸ್ಕೃತಿಯ ಬಹುಮುಖ್ಯ ಅಂಗವಾಗಿ ನಂಬಿಕೆಗಳು ಪರಿಗಣಿತವಾಗಿವೆ. ಮಾನವನ ಆಚಾರ, ವಿಚಾರ, ನಡೆ, ನುಡಿಗಳಲ್ಲಿ ಇವು ಹಾಸುಹೊಕ್ಕಾಗಿ ಬೆರೆತಿವೆ. ಪ್ರಾಚೀನ ಕಾಲದಿಂದಲೂ ನೈಸರ್ಗಿಕ ಧರ್ಮಗಳ ಅಡಿಗಲ್ಲಾಗಿ ಬೆಳೆದು ಬಂದ ನಂಬಿಕೆಗಳು ಮನುಷ್ಯನ ಬದುಕನ್ನು ನಿಯಂತ್ರಿಸುತ್ತ ಬಂದಿವೆ. ಶಿಷ್ಟ ಧರ್ಮಗಳು ಹುಟ್ಟಿಕೊಂಡ ಮೇಲೂ ಪ್ರಾಚೀನ ನಂಬಿಕೆಗಳು ತಮ್ಮ ಪ್ರಭಾವವನ್ನು ಕಳೆದುಕೊಳ್ಳಲಿಲ್ಲ. ಆದಿವಾಸಿ ಜನಾಂಗಗಳಿಂದ ಹಿಡಿದು, ಕೃಷಿಕ ಸಮಾಜ, ನಾಗರಿಕ ಸಮಾಜಗಳ ಜೀವನ ಸೂತ್ರಗಳಾಗಿ ಬೆಸೆದುಕೊಂಡಿರುವ ನಂಬಿಕೆಗಳನ್ನು 'ಮೂಢನಂಬಿಕೆ' ಎಂದು ತಳ್ಳಿ ಹಾಕಲು ಯಾರೂ ಸಿದ್ಧರಿಲ್ಲ. ಏಕೆಂದರೆ ಅವು ಹಿರಿಯರು ತಮ್ಮ ಒಳಿತಿಗಾಗಿ ಬಿಟ್ಟು ಹೋದ ಅನುಭವದ ಕಿರಣಗಳು ಎಂದು ಎಲ್ಲರೂ ಭಾವಿಸುತ್ತಾರೆ. ಅಕ್ಷರಸ್ಥರಿಂದ ಅನಕ್ಷರಸ್ಥರವರೆಗೆ ಇವುಗಳ ಪ್ರಾಚುರ್ಯ ದಟ್ಟವಾಗಿಯೇ ಕಂಡುಬರುತ್ತದೆ. ವಿದ್ಯಾವಂತರಲ್ಲಿ ಇವರ ಪ್ರಮಾಣ ಕಡಿಮೆಯಿರಬಹುದು, ಆದರೆ ಇಲ್ಲವೇ ಇಲ್ಲ ಎಂದು ಹೇಳಲು ಬರುವುದಿಲ್ಲ. ನಾವು ರಾಹುಕಾಲ, ಗುಳಿಕ ಕಾಲ, ಯಮಗಂಡ ಕಾಲಗಳನ್ನು ಪರಿಗಣಿಸುತ್ತೇವೆ. ಕಾರು, ಸೈಕಲ್ಲುಗಳನ್ನು ಪೂಜಿಸುತ್ತೇವೆ. ಹೊರಡುವ ಮುನ್ನ ಶಕುನಗಳನ್ನು ಪರೀಕ್ಷಿಸುತ್ತೇವೆ. ಹುಟ್ಟು ವಿವಾಹ ಸಾವುಗಳಲ್ಲಿ ಅರ್ಥವೇ ಇಲ್ಲದ ಎಷ್ಟೋ ಆಚರಣೆಗಳನ್ನು ಅಚ್ಚುಕಟ್ಟಾಗಿ ಉಳಿಸಿಕೊಂಡು ಬಂದಿದ್ದೇವೆ. ಅವು ಮೂಢ ನಂಬಿಕೆಗಳೇ, ಒಳ್ಳೆಯ ನಂಬಿಕೆಗಳೋ, ಧರ್ಮಶ್ರದ್ಧೆಯೋ, ಅಂಧಶ್ರದ್ಧೆಯೋ ಯಾವುದನ್ನೂ ಪರಿಗಣಿಸದೆ ಪ್ರಜ್ಞಾಪೂರ್ವಕವಾಗಿಯೋ ಅಪ್ರಜ್ಞಾಪೂರ್ವಕವಾಗಿಯೋ ಎಲ್ಲವಕ್ಕೂ ನೀರೆರೆದು ಪೋಷಿಸಿಕೊಂಡು ಬಂದಿದ್ದೇವೆ. ನಾಗರಿಕರ ಸ್ಥಿತಿಯೇ ಇದಾದ ಮೇಲೆ ಶುದ್ಧ ಜನಪದ ಸಂಸ್ಕೃತಿಯ ಪ್ರಭಾವದಲ್ಲಿ ಬದುಕುವ ಗ್ರಾಮಾಂತರ ಸಮಾಜದ ಗತಿಯೇನು ! ನಂಬಿಕೆಗಳು ಜೀವನದ ಎಲ್ಲ ಕ್ಷೇತ್ರಗಳನ್ನೂ ವ್ಯಾಪಿಸಿವೆ. ಇವು ಪರಂಪ

ರಾನುಗತವಾಗಿ ಉಳಿದು ಬಂದ ಒಂದು ಬಗೆಯ ತಿಳಿವಳಿಕೆ ಎನ್ನಬಹುದು. ಅವುಗಳಲ್ಲಿ ತಿರುಳಿದೆಯೋ ಇಲ್ಲವೋ ಎಂಬುದನ್ನು ಯಾರೂ ವಿಮರ್ಶಿಸುವುದಿಲ್ಲ. ಹಿರಿಯರು ಕಲಿಸಿಕೊಟ್ಟ ಜೀವನದ ಪಾಠ ಎಂದೇ ಭಾವಿಸಿ ಅನುಸರಿಸುತ್ತೇವೆ. ವೈಜ್ಞಾನಿಕವಾಗಿ ಆಲೋಚಿಸಲು ಹೊರಟಾಗ ಈ ನಂಬಿಕೆಗಳ ಬೇರು ಸಡಿಲವಾಗುತ್ತದೆ, ನಿಜ. ಆದರೆ ಮರುಗಳಿಗೆಯಲ್ಲೇ ಇವುಗಳಲ್ಲಿ ಏನೋ ಸತ್ಯವಿರಬೇಕು ಎಂದು ಶರಣಾಗುವವರೇ ಹೆಚ್ಚು. ಅದು ನಮ್ಮ ನಂಬಿಕೆಗೆ ನಮ್ಮ ಸಂಸ್ಕೃತಿಗೆ, ಪರಂಪರೆಗೆ ಸಂಬಂಧಪಟ್ಟ ವಿಷಯ. ಹಿರಿಯರು ಹಾಗೆ ನಡೆದಿದ್ದಾರೆ. ಅವರ ಹಾದಿಯಲ್ಲಿ ನಾವು ಹೋಗದಿದ್ದರೆ ಏನಾದರೂ ಅನರ್ಥ ವಾದೀತು. ಸಾವಿರಾರು ವರ್ಷಗಳಿಂದ ಉಳಿದು ಬಂದ ಇವುಗಳನ್ನು ಅಲ್ಲಗಳೆಯುವುದ ರಿಂದ ಕೆಡುಕಾದೀತು ಎಂದು ಭಾವಿಸುವುದೇ ಹೆಚ್ಚು. ಹೀಗಾಗಿ ನಂಬಿಕೆಗಳು ಜನ ಜೀವನಲ್ಲಿ ಇನ್ನೂ ಸುಭದ್ರವಾಗಿಯೇ ಇವೆ. ಜನರ ನಡೆವಳಿಗಳ ಮೇಲೆ ಹೆಚ್ಚು ಹಿಡಿತವನ್ನು ಸಾಧಿಸಿವೆ. ಇವುಗಳ ಜಾಲದಿಂದ ಬಿಡಿಸಿಕೊಳ್ಳಲು ಸಾಧ್ಯವೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಅವು ಪ್ರಖರವಾಗಿವೆ.

ನಂಬಿಕೆಗಳನ್ನು 'ಮೂಢನಂಬಿಕೆ'—Superstitions ಎಂದು ಕರೆಯುವಾಗ ಬೇರೆ ಯವರಿಗೆ ಅನ್ವಯಿಸಿ ಹೇಳುವುದೇ ಹೆಚ್ಚು. ಒಂದು ಧರ್ಮದವರು ಮತ್ತೊಂದು ಧರ್ಮದವರನ್ನು ಅಲ್ಲಗಳೆಯುವಾಗ ಈ ಮಾತು ಹೆಚ್ಚು ಅನ್ವಯವಾಗುತ್ತದೆ. "ಕಲ್ಲ ನಾಗರ ಕಂಡರೆ ಹಾಲನೆರೆ ಎಂಬರು ನಿಜ ನಾಗರ ಕಂಡರೆ ಕೊಲ್ಲೆಂಬರು" ಎಂಬ ಮಾತನ್ನೇ ಗಮನಿಸಿ. ಅರ್ಥವಿಲ್ಲದ ನಂಬಿಕೆಗಳ ತೆಕ್ಕೆಯಲ್ಲಿ ಅನೇಕ ಮೂಢಾಚರಣೆಗಳು ಮನೆ ಮಾಡಿಕೊಂಡಿವೆ. ಅವುಗಳನ್ನು ಕೈಬಿಟ್ಟು ಧರ್ಮದ ಬೇರೊಂದು ಸೆಲೆಯ ಕಡೆ ಮನಸ್ಸನ್ನು ಹದಗೊಳಿಸಿಕೊಳ್ಳಲು ನೀಡಿದ ಕರೆಯಿದು. ನೈಸರ್ಗಿಕ ಧರ್ಮದ ಅಂಗ ವಾಗಿ ಬಂದ ಒಂದು ಜನಪದ ಆಚರಣೆಯನ್ನು ಪ್ರಶ್ನಿಸಿ ಶಿಷ್ಟ ಧರ್ಮದ ಕಡೆಗೆ ಜನರನ್ನು ಆಕರ್ಷಿಸುವ ಇಂಥ ಅನೇಕ ಪ್ರಯತ್ನಗಳು ಮೊದಲಿಂದಲೂ ನಡೆದಿವೆ.

ಧರ್ಮದ ಹೆಸರಿನಲ್ಲಿ, ದೇವರ ಹೆಸರಿನಲ್ಲಿ, ಜಾತಿಯ ಹೆಸರಿನಲ್ಲಿ ಎಷ್ಟೋ ಅರ್ಥ ವಿಲ್ಲದ, ಅನರ್ಥಕಾರಿಯಾದ 'ಮೂಢನಂಬಿಕೆ' ಗಳು ನಮ್ಮಲ್ಲಿ ಉಳಿದು ಬಂದಿವೆ. ಗಂಡ ಸತ್ತರೆ ಅವನ ಮಡದಿಯನ್ನೂ 'ಸಹಗಮನ'ದ ಹೆಸರಿನಲ್ಲಿ ಜೀವಂತವಾಗಿ ಸುಟ್ಟುಹಾಕುವ ಪದ್ಧತಿ ಪ್ರಜ್ಞಾವಂತರು ಊಹಿಸಿಕೊಳ್ಳಲೂ ಸಾಧ್ಯವಾಗದ ಒಂದು ಕ್ರೂರ ನಂಬಿಕೆ. ಈ ನವನಾಗರಿಕ ಯುಗದಲ್ಲೂ ಒಂದು ಮೂಢನಂಬಿಕೆ ರೂಪಾಕನ್ವರಗಳಂಥ ಮುಗ್ಧೆಯನ್ನು ಸುಟ್ಟುಹಾಕಲು ಕಾರಣವಾಗಲಿಲ್ಲವೆ ! ಈ ಘಟನೆಯ ಅನಂತರ ಒಂದು ದೊಡ್ಡ ಜ್ವಾಲೆಯಾಗಿ ಈ ನಂಬಿಕೆ ಹಬ್ಬಿ ಅಲ್ಲೋಲ ಕಲ್ಲೋಲವನ್ನೇ ಮಾಡಿತು. ಕಾನೂ ನಿನ ಕಡಿವಾಣವಿಲ್ಲದಿದ್ದರೆ ನಂಬಿಕೆಗಳಿಗೆ ಬಲಿಬಿದ್ದ ಜನ ಇನ್ನೆಷ್ಟು ಅಬಲೆಯರನ್ನು ಹೀಗೆ ಸುಟ್ಟುಹಾಕುತ್ತಿದ್ದರೋ ! ಹಿಂದೆ ನಡೆದು ಹೋದ ಇಂಥ ಸಾವಿರಾರು ಪ್ರಸಂಗಗಳಿಗೆ

ಸಾಕ್ಷಿಯಾಗಿ ನಮ್ಮ ನಾಡಿನ ಮೂಲೆಮೂಲೆಗಳಲ್ಲಿ 'ಮಾಸ್ತಿ ಕಲ್ಲು'ಗಳು ಈಗಲೂ ನಿಂತಿವೆ.

'ಕೆರೆಗೆ ಹಾರ' ಕಥನ ಗೀತೆ ನಮ್ಮ ಜನಪದ ಸಾಹಿತ್ಯದಲ್ಲಿ ತನ್ನ ಸಾಹಿತ್ಯಿಕ ಗುಣದಿಂದ ಹೆಚ್ಚು ಜನಪ್ರಿಯತೆಯನ್ನು ಸಾಧಿಸಿಕೊಂಡಿದೆ. ಅದರ ವಸ್ತು ಹೆಣ್ಣು ಮಗಳೊಬ್ಬಳನ್ನು ಕೆರೆಗೆ ಆಹಾರವಾಗಿ ಕೊಟ್ಟದ್ದು. ಕೆರೆಯು ಕೋಡಿ ನಿಲ್ಲದಿರುವುದು, ಏರಿ ಒಡೆಯುವುದು, ಜಲವೇ ಬರದಿರುವುದು ಬೇರೆ ಬೇರೆ ಕಾರಣಗಳಿಂದ ಎಂದು ಈಗಿನವರು ಆಲೋಚಿಸುತ್ತಾರೆ. ಹೆಣ್ಣೊಬ್ಬಳನ್ನು ಬಲಿಕೊಟ್ಟರೆ ಈ ಅಡ್ಡಿಗಳು ನಿವಾರಣೆಯಾಗುತ್ತವೆ ಎಂದು ನಂಬುವ ಕಾಲವೊಂದಿತ್ತು. ಗೌಡನ ಸೊಸೆ ಇಲ್ಲಿ ಬಲಿಯಾಗುತ್ತಿದ್ದಳು. 'ಕೆರೆಗೆ ಹಾರ'ದಂಥ ನೂರಾರು ಕಥೆಗಳು ಬೇರೆ ಬೇರೆ ಕೆರೆಗಳಿಗೆ ಸಂಬಂಧಪಟ್ಟಂತೆ ಕಂಡು ಬರುತ್ತವೆ. ಅಣಜಿ ಹೊನ್ನಮ್ಮ, ಹುಳಿಯಾರು ಕೆಂಚಮ್ಮ, ಬಾಳಗಂಚಿ ಹೊನ್ನಮ್ಮ, ಕೊಡಗಿನ ಹೊನ್ನಮ್ಮ ಕೆಲವು ಉದಾಹರಣೆಗಳು. ಹೆಣ್ಣನ್ನು ಬಲಿಕೊಟ್ಟು ಕೆರೆಯನ್ನೇ ಉಳಿಸಿಕೊಳ್ಳುವ ಅವೈಜ್ಞಾನಿಕ ದೃಷ್ಟಿ ಮತ್ತೊಂದು ಅನಿಷ್ಟ ನಂಬಿಕೆಗೆ ಸಂಬಂಧ ಪಡುತ್ತದೆ.

ಕೆರೆಗೆ ಹೆಣ್ಣನ್ನು ಬಲಿ ಕೊಡುತ್ತಿದ್ದಂತೆ ಕೋಟೆಗಳಿಗೂ ಬಲಿ ಇರುತ್ತಿತ್ತು. ಯೂರೋಪಿನಲ್ಲಿ ದೊಡ್ಡ ದೊಡ್ಡ ಕಟ್ಟಡಗಳ ಅಸ್ತಿವಾರಗಳಿಗೆ ಮಕ್ಕಳನ್ನು ಬಲಿ ಕೊಡುವ ಪದ್ಧತಿ ಇತ್ತು. ನಮ್ಮಲ್ಲಿ ದೇವತೆಯನ್ನು ಒಲಿಸಿಕೊಳ್ಳಲು 'ನರಬಲಿ' ಜಾರಿಯಲ್ಲಿತ್ತು. ಯಶೋಧರ ಚರಿತೆಯ ಚಂಡಶಾಸನನ ಪ್ರಸಂಗ ನರಬಲಿಯ ಒಂದು ಭಯಾನಕ ಚಿತ್ರವನ್ನು ನೀಡುತ್ತದೆ. ಉತ್ತರ ಭಾರತದ ಟಕ್ಕರು ಎಂಬ ಜನಾಂಗ ತಮ್ಮ ಕುಲದೇವತೆಯನ್ನು ಸಂತೃಪ್ತಿಪಡಿಸಲು ಕೈಗೆ ಸಿಕ್ಕವರನ್ನು ಹಿಡಿದು ಬಲಿಕೊಡುತ್ತಿದ್ದರು. ಆ ದೇವತೆ ಮನುಷ್ಯ ಕುಲವನ್ನೆಲ್ಲ ನಾಶಮಾಡಿ ತನ್ನ ಭಕ್ತರನ್ನು ಮಾತ್ರ ಉಳಿಸಿಕೊಳ್ಳುವ ಪ್ರೇರಣೆಯನ್ನು ಟಕ್ಕರಿಗೆ ನೀಡಿದ್ದಳಂತೆ ! ಇದೆಂಥ ವಿಚಿತ್ರವಾದ ಪದ್ಧತಿ ! ಮೂಢ ನಂಬಿಕೆಯ ವಿಕರಾಳರೂಪವನ್ನು ಇಲ್ಲಿ ಕಾಣಬಹುದು.

ನರಬಲಿಯ ಘಟನೆಗಳು ಈಗಲೂ ಮರುಕಳಿಸುತ್ತಲೇ ಇವೆ. ದೇವತೆಯನ್ನು ಒಲಿಸಿಕೊಳ್ಳಲು ತನ್ನ ಮಗನನ್ನೇ ಬಲಿಕೊಟ್ಟ ಪ್ರಸಂಗ ಇತ್ತೀಚೆಗೆ ವರದಿಯಾಗಿದೆ.

ನರಬಲಿಯ ಅನಂತರ ಪ್ರಾಣಿಬಲಿ ! ದೇವತೆಗಳಿಗೆ ಕೋಣಗಳನ್ನು ಬಲಿಕೊಡುವುದು ಸಂಪೂರ್ಣವಾಗಿ ಮರೆತು ಹೋಗಿಲ್ಲ. ಒಳನಾಡಿನ ಹಳ್ಳಿಗಳಲ್ಲಿ ಈ ಪದ್ಧತಿ ಈಗಲೂ ಅಲ್ಲಲ್ಲಿ ಜೀವಂತವಾಗಿದೆ. ಕುರಿಗಳನ್ನು ಗ್ರಾಮದೇವತೆಗೆ ಗಾವು ಸಿಗಿಯುವ ಪದ್ಧತಿ ಕೆಲವು ಕಡೆ ಕಂಡುಬರುತ್ತದೆ. ಹರಕೆಯ ಕುರಿಯನ್ನು ಪೂಜಾರಿ ದೇವತೆಯ ಎದುರು ಎತ್ತಿಹಿಡಿದು ಅದರ ಕುತ್ತಿಗೆಯನ್ನು ಹಲ್ಲಿನಿಂದ ಕಚ್ಚಿ ರಕ್ತ ಹೀರುವ ಭಯಾನಕ ಪದ್ಧತಿ ಇದು. ಇಂಥ ಎಷ್ಟೋ ವಿಲಕ್ಷಣ ಪದ್ಧತಿಗಳು ಮೂಢನಂಬಿಕೆಗಳ ಫಲವಾಗಿ ಈಗಲೂ ಉಸಿರಾಡುತ್ತಿವೆ.

ಕೆಲವು ದೇವತೆಗಳಿಗೆ 'ಚಿತ್ತಲಿಸೇವೆ'ಯ ಪದ್ಧತಿ, ಸಿಡಿ ಆಡುವ ಪದ್ಧತಿ, ಕೊಂಡ ಹಾಯುವ ಪದ್ಧತಿ, ಕಂಬ ಏರಿ ಕಣಿ ಹೇಳುವ ಪದ್ಧತಿ, ದೇವರು ಮೈದುಂಬಿ ಮಾತಾನಾಡುತ್ತಿದೆ ಎಂದು ಜನರನ್ನು ಶೋಷಿಸುವ ಪದ್ಧತಿ, ಈಗಲೂ ಪ್ರಬಲವಾಗಿಯೇ ಇದೆ. ಈ ನಂಬಿಕೆಗಳ ಹಿಂದಿನ ಅಂಧಶ್ರದ್ಧೆಗೆ ಕಾರಣ ಏನೇ ಇದ್ದರೂ ಇಂಥ ಆಚರಣೆಗಳು ನಿಲ್ಲಬೇಕು ಎಂದು ಎಲ್ಲ ಪ್ರಜ್ಞಾವಂತರೂ ಬಯಸುತ್ತಾರೆ. ಆದರೆ ನಂಬಿಕೆಗಳನ್ನು ತೊಡೆದು ಹಾಕುವುದು ಸಾಹಸದ ಮಾತೇ ಸರಿ. ಮೇಲೆ ಹೇಳಿದ ಕರಾಳ ನಂಬಿಕೆಗಳು 'ಮೂಢನಂಬಿಕೆ'ಯ ಒಂದು ಮುಖಮಾತ್ರ. ನಂಬಿಕೆಗಳಲ್ಲಿ ಸರಳ ನಂಬಿಕೆಗಳು ಪ್ರತಿಯೊಬ್ಬರಲ್ಲಿಯೂ ಮನೆ ಮಾಡಿಕೊಂಡಿವೆ. ಇವುಗಳಲ್ಲಿ ಕೆಲವು ವೈಯಕ್ತಿಕ ನಂಬಿಕೆಗಳು. ಕೆಲವು ಸಾರ್ವತ್ರಿಕ ನಂಬಿಕೆಗಳು, ವಿಚಿತ್ರವೂ ವಿಲಕ್ಷಣವೂ ಹಾಸ್ಯಾಸ್ಪದವೂ ಆದ ನಂಬಿಕೆಗಳು ಸಾಕಷ್ಟು ಸಂಖ್ಯೆಯಲ್ಲಿವೆ. ವೈಯಕ್ತಿಕ ನಂಬಿಕೆಗಳಿಗೆ ಒಂದು ನಿದರ್ಶನವನ್ನು ಇಲ್ಲಿ ನೀಡಬಹುದು. ತಂದೆಯೊಬ್ಬ ತನ್ನ ಹದಿನಾಲ್ಕು ವರ್ಷದ ಮಗ ಏನಾಗುತ್ತಾನೆ ಎಂದು ತಿಳಿಯಲು ಒಂದು ಪ್ರಯೋಗವನ್ನು ಮಾಡಿದ. ಒಂದು ಮೇಜಿನ ಮೇಲೆ ಹಣದ ಗಂಟು, ಬೈಬಲ್ ಗ್ರಂಥ ಮತ್ತು ಒಂದು ವಿಸ್ಕಿ ಶೀಶೆಯನ್ನು ಇಟ್ಟು ಒಂದು ಮೂಲೆಯಲ್ಲಿ ಅಡಗಿ ಕುಳಿತ. ತನ್ನ ಮಗ ಹಣದ ಗಂಟನ್ನು ಎತ್ತಿಕೊಂಡರೆ ಒಬ್ಬ ಲೇವಾದೇವಿಗಾರನಾಗುತ್ತಾನೆ, ಬೈಬಲ್ಲನ್ನು ತೆಗೆದುಕೊಂಡರೆ ಒಬ್ಬ ಧಾರ್ಮಿಕ ವ್ಯಕ್ತಿಯಾಗುತ್ತಾನೆ. ವಿಸ್ಕಿಯನ್ನು ಎತ್ತಿಕೊಂಡರೆ ಕುಡುಕನೂ ಸೋಮಾರಿಯೂ ಆಗುತ್ತಾನೆ ಎಂಬುದು ಅವನ ನಂಬಿಕೆ. ಮಗ ಒಳಗೆ ಬಂದ ಹಣದ ಗಂಟನ್ನು ತೆಗೆದು ಕಿಸೆಗೆ ಇಟ್ಟ. ಬೈಬಲ್ಲಿನ ಮೇಲೆ ಕುಳಿತ. ವಿಸ್ಕಿ ಶೀಶೆಯನ್ನು ಎತ್ತಿ ಕುಡಿಯ ತೊಡಗಿದ. ತಂದೆ ಕೂಡಲೇ ತೀರ್ಮಾನಿಸಿದ ಓಹೋ ನನ್ನ ಮಗ ಒಬ್ಬ ರಾಜಕಾರಣಿಯಾಗುತ್ತಾನೆ ಎಂದು.

ಕೆಲವು ನಂಬಿಕೆಗಳು ಹಿಂದಿನ ಯಾವುದೋ ಒಂದು ಪದ್ಧತಿಯ ಪ್ರತೀಕವಾಗಿ ಬರುತ್ತವೆ. ಪ್ರಸಿದ್ಧ ಜಾನಪದ ವಿದ್ವಾಂಸ ಅಲೆಕ್ಸಾಂಡರ್ ಕ್ರಾಪೆಯವರು ಒಂದು ಸ್ವಾರಸ್ಯಕರ ನಂಬಿಕೆಯನ್ನು ದಾಖಲುಮಾಡಿದ್ದಾರೆ. ಯೂರೋಪಿನ ಕೆಲವು ಕಡೆ ಶವದ ಪೆಟ್ಟಿಗೆ ಸಾಗುವಾಗ ಅಕ್ಕಪಕ್ಕದಲ್ಲಿ ನಿಂತವರು ತಮ್ಮ ತಲೆಯ ಮೇಲಿನ ಟೋಪಿಯನ್ನು ತೆಗೆದು ಗೌರವ ಸೂಚಿಸುತ್ತಿದ್ದರು. ಶವವೊಂದಕ್ಕೆ ಈ ಗೌರವ ಏಕೆ ಎಂಬ ದೊಡ್ಡ ಪ್ರಶ್ನೆ ಅವರನ್ನು ಕಾಡತೊಡಗಿತು. ಹೇಗೆಯೋ ಆ ಬಗ್ಗೆ ಮಾಹಿತಿಯನ್ನು ಕಲೆ ಹಾಕತೊಡಗಿದರು. ಒಂದು ಕಾಲಕ್ಕೆ ಶವಪೆಟ್ಟಿಗೆಯ ಮುಂದೆ ಶಿಲುಬೆಯನ್ನು ಹಿಡಿದು ಒಬ್ಬರು ಸಾಗುತ್ತಿದ್ದರು. ಆ ಗೌರವ ಶಿಲುಬೆಗೆ ಸಲ್ಲುತ್ತಿತ್ತು. ಹಾಗೆಯೇ ಒಂದು ಸಂಪ್ರದಾಯವಾಗಿ ಅದು ಬೆಳೆಯಿತು. ಕ್ರಮೇಣ ಶಿಲುಬೆ ಕಣ್ಮರೆಯಾಯಿತು. ಆದರೆ ಗೌರವ ಸೂಚಕ ವರ್ತನೆಗಳು ಮುಂದುವರಿದವು. ಇದು ಏಕೆ ಎಂದು ಪ್ರಶ್ನಿಸುವ

ಗೋಜಿಗೆ ಹೋಗದೆ ಜನ ಟೋಪಿ ತೆಗೆದು ಗೌರವ ಸೂಚಿಸುವ ಪದ್ಧತಿಯನ್ನು ಮುಂದು ವರಿಸಿಕೊಂಡು ಬಂದರು.

ನಮ್ಮಲ್ಲಿ ಅನೇಕ ಪದ್ಧತಿಗಳ ಹಿಂದೆ ಇಂಥ ಕುರುಡು ನಂಬಿಕೆಗಳು ಕೆಲಸ ಮಾಡು ತ್ತವೆ. ಕೆಲವು ನಂಬಿಕೆಯನ್ನು ಪರಿಶೀಲಿಸಿದರೆ ಅವುಗಳ ಅರ್ಥಹೀನತೆ ಸ್ಪಷ್ಟವಾಗು ತ್ತದೆ. ಮೂರು ಗಂಡಿನ ಹಿಂದೆ ಒಂದು ಹೆಣ್ಣು ಮಗು ಹುಟ್ಟಿದರೆ ಕೆಟ್ಟದ್ದಾಗುತ್ತದೆ ಎಂಬ ನಂಬಿಕೆ ಇದೆ. ಆದರೆ ಅಂಥ ಹೆಣ್ಣುಮಗು ಹುಟ್ಟಿದಮನೆ, ಕೊಟ್ಟಮನೆ ಎರಡೂ ಸಮೃದ್ಧಿಯ ಜೀವನ ನಡೆಸುವ ನಿದರ್ಶನಗಳು ಸಾಕಷ್ಟಿವೆ. ಗಂಡಸರು ರಾತ್ರಿಯ ಹೊತ್ತು ಸುಣ್ಣದ ಮಡಕೆಗೆ ಕೈಹಾಕಿದರೆ ಹೆಣ್ಣುಮಕ್ಕಳು ಹೆಚ್ಚು ಎಂಬ ನಂಬಿಕೆಗೆ ಯಾವ ಅರ್ಥವಿದೆ ! ಯಾವ ನಿಟ್ಟಿನಿಂದ ಯೋಚಿಸಿದರೂ ಇದೊಂದು ನಂಬ ಲಾಗದ ನಂಬಿಕೆ. ಮನೆಯಲ್ಲಿ ಯಾರಾದರೂ ದೂರ ಪ್ರಯಾಣ ಹೊರಟರೆ, 'ಎಲ್ಲಿಗೆ ಹೋಗುವಿರಿ ?' ಎನ್ನಬಾರದು, 'ಊಟಮಾಡಿ ಹೋಗಿ' ಎನ್ನಬಾರದು. ಅವರನ್ನು ಅತ್ತ ಕಳಿಸಿ ಇತ್ತ ಸ್ನಾನ ಮಾಡಬಾರದು ಎಂಬ ನಂಬಿಕೆಗಳನ್ನು ನೋಡಿ. ಪ್ರಯಾಣದಲ್ಲಿ ಬೆಕ್ಕು ಅಡ್ಡ ಬಂದರೆ ಎರಡು ನಿಮಿಷ ನಿಂತು ಸಾಗಬೇಕು. ಹೆಡೆ ಬಿಚ್ಚಿದ ಹಾವು ಕನಸಿನಲ್ಲಿ ಕಂಡರೆ ಹಣ ಸಿಕ್ಕುತ್ತದೆ. ಹೂತಿಟ್ಟ ನಿಧಿಯನ್ನು ನಮ್ಮಲ್ಲಿ ಸರ್ಪ ಕಾಯುತ್ತದೆ. ಯೂರೋಪಿನಲ್ಲಿ 'ಭೂತ' ಕಾಯುತ್ತದೆ. ಎರಡು ಹುಬ್ಬುಗಳು ಕೂಡಿ ದಂತೆ ಕೂದಲು ಬೆಳೆದ ವ್ಯಕ್ತಿ ನಂಬಲರ್ಹನಲ್ಲ—ಇತ್ಯಾದಿ ನಂಬಿಕೆಗಳೆಲ್ಲ ಯಾವ ತಿರುಳನ್ನು ಹೊಂದಿಲ್ಲ. ಆದರೂ ಸಾವಿರಾರು ನಂಬಿಕೆಗಳನ್ನು ಅವಲಂಬಿಸಿ ಜನ ಅವರನ್ನು ಅನುಸರಿಸಿಕೊಂಡು ಬರುತ್ತಾರೆ. ಅದರ ಫಲ ಏನೇ ಆದರೂ ಕೈಬಿಡದೆ ಉಳಿಸಿಕೊಂಡು ಬಂದಿದ್ದಾರೆ. ಎಲ್ಲ ನಂಬಿಕೆಗಳೂ ಅರ್ಥಹೀನ ಎಂದು ತಳ್ಳಿಹಾಕುವ ಬದಲು ಕೆಲವು ಒಳ್ಳೆಯ ನಂಬಿಕೆಗಳನ್ನು ಒಪ್ಪಿಕೊಳ್ಳುವ ಅರ್ಥಸ್ವಾರಸ್ಯವೂ ಇಲ್ಲದಿಲ್ಲ. ಜನಪದ ವೈದ್ಯಕ್ಕೆ ಸಂಬಂಧಪಟ್ಟಂತೆ, ಜನಪದ ಉಟೋಪಚಾರಗಳಿಗೆ ಸಂಬಂಧಪಟ್ಟಂತೆ, ವ್ಯವಸಾಯ ಮಳೆಗಳಿಗೆ ಸಂಬಂಧಪಟ್ಟಂತೆ ಕೆಲವು ಒಳ್ಳೆಯ ನಂಬಿಕೆಗಳು ಇವೆ. ಮಾನವ ಬದುಕಿನಲ್ಲಿ 'ನಂಬಿ' ನಡೆಯಬೇಕಾದ ಜೀವನ ಸಂಹಿತೆ ಇವುಗಳಲ್ಲಿ ಇವೆ ಎಂದು ಭಾವಿಸಬಹುದು. 'ರಾತ್ರಿಯ ಕಾಲದಲ್ಲಿ ಕಸವನ್ನು ಗುಡಿಸಿ ಹೊರಗೆ ಹಾಕಬಾರದು' ಎಂಬ ನಂಬಿಕೆಯನ್ನು ನೋಡಿ. ಹಿಂದೆ ಬಳಸುತ್ತಿದ್ದ ಹಣತೆಗಳ ಬೆಳಕಿನಲ್ಲಿ ಕಸವನ್ನು ಗುಡಿಸಿದರೆ ಯಾವುದಾದರೂ ಅಮೂಲ್ಯವಾದ ವಸ್ತು ಆ ಕಸದ ಜೊತೆ ಹೋಗಬಹುದು ಎಂಬ ತಿಳುವಳಿಕೆಯನ್ನು ಈ ನಂಬಿಕೆ ನೀಡುತ್ತದೆ. 'ತೊಲೆಯ ಕೆಳಗೆ ಮಲಗಬಾರದು' ಮಲಗಿದರೆ ಕೆಟ್ಟ ಕನಸು ಬೀಳುತ್ತದೆ ಎಂಬ ನಂಬಿಕೆ ತುಂಬ ಗಮನಾರ್ಹವಾದುದು. ಹಳೆಯ ಮನೆಗಳಲ್ಲಿ ಯಾವುದೇ ಸಂದರ್ಭದಲ್ಲಿ ತೊಲೆ ಕುಸಿದು ಬೀಳುವ ಸಂದರ್ಭ ವಿರುತ್ತದೆ. ಇಂಥ ಅಪಾಯದಿಂದ ಪಾರಾಗಲು ಈ ನಂಬಿಕೆ ನೆರವಾಗುತ್ತದೆ. 'ಹಾವನ್ನು ಅರೆಜೀವ ಮಾಡಿಬಿಡಬಾರದು, ಹನ್ನೆರಡು ವರ್ಷ ಮಚ್ಚರವಿಟ್ಟಿರುತ್ತದೆ' ಎಂಬ

ನಂಬಿಕೆಯು ಹಿಂದೆ ಏನಾದರೂ ಮಾಡಿ ಆ ವಿಷಜಂತು ಕಣ್ಣಿಗೆ ಬಿದ್ದಾಗ ಸಂಪೂರ್ಣವಾಗಿ ನಿವಾರಿಸಬೇಕು ಎಂಬುದೇ ಇದರ ಉದ್ಧೇಶ. 'ಏನಾದರೂ ತಿನ್ನುವಾಗ ಬೇರೆಯವರು ಎದುರಿಗಿದ್ದರೆ, ಕೊಡದೆ ತಿಂದರೆ ಕಣ್ಣುಕುಟಿಕೆ ಬರುತ್ತದೆ ಎಂಬ ನಂಬಿಕೆಯೊಂದಿದೆ. ಹಂಚಿತಿನ್ನಬೇಕೆಂಬ ಸಭ್ಯತೆ ನಡವಳಿಕೆಯನ್ನು ಇದು ತಿಳಿಸುತ್ತದೆ.

ಜನಪದ ನಂಬಿಕೆಗಳನ್ನು 'ಮೂಢನಂಬಿಕೆಗಳು', 'ಕುರುಡು ನಂಬಿಕೆಗಳು' ಮತ್ತು 'ಒಳ್ಳೆಯ ನಂಬಿಕೆಗಳು' ಎಂದು ಮೂರು ವರ್ಗಗಳಲ್ಲಿ ವಿಂಗಡಿಸಿ ನೋಡಿದಾಗ ವೈಜ್ಞಾನಿಕ ಸತ್ಯವನ್ನು ಒಳಗೊಂಡ ಒಳ್ಳೆಯ ನಂಬಿಕೆಗಳು ಮಾತ್ರ ಈ ಕಾಲಕ್ಕೆ ಪ್ರಸ್ತುತವಾಗುತ್ತವೆ. ಎಚ್ಚರಿಕೆಯಿಂದ ಅರ್ಥವಿಲ್ಲದ ನಂಬಿಕೆಗಳನ್ನು ಕೈಬಿಟ್ಟು ಅರ್ಥಪೂರ್ಣವಾದವುಗಳನ್ನು ಅನುಷ್ಠಾನಕ್ಕೆ ತಂದುಕೊಂಡರೆ ಯಾವ ಅಪಾಯವೂ ಇಲ್ಲ.



# ಜನಪದ ಸಂಗೀತ

ಎಚ್. ಎಲ್. ನಾಗೇಗೌಡ

## 1. ಜನಪದ ಸಂಗೀತದ ಉಗಮ :

ಕೇಳಿದ ಕೂಡಲೇ ತನ್ನ ದನಿ—ಬನಿಗಳಿಂದ, ನಡೆ—ನುಡಿಗಳಿಂದ ನಮ್ಮನ್ನು ಆಕರ್ಷಿಸುತ್ತದೆ ಜನಪದ ಸಂಗೀತ. ಅದಕ್ಕೆ ತನ್ನದೇ ಆದ ಗತ್ತು—ಗೈರತ್ತುಗಳಿವೆ. ಏಕೆಂದರೆ, ಅದು ಹುಟ್ಟಿದ್ದು ಪ್ರಕೃತಿಯ ಮಡಿಲಲ್ಲಿ ; ಬೆಳೆದದ್ದು ದಿನನಿತ್ಯದ ಕಾಯಕದಲ್ಲಿ ; ಫಲವಾದದ್ದು ಮುಗ್ಧ ಹಳ್ಳಿಗರ ಬಾಯಲ್ಲಿ.

ಭೂಮಿಯ ಮೇಲೆ ಮಾನವನ ಅವತಾರದೊಂದಿಗೇ ಜನಪದ ಸಂಗೀತದ ಅವತಾರವಾಯಿತೆನ್ನಬಹುದು. ಮನುಷ್ಯ ಮಾತು ಕಲಿತದ್ದು, ತನ್ನದೊಂದು ಭಾಷೆ ರೂಪಿಸಿಕೊಂಡದ್ದು ಈಚೆಗೆ. ಮೊದಮೊದಲು ಆತ ತನ್ನ ಸುತ್ತ ಮುತ್ತ ಕೇಳಿಬರುತ್ತಿದ್ದ ಖಗಮೃಗಗಳ ಕೂಗನ್ನೋ, ಮರಗಿಡಗಳ ಸುಯ್ದನಿಯನ್ನೋ, ಕ್ರಿಮಿಕೀಟಗಳ ಚೀರ್ದನಿಯನ್ನೋ, ಸಿಡಿಲು ಗುಡುಗುಗಳ ಅಬ್ಬರವನ್ನೋ, ನದಿ ಸಾಗರಗಳ ಮೊರೆತವನ್ನೋ ನೋಡಿ—ಕೇಳಿ, ಬೆಚ್ಚಿ—ಬೆದರಿ ಅಥವಾ ಸುಖ-ಸಂತೋಷಪಟ್ಟು ಆಯಾ ಸಂದರ್ಭಕ್ಕೆ ತಕ್ಕುದಾದ ದನಿಯನ್ನು ವ್ಯಕ್ತಪಡಿಸಿರಬೇಕು-ಮಾತು ಕಲಿಯುವ ಮುನ್ನ ಹಸುಳೆಯ ಬಾಯಲ್ಲಿ ಬರುವ ಉದ್ಗಾರಗಳಂತೆ.1

ಗುನುಗುನಿಸುವದೇ ಜನಪದ ಸಂಗೀತದ ಆದಿ. ಬೀಸುವ ತಾಯಿ ಬೀಸುವ ಲಯಕ್ಕೆ ಗುನುಗುನಿಸಿದಳು : ಕುಟ್ಟುವ ಹೆಂಗಸು ಕುಟ್ಟುವ ಲಯಕ್ಕೆ ಗುನುಗುನಿಸಿದಳು. ಹೀಗೆ ಪ್ರತಿಯೊಂದು ಸಂದರ್ಭಕ್ಕೆ ತಕ್ಕಂತೆ ಬಗೆಬಗೆಯ ದನಿಯಲ್ಲಿ ಮನುಷ್ಯ ಗುನು

---

1. ಶಿಷ್ಟ ಸಂಗೀತಕ್ಕೆ ಆಧಾರವಾದ ಸ(ಷಡ್ಜ), ರಿ (ರಿಷಭ), ಗ (ಗಾಂಧಾರ) ಮ (ಮಧ್ಯಮ), ಪ (ಪಂಚಮ), ಧ (ದೈವತ), ನಿ (ನಿಷಾದ) ಎಂಬೀ ಸಪ್ತಸ್ವರಗಳು ಪ್ರಾಣಿಗಳು ಹೊರಡಿಸುವ ಶಬ್ಧಗಳ ಆಧಾರವನ್ನು ಸೂಚಿಸುತ್ತವೆ ಎಂದು ಸಂಗೀತ ಶಾಸ್ತ್ರದಲ್ಲೇ ಹೇಳಿದೆ.

ಗುನಿಸಲಾರಂಭಿಸಿದ. ಬಾಯಲ್ಲಿ ಗುನುಗುನಿಸುತ್ತಾ ದೇವರು ಕೊಟ್ಟ ಎರಡು ಕೈಗಳನ್ನು ತಟ್ಟಿದ ; ಕಲ್ಲು ಕೋಲುಗಳನ್ನು ಕುಟ್ಟಿದ : ಮಡಕೆ ಕುಡಿಕೆಗಳನ್ನು ಬಡಿದ. ಆಗ ಅವನ ಕಾಲುಗಳು ಸುಮ್ಮನಿರಲಾಗಲಿಲ್ಲ. ಅವು ಕುಣಿಯಲಾರಂಭಿಸಿದವು. ಹೀಗೆ ಬಂತು ಹಾಡಿಗಿಂತ ಮೊದಲು ಕುಣಿತ.

ಮಾತು ಕಲಿತ ಮೇಲೆ ಕೇವಲ ಗುನುಗುನಿಸುವುದರಲ್ಲಿಯೇ ಇದ್ದ ದನಿ–ಧಾಟಿಗಳು ಹಾಡಿನ ಬೆನ್ನೇರಿದುವು. ಪ್ರತಿಯೊಂದು ಕಾಯಕಕ್ಕೂ, ಪ್ರತಿಯೊಂದು ಸಂದರ್ಭಕ್ಕೂ, ಪ್ರತಿಯೊಂದು ವಿಷಯಕ್ಕೂ ಹಾಡು ಕಟ್ಟಿ ಹಾಡಲಾರಂಭಿಸಿದ, ಬಡಿದುಕೊಂಡು ಕುಣಿಯಲಾರಂಭಿಸಿದ. ಹಾಡಿದ್ದೇ ರಾಗವಾಯಿತು ; ಬಡಿದದ್ದೇ ತಾಳವಾಯಿತು.

ಅಷ್ಟಕ್ಕೇ ನಿಲ್ಲಲಿಲ್ಲ ಆತ. ಚರ್ಮವಾದ್ಯಗಳನ್ನು ಸೃಷ್ಟಿಮಾಡಿದ ; ಊದುವ ವಾದ್ಯಗಳನ್ನು ತಯಾರು ಮಾಡಿದ. ಅವುಗಳಿಂದ ತನ್ನ ಹಾಡಿಗೆ ಬೇಕಾದ ತಾಳ, ಮೇಳ ಶ್ರುತಿಗಳನ್ನು ಒದಗಿಸಿಕೊಂಡ. ಇದು ಆದಿ ಮಾನವನು ಇದ್ದ ಇಡೀ ಭೂಮಂಡಲದಲ್ಲೆಲ್ಲಾ ನಡೆಯಿತು. ಬೆಟ್ಟಗುಡ್ಡಗಳಲ್ಲಿ, ಕಣಿವೆ ಕಂದರಗಳಲ್ಲಿ, ಹೊಲಗದ್ದೆಗಳಲ್ಲಿ, ಗುಡಿ ಗುಂಡಾರಗಳಲ್ಲಿ ಹಾಡು ಕುಣಿತ ಮೆರೆತಗಳು ಹಳ್ಳವಾಗಿ ಕೊಳ್ಳವಾಗಿ ನದಿಯಾಗಿ ಹರಿಯಲಾರಂಭಿಸಿದುವು. ಸಂಗೀತದ ಸಪ್ತಸ್ವರಗಳಂತೆ ಜನಪದ ಸಾಹಿತ್ಯದಲ್ಲಿ —ಸಂಗೀತ—ಕುಣಿತಗಳ ಸಪ್ತಸಾಗರಗಳೇ ಸೃಷ್ಟಿಯಾದವು. ಇಡೀ ಭೂಮಂಡಲವನ್ನೆಲ್ಲಾ ಅಪ್ಪಿ ಆಲಂಗಿಸಿದುವು. ಈ ವಿಶ್ವವ್ಯಾಪಿ ಜಾನಪದದ ಭಾಷೆ ಬೇರೆಯಾದರೂ ಭಾವ, ಅದರ ಮೂಲ ಸತ್ವ, ಅದು ಹೇಳುವ ಸತ್ಯ ಒಂದೇ ಆದವು. ಈ ಕಾರಣ ಜಾನಪದವನ್ನೇ ಆಗಲಿ, ಅದರ ಒಂದು ಪ್ರಮುಖ ಅಂಗವಾದ ಜನಪದ ಸಂಗೀತವನ್ನೇ ಆಗಲಿ ಕೇವಲ ಸಂಗೀತ ದೃಷ್ಟಿಯಿಂದಷ್ಟೇ ಅಲ್ಲದೆ ಆಯಾ ಜನಪದರ ಅಂದಂದಿನ ಸಾಮಾಜಿಕ ಹಾಗೂ ಸಂಸ್ಕೃತಿಯ ದೃಷ್ಟಿಯಿಂದಲೂ ನೋಡುವ ಹೊಸ ವಿಧಾನ ಈಗ ಆರಂಭವಾಗಿದೆ. ಮಾನವನ ಸಂಗೀತದ ವಿವಿಧ ಪ್ರಕಾರಗಳ ಮತ್ತು ಅದರ ಅಭಿವ್ಯಕ್ತಿಗಳ ಅಧ್ಯಯನದಿಂದ ಮಾನವನು ಹಾಗು ಆಯಾ ಸಮಾಜದ ಅಧ್ಯಯನವೂ ಆಗುತ್ತದೆ. ವಿಶ್ವಮಾನವತೆಯನ್ನು ಗುರುತಿಸಬೇಕಾದರೆ ಜನಪದ ಸಾಹಿತ್ಯ–ಸಂಗೀತಗಳೇ ಪ್ರಮುಖ ಪಾತ್ರ ವಹಿಸುತ್ತವೆ.2

---

2. ಈ ಬಗೆಯ ಅಧ್ಯಯನವನ್ನು Ethnomusicoly ಎಂದು ಕರೆಯಲಾಗಿದೆ. ಭಾರತಕ್ಕಿಂತ ಮೊದಲೇ ಅಮೇರಿಕಾ ಮುಂತಾದ ದೇಶಗಳ ಈ ಬಗೆಯ ಕಾರ್ಯವನ್ನು ಆರಂಭಿಸಿವೆ. ಅಮೇರಿಕಾ ವಿಶ್ವವಿದ್ಯಾನಿಲಯಗಳ ಒಕ್ಕೂಟವು ಭಾರತದಲ್ಲಿ ಅಂಥ ಒಂದು ಸಂಸ್ಥೆಯನ್ನು ಪುಣೆಯಲ್ಲಿ ಇತ್ತೀಚೆಗೆ ಸ್ಥಾಪಿಸಿದೆ. ಇನ್ನೂ ಶೈಶಾವಸ್ಥೆಯಲ್ಲಿರುವ ಈ ಸಂಸ್ಥೆ ಜನಪದ ಸಂಗೀತ–ನೃತ್ಯಾದಿಗಳ ತಕ್ಕ ಅಧ್ಯಯನಕ್ಕೆ ಬುನಾದಿ ಆಗುವುದರಲ್ಲಿ ಸಂದೇಹವಿಲ್ಲ.

## 2. ಜನಪದ ಸಂಗೀತ ಅಪೌರುಷೇಯ ಮತ್ತು ಅನಾದಿ :

ವೇದಗಳು ಅಪೌರುಷೇಯ ಎನ್ನುತ್ತಾರೆ. ನಮ್ಮ ಜನಪದ ಸಂಗೀತವೂ ಅಪೌರುಷೇಯವೇ. ವೇದಗಳು ಅನಾದಿ ಎನ್ನುತ್ತಾರೆ. ನಮ್ಮ ಜನಪದ ಸಂಗೀತವೂ ಇನ್ನೂ ಹೆಚ್ಚು ಅನಾದಿ. ಋಗ್ವೇದದ ಕಾಲದಿಂದಲೂ, ಅದಕ್ಕೆ ಮೊದಲೂ ಜನಪದ ಸಂಗೀತ ಇತ್ತೆಂಬುದು ಮುಂದಿನ ಮಾತುಗಳಿಂದ ಸ್ಪಷ್ಟವಾಗುತ್ತದೆ :

"ವೇದ ಸಾಹಿತ್ಯದಲ್ಲಿ ಬರುವ ಗಾಥಾಗಳು ಜನಪದ ಲಾವಣಿಗಳ (Ballads) ಅತಿ ಪ್ರಾಚೀನತೆಯನ್ನು ಪ್ರತಿನಿಧಿಸುತ್ತವೆ. ಋಗ್ವೇದದ ಋಕ್ಕುಗಳಲ್ಲಿ (Hymns) 'ಕಥಿನ್' ಎಂದರೆ 'ಹಾಡುಗಾರ' ಎಂಬ ಪದ ಬರುತ್ತದೆ. 'ಗೃಹ್ಯಸೂತ್ರ' ದಲ್ಲಿ ಮದುವೆ ಮುಂಜಿಗಳ ವೇಳೆ ಹಾಡುತ್ತಿದ್ದ ಜನಪದ ಗೀತೆಗಳು ಬರುತ್ತವೆ...ಕಾಳಿದಾಸನ ಪ್ರಕಾರ ಬತ್ತದ ಗದ್ದೆಗಳಿಗೆ ಹಕ್ಕಿಗಳು ಬಾರದಂತೆ ಪಕ್ಕದ ಕಬ್ಬಿನ ಗದ್ದೆಯ ನೆರಳಿನಲ್ಲಿ ಕಾಯುತ್ತಾ ಕುಳಿತಿದ್ದ ಹೆಣ್ಣುಮಕ್ಕಳು ರಘುವಿನ ಕೀರ್ತಿಕಾರ್ಯಗಳನ್ನು ತಮ್ಮ ಸುಮಧುರ ಕಂಠದಿಂದ ಹಾಡುತ್ತಿದ್ದರಂತೆ.[3]

ಇದು ಇದ್ದ ಸಂಗತಿಯನ್ನೇ ಹೇಳಿದೆ. ಅಷ್ಟೇ ಅಲ್ಲ, ರಾಮಾಯಣ ಮಹಾಭಾರತಗಳಿಗೂ ಅವುಗಳು ಜನಪದರ ಬಾಯಲ್ಲಿದ್ದುದೇ ವಸ್ತುವಾಯಿತು. ವಾಲ್ಮೀಕಿ, ವ್ಯಾಸರು ತಮ್ಮ ಮಹಾಕಾವ್ಯಗಳನ್ನು ಕೇವಲ ಕಲ್ಪನೆಯಿಂದಾಗಲಿ, ಶೂನ್ಯದಿಂದಾಗಲಿ ಸೃಷ್ಟಿಸಲಿಲ್ಲ. ಜನಪದರೇ ಆಗಿದ್ದ ಅವರು ಜನಪದರು ಹಾಡುತ್ತಿದ್ದ ರಾಮಾಯಣ ಮಹಾಭಾರತಗಳನ್ನು ಮೇಲ್ವರ್ಗದ ಜನರ ಸಂಸ್ಕೃತ ಭಾಷೆಯಲ್ಲಿ ತಮ್ಮ ಪ್ರತಿಭೆಯ ಮೂಸೆಯಲ್ಲಿ ಎರಕಹೊಯ್ದರು. ಆದರೆ ಮೂಲ ಗಾಯಕರು ಅಜ್ಞಾತರಾಗಿ ಉಳಿದರು. ಅವರನ್ನು ಉಪಯೋಗಿಸಿಕೊಂಡ ಕವಿಗಳು ಹೆಸರಾದರು. ಇಂದಿಗೂ ಹಳ್ಳಿಗರ ಬಾಯಲ್ಲಿ ಜನಪದ ರಾಮಾಯಣಗಳೂ ಮಹಾಭಾರತಗಳೂ ಇರುವುದೇ ಮಹಾಕಾವ್ಯಗಳಿಗೆ ಮೂಲ ಸಾಕ್ಷಿ. ನಮ್ಮ ಜನಪದರು ರಾಮಾಯಣ ಮಹಾಭಾರತದಲ್ಲಿ ಬರುವ ಯಾರನ್ನೂ ದೇವರೆಂದಾಗಲೀ ದೇವತೆಗಳೆಂದಾಗಲೀ ಪರಿಗಣಿಸಲಿಲ್ಲ. ಅವರೆಲ್ಲಾ ಇವರಿಗೆ ಎಲ್ಲಾ ಗುಣ ಅವಗುಣಗಳುಳ್ಳ ಅಣ್ಣ ತಮ್ಮಂದಿರು, ಅಕ್ಕ ತಂಗಿಯರು. ಅವರ ಕಷ್ಟ ಸುಖಗಳು ಇವರ ಕಷ್ಟ ಸುಖಗಳು. ಅವರು ಮಾಡಿದ್ದನ್ನು ಇವರು ಮಾಡುತ್ತಾರೆ. ಆದ್ದರಿಂದ ಅವರ ಹಾಡುಗಳಲ್ಲಿ ಕಲ್ಪನೆಗಿಂತ ವಾಸ್ತವಿಕತೆಯನ್ನೇ ಹೆಚ್ಚಾಗಿ ಕಾಣಬಹುದು.

## 3. ಜನಪದ ಸಂಗೀತ ಮತ್ತು ಶಿಷ್ಟ ಸಂಗೀತ :

ಜನಪದ ಸಂಗೀತಕ್ಕೆ ಎಂದಿಗೂ ರಾಜಾಶ್ರಯವಿರಲಿಲ್ಲ. ಜನಪದರಿಗೆ ಎಂದೂ

---

3. Folklore and Folk Music of Uttarpradesh – by Dr. K. D. Upadhyaya.

ಅರಸು ಗಿರಸುಗಳ ಭಯವಿರಲಿಲ್ಲ. ಅವರು ಸ್ವಚ್ಛಂದವಾಗಿ ಬಾಳಿದರು ; ತಮಗೆ ತಿಳಿದಂತೆ ಹಾಡಿದರು. ಈ ಕಾರಣವೇ ಅವರದು ಹೃದಯ ಸಂಗೀತ ; ಶಿಷ್ಟ ಸಂಗೀತ[4] ಬುದ್ಧಿ ಸಂಗೀತ. ಜನಪದರು ಬಹಿರ್ಮುಖಿಗಳು ; ಕಲಿತವರು ಅಂತರ್ಮುಖಿಗಳು. ಹಳ್ಳಿಯವರೊ ಆದಿವಾಸಿಗಳೊ ಕೂಡಲೆ ಬಹಿರಂಗವಾಗಿ ಸುತ್ತಮುತ್ತ ಯಾರಿದ್ದಾರೆಂಬುದನ್ನು ಗಮನಿಸದೆಯೇ ತಮ್ಮ ಪ್ರತಿಕ್ರಿಯೆ ತೋರಿಸಿಬಿಡುತ್ತಾರೆ. ಉದಾಹರಣೆಗೆ : ಅವರ ಹತ್ತಿರದವರೊಬ್ಬರು ತೀರಿಕೊಂಡರೆಂದು ಇಟ್ಟುಕೊಳ್ಳಿ. ಆಗ ಅವರು ಎದೆ ಚಚ್ಚಿಕೊಂಡು ಬಾಯಿ ಬಡಿದುಕೊಂಡು ಗೋಳೋ ಎಂದು ಊರಿಗೆಲ್ಲಾ ಕೇಳುವಂತೆ ಅಳುತ್ತಾರೆ. ಆದರೆ ಕಲಿತವರು ನೆರೆಮನೆಗೂ ಗೊತ್ತಾಗದ ರೀತಿಯಲ್ಲಿ ದುಃಖಿಸುತ್ತಾರೆ. ಹೀಗಾಗಿ ಜನಪದರ ಹಾಡುಗಳಾಗಲೀ, ಕಥೆಗಳಾಗಲೀ, ಚಿತ್ರಕಲೆಯಾಗಲೀ, ಕುಣಿತ ಮೆರೆತಗಳಾಗಲೀ ನೇರ ಹಾಗೂ ಸರಳ. ಇವನ್ನು ಅವರ ಸಂಗೀತದಲ್ಲೂ ಕಾಣಬಹುದು. ಅವರದು ಒಂದು ಹಳ್ಳವೋ ನದಿಯೋ ಹರಿದಂತೆ. ಆದರೆ ಶಿಷ್ಟರ ಸಂಗೀತ, ಇಂಜಿನಿಯರ.ಗಳು ಸೃಷ್ಟಿಸಿದ ಕಾಲುವೆಗಳಲ್ಲಿ ಹರಿದಂತೆ ; ಕಟ್ಟಿದ ಕೆರೆಗಳಲ್ಲಿ ನಿಂತಂತೆ ; ತೂಬೆತ್ತಿದಾಗ ಹೊರಗೆ ಬಂದಂತೆ.

ಶಿಷ್ಟ ಸಂಗೀತವೂ ಒಮ್ಮೆ ಈ ಕಟ್ಟುಪಾಡಿಗೆ ಒಳಗಾಗಿರಲಿಲ್ಲವೆಂಬುದು ಮುಂದಿನ ಮಾತುಗಳಲ್ಲಿ ಬಹು ಸ್ಪಷ್ಟವಿದೆ :

''It is not to be supposed that it (classical music) arose as a result of conscious and deliberate application of the principles of accousties or mathmetics but as the idealre finement of spontaneous evolution from the rich experience of folk and natural music which the Aryan forest dwellers of the pre-vedic ages were well conversant''

ಅಂದರೆ ಇಂತಿಂಥ ಹಾಡಿಗೆ ಇಂತಿಂಥ ರಾಗ, ಇಂತಿಂಥ ತಾಳ ಎಂದು ಹೇಳಿದ್ದು ಈಚೆಗೆ. ಜನಪದ ಧಾಟಿಗಳನ್ನು ಯಥೇಚ್ಛವಾಗಿ ಬಳಸಿಕೊಂಡ ಪುರಂದರ ದಾಸ, ಕನಕದಾಸ ಮುಂತಾದ ದಾಸರು ತಮ್ಮ ಕೀರ್ತನೆಗಳಿಗೆ—ಅವನ್ನು ರಚಿಸಿದಾಗ ಅವಕ್ಕೆ—ರಾಗ ತಾಳಗಳನ್ನು ಸೂಚಿಸಿರಲಿಲ್ಲ ಎಂದು ಹೇಳಲಾಗಿದೆ. ಅದು ಈಚೆಗೆ ಆದ ಕೆಲಸ. ತ್ಯಾಗರಾಜರಂತಹ ವಾಗ್ಗೇಯಕಾರರೂ ತಮ್ಮ ದಿವ್ಯನಾಮ ಸಂಕೀರ್ತನೆಗಳಿಗೂ ಗೇಯ

---

4. ಶಿಷ್ಟ ಸಂಗೀತ : Classical music ಅನ್ನು ನಾನು ಶಾಸ್ತ್ರೀಯ ಸಂಗೀತ ಎಂದು ಕರೆಯದೆ ಶಿಷ್ಟ ಸಂಗೀತ ಎಂದು ಕರೆದಿದ್ದೇನೆ. ಜನಪದ ಸಂಗೀತ ಅಶಾಸ್ತ್ರೀಯ ಸಂಗೀತ ಅಲ್ಲ. ಅದೂ ಶಾಸ್ತ್ರೀಯವೇ. ಆದ್ದರಿಂದ ಕ್ಲಾಸಿಕಲ್ ಮ್ಯೂಸಿಕ್‌ಅನ್ನು ಶಿಷ್ಟ ಸಂಗೀತ ಎಂದು ಕರೆದಿರುವುದು.

ಪ್ರಬಂಧಗಳಿಗೂ ಜನಪದ ಸಂಗೀತದ ಮಟ್ಟುಗಳನ್ನು ಬಳಸಿಕೊಂಡರೆಂದು ಸಂಗೀತ ಶಾಸ್ತ್ರಜ್ಞರೇ ಹೇಳುತ್ತಾರೆ. ಜನಪದ ಸಂಗೀತ 'ದೇಸಿ' ಆದರೆ ಶಿಷ್ಟ ಸಂಗೀತ 'ಮಾರ್ಗ'. ಯಾವ ಮಾರ್ಗಕ್ಕೂ ದೇಶಿಯೇ ಮೊದಲು—ಹಳ್ಳಿಯಿಂದ ದಿಳ್ಳಿಯಂತೆ. 5



5. ಇಂತಹ ಜನಪದ ಸಂಗೀತದ ಸಾಹಿತ್ಯ–ಸಂಗೀತ, ದನಿ–ಧಾಟಿ, ಸೊಲ್ಲು–ಪಲ್ಲವಿ, ಮಟ್ಟು-ಗತ್ತುಗಳನ್ನು ಕರ್ನಾಟಕ ಜಾನಪದ ಟ್ರಸ್ಟು ಕರ್ನಾಟಕದಲ್ಲೆಲ್ಲಾ ಸುತ್ತಾಡಿ ಮೂಲ ಗಾಯಕರಿಂದಲೇ ಹಾಡಿಸಿ ಧ್ವನಿಮುದ್ರಿಸಿಕೊಂಡ ಸಹಸ್ರಾರು ಗಂಟೆಗಳ ಧ್ವನಿಮುದ್ರಿಕಗಳಿವೆ. ಇವನ್ನು ಆಸಕ್ತರಿಗೆ ಕ್ಯಾಸೆಟ್ಟು ಮೂಲಕ ಒದಗಿಸಿಕೊಡಲು ಟ್ರಸ್ಟು ಉದ್ದೇಶಿಸಿದೆ. ಸಂಪರ್ಕಿಸ ಬೇಕಾದ ವಿಳಾಸ : "ಕರ್ನಾಟಕ ಜಾನಪದ ಟ್ರಸ್ಟು, ನಂ. 7, 5ನೇ ಕ್ರಾಸ್, 4ನೇ ಬ್ಲಾಕ್, ಕುಮಾರ ಪಾರ್ಕ್ ಪಶ್ಚಿಮ, ಬೆಂಗಳೂರು–560 020.

# ಕರಾವಳಿ ಯಕ್ಷಗಾನ : ಇತ್ತೀಚಿನ ಒಲವುಗಳು

ಜಿ. ಎಸ್. ಭಟ್ಟ

ಕರ್ನಾಟಕ ಸಂಸ್ಕೃತಿಯ ಜೀವನಾಡಿ ಯಕ್ಷಗಾನ. ಇದೊಂದು ವಿಶಿಷ್ಟ ಜನಪದ ರಂಗ ಸಂಪ್ರದಾಯ. ಪ್ರಾದೇಶಿಕವಾಗಿ ಯಕ್ಷಗಾನವನ್ನು ಪಡುವಲಪಾಯ ಮತ್ತು ಮೂಡಲಪಾಯ ಎಂದು ಕರೆಯಲಾಗಿದೆ. ಉತ್ತರ ಕನ್ನಡ, ದಕ್ಷಿಣ ಕನ್ನಡ, ಮತ್ತು ಶಿವಮೊಗ್ಗ ಜಿಲ್ಲೆಗಳ ಯಕ್ಷಗಾನವನ್ನು ಪಡುವಲಪಾಯ, ದಕ್ಷಿಣ ಕರ್ನಾಟಕದ ಮೈಸೂರು ಜಿಲ್ಲೆಯಿಂದ ಬೀದರ್ ಜಿಲ್ಲೆಯವರೆಗಿನ ಯಕ್ಷಗಾನವನ್ನು ಮೂಡಲಪಾಯ ಎನ್ನಲಾಗಿದೆ. ಉತ್ತರ ಕರ್ನಾಟಕದಲ್ಲಿ ಯಕ್ಷಗಾನಕ್ಕೆ ದೊಡ್ಡಾಟ ಅಥವಾ ಮೂಡಲಪಾಯ ದೊಡ್ಡಾಟ ಎಂಬ ಹೆಸರು. ಮೂಲತಃ ಯಕ್ಷಗಾನ ಒಂದೇ ಪದ್ಧತಿಯದಾಗಿರಬೇಕು. ಪಡುವಲಪಾಯ ಯಕ್ಷಗಾನದಲ್ಲಿ ತೆಂಕುತಿಟ್ಟು, ಬಡಗುತಿಟ್ಟು, ಬಡಬಡಗುತಿಟ್ಟು ಎಂಬ ಮೂರು ಪ್ರಭೇದಗಳಿವೆ. ಬಡಬಡಗುತಿಟ್ಟು ಅಥವಾ ಉತ್ತರ ಕನ್ನಡದ ತಿಟ್ಟು ಬಡಗು ತಿಟ್ಟಿನದೇ ಒಂದು ಅಂಗವಾದರೂ ಅಭಿನಯ ಹಿಮ್ಮೇಳ ಮತ್ತು ರಂಗತಂತ್ರಗಳಿಂದ ಅದು ವೈಶಿಷ್ಟ್ಯಪೂರ್ಣವಾಗಿದೆ. ಮಂಗಳೂರಿನಿಂದ ಉಡುಪಿಯವರೆಗೆ ತೆಂಕುತಿಟ್ಟು, ಉಡುಪಿಯಿಂದ ಬಟ್ಕಳದವರೆಗೆ ಬಡಗುತಿಟ್ಟು, ಬಟ್ಕಳದಿಂದ ಕಾರವಾರದವರೆಗೆ ಬಡಬಡಗು ತಿಟ್ಟು ಎಂದು ಗುರುತಿಸಲಾಗಿದೆ. ತೆಂಕುತಿಟ್ಟಿನಲ್ಲಿ ವಾಚಕಾಭಿನಯವಿದ್ದರೆ ಬಡಗಿನಲ್ಲಿ ನೃತ್ಯ ಪ್ರಧಾನ, ಬಡಬಡಗಿನಲ್ಲಿ ನಾಟ್ಯ ಪ್ರಧಾನವಾಗಿರುತ್ತದೆ. ತೆಂಕು ತಿಟ್ಟಿನಲ್ಲಿ ದೊಡ್ಡ ಹೆಜ್ಜೆ ಗಿರಕಿ ಕುಣಿತವಿದೆ. ತೆಂಕುತಿಟ್ಟಿನ ವೇಷಗಾರಿಕೆ ಅಪೂರ್ವವಾದ್ದು. ತೆಂಕಿನಲ್ಲಿ ಭಾಗವತರು ಜಾಗಟೆ ಬಾರಿಸಿದರೆ ಬಡಗಿನಲ್ಲಿ ತಾಳ ಬಳಸುವರು. ಬಡಗು ತಿಟ್ಟಿನ ಚಂಡೆ ಮದ್ದಳೆ ಚಿಕ್ಕದು. ತೆಂಕು ತಿಟ್ಟಿನದು ಗಾತ್ರದಲ್ಲಿ ದೊಡ್ಡದು. ಮೂಡಲಪಾಯ ಯಕ್ಷಗಾನದಲ್ಲಿಯೂ ಶುದ್ಧ ಯಕ್ಷಗಾನ, ದಕ್ಷಿಣಾದಿ, ಲೇಪಾಕ್ಷಿ, ಘಟ್ಟದಕೋರೆ, ಉತ್ತರಾದಿ – ಎಂಬ ಪ್ರಭೇದಗಳನ್ನು ಗುರುತಿಸಲಾಗಿದೆ.

ಯಕ್ಷಗಾನ ಕೇವಲ ಕರ್ನಾಟಕಕ್ಕೆ ಸಂಬಂಧಿಸಿದ ಒಂದು ರಂಗಸಂಪ್ರದಾಯಕವಲ್ಲ. ಇಂತಹುವೇ ರಂಗಸಂಪ್ರದಾಯಗಳು ತಮಿಳುನಾಡು, ಆಂಧ್ರಪ್ರದೇಶ ಮತ್ತು ಕೇರಳ ಗಳಲ್ಲಿ ದೊರೆಯುತ್ತವೆ. ಆಂಧ್ರದ 'ವೀಧಿನಾಟಕಮು', ತಮಿಳುನಾಡಿನ 'ತೆರುಕೊತ್ತು' ಮತ್ತು 'ಕೇರಳದ ಕಥಕ್ಕಳಿ'–ಇವು ಯಕ್ಷಗಾನವನ್ನೇ ಹೋಲುವಂತಹವು. ಕಥಕ್ಕಳಿಯ ವೇಷಭೂಷಣ, ಹಿಮ್ಮೇಳ ಇವು ಯಕ್ಷಗಾನಕ್ಕೆ ತೀರಾ ಸಮೀಪವಾದುವು. ಕಥಕ್ಕಳಿಯಲ್ಲಿ ಯಕ್ಷಗಾನದಂತೆ ಮಾತುಗಳಿಲ್ಲ : ಮುದ್ರೆಗಳಿವೆ. ತೆಲುಗಿನ 'ಭಾಮಾಕಲಾಪಮು' ಪ್ರಸಂಗದಲ್ಲಿ ಭಾಗವತರು ಮತ್ತು ಸತ್ಯಭಾಮೆ ನಡೆಸುವ ಸಂಭಾಷಣೆಯಲ್ಲಿ ಯಕ್ಷಗಾನದ ಹೋಲಿಕೆ ಇದೆ. ಕೂಚಿಪುಡಿ ನೃತ್ಯದಲ್ಲೂ ಯಕ್ಷಗಾನದ ಗತ್ತನ್ನು ಗುರುತಿಸಬಹು ದಾಗಿದೆ. ಭರತನ ನಾಟ್ಯಶಾಸ್ತ್ರದಲ್ಲಿ ಬರುವ ಉಲ್ಲೇಖಗಳಿಂದ ಯಕ್ಷಗಾನವೊಂದು ಪ್ರಾಚೀನ ಕಲಾಪ್ರಕಾರ ಎನ್ನಬಹುದು. ಅಗ್ಗಳದೇವನ 'ಚಂದ್ರಪ್ರಭಾಪುರಾಣ'ದ ಆಧಾರದಿಂದ ಎಕ್ಕಲಗಾಣ ಎನ್ನುವುದೇ ಯಕ್ಷಗಾನದ ತದ್ಭವ ಎಂಬುದು ದಿ॥ ಮುಳಿಯ ತಿಮ್ಮಪ್ಪಯ್ಯ ಅವರ ಅಭಿಪ್ರಾಯ. ಹನ್ನೆರಡನೆಯ ಶತಮಾನದ 'ಲಕ್ಷಣ ದೀಪಿಕಾ' ಗ್ರಂಥದಲ್ಲೂ ಹದಿನಾಲ್ಕನೆಯ ಶತಮಾನದ ಶ್ರೀನಾಥ ಕವಿಯ 'ತೆಲಗು ಭೀಮೇಶ್ವರ ಪುರಾಣ'ದಲ್ಲೂ ಯಕ್ಷಗಾನದ ಉಲ್ಲೇಖವಿದೆ. ಹನ್ನೆರಡನೆಯ ಶತಮಾನದ ಕ್ಷೇಮೇಂದ್ರ 'ದಶಾವತಾರ ಸರಸಃ ಪೂಜಾ ಪ್ರಬಂಧಃ ಕೃತಃ' ಎಂದಿರುವುದು ಯಕ್ಷಗಾನಕ್ಕೆ ಸಂವಾದಿಯಾದ್ದೆಂಬುದು ಕುಕ್ಕಿಲ ಕೃಷ್ಣಭಟ್ಟರ ಅಭಿಪ್ರಾಯ. ಕವಿರಾಜಮಾರ್ಗದ ಹಾಡುಗಬ್ಬದ ಲಕ್ಷಣಗಳು ಯಕ್ಷಗಾನದಿಂದಾದ ರಚನೆಗಳಾಗಿವೆ. ಕವಿರಾಜಮಾರ್ಗದಲ್ಲಿ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್ ಎಂದು ಕನ್ನಡಿಗರ ಬಗ್ಗೆ ಹೇಳಿರುವುದು ಯಕ್ಷಗಾನ ಪ್ರಯೋಗ ಕುರಿತಂತೆ ಇರಬೇಕೆನ್ನುವುದು ಪ್ರಸಿದ್ಧ ವಿಮರ್ಶಕ ಗೌರೀಶ್‌ಕಾಯ್ಕಿಣಿ ಅವರ ಅಭಿಪ್ರಾಯ. ನರಹರಿ ಸ್ವಾಮಿಗಳು (13ನೆಯ ಶತಮಾನ) ಯಕ್ಷಗಾನ ಆಟದಲ್ಲಿ ತೊಡಗಿದರು ಎಂಬ ಐತಿಹ್ಯವಿದೆ. ನರಹರಿ ತೀರ್ಥರ ಶಿಷ್ಯ ಸಿದ್ಧೇಂದ್ರ ಎಂಬ ಆಂಧ್ರದ ಯತಿ ಕೂಚುಪುಡಿ ಯಕ್ಷಗಾನ ಪ್ರಾರಂಭಿಸಿದನೆಂದು ಹೇಳಲಾಗಿದೆ. ಡಾ. ಶಿವರಾಮಕಾರಂತರು ಯಕ್ಷಗಾನ ರಂಗಭೂಮಿ 1400–1500 ಅವಧಿಯಲ್ಲಿ ಹುಟ್ಟಿರಬಹುದೆಂದು ಊಹಿಸಿದ್ದಾರೆ. 'ಯಕ್ಷ' ಎಂದರೆ ಪೂಜಿಸು. ಪೂಜಿಸಲು ಹುಟ್ಟಿದ ಗಾನವೇ ಇದೆಂದೂ ಕುಬೇರನ ಪರಿವಾರದವರೂ ಶಿವಭಕ್ತರೂ ಆದ ಯಕ್ಷರು ಶಿವಪೂಜೆಗಾಗಿ ಬಳಸಿದ ಗಾನ ಇದಾಗಿರಬಹುದೆಂದ ಸುಪ್ರಸಿದ್ಧ ನಟ ಪಿ. ವಿ. ಹಾಸ್ಯಗಾರ ಅವರು ಊಹಿಸುತ್ತಾರೆ.

'ಕೇಳುವ ಗಾನ, ಮಾತು ಮತ್ತು ಕುಣಿತ–ಕಥಾಕ್ರಿಯೆಯನ್ನು ರೂಪಿಸುವ ನಾಟಕ–ಮೂರೂ ಸೇರಿ ಯಕ್ಷಗಾನ ಪದದಲ್ಲಿ ಸೇರಿಕೊಳ್ಳುತ್ತದೆ' ಎಂದು ವಿ. ಸೀತಾರಾಮಯ್ಯನವರು ಹೇಳಿದ್ದಾರೆ. ಯಕ್ಷಗಾನವನ್ನು ಜನಪದ ನೃತ್ಯಕಲೆ ಎಂದು ಕರೆಯಲಾಗಿದೆ. ಆದರೆ ಜನಪದ ಕಥೆಗಳನ್ನು ಅಳವಡಿಸಿಕೊಳ್ಳದಿರುವುದೇ

ಇದರ ವೈಶಿಷ್ಟ್ಯವಾಗಿದೆ. ಇದು ಮಾರ್ಗೀಯ ಕಲೆಗೆ ಕಡಿಮೆಯಲ್ಲದ್ದು ಎನ್ನಬಹುದಾಗಿದೆ. ಪ್ರಾರಂಭದಲ್ಲಿ ದೇಸೀಯವಾಗಿದ್ದ ಈ ಕಲೆ ಆನಂತರ ಶಾಸ್ತ್ರದ ಚೌಕಟ್ಟಿಗೆ ಒಳಪಟ್ಟಿರಬಹುದೇನೋ ; ಯಕ್ಷಗಾನವು ಜನಪದ ಕಲೆ ಎಂದು ಪರಿಗಣಿಸಿದರೂ ಇದೊಂದು ಪರಿಷ್ಕೃತ ಜನಪದ ಕಲೆ.

"ಯಕ್ಷಗಾನ ಬರಿಯ ಗಾನವಲ್ಲ; ನಾಟ್ಯ, ಗೀತ, ಗಾನ, ವಾದ್ಯ, ಬಣ್ಣ–ಬೇಗಡೆಗಳಿಂದ ಸಂಪೂರ್ಣವೂ ಸಮೃದ್ಧವೂ ಆದ ಸಮಷ್ಟಿ ಕಲೆ. ಸಾಹಿತ್ಯ ಸಂಗೀತಗಳಿಂದ ಕಿವಿಗೆ ಇಂಪನ್ನು ಚಿತ್ರ ವಿಚಿತ್ರ ಮುಖವರ್ಣಿಕೆ ಮತ್ತು ಸುಂದರ ಕಲಾಪೂರ್ಣ ವೇಷ ಭೂಷಣಗಳಿಂದ ಹಾಗೂ ಕ್ರಮಬದ್ಧವಾದ ನಾಟ್ಯದಿಂದ ಕಣ್ಣಿಗೆ ಸೊಂಪನ್ನೂ ಧರ್ಮ ಬೋಧನೆಯಿಂದ ಮನಸ್ಸಿಗೆ ತಂಪನ್ನೂ ಕೊಡುವ ವಿಶಿಷ್ಟ ಕಲೆಯಾಗಿದೆ" ಎಂಬ ಪಿ.ವಿ. ಹಾಸ್ಯಗಾರರ ಮಾತು ಯಕ್ಷಗಾನದ ಬಗ್ಗೆ ಸಾಕಷ್ಟು ವಿವರಣೆ ನೀಡುತ್ತದೆ. 1812ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಧರ್ಮಸ್ಥಳ ಮೇಳ ಮೈಸೂರು ಮಹಾರಾಜರ ದರ್ಬಾರಿನಲ್ಲಿ ಪ್ರದರ್ಶನ ನೀಡಿ ಮನ್ನಣೆ ಪಡೆಯಿತು. ಉತ್ತರ ಕನ್ನಡ ಜಿಲ್ಲೆಯ ಕರ್ಕಿ ಮೇಳ ಬಡೋದ, ಸಾಂಗ್ಲಿಗಳಿಗೆ ತೆರಳಿ ಅಲ್ಲಿ ರಾಜಮನ್ನಣೆ ಗಳಿಸಿದ್ದು ಐತಿಹಾಸಿಕ ದಾಖಲೆ.

ಗೀತ, ಕುಣಿತ, ವೇಷಭೂಷಣ, ಮಾತುಗಾರಿಕೆ, ವಾದ್ಯ—ಇವೇ ಯಕ್ಷಗಾನದ ಪಂಚಾಂಗಗಳು. ಯಕ್ಷಗಾನಕ್ಕೆ ದಶಾವತಾರ, ಭಾಗವತರ ಆಟ, ಬಯಲಾಟಗಳೆಂಬ ಹೆಸರೂ ಇದೆ. ವಿಷ್ಣುವಿನ ಹತ್ತು ಅವತಾರಗಳನ್ನು ಪ್ರದರ್ಶಿಸುವುದರಿಂದ ಅದು ದಶಾವತಾರ. ಯಕ್ಷಗಾನದ ಸೂತ್ರಧಾರ ಭಾಗವತ. ಅವನೇ ಆಟವಾಡಿಸುವಾತ. ಇದರಿಂದ ಅದು ಭಾಗವತರ ಆಟ ಎನ್ನಿಸಿದೆ. ಬಯಲಿನಲ್ಲಿ ರಂಗಸ್ಥಳ ನಿರ್ಮಿಸಿ ಆಡುವುದರಿಂದ ಅದು ಬಯಲಾಟ.

ಮೂಲತಃ ಯಕ್ಷಗಾನ ಹುಟ್ಟಿಕೊಂಡಿದ್ದು ದೇವತಾರಾಧನೆಗಾಗಿ. ಹಿಂದೆ ಗಂಡು ಮಕ್ಕಳಾದರೆ 'ಪುತ್ರಕಾಮೇಷ್ಟಿ' ಆಖ್ಯಾನ ಆಡಿಸುವ ಹರಕೆ ಹೊತ್ತುಕೊಳ್ಳುತ್ತಿದ್ದರು. ಉತ್ತರ ಕನ್ನಡದ ಹಳ್ಳಿಗಳಲ್ಲಿ ಕಾರ್ತಿಕೋತ್ಸವ, ರಥೋತ್ಸವಗಳಲ್ಲಿ ಯಕ್ಷಗಾನ ಆಡಿಸುವ ಪರಿಪಾಠವಿತ್ತು. ಇಂದಿಗೂ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳ ಹಲವು ಮೇಳಗಳು ಆಡುವುದು ಹರಕೆ ಆಟಗಳನ್ನೇ. ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲ್ಲೂಕಿನ ಗುಂಡಬಾಳದಲ್ಲಿ ಹನುಮಂತ ದೇವರಿಗೆ ನಿತ್ಯ ಹರಕೆಯಾಟವಿರುತ್ತದೆ. ಇಂದು ಸಿದ್ಧಿ ಪ್ರಸಿದ್ಧಿ ಸಾಧಿಸಿದ ಹಲವು ನಟರು ತಮ್ಮ ಮೊದಲ ಕುಣಿತ ಮಾಡಿದ್ದು ಹನುಮಂತ ದೇವರ ಎದುರು. 'ಎಲ್ಲರಿಗೂ ಊಟ ಹಾಕಲಾರೆ, ಆಟ ನೋಡಿಯಾದರೂ ತೃಪ್ತಿ ಪಡಲಿ' ಎಂಬುದು ನಮ್ಮ ಜನಪದರ ಇಚ್ಛೆಯಾಗಿದೆ. ಅಂದು ಆಟ ಆಡಿಸುತ್ತಿದ್ದವರು ಊರಿನ ಸಿರಿವಂತ, ಮುಖಂಡ ಇಲ್ಲವೆ ಅರಸ. ಆಟ ಆಡಿಸುವಾತ ಮೇಳದವರಿಗೆ ನೀಡುವ ಗೌರವ ಧನ 'ವೀಳ್ಯ' ಎನ್ನಲಾಗುತ್ತದೆ. ಇದೊಂದು ನೈತಿಕ ಒಪ್ಪಂದ. ವೀಳ್ಯ ಪಡೆದವರು ಆಟ ಆಡಲೇಬೇಕು. ವೀಳ್ಯ

ನೀಡಿ ಆಹ್ವಾನಿಸಿದವರು ಆಡಿಸಲೇಬೇಕು. ತಾವೊಂದು ಕಲಾ ಸಮಾರಾಧನೆ ನಡೆಸು ತ್ತಿದ್ದೇವೆಂಬ ಭಾವನೆ ಆಟ ಆಡಿಸುವವರಲ್ಲಿತ್ತು. ಅದಕ್ಕೆಂದೇ ಅವರು ತಮ್ಮ ಸುತ್ತ ಮುತ್ತಲಿನ ಗ್ರಾಮಗಳಿಗೆ ತೆರಳಿ ವಿವಾಹಕ್ಕೆ ಆಹ್ವಾನಿಸಿದಂತೆ ಬಂಧುಬಳಗ ಮತ್ತು ಮಿತ್ರರನ್ನು ಕರೆಯುತ್ತಿದ್ದರು. ಆಟವಾಡುವ ದಿನ ಬೆಳಗ್ಗೆ ತಾಳ ಮದ್ದಲೆ ಸೇವೆ ನಡೆಯುತ್ತಿತ್ತು. ಆಟ ನಡೆಯುವ ಸ್ಥಳದಲ್ಲಿ ಸೂರ್ಯಾಸ್ತದ ಬಳಿಕ ಅಬ್ಬರದ ಬಿಡ್ತಿಗೆ ಹೊಡೆಯಲಾಗುತ್ತಿತ್ತು. ಊರಿನಲ್ಲಿ ಆಟ ನಡೆಯಲಿದೆ ಎಂಬುದರ ಮುನ್ಸೂಚನೆ ಅದು. ಆಟದಲ್ಲಿ ಊರಿನ ಸಮಸ್ತ ಜನ ಸಮೂಹ ಪಾಲ್ಗೊಳ್ಳುತ್ತಿತ್ತು. ಆಟ ಮುಗಿದು ಬೆಳಗಾದಾಗ ಹಾಸ್ಯಗಾರ 'ಆ ಹೋ ಹೋ ದಕ್ಕಿತೋ ದಕ್ಕಿತು, ಆಡಿಸಿದ ಮಹಾನು ಭಾವರಿಗೂ ನೋಡಿದ ಸದ್ಭಕ್ತರಿಗೂ ಮಂಗಳವಾಗಲಿ' ಎನ್ನುತ್ತಿದ್ದ. ಹಿಂದೆ ಹಾರ್ಮೋನಿಯಂಗೆ ಬದಲಾಗಿ ಸೋರೆ ಬುರುಡೆಯಿಂದ ಸಿದ್ಧಪಡಿಸಿದ ಶ್ರುತಿ ಇರುತ್ತಿತ್ತು. ಪ್ರತಿಯೊಬ್ಬ ವೇಷಧಾರಿ ಸ್ವತಃ ಬಣ್ಣಗಾರಿಕೆಯಲ್ಲಿ ನಿಷ್ಣಾತನಾಗಿದ್ದ. ಅವರ ವೇಷಭೂಷಣಗಳ ಪೆಟ್ಟಿಗೆ-ಬಣ್ಣದ ಪೆಟ್ಟಿಗೆ. ಚೌಕಿಯಲ್ಲಿ ಮೊದಲು ಗಣಪತಿಗೆ ಪೂಜೆ ಸಲ್ಲಿಸಿ ಬಳಿಕ ಗೆಜ್ಜೆ ಕಟ್ಟುತ್ತಿದ್ದರು. ಯಕ್ಷಗಾನದ ಮೊದಲ ವೇಷಧಾರಿ ಭಾಗವತ. ಅವನೊಂದಿಗೆ ಇಬ್ಬರು ದೀವಟಿಗೆ ಹಿಡಿದು ರಂಗಪ್ರವೇಶಿಸುತ್ತಿದ್ದರು. ಅವರನ್ನು ಅನುಸರಿಸಿ ಇಬ್ಬರು ಕೋಡಂಗಿಗಳು ಹೋಗುತ್ತಿದ್ದರು. ಅವರು 'ಧೀರ ವಯ್ಯಾರೋ ಬಹುಪರಾಕ್ ಶರಧೀ ಗಂಭೀರೋ ಬಹುಪರಾಕ್, ನಾಮೋಹನಾಂಗನೋ ಬಹುಪರಾಕ್, ಕಸ್ತೂರಿ ಕೋಲಾಹಲೋ ಬಹುಪರಾಕ್' ಎನ್ನುತ್ತಿದ್ದರು. ಬಳಿಕ 'ಮುದದಿಂದ ನಿನ್ನನ್ನು ಕೊಂಡಾಡುವೆನು ಅನವರತ' ಎಂದು ಗಣಪತಿ ಸ್ತುತಿ. ಅನಂತರ ನಡೆಯುತ್ತಿದ್ದುದು ಆಯಾ ಪ್ರದೇಶದ ದೇವತಾ ಸ್ತುತಿ. ಉತ್ತರ ಕನ್ನಡ ಜಿಲ್ಲೆಯಲ್ಲಿ ಹಿಂದೆ ಮಹಾಭಾರತ ಪ್ರಸಂಗಗಳಾಗಿದ್ದರೆ ಭಾಗವತ 'ಎಲೈ ಜನಮೇಜಯನೇ ಕೇಳುವಂತವನಾಗು' ಕೇಳಿದಿ ರೇನಯ್ಯಾ ವೈಶಂಪಾಯನ ಮುನಿಗಳು ಜನಮೇಜಯನಿಗೆ ಭಾರತವನ್ನು ಹೇಳುತ್ತಿದ್ದಾರೆ. ಆಗ ಜನಮೇಜಯ 'ಸ್ವಾಮಿ ಶ್ರೀಕೃಷ್ಣ ಕೌರವನಲ್ಲಿ ಸಂಧಾನಕ್ಕೆ ಯಾಕೆ ಹೋದ ? ಸಂಗ್ರಾಮವೇಕೆ ನಿರ್ಧಾರವಾಯಿತು ?' ಎಂಬೀ ಕಥೆಯನ್ನು ನನಗೆ ಹೇಳುವಂತಹವರಾಗಿ ಎನ್ನಲು 'ಶ್ರೀಕೃಷ್ಣಸಂಧಾನ' ಎಂಬ ಕಥೆಯನ್ನು ಹೇಳುತ್ತೇನೆ ಎನ್ನುತ್ತಿರಲಾಗಿ ಇತ್ತ ಪಾಂಡವರು ಹೇಗೆ ಒಪ್ಪಿರುತ್ತಾರೆ ಎಂದರೆ 'ಧೇಂತಾಸ್ತಕಿಟ' ಎಂದು ಮಾತನಾಡಿ ಕಥಾರಂಬ ಮಾಡುತ್ತಿದ್ದ. ಸಮಯವಿದ್ದರೆ ಕೋಡಂಗಿಗಳನ್ನು ಕುಣಿಸಲಾಗುತ್ತಿತ್ತು. ಬಳಿಕ ರಂಗದ ಎಡಬಲಗಳಿಂದ ಬಾಲಗೋಪಾಲರು ಪ್ರವೇಶಿಸುತ್ತಿದ್ದರು. ಯಕ್ಷಗಾನದ ತರಬೇತಿ ಹಂತದಲ್ಲಿರುವ ಚಿಕ್ಕಮಕ್ಕಳಿಗೆ ಸಾಮಾನ್ಯವಾಗಿ ಬಾಲಗೋಪಾಲರ ವೇಷ ಕೊಡ ಲಾಗುತ್ತಿತ್ತು. ಅವರು ಭಾಗವತರು 'ತೋಂಗಲ್ಲೋ ...ತೋದಿನ್ನ ಎಂದಾಗ ನಿರ್ಗಮಿಸು ತ್ತಿದ್ದರು. ಅನಂತರ ತೆರೆಯ ಹಿಂಭಾಗ ಎರಡು ಸ್ತ್ರೀ ವೇಷಗಳು ಕುಣಿಯುತ್ತಿದ್ದುವು. ಭಾಗವತರು,

ಚಂದ ಭಾಮಾ । ಚಂದ ಭಾಮಾ ಓ ಚಂದ ಭಾಮಾ ।
ಚಂದಿರವದನೆ ಕೇಳಲೆ ಚಂದಾ ಭಾಮಾ ॥೧॥ ಇಂದು ವದನೆ
ಬಾರೆ ಓ ಚಂದ ಭಾಮಾ ಮಂದಗಮನೆ ಕೇಳೆ ಏ ಚಂದ
ಭಾಮಾ ॥೨॥ ಅಗರು ಚಂದನಗಂಧಿ ಓ ಚಂದ ಭಾಮಾ । ಸೊಗ
ಸಾದ ಮುಖ ತೋರೆ । ಓ ಚಂದ ಭಾಮಾ ॥

ಎಂದು ಹಾಡುತ್ತಿದ್ದರು. ಹಿಂದೆ ಭಾಗವತರು ತೆರೆಯ ಮರೆಯಲ್ಲಿರುವ ಸ್ತ್ರೀ ವೇಷ ಗಳೊಂದಿಗೆ ಸಂಭಾಷಿಸುತ್ತಿದ್ದರು.

**ಸ್ತ್ರೀವೇಷ :** ಅಮ್ಮಯ್ಯಾ, ನನ್ನ ಮಾವನ ಮಗನನ್ನು ನೋಡಿದ್ದೀರೇನಮ್ಮಯ್ಯಾ ?
**ಭಾಗವತರು :** ಅಕ್ಕಯ್ಯಾ ನಿನ್ನ ಮಾವನ ಮಗನನ್ನ ತೋರಿಸಿಕೊಟ್ಟರೆ ಕೊಡುವುದೇನು ?
**ಸ್ತ್ರೀವೇಷ :** ಮೊದಲು ತೋರಿಸಿ ಕೊಡಿ, ನಂತರ ಕೇಳಿ.

ಮಾವಿನ ಮರಗಳಿರಾ । ಅಲ್ಲಿರುವಂಥ । ಮೋಹದ ಗಿಳಿ
ಗಳಿರಾ । ಮಾವನ ಮಗನ ಕಂಡರೆ ಇತ್ತ ಬರಹೇಳಿ । ಮಂದಧರನ
ಮಾಧವನ ॥ ೧ ॥

**ಎರಡನೆಯ ಸ್ತ್ರೀವೇಷ :** ನನ್ನ ಅತ್ತೆಯ ಮಗನನ್ನು ನೋಡಿದಿರೇನಮ್ಮಯ್ಯಾ ?
**ಭಾಗವತರು :** ಅತ್ತೆಯ ಮಗನನ್ನು ತೋರಿಸಿ ಕೊಟ್ಟರೆ ಏನು ಕೊಡುವಿಯಕ್ಕಯ್ಯಾ ?
**ಸ್ತ್ರೀವೇಷ :** 'ಕೊರಳ ಹಾರವನ್ನೇ ಕೊಟ್ಟೇನು'

ಅತ್ತಿಯ ಮರಗಳಿರಾ । ಅಲ್ಲಿರುವಂಥ । ಮುತ್ತಿನ ಸರ
ಗಳಿರಾ । ಅತ್ತೆಯ ಮಗನ ಕಂಡರೆ ಇತ್ತ ಬರ ಹೇಳಿ । ಯದುಕುಲ
ಗೋಪಾಲನಾ ಮಾಧವನಾ ॥

**ಭಾಗವತರು :** ನಿಮಗೆ ಅಷ್ಟೇಕೆ ಕಳವಳ ?
**ಸ್ತ್ರೀವೇಷ :** ನಮ್ಮ ಅವಸ್ಥೆಯೊ ?

ಕಣ್ಣನೀರ ಕರೆ ಕರೆದು ಕೊರಳ ಮುತ್ತು । ಸುಣ್ಣದ ಹರ
ಳಾಯಿತೂ ॥ ಇನಿಯನ ಕಂಡರೆ ಇತ್ತಿತ್ತ ಬರಹೇಳಿ । ಯದುಕುಲ
ಗೋಪಾಲನಾ ಮಾಧವನಾ ॥

**ಸ್ತ್ರೀವೇಷ :** ನನ್ನ ಅತ್ತೆಯ ಮಗನನ್ನು ಕಾಣದೆ ಅತ್ತು ಅತ್ತು ಕೊರಳಹಾರ ಸುಣ್ಣದ ಹರಳಾಯಿತಲ್ಲಾ !

**ಭಾಗವತರು :** ಅಂಥ ಸುಣ್ಣಕ್ಕೆ ಎಲೆಯಡಿಕೆ ಸಿದ್ಧಮಾಡಿದ್ದೇವೆ ಕೊಡಿಸಬಹುದಲ್ಲ.

**ಸ್ತ್ರೀ ವೇಷ :** ಏನ್ರೀ ? ಸಕ್ಲೀ ಮಾಡ್ತೀರೇನ್ರಿ ?

**ಭಾಗವತರು :** ತೆರೆಬಿಟ್ಟು, ಹೊರಗೆ ಬರಬಹುದಲ್ಲ.

**ಸ್ತ್ರೀವೇಷ :** ಕರೆಸಿಕೊಂಡರೆ ಬರುತ್ತೇವೆ.

ಯಕ್ಷಗಾನದ ಪೂರ್ವರಂಗ ಎಂದು ಕರೆಯಲಾಗುವ ಬಾಲಗೋಪಾಲ ಸ್ತ್ರೀ ವೇಷಗಳ ಹಿಂದಿರುವ ಉದ್ದೇಶ ಮುಂದಿನ ಕಥಾಪ್ರಸಂಗಕ್ಕೆ ಪ್ರೇಕ್ಷಕರನ್ನು ಮಾನಸಿಕವಾಗಿ ಸಿದ್ಧಪಡಿಸುವುದೇ ಆಗಿದೆ. ಅವರನ್ನು ಧಾರ್ಮಿಕ ಲೋಕಕ್ಕೆ ಕರೆದೊಯ್ಯಲು ಮಾಡುವ ಪೂರ್ವಸಿದ್ಧತೆ ಅದು. ಹಿಂದೆ ಪೂರ್ವರಂಗ ನಡೆಯುತ್ತಿದ್ದುದು ಮೂರು ಗಂಟೆಗಳ ಕಾಲ. ಇದನ್ನು ಮೊಟಕುಗೊಳಿಸುವುದು ಅಧರ್ಮ ಎಂದು ಭಾವಿಸಲಾಗಿತ್ತು. ಇದಾದ ಬಳಿಕ ಒಡ್ಡೋಲಗ. ಸುಮಾರು ಅರ್ಧ ಗಂಟೆ ನಡೆಯುವ ಒಡ್ಡೋಲಗ ಕುಣಿತ ಅತ್ಯಂತ ಆಕರ್ಷಣೀಯವೆನಿಸುತ್ತದೆ. ಪಾಂಡವರ ಒಡ್ಡೋಲಗ, ಕಿರಾತನ ಒಡ್ಡೋಲಗ, ರಾಕ್ಷಸರ ಒಡ್ಡೋಲಗ ಹೀಗೆ ಒಂದೊಂದು ವೈಶಿಷ್ಟ್ಯಪೂರ್ಣವೆನಿಸಿದ್ದವು. ವಿಲಂಬಿತ ಲಯವಿನ್ಯಾಸದಲ್ಲಿ ಸುಂದರ ಆಕಾರಬದ್ಧ ನೃತ್ಯಭಂಗಿಗಳನ್ನೂ ಪಾತ್ರೋಚಿತ ಘನತೆ ಗಾಂಭೀರ್ಯಗಳನ್ನೂ ಅಂದಿನ ಉತ್ತರ ಕನ್ನಡದ ಶೈಲಿಯಲ್ಲಿ ಕಾಣಬಹುದಾಗಿತ್ತು. ಭಾಗವತ ವಿಲಂಬರಾಗದಲ್ಲಿ ಹಾಡಿದರೆ ಮಾತ್ರ ಪಾತ್ರಧಾರಿಗೆ ಕುಣಿಯಲು ಸಾಕಷ್ಟು ಅವಕಾಶ ದೊರೆಯುವುದು.

**ಹಾಡುಗಾರಿಕೆ :**

ಗಾನ ಅಥವಾ ಹಾಡುಗಾರಿಕೆ ಯಕ್ಷಗಾನದ ಪ್ರಮುಖ ಅಂಗ. ಇಲ್ಲಿ ಹಾಡುಗಾರಿಕೆ ಮುಮ್ಮೇಳದ ಕುಣಿತ ಮತ್ತು ಅಭಿನಯಕ್ಕೆ ಪೂರಕವಾಗಿರುತ್ತದೆ. ಭಾಗವತನ ಹಾಡುಗಾರಿಕೆ ಜಾಗಟೆ, ಮದ್ದಲೆ, ಶ್ರುತಿ, ಪೋಷಕಶ್ರುತಿ, ಲಯ, ತಾಳ ಮತ್ತು ರಾಗಗಳ ಆಧಾರದ ಮೇಲೆ ಹಾಡು ನಿಂತಿದೆ. ಹಾಡುಗಳನ್ನು ಆದಿತಾಳ, ಏಕತಾಳ, ರೂಪಕತಾಳ, ಝಂಪೆ, ಮಟ್ಟೆ, ತ್ರಿವುಡೆ, ಅಷ್ಟತಾಳಗಳಲ್ಲಿ ಹಾಡಲಾಗುವುದು. "ಯಕ್ಷಗಾನದ ಹಾಡುಗಾರಿಕೆಯಲ್ಲಿ ಗಾಯಕನಿಗೆ ಲಭಿಸುವಷ್ಟು ವಿವಿಧ ಅವಕಾಶಗಳು ಇನ್ನಿತರ ಯಾವುದೇ ಗಾನ ಪ್ರಕಾರಗಳಿಗೂ ಇಲ್ಲ. ಕರ್ನಾಟಕ, ಹಿಂದೂಸ್ಥಾನಿ ಸಂಗೀತಗಳಂತೆ ಮಾರ್ಗಪದ್ಧತಿಯಾಗಿದ್ದರೆ ಯಕ್ಷಗಾನದ ವ್ಯಾಪ್ತಿ ಇಷ್ಟು ಪರಿಮಿತವಾಗುತ್ತಿದ್ದಿಲ್ಲ" ಎಂದು ಸುಪ್ರಸಿದ್ಧ ಭಾಗವತ ಕಡತೋಕ ಮಂಜುನಾಥ ಭಾಗವತರು ಹೇಳಿದ್ದಾರೆ.

"ಯಕ್ಷಗಾನ ಹಾಡುಗಾರಿಕೆ ಕರ್ನಾಟಕ ಅಥವಾ ಹಿಂದೂಸ್ಥಾನಿ ಸಂಗೀತದಲ್ಲಿ ಅದರ ಶೈಲಿ ದೇಸಿಪದ್ಧತಿ ಜಾನಪದ ಪ್ರಕಾರ" ಎಂದೂ ಅವರು ಹೇಳಿದ್ದಾರೆ. ಕರ್ನಾಟಕ ಸಂಗೀತದ ದಟ್ಟ ಪ್ರಭಾವವನ್ನು ಯಕ್ಷಗಾನ ಹಾಡುಗಾರಿಕೆಯಲ್ಲಿ ಗುರುತಿಸಲಾಗಿದೆ. ಇದರಲ್ಲಿ ಸಾಮಾನ್ಯವಾಗಿ ಬಳಸಲ್ಪಡುವ ರಾಗಗಳೆಂದರೆ ನಾಟಿ, ಕಾಂಬೋದಿ, ಕೇದಾರ ಗೌಳ, ಖಂಜೋಟಿ, ಭೈರವಿ, ನೀಲಾಂಬರಿ, ಮಧ್ಯಮಾವತಿ, ಆರಭಿ, ಮೋಹನ, ಹಂಸಧ್ವನಿ, ತೋಡಿ, ಭೂಪಾಳಿ, ಬಿಲಹರಿ, ಬೇಹಾಗ, ಬೇಗಡೆ, ಶಂಕರಾಭರಣ, ಗೌಳ ಸಾವೇರಿ, ಹಿಂದೋಳ, ನವರೋಜು, ಪೂರ್ವಿ, ಅಠಾಣ. ಭಾಗವತನೇ ಯಕ್ಷಗಾನದ ಪ್ರಥಮ ಪಾತ್ರಧಾರಿ. ಅದರ ಯಶಸ್ಸಿಗೆ ಅವನ ಸಮರ್ಥ ನಿರ್ದೇಶನ ಅಗತ್ಯ. ಕಥೆಗಳಿಗೆ ಪಾತ್ರಗಳಿಗೆ ಪೋಷಣೆ ನೀಡಬಲ್ಲ ಶಕ್ತಿ ಅವನಿಗಿದೆ. ಅವನು ಅದರಲ್ಲಿ ತನ್ಮಯನಾದನೆಂದರೆ ಆಟ ಕಳೆಕಟ್ಟುತ್ತದೆ. ಸಮರ್ಥ ಭಾಗವತನಿದ್ದರೆ ಮಾತ್ರ ಆಖ್ಯಾನ ಯಶಸ್ವಿಯಾಗಬಲ್ಲದು. ತಾಳ, ಲಯ, ಶ್ರುತಿ ಮತ್ತು ರಾಗಗಳ ಧಾಟಿಯಲ್ಲಿ ಪರಿಣತನಾದವನು ಮಾತ್ರ ಯಕ್ಷಗಾನದ ಭಾಗವತನಾಗಿ ಯಶಸ್ವಿಯಾಗಬಲ್ಲ. ತಾನು ಹಾಡುವ ಹಾಡಿನ ಅರ್ಥವನ್ನು ಅರಿತುಕೊಂಡು ಮಹಾಭಾರತ, ರಾಮಾಯಣಗಳನ್ನು ಕೂಲಂಕುಷವಾಗಿ ಓದಿಕೊಂಡವನು ಮಾತ್ರ ರಂಗದಲ್ಲಿ ಯಶ ಸಂಪಾದಿಸಬಲ್ಲ. ಭಾವಕ್ಕೆ ಸರಿಯಾಗಿ ಹಾಡಬಲ್ಲ. ಕಲಾಪ್ರಜ್ಞೆ ಉತ್ತರ ಕನ್ನಡ ಜಿಲ್ಲೆಯಲ್ಲಿ ಬೆಳೆದು ಬಂದಿದೆ. ಭಾಗವತನಿಗೆ ಸರಿಯಾದ ಚಂಡೆಮದ್ದಲೆ ಯವರಿರಬೇಕು.

ಹಿಂದೆ ಪ್ರಸಂಗಗಳನ್ನು ಭಾಗವತ ಪುಸ್ತಕ ನೋಡಿ ಹೇಳುತ್ತಿರಲಿಲ್ಲ. 25-30 ಪ್ರಸಂಗಗಳು ಅವನಿಗೆ ಕಂಠಪಾಠವಾಗಿದ್ದುವು. ಭಾಗವತನೇ ಹಿಂದೆ ಪಾತ್ರಗಳನ್ನು ಹಂಚುತ್ತಿದ್ದ. ಅವನಿಗೆ ಒಳ್ಳೆಯ ಶಾರೀರ ಸಂಪತ್ತು ಇರಬೇಕಾಗಿತ್ತು. ಯಕ್ಷಗಾನಕ್ಕೆ ಬಳಸುವ ರಾಗಗಳಲ್ಲಿ ಹೆಚ್ಚಿನದು ದಕ್ಷಿಣಾದಿ.

ಯಕ್ಷಗಾನದ ವೇಷಭೂಷಣಗಳೆಲ್ಲಾ ಒಂದೇ ಮೂಲದವು. ಬಡಗುತಿಟ್ಟಿನಲ್ಲಿ ಚೌಕಳಿ ಬಟ್ಟೆಯ ಬಳಕೆಯುಂಟು. ಪಗಡೆಯನ್ನು ಅಟ್ಟೆಯಿಂದ ಕಟ್ಟಿ ಜರಿ ಲಾಡಿ ಸುತ್ತುವರು. ತಲೆಗೆ ಹಿಂಭಾಗದಲ್ಲಿ ತ್ರಿಕೋಣಾಕೃತಿಯಲ್ಲಿ ಶಲ್ಲಿ ಇಳಿಸಲಾಗುತ್ತದೆ. ತೆಂಕುತಿಟ್ಟಿನ ಬಣ್ಣಗಾರಿಕೆ ವೈಶಿಷ್ಟ್ಯ ಸಾಧಿಸಿದೆ. ಹಣೆಯ ನಾಮ, ಮುಖಚಿತ್ರ ವೈವಿಧ್ಯಮಯವಾಗಿವೆ. ತೆಂಕುತಿಟ್ಟಿನ ಬಣ್ಣದ ವೇಷವೊಂದು ಅದ್ಭುತ ಸೃಷ್ಟಿ. ಯಕ್ಷಗಾನದಲ್ಲಿ ಬರುವ ಪಾತ್ರಗಳನ್ನು ಅತಿ ಮಾನವ, ದೇವ, ದಾನವ ಎಂದು ವಿಭಜಿಸ ಬಹುದು. ಬಡಗುತಿಟ್ಟಿನ ವೇಷಭೂಷಣಗಳು ಸಂಪ್ರದಾಯಬದ್ಧವಾಗಿವೆ. ಹಿಂದೆ ಮಾಯಾಮೃಗ, ಜಟಾಯು ಮೊದಲಾದುವನ್ನು ತೋರಿಸಲು ಮುಖವಾಡವನ್ನು ಬಳಸಲಾಗುತ್ತಿತ್ತು.

**ಕುಣಿತ :**

ಯಕ್ಷಗಾನದ ಪ್ರಮುಖ ಅಂಗವೇ ಕುಣಿತ. ಶಿವರಾಮ ಕಾರಂತರು ಯಕ್ಷಗಾನ ಕುಣಿತವನ್ನು ಮೂರು ವಿಧವಾಗಿ ವಿಂಗಡಿಸಿದ್ದಾರೆ. ಶೃಂಗಾರ (ಲಾಸ್ಯ), ಹಾಸ್ಯ (ಲಘುಭಾವ), ವೀರ (ರೌದ್ರ) : ಯಕ್ಷಗಾನದ ಸ್ತ್ರೀ ವೇಷಗಳಲ್ಲಷ್ಟೇ ಶೃಂಗಾರ ಕಾಣುತ್ತೇವೆ. ಹಾಸ್ಯ ನೃತ್ಯಗಳನ್ನು ವಿದೂಷಕ (ಹನುಮನಾಯಕ), ದೂರ (ಚಾರಕ) ಮತ್ತು ನಾರದ ಪಾತ್ರಗಳಲ್ಲಿ ಕಾಣುತ್ತೇವೆ. ವೀರರಸ ಕುಣಿತಕ್ಕೇ ಯಕ್ಷಗಾನದಲ್ಲಿ ಪ್ರಾಧಾನ್ಯತೆ ಬಂದಿದೆ. ಯುದ್ಧದ ಪ್ರಸಂಗಗಳಲ್ಲಿಯೆ ಕುಣಿತಗಳಂತೂ ಪ್ರೇಕ್ಷಕರನ್ನು ಮಂತ್ರಮುಗ್ಧರನ್ನಾಗಿ ಮಾಡುತ್ತವೆ. ಸುಧನ್ವಾರ್ಜುನ ಕಾಳಗ, ಬಭ್ರುವಾಹನ ಕಾಳಗ, ಕರ್ಣಾರ್ಜುನಗಳಂಥ ಪ್ರಸಂಗಗಳಲ್ಲಿ ಯುದ್ಧವೇ ಆ ಪ್ರಸಂಗಗಳ ಜೀವಾಳ.

ಕುಣಿತಕ್ಕೆ ತಕ್ಕಂತೆ ಅಭಿನಯವಿರಬೇಕಾದ್ದು ಅನಿವಾರ್ಯ. ಯಕ್ಷಗಾನ ಕುಣಿತಕ್ಕೆ ಸಮರ್ಥ ಹಿನ್ನೆಲೆಯನ್ನು ಒದಗಿಸುವಂಥದ್ದು ಚೆಂಡೆ ಮತ್ತು ಮದ್ದಲೆಗಳೆಂಬ ಎರಡು ವಾದ್ಯಗಳು. ನೂರು ಮಾತಿನಲ್ಲಿ ಹೇಳಬೇಕಾದುದನ್ನು ಒಂದು ಕುಣಿತದಲ್ಲಿ ಭಾವಸಂಜ್ಞೆಯಲ್ಲಿ ತೋರಿಸಬಲ್ಲ ಶಕ್ತಿ ಸಮರ್ಥ ಕಲಾವಿದನಿಗಿದೆ. ಅಂಗಚಲನೆ ಮತ್ತು ಭಾವಾಭಿನಯ ಇವುಗಳನ್ನು ಯಕ್ಷಗಾನ ಕಲಾವಿದರು ಸಂದರ್ಭೋಚಿತವಾಗಿ ಬಳಸುತ್ತಿದ್ದಾರೆ. ಕಥೆ ಪ್ರೇಕ್ಷಕನ ಮೇಲೆ ಬಿಂಬಿಸಲು ಕುಣಿತವೇ ಅತ್ಯಂತ ಶ್ರೇಷ್ಠ ಮಾಧ್ಯಮ. ಬಹುಸಂಖ್ಯೆಯ ಪ್ರೇಕ್ಷಕರು ಯಕ್ಷಗಾನ ಕುಣಿತ ವೀಕ್ಷಿಸಲೆಂದೇ ಬರುತ್ತಾರೆ. ಜಿಗಿತ, ಅಂಗಚಲನೆ, ಮೈಚಲನೆ, ಹುಬ್ಬುಗಳ ಚಲನೆ—ಇವುಗಳಿಂದ ಪ್ರೇಕ್ಷಕ ತನ್ಮಯ ನಾಗುವಂತೆ ಮಾಡುವ ಶಕ್ತಿ ಯಕ್ಷಗಾನ ನೃತ್ಯಕ್ಕಿದೆ. ನಾಟಕದ ಧರ್ಮ ಬಯಲಾಟ ದಲ್ಲಿ ಪ್ರತಿಪಾದಿಸಿಕೊಳ್ಳಬೇಕಾಗುವುದೆಂದು ಕಾರಂತರು ಹೇಳಿದ್ದಾರೆ. ಯಕ್ಷಗಾನ ಕುಣಿತದಲ್ಲಿ ನವರಸಗಳನ್ನು ಅಭಿವ್ಯಕ್ತಿಸಲು ಅವಕಾಶವಿದೆ. ಆದರೂ ಯಕ್ಷಗಾನದಲ್ಲಿ ಸಾಮಾನ್ಯವಾಗಿ ಬಳಕೆಯಾಗುವುದು ವೀರರಸ. ಶೃಂಗಾರ, ಹಾಸ್ಯ ಮತ್ತು ಕರುಣ ಇವುಗಳನ್ನು ಮಾತಿನಿಂದಲೇ ವ್ಯಕ್ತಪಡಿಸುವ ಸಂಪ್ರದಾಯ ಬೆಳೆದು ಬಂತು.

ಪ್ರೇಕ್ಷಕನ ಮೇಲೆ ಗಾಢವಾದ ಪರಿಣಾಮ ಬೀರುವಂಥ ನೃತ್ಯಗಳೆಂದರೆ— ಒಡ್ಡೋಲಗ, ಜಲಕ್ರೀಡೆ, ವನವಿಹಾರ ಇತ್ಯಾದಿ. ಸಮರ್ಥ ಭಾಗವತರು ಪಾತ್ರಧಾರಿ ಯನ್ನು ತುಂಬ ಸೊಗಸಾಗಿ ಕುಣಿಸಬಲ್ಲರು. ಇಡಗುಂಜಿ ಮೇಳದ ನೆಬ್ಬೂರು ನಾರಾಯಣ ಭಾಗವತರು ಕೆರೆಮನೆ ಶಂಭು ಹೆಗಡೆ ಅವರಂಥ ಪ್ರತಿಭಾವಂತ ಕಲಾವಿದ ರನ್ನು 'ಕಾರ್ತವೀರ್ಯಾರ್ಜುನ'ದ ಜಲಕ್ರೀಡೆ ನೃತ್ಯದಲ್ಲಿ 45 ನಿಮಿಷಗಳವರೆಗೂ ಕುಣಿಸಿದ್ದಾರೆ. ಕೊರಿಯಾಗ್ರಫಿಯಲ್ಲಿ ಡಿಪ್ಲೊಮಾ ಪಡೆದಿರುವ ಕೆರೆಮನೆ ಶಂಭು ಹೆಗಡೆ ಅವರು ಅದನ್ನು ಯಕ್ಷಗಾನದಲ್ಲಿ ಅತ್ಯಂತ ಸಮರ್ಥವಾಗಿ ಬಳಸಿಕೊಂಡಿದ್ದಾರೆ. ರುಕ್ಮಾಂಗದ ಚರಿತೆಯಂಥ ಪ್ರಸಂಗಗಳಲ್ಲಿ ಪ್ರಥಮ ಶ್ರೇಣಿ ಕಲಾವಿದ ಚಿಟ್ಟಾಣಿ ರಾಮಚಂದ್ರ ಹೆಗಡೆ ಅವರು ವನವಿಹಾರವನ್ನು ತಮ್ಮ ಕುಣಿತದಲ್ಲಿ ಅತ್ಯಂತ ಸಮರ್ಥ

ವಾಗಿ ತೋರಿಸುತ್ತಾರೆ. ಇಂಥ ಕುಣಿತಗಳನ್ನು ನೋಡುವುದೇ ಪ್ರೇಕ್ಷಕನಿಗೆ ಒಂದು ಅಪೂರ್ವ ಅನುಭವ. ದಕ್ಷಿಣ ಕನ್ನಡಕ್ಕೆ ಹೋಲಿಸಿದಾಗ ಉತ್ತರ ಕನ್ನಡದ ಯಕ್ಷಗಾನ ಶುದ್ಧ ನೃತ್ಯ ಪರಂಪರೆಯ ಶೈಲಿಯದಾಗಿದೆ. "ವಿಲಂಬಿತ ಲಯ ವಿನ್ಯಾಸದಲ್ಲಿ ಸುಂದರ ಆಕಾರಬದ್ಧ ನೃತ್ಯಭಂಗಿಗಳನ್ನು ಪಾತ್ರೋಚಿತ ಘನತೆ ಗಾಂಭೀರ್ಯಗಳನ್ನು ತುಂಬಿಕೊಂಡು ಪ್ರದರ್ಶಿಸುವ ಅಂದಿನ ಉತ್ತರ ಕನ್ನಡದ ಶೈಲಿ ಆ ವೈಶಿಷ್ಟ್ಯ ಇಂದು ಕಾಣಸಿಗದು" ಎಂಬುದು ಗಂಗಾಧರ ಶಾಸ್ತ್ರಿ ನಾಜಗಾರ ಅವರ ಅಭಿಪ್ರಾಯ. ಭಾಗವತನು ವಿಲಂಬಿತ ರಾಗದಲ್ಲಿ ಹಾಡಿದಲ್ಲಿ ಪಾತ್ರಧಾರಿಗೆ ತನ್ನ ಅಭಿನಯ ಪ್ರದರ್ಶಿಸಲು ಅವಕಾಶ ದೊರೆಯುತ್ತದೆ. ಶಿವರಾಮ ಕಾರಂತರು 'ಯಕ್ಷಗಾನ ಬಯಲಾಟದಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯ ಮನನೀಯವಾದದ್ದು. "ಇಂಥಲ್ಲೆಲ್ಲ ಭಾಗವತನ ಹೊಣೆ ಪರಮಾಧಿಕವಾದದ್ದು. ಹಾಡಿನ ಭಾವವನ್ನು ತನ್ನ ಧ್ವನಿಯ ಮೂಲಕ ತೋಡಿಕೊಳ್ಳಬೇಕಾದವನೂ ಅವನೇ. ಅದೇ ರೀತಿಯಲ್ಲಿ ತಾನು ಹಿಡಿದ ಕಂಚಿನ ತಾಳಗಳನ್ನು ನುಡಿಸಬೇಕಾದವನೂ ಅವನೇ. ಅವನ ಹಿಮ್ಮೇಳವೆಂಬುದು ಕಥೆಗೆ ಸಂಬಂಧಪಡದ ಬರೀ ರಾಗ–ತಾಳಗಳ ವೈಭವದ ಪ್ರದರ್ಶನವಲ್ಲ. ಆ ಹಿಮ್ಮೇಳದ ಜನರು ತಾವು ಮುಂದೆ ನಡೆಯುತ್ತಿರುವ ಪ್ರಸಂಗ ವಸ್ತುವಿನ ಯಾವುದೇ ಒಂದು ಸನ್ನಿವೇಶವನ್ನು ನಡೆಸುತ್ತಿದ್ದೇವೆ ಎಂಬುದನ್ನು ತೀರಾ ಮರೆತು ತತ್ಸಂಬಂಧ ವಾದ ಸಾಹಿತ್ಯವು ಇದ್ದೂ ಇಲ್ಲವೆಂಬಂತೆ ತಮ್ಮ ಕೊರಳಿನ ಚಮತ್ಕಾರವನ್ನೂ ತಾಳ ಮದ್ದಲೆಗಳ ಕಸರತ್ತನ್ನೂ ಪ್ರದರ್ಶಿಸುತ್ತಾರೆ. ಮದ್ದಲೆ ಬಾರಿಸುವುದರಲ್ಲಿ, ತಾಳ ಬಾರಿಸುವುದರಲ್ಲಿ ವಿವಿಧ ಭಾವಗಳಿಗೆ ಹೊಂದುವ ಬಿತ್ತಿಗೆಗಳು ಇಲ್ಲವೆಂದಲ್ಲ, ಅವು ಬೇಕಾದಷ್ಟಿವೆ. ಅವನ್ನು ತಮ್ಮ ಮುಂದೆ ಇರುವ ಭಾವ ಯಾವುದು ಎಂಬ ಅರಿವಿನಿಂದ ತಿಳಿದು ತಮ್ಮ ಕೈಗಳನ್ನು ಆ ಉದ್ದೇಶಕ್ಕೆ ತಕ್ಕಂತೆ ನಡೆಯಿಸಬಲ್ಲ ಮನೋ ಧರ್ಮ ಅವರಲ್ಲಿರಬೇಕು. ರಂಗಸ್ಥಳದ ದುಃಖ ಆನಂದಾದಿಗಳು ಭಾಗವತನವೂ ಹೌದು, ಮದ್ದಲೆ ಚಂಡೆಕಾರರವೂ ಹೌದು. ಅವೆಲ್ಲ ಅವರದ್ದಾದರೆ ಆಗ ಮಾತ್ರವೇ ನರ್ತಕನದೂ ಆಗುತ್ತದೆ. ನರ್ತನದ ಅಂಗಗಳೂ ಆಗುತ್ತವೆ...

ಇತ್ತೀಚಿನ ದಿನಗಳಲ್ಲಿ ಯಕ್ಷಗಾನದ ಹಲವು ಅಪ್ರಕಟಿತ ಪ್ರಸಂಗಗಳು ಬೆಳಕು ಕಾಣುತ್ತಿವೆ. ಕನ್ನಡದ ಇತರ ಸಾಹಿತ್ಯ ಪ್ರಕಾರಗಳಂತೆ ಯಕ್ಷಗಾನ ಸಾಹಿತ್ಯಪ್ರಕಾರವೂ ವೇಗ್ವಾಗಿ ಬೆಳೆಯಲಾರಂಭಿಸಿರುವುದು ಸಂತೋಷದ ಸಂಗತಿ.

ಕೆರೋಡಿ ಸುಬ್ಬರಾಯರು ರಚಿಸಿದ 'ಪಲಾಂಡು ಚರಿತ್ರೆ' ನವೀನ ವಸ್ತುವನ್ನು ಬಳಸಿಕೊಂಡು ಬರೆದ ಯಕ್ಷಗಾನ. ಇದರಲ್ಲಿ ಹಾಸ್ಯ ಮತ್ತು ವಿಡಂಬನೆ ಇವೆರಡೂ ಇವೆ. ಇದೊಂದು ಸ್ವತಂತ್ರ ಕಲ್ಪನೆಯ ಕತೆ. ಜನಸಾಮಾನ್ಯರ ದೈನಂದಿನ ಬದುಕಿನ ಈರುಳ್ಳಿ ಇಲ್ಲಿಯ ವಸ್ತು. 'ಗಾಳಿಯಲ್ಲಿ ತೇಲುವವರಿಗಿಂತ ಭೂಮಿಯಲ್ಲಿ ಬೇರು

ಬಿಟ್ಟವರದೇ ಕಷ್ಟಸಹಿಷ್ಣುಗಳಾದವರದೇ ನಿಜವಾದ ಬದುಕು ಎಂಬ ಸತ್ಯವನ್ನು ಈ ಪ್ರಸಂಗ ಧ್ವನಿಸುತ್ತದೆ.1

ಹೊಸ್ತೋಟ ಮಂಜುನಾಥ ಭಾಗವತರು ನಿಸರ್ಗ ಸಂಧಾನ ಎಂಬ ಯಕ್ಷಕಾನ ಪ್ರಸಂಗ ರಚಿಸಿದ್ದಾರೆ. ಪರಿಸರ ನಾಶದಿಂದ ಮಾನವ ಕುಲಕ್ಕೆ ಬಂದೊದಗುವ ದುಷ್ಪರಿಣಾಮಗಳನ್ನು ತಿಳಿಸುವುದೇ ಈ ಪ್ರಸಂಗದ ಉದ್ದೇಶ. 'ಸಂಸ್ಕೃತಿ ಧರ್ಮಗಳ ಸಾರವನ್ನು ಸಾರುವಲ್ಲಿ ಮಹತ್ವದ ಪಾತ್ರ ವಹಿಸಿದ ಯಕ್ಷಗಾನ ಪ್ರಕೃತಿಯ ಅಸಮತೋಲನದ ಅನರ್ಥದ ಬಗ್ಗೆ ಹೇಳಿದರೆ ಆ ಕಲೆಗೆ ಅದು ಕುಂದಲ್ಲ' ಎಂಬುದು ಲೇಖಕರ ವಾದ. ಯಕ್ಷಗಾನದ ಪರಂಪರಾನುಗತ ಪೌರಾಣಿಕ ಧೋರಣೆಗೆ ಪ್ರಾಕೃತಿಕ ಪ್ರಸಂಗವನ್ನು ಇಲ್ಲಿ ಜೋಡಿಸಲಾಗಿದೆ. ಇಲ್ಲಿ ಬರುವ ಪಾತ್ರಗಳ ಮೂಲಕ ಪರಿಸರ ನಾಶದಿಂದ ಉಂಟಾಗುವ ಪ್ರಕೃತಿಯ ಅಸಮತೋಲತೆಯ ಬಗ್ಗೆ ಜನಜಾಗೃತಿ ಮೂಡಿಸುವಲ್ಲಿ ಈ ಪ್ರಸಂಗದ ಕಾರ್ಯ ಮೆಚ್ಚುವಂತಹುದಾಗಿದೆ. ಇಲ್ಲಿಯ ಕೆಲವು ಸಂಭಾಷಣೆಗಳನ್ನು ನೋಡಬಹುದು. 'ತಾಯಿಯಂತೆ ಭಾವಿಸಿ ಗೌರವಿಸಬೇಕಾಗಿದ್ದ ಭೂಮಿಯನ್ನು ಭೋಗದ ಹೆಣ್ಣೆಂದು ಭಾವಿಸುವುದು ನೀತಿಯೇ ?...2' ಬದುಕನ್ನು ಬಯಸುವ ಮನುಷ್ಯನಿಗೆ ಭೂಮಿಯೇ ನೆಲೆ, ನಿಸರ್ಗವೇ ನಿಲ್ದಾಣ, ಪರಿಸರವೇ ಭಾಗ್ಯ. ಈ ಹಿನ್ನೆಲೆಯನ್ನು ಮರೆತು ಮದಾಂಧರಾಗಿ ವರ್ತಿಸಿದರೆ ವಿನಾಶವನ್ನು ಕೂಗಿ ಕರೆವಂತಾದೀತು. ಅಡವಿಯನ್ನು ಕಡಿದು ಹುಡಿಗೂಡಿಸುವುದರಿಂದ ಮಣ್ಣು ಮರಳಾಗುತ್ತದೆ. ಕಾಡು ಕಳೆದುಕೊಂಡ ನಾಡು ಸುಡುಗಾಡಿಗೆ ಸಮ. ಪರಿಸರವನ್ನು ಕೆಡಿಸಿ ಪರಿಹಾರವಿಲ್ಲದ ಸಮಸ್ಯೆಯನ್ನು ಸೃಷ್ಟಿಸಿ ಅನಾಹುತಕ್ಕೆ ಅವಕಾಶ ನೀಡಬೇಡಿ.'3

ಹಿಂದೆ ರಂಗಸ್ಥಳವೆಂದರೆ ನಾಲ್ಕು ಕಂಬಗಳನ್ನು ನೆಟ್ಟು ಮಾವಿನ ತಳಿರುಗಳಿಂದ ಅಲಂಕರಿಸುತ್ತಿದ್ದರು. ಪಾತ್ರಧಾರಿಗಳಿಗೆ ಕುಳಿತುಕೊಳ್ಳಲು ಒಂದು ಮಂಚ, ಹಿಮ್ಮೇಳದವರಿಗೆ ಒಂದು ಮಂಚ ಇರುತ್ತಿತ್ತು. ಪ್ರೇಕ್ಷಕರು ಕುಳಿತುಕೊಳ್ಳಲು ಚಾಪೆಗಳನ್ನು ತಾವೇ ತಂದುಕೊಳ್ಳುತ್ತಿದ್ದರು. ಎರಡು ದೀವಟಿಗೆಗಳು–ಅವುಗಳನ್ನು ಎಣ್ಣೆಯಲ್ಲಿ ಅದ್ದಿದ ಚಿಂದಿ ವಸ್ತ್ರ ಅಥವಾ ಹತ್ತಿ ಕಾಳುಗಳನ್ನು ಉರಿಸಲಾಗುತ್ತಿತ್ತು. ದೀವಟಿಗೆ ಹಿಡಿದವರು ಪಾತ್ರ ಸರಿದಂತೆ ಹಿಂದೆ ಮುಂದೆ ಚಲಿಸಬೇಕಾಗುತ್ತಿತ್ತು. ಬಣ್ಣಕ್ಕಾಗಿ ಅರದಾಳವೆಂಬ ಹಳದಿ ಕಲ್ಲು, ಇಂಗದಾಳವೆಂಬ ಕೆಂಪು ಹುಡಿ ಬಳಸಲಾಗುತ್ತಿತ್ತು.

---

1. ಡಾ. ಎಚ್. ಟಿ. ಕೃಷ್ಣೇಗೌಡ, ಕೆರೋಡಿ ಸುಬ್ಬರಾಯರು : ಜೀವನ ಮತ್ತು ಕೃತಿಗಳು.
2. ಹೊಸ್ತೋಟ ಮಂಜುನಾಥ ಭಟ್ಟ, ನಿಸರ್ಗ ಸಂಧಾನ
3. ಅದೇ

ಅರದಾಳದ ಬಣ್ಣ ದೀವಟಿಗೆ ದೀಪ ಹೊಂದಿಕೊಳ್ಳುತ್ತಿದ್ದವು. ದೀವಟಿಗೆ ಬದಲಿಗೆ ಗ್ಯಾಸ್‌ಲೈಟ್ ಬಂತು. ಈಗ ವಿದ್ಯುತ್ ದೀಪ ಬಂದಿದೆ.

ಯಕ್ಷಗಾನದಲ್ಲಿ ಹೊಸ ಅಲೆ ಆರಂಭವಾದದ್ದು ಈ ಶತಮಾನದ ಆರಂಭದಲ್ಲಿ. ದೇವಸ್ಥಾನದಲ್ಲಿ ಹರಕೆಯಾಟವಾಗಿದ್ದ ಯಕ್ಷಗಾನ ನಾಟಕ ಮತ್ತು ಸರ್ಕಸ್ ಕಂಪನಿಗಳಂತೆ ಡೇರೆ ಆಟವಾಯಿತು. ಹಿಂದೆ ಸಿರಿವಂತರು, ದೊರೆಗಳು ಮತ್ತು ದೇವಾಲಯಗಳೇ ಯಕ್ಷಗಾನದ ಪೋಷಕ ಸ್ಥಾನದಲ್ಲಿದ್ದುವು. ಇಂದು ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಲ್ಲಿ ಹಲವು ಸುಸಜ್ಜಿತ ಮೇಳಗಳು ತಲೆ ಎತ್ತಿವೆ. ಹಲವು ಬ್ಯಾಂಕುಗಳು ಮೇಳಗಳಿಗೆ ಆರ್ಥಿಕ ನೆರವನ್ನು ಒದಗಿಸಿಕೊಟ್ಟಿವೆ. ಹಿಂದೆ ಕೇವಲ ಅಶಿಕ್ಷಿತ ಗ್ರಾಮೀಣ ಜನಪದರ ಮನರಂಜನೆಯಾಗಿದ್ದ ಯಕ್ಷಗಾನ ಈಗ ಸುಶಿಕ್ಷಿತ ವರ್ಗವನ್ನು ಸಾಕಷ್ಟು ಆಕರ್ಷಿಸಿದೆ. ಇಂದಿನ ಪ್ರೇಕ್ಷಕ ಬದಲಾಗಿದ್ದಾನೆ. ಅಂತೆಯೇ ಯಕ್ಷಗಾನ ಬದಲಾವಣೆ ಕಂಡಿದೆ. ಇಂದು ಸಿನಿಮಾ, ದೂರದರ್ಶನಗಳು ಬಂದರೂ ವಿಶೇಷತಃ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಲ್ಲಿ ಯಕ್ಷಗಾನದ ಆಕರ್ಷಣೆ ಕಡಿಮೆಯಾಗಿಲ್ಲದೇ ಇರುವುದು ಸಂತೋಷದ ಸಂಗತಿ. ಇತ್ತೀಚಿನ ಯಕ್ಷಗಾನಗಳು ಸಂಪ್ರದಾಯದಿಂದ ದೂರ ಸರಿಯುತ್ತಿವೆ. ಜನರನ್ನು ಆಕರ್ಷಿಸಲು ಅನೇಕ ಹೊಸ ಪ್ರಸಂಗಗಳನ್ನು ರಚಿಸಲಾಗಿದೆ. ತೆಂಕುತಿಟ್ಟು ತುಳು ಭಾಷೆಯಲ್ಲಿ ಯಕ್ಷಗಾನ ಆಡಲು ಪ್ರಾರಂಭಿಸಿದಂದಿನಿಂದ ಅನೇಕ ದಂತಕಥೆಗಳು ಭೂತಕೋಲ ಯಕ್ಷಗಾನದ ಹೆಸರಿನಲ್ಲಿ ರಂಗಕ್ಕೆ ಬಂದಿವೆ. ಕೋಟಿ ಚೆನ್ನಯ್ಯ ಕೋರ್ದಬ್ಬು ಬಾರಗ, ಬಪ್ಪನಾಡು ಮಹಾತ್ಮೆ, ಧೂಮಕೇತು, ಸತ್ಯದಪ್ಪೇ ಚೆನ್ನಮ್ಮ ತನ್ನಿಮಾನಿಗ ಮೊದಲಾದ ಪ್ರಸಂಗಗಳು ಬಂದಿವೆ. ಬಡಗುತಿಟ್ಟಿನ ಮೇಳಗಳು ಪುರಾಣ ಪ್ರಸಂಗಗಳನ್ನು ಬಿಟ್ಟು ಮಹಾಶ್ವೇತೆ, ವಸಂತಸೇನೆ, ಚಿರವಿರಹ, ಗುಣಸಾಗರಿ, ಸ್ವಪ್ನವಾಸವದತ್ತ, ಚಂದ್ರಗುಪ್ತ ಪ್ರಸಂಗಗಳನ್ನು ಆಡುತ್ತಿವೆ. ಸುಮಾರು 300ಕ್ಕೂ ಹೆಚ್ಚು ಹೊಸ ಪ್ರಸಂಗಗಳನ್ನು ರಂಗಕ್ಕೆ ತರಲಾಗಿದೆ. ಪೌರಾಣಿಕ ಪ್ರಸಂಗಗಳನ್ನು ಹೊಸ ಹೆಸರಿನಲ್ಲಿ ಆಡಲಾಗುತ್ತಿದೆ—ತ್ರಿಜನ್ಮ ಮೋಕ್ಷ, ಸತ್ವಪರೀಕ್ಷೆ (ಕೃಷ್ಣಾರ್ಜುನರ ಕಾಳಗ), ಗಂಧರ್ವ ಕನ್ಯೆ (ವಿದ್ಯುನ್ಮತಿ ಕಲ್ಯಾಣ), ಕನ್ಯಾಪಹರಣ (ಸುಭದ್ರಾ ಕಲ್ಯಾಣ). ಕೆಲವು ಹೊಸ ಪ್ರಸಂಗಗಳಲ್ಲಿ ದೇವತೆಗಳು ಕನ್ನಡದಲ್ಲೂ ಭೂತಗಳು ತುಳುವಿನಲ್ಲೂ ಮಾತನಾಡುವ ಆಟಗಳನ್ನು ಆಡಲಾಯಿತು.

ಯಕ್ಷಗಾನ ತನ್ನ ವ್ಯವಸಾಯೀ ಸ್ವರೂಪ ಪಡೆದ ಬಳಿಕ ಸುಸಜ್ಜಿತ ಮೇಳಗಳು ಸಂಚಾರ ಪ್ರಾರಂಭಿಸಿದವು. ಹಿಂದೆ ಯಕ್ಷಗಾನ ಒಂದು ಉಪವೃತ್ತಿಯಾಗಿತ್ತು. ಇಂದು ಅದು ಅನೇಕರಿಗೆ ಉದ್ಯೋಗಾವಕಾಶ ಕಲ್ಪಿಸಿದೆ. ಕಲಾವಿದರ ಸಂಭಾವನೆ ಹೆಚ್ಚಿದೆ. 180 ಆಟಗಳಿಗೆ 80,000 ದಿಂದ 1,00,000 ರೂಪಾಯಿಗಳವರೆಗೆ ಸಂಭಾವನೆ ಪಡೆಯುವ ಕಲಾವಿದರಿದ್ದಾರೆ. ಧರ್ಮಸ್ಥಳದಂತಹ ಮೇಳಗಳಲ್ಲಿ ಕೆಲಸ ಮಾಡುವವರಿಗೆ ವಿಶ್ರಾಂತಿ ವೇತನ, ವೈದ್ಯಕೀಯ ಸೌಲಭ್ಯಗಳನ್ನು ಕಲ್ಪಿಸಲಾಗಿದೆ. ಯಕ್ಷಗಾನದಲ್ಲಿ ಅನೇಕ

ಸುಶಿಕ್ಷಿತ ಹರಿದಾಸರು ಪ್ರವೇಶಿಸಿದ್ದರಿಂದ ಮಾತುಗಾರಿಕೆ ಸುಧಾರಿಸಿದೆ. ಆದರೆ, ತೆಂಕು ತಿಟ್ಟಿನ ಅತಿಮಾತುಗಾರಿಕೆಯಿಂದ ಪ್ರೇಕ್ಷಕ ಸಹಜವಾಗಿಯೇ ತನ್ನ ಸಹನೆ ಕಳೆದುಕೊಳ್ಳುತ್ತಿದ್ದಾನೆ. ಮಾತುಗಾರಿಕೆಯಲ್ಲಿ ಪ್ರಚಲಿತ ರಾಜಕೀಯವನ್ನು ಸೇರಿಸಿ ಮಾತನಾಡುತ್ತಿದ್ದಾರೆ. ಎದುರು ಪಾತ್ರದಾರರಿಗೆ ಮಾತನಾಡಲು ಅವಕಾಶ ನೀಡಲಾಗುತ್ತಿಲ್ಲ. ಹಿಂದೆ ಕಲಾವಿದ ತನ್ನ ಬಿಡುವಿನ ಸಮಯದಲ್ಲಿ ಮುಂದಿನ ಆಖ್ಯಾನಗಳ ಸಿದ್ಧತೆ ಮಾಡಿಕೊಳ್ಳುತ್ತಿದ್ದ. ಆದರೆ ಈಗ ಮಳೆಗಾಲದಲ್ಲಿ ಮುಂಬೈ, ಬೆಂಗಳೂರುಗಳಲ್ಲಿ ಆಡಬೇಕಾಗಿರುವುದರಿಂದ ವರ್ಷದ ಹನ್ನೆರಡು ತಿಂಗಳೂ ಆತ ವಿಶ್ರಾಂತಿ ಇಲ್ಲದೆ ಕುಣಿಯಬೇಕಾಗಿದೆ. ಮಳೆಗಾಲದಲ್ಲಿ ಕೂಡ ಥಿಯೇಟರ್ ಒಳಗೆ ಆಡಲಾಗುತ್ತಿದೆ. ಯಕ್ಷಗಾನದಲ್ಲಿ ಹಾಸ್ಯಕ್ಕೆ ಪ್ರಾಧಾನ್ಯತೆ ಇದೆ. ಆದರೆ ಅಶ್ಲೀಲ ಮಾತುಗಳಿಂದ ಪ್ರೇಕ್ಷರನ್ನು ನಗಿಸಬೇಕೆಂಬ ಏಕೈಕ ಉದ್ದೇಶದಿಂದ ಮಾತನಾಡುವ ವಿದೂಷಕರು ಈಗ ಹುಟ್ಟಿಕೊಂಡಿದ್ದಾರೆ. ವೇಷ ಭೂಷಣಗಳಲ್ಲಿ ವಿಶೇಷತಹ ತೆಂಕುತಿಟ್ಟು ತನ್ನ ಸಂಪ್ರದಾಯ ತ್ಯಜಿಸಿ ಕಥಕ್ಕಳಿಯನ್ನು ಅತಿಯಾಗಿ ಅನುಸರಿಸಿದೆ. ಅರಳೆ ಬಟ್ಟೆಯ ಬದಲಿಗೆ ನೈಲೆಕ್ಸ್, ವ್ಯಾಲ್ವೆಟ್ ಬಟ್ಟೆಗಳನ್ನು ಬಳಸಿ ಅದು ಸಂಪ್ರದಾಯದಿಂದ ದೂರ ಸರಿಯುತ್ತಿರುವುದರ ಸ್ಪಷ್ಟ ನಿದರ್ಶನ ಕಂಡು ಬರುತ್ತಿದೆ. ಕಣ್ಣು ಕೋರೈಸುವ ಬಟ್ಟೆಗಳಿಂದ ಯಕ್ಷಗಾನದ ಸೊಗಸು ಕೆಡುತ್ತಿದೆ. ಹಿಂದೆ ಆಯುಧಗಳನ್ನು ರಂಗದ ಮೇಲೆ ಸಾಂಕೇತಿಕವಾಗಿ ಬಳಸುತ್ತಿದ್ದರೆ, ಇಂದು ಬೆಳ್ಳಿಗದೆ ಖಡ್ಗಗಳನ್ನು ಬಳಸಲಾಗುತ್ತಿದೆ. ಹಿಂದೆ ಇದ್ದ ತೆರೆ ಕುಣಿತ ಮಾಯವಾಗುತ್ತಿದೆ. ಪೂರ್ವರಂಗವನ್ನು ಮೊಟಕುಗೊಳಿಸಿ ನೇರವಾಗಿ ಪ್ರಸಂಗಕ್ಕೆ ಬರಲಾಗುತ್ತಿದೆ. ಬಾಲಗೋಪಾಲರು, ಸ್ತ್ರೀವೇಷ, ಕೋಡಂಗಿ ಕುಣಿತಗಳು ಸಾಂಕೇತವೆನಿಸಿವೆ. ಪುರಾಣದ ಪ್ರಸಿದ್ಧ ಪ್ರಸಂಗಗಳಾದ ತಾಮ್ರಧ್ವಜ ಕಾಳಗ, ದಕ್ಷಯಜ್ಞಗಳು ಮರೆಯಾಗಿವೆ.

1930ರ ಬಳಿಕ ವೇಷ ಭೂಷಣ, ಆಭರಣಗಳಲ್ಲಿ ಹಲವು ಬದಲಾವಣೆಗಳುಂಟಾದುವು. ರಂಗತಂತ್ರದ ಮೇಲೆ ಸಿನಿಮಾ, ನಾಟಕಗಳು ಗಾಢ ಪ್ರಭಾವ ಬೀರಿದವು. ಹಳೆಯ ಸಾಂಪ್ರದಾಯಿಕ ವಸ್ತುಗಳ ಸ್ಥಾನದಲ್ಲಿ ಆಧುನಿಕ ಉಪಕರಣಗಳ ಬಳಕೆ ಬಂತು. ಬಣ್ಣದ ಕಲ್ಲಿನ ಪುಡಿಯ ಬದಲಿಗೆ ಕ್ರೀಮು ಮತ್ತು ಸುವಾಸಿತ ಪೌಡರ್‌ಗಳು ಬಳಕೆಗೆ ಬಂದವು. ಕೇದಗೆ ಮುಂಡಲಗೆ ಬಣ್ಣದ ರಿಬ್ಬನ್ ಸುತ್ತಲಾಯಿತು. ಸಿಂಹಾಸನಕ್ಕೆ ಬಣ್ಣ ಮತ್ತು ಹೊಳಪಿನ ಕಾಗದವನ್ನು ಅಂಟಿಸಲಾಯಿತು. ಪುಂಗಿಯ ಬದಲಿಗೆ ಹಾರ್ಮೋನಿಯಂ ಬಳಕೆಗೆ ಬಂದದ್ದರಿಂದ ಸಂಗೀತ ತನ್ನ ಜಾನಪದ ಸೊಗಡನ್ನು ಕಳೆದುಕೊಂಡಿತು.

ಯಕ್ಷಗಾನ ಕಲಾವಿದರ ಹೆಜ್ಜೆ ಸರಿಯಾಗಿ ಕಾಣುವಂತೆ ರೂಪಿಸಿದ ಇಡಗಂಜಿ ಮೇಳದ ಅರ್ಧಚಂದ್ರಾಕೃತಿಯ ರಂಗಸ್ಥಳ ಒಂದು ಹೊಸ ಪ್ರಯೋಗ ಎನಿಸಿದೆ. ಇಂದು ಗುತ್ತಿಗೆ ಆಟಗಳು ಹೆಚ್ಚಿವೆ. ಹಣ ಗಳಿಸುವ ಉದ್ದೇಶದಿಂದ ಔಚಿತ್ಯವಲ್ಲದ್ದನ್ನೆಲ್ಲಾ ರಂಗದಲ್ಲಿ ಸೇರಿಸಲಾಗಿದೆ. ಭಸ್ಮಾಸುರ ಮೋಹಿನಿ ಪ್ರಸಂಗದಲ್ಲಿ ಮೋಹಿನಿ ವೇಷಕ್ಕೆ

ಭರತನಾಟ್ಯ ಕಲಿತವಳನ್ನು, ಇಂದ್ರನ ಒಡ್ಡೋಲಗದಲ್ಲಿ ರಂಭೆ ಊರ್ವಶಿಯರ ನರ್ತನಕ್ಕೆ ಭರತನಾಟ್ಯ ಪ್ರವೀಣೆಯನ್ನು ತಂದು ಕುಣಿಸುವ ಪ್ರಯೋಗವನ್ನು ಹಲವು ಮೇಳಗಳು ಮಾಡಿದವು. ಅಲ್ಲಲ್ಲಿ ಹಳೆಯ ವೇಷಭೂಷಣಗಳನ್ನು ಬಳಕೆಗೆ ತರಲಾಗಿದೆ. ದಕ್ಷಿಣ ಕನ್ನಡದ ಹಲವು ವ್ಯವಸಾಯೀ ಮೇಳಗಳು ಯಕ್ಷಗಾನದಂತೆ ನಾಟಕದಂತೆ ತೆರೆ ಬಿಡುವ ಮತ್ತು ತೆರೆ ಎತ್ತುವ ಪದ್ಧತಿ ಜಾರಿಗೆ ತಂದು ಅದನ್ನು ಯಕ್ಷನಾಟಕವನ್ನಾಗಿ ಪರಿವರ್ತಿಸಿವೆ. ಭಾಗವತ ತನ್ನ ಧಾಟಿ ಬದಲಿಸಿ ಸಿನಿಮಾ ಸಂಗೀತ ಅನುಕರಿಸುವುದು ಪ್ರಾರಂಭವಾಗಿದೆ.

ಯಕ್ಷಗಾನದಲ್ಲಿ ಎಪ್ಪತ್ತಕ್ಕೂ ಹೆಚ್ಚು ರಾಗಗಳಿದ್ದುವು. ಆದರೆ ಇಂದು ಬಳಕೆಯಾಗುತ್ತಿರುವುದು ಕೇವಲ 25 ರಿಂದ 30 ರಾಗಗಳು ಮಾತ್ರ. ಸಾಯಂಕಾಲ, ಮಧ್ಯರಾತ್ರಿ ಮತ್ತು ಮುಂಜಾನೆ ಬಳಸುವ ರಾಗಗಳನ್ನು ಕೈಬಿಡಲಾಗಿದೆ.

ಯಮ, ದ್ರೋಣ, ಅಶ್ವತ್ಥಾಮ ಪಾತ್ರಗಳನ್ನು ನಾಟಕದ ಪಾತ್ರಗಳಂತೆ ಮಾರ್ಪಡಿಸಲಾಗಿದೆ. ಗಾನ ಮತ್ತು ನಾಟ್ಯದಲ್ಲಿ ಅರ್ಥವಾಗದ್ದನ್ನು ವಿವರಿಸುವ ಉದ್ದೇಶದಿಂದ ಮಾತುಗಾರಿಕೆ ಬಂತು. ಪ್ರಾರಂಭದಲ್ಲಿ ಅದು ಮೋಟಕಾಗಿತ್ತು, ಅದರ ಉದ್ದೇಶ ಕಥಾಪ್ರಸಂಗ ಜನಸಾಮಾನ್ಯರಿಗೂ ಕಥೆ ಅರ್ಥವಾಗಲಿ ಎಂಬುದು ಆಗಿತ್ತು.

ಕುಂದಾಪುರದ ಕನ್ನಡದ ಬದಲಿಗೆ ಗ್ರಂಥಸ್ಥ ಕನ್ನಡ ಯಕ್ಷಗಾನದಲ್ಲಿ ಬಳಕೆಗೆ ಬಂದದ್ದು, ಅದು ಭಾಗವತರ ಪದ್ಯದ ಭಾಷಾಂತರವೆನಿಸಿದೆ.

ಹಲವು ಆಟಗಳಲ್ಲಿ ಪ್ರಸಾದ ವಿನಿಯೋಗ ಮತ್ತು ಉಚಿತ ಚಹದ ವ್ಯವಸ್ಥೆಯೂ ರೂಢಿಗೆ ಬಂದಿದೆ.

ಹಿಂದೆ ಪ್ರೇಕ್ಷಕರೇ ಚಾಪೆ ಹಿಡಿದು ಬರುತ್ತಿದ್ದರು. ಈಗ 25 ರೂ. ಕೊಟ್ಟರೆ ಅವರಿಗೆ ಆರಾಮ ಕುರ್ಚಿ ದೊರೆಯುತ್ತದೆ. ಹಿಂದಿನ ದೀವಟಿಗೆ, ಗ್ಯಾಸ್‌ಲೈಟ್ ಬದಲಿಗೆ ವಿದ್ಯುತ್ ದೀಪಗಳು ರಂಗವನ್ನು ಜಗಜಗಿಸುತ್ತಿವೆ. ಯಕ್ಷಗಾನ ತನ್ನದೇ ಆದ ಹಲವು ಕುಣಿತಗಳನ್ನು ಇಂದು ಕೈಬಿಟ್ಟಿದೆ. ಅವುಗಳೆಂದರೆ ಒಡ್ಡೋಲಗ, ವನವಿಹಾರ, ರಥದ ಮೇಲೆ ಕುಳಿತು ಯುದ್ಧ ಮಾಡುವುದು, ಕಿರಾತನ ತೆರೆ ಕುಣಿತ ಇವೆಲ್ಲ ಬಿಟ್ಟುಹೋಗಿದ್ದು ಯಕ್ಷಗಾನದ ಸಾಂಪ್ರದಾಯಿಕ ಸೊಬಗು ಕಡಿಮೆ ಮಾಡಿವೆ. ವೇಷಧಾರಿಗಳು ಭಾಗವತರೊಂದಿಗೆ ಹಾಡುವ ಉತ್ತರ ಕನ್ನಡದ ಪದ್ಧತಿ ಈಗ ಇಲ್ಲ. ಕೆರೆಮನೆ ಶಿವರಾಮ ಹೆಗಡೆ, ಮಹಾಬಲ ಹೆಗಡೆ ಅವರಂತಹ ಉನ್ನತ ಪರಂಪರೆಯ ಕಲಾವಿದರು ಭಾಗವತರೊಂದಿಗೆ ಪದ್ಯ ಎತ್ತುಗಡೆ ಮಾಡುತ್ತಿದ್ದರು. ಇದಕ್ಕೆ ಒಳ್ಳೆಯ ಶಾರೀರವಿದ್ದ ಪಾತ್ರಧಾರಿಗಳು ಬೇಕಾಗಿತ್ತು. ಅಂತಹವರ ಸಂಖ್ಯೆ ಕಡಿಮೆಯಾಗಿರುವುದರಿಂದ ಆ ಪದ್ಧತಿ ಕಡಿಮೆಯಾಗುತ್ತಿದೆ. ಶೃತಿ, ತಾಳ, ಲಯ ಜ್ಞಾನವುಳ್ಳ ಹಾಗೂ ಕಂಠಶ್ರೀಯುಳ್ಳ ಕೆರೆಮನೆ ಮಹಾಬಲ ಹೆಗಡೆಯವರಂಥ ಕಲಾವಿದರು ಇಂದು ಒಬ್ಬಿಬ್ಬರು ಮಾತ್ರ. ಸ್ತ್ರೀ ವೇಷದ ಕುಣಿತ ಮೋಟಕಾಗಿರುವುದರಿಂದ ಭಾಗವತ ಸ್ತ್ರೀ ವೇಷದೊಂದಿಗೆ ಸಂಭಾಷಣೆ ನಡೆಸಲು

ಅವಕಾಶವೇ ಇಲ್ಲ. ಹಿಂದೆ ಗುರುಕುಲ ಪದ್ಧತಿಯಲ್ಲಿ ಯಕ್ಷಗಾನ ಶಿಕ್ಷಣ ನಡೆಯುತ್ತಿತ್ತು. ಇಂದು ಯಕ್ಷಗಾನ ಕಲಿಸಲು ಧರ್ಮಸ್ಥಳ, ಉಡುಪಿ, ಇಡುಗುಂಜಿಗಳು ಕೇಂದ್ರಗಳಾಗಿವೆ.

**ಕಾರಂತರ ಪ್ರಯೋಗ:** ಶಿವರಾಮ ಕಾರಂತರು ಪಡುವಲಪಾಯ ಯಕ್ಷಗಾನಕ್ಕೆ ಒಂದು ಹೊಸ ಆಯಾಮ ನೀಡಿದವರು. ಅದಕ್ಕೆ ಕಾಯಕಲ್ಪ ಮಾಡಿದವರು. ಅವರೊಬ್ಬ ಪ್ರಯೋಗಶೀಲರು. 1933ರಷ್ಟು ಹಿಂದೆಯೇ ಅವರು ಯಕ್ಷಗಾನ ಪ್ರಸಂಗಗಳನ್ನು ಎತ್ತಿಕೊಂಡು ಕಿನ್ನರ ನೃತ್ಯ ಪ್ರದರ್ಶಿಸಿದ್ದುಂಟು. ಯಕ್ಷಗಾನ ಸಂಗೀತದ ಮರೆತುಹೋದ ಅನೇಕ ರಾಗಗಳನ್ನು ಹಳೆಯ ಭಾಗವತರ ಸಹಾಯದಿಂದ ದಾಖಲಿಸಿಕೊಂಡು, ಯಕ್ಷಗಾನಕ್ಕೆ ಹೊಂದುವಂತಹ ಹೊಸ ರಾಗಗಳನ್ನು ಸಂಯೋಜಿಸಿದರು. ವೇಷಭೂಷಣ ಬಣ್ಣಗಾರಿಕೆಯಲ್ಲಿ ತಮ್ಮ ಕಲ್ಪನೆಯನ್ನು ಸಾಕಾರಗೊಳಿಸಿದರು. ಇವೆಲ್ಲದರ ಹಿಂದೆ ಅವರಿಗಿದ್ದ ಉದ್ದೇಶ—ಕನ್ನಡ ನಾಡಿನ ಈ ವಿಶಿಷ್ಟ ಜನಪದ ಕಲೆಯನ್ನು ಕನ್ನಡಿಗರಷ್ಟೇ ಸಂತೋಷಪಟ್ಟರೆ ಸಾಲದು, ಅದು ಸೀಮೋಲ್ಲಂಘನ ಮಾಡಬೇಕು. ಕರ್ನಾಟಕದ ಈ ಸುಂದರ ಕಲೆಗೆ ನಾಲ್ಕು ಗೋಡೆಗಳನ್ನು ತಪ್ಪಿಸಿ ಅದು ವಿಶ್ವಸಂಚಾರಿ ಆಗಬೇಕೆಂಬ ಕನಸನ್ನು ಕಂಡರು. ಕಲೆ ಉಳಿಯಬೇಕಾದರೆ ದೊಡ್ಡ ಮನ್ನಣೆ ಪಡೆಯಬೇಕಾದರೆ ಅದು ಅಂತಾರಾಷ್ಟ್ರೀಯವಾಗಬೇಕು, ಭಾಷೆ ಬಾರದವರಿಗೂ ಅರ್ಥವಾಗಬೇಕು ಈ ಕಲೆ ಎಂಬುದು ಅವರ ಅಭಿಪ್ರಾಯ. ಮಾತು ತೆಗೆದ ಯಕ್ಷಗಾನದ ಬ್ಯಾಲೆ ರಂಗಕ್ಕೆ ಬಂದುದು 1962ರಲ್ಲಿ. ಅಭಿನಯಕ್ಕೆ ಹೆಚ್ಚು ಒತ್ತು ನೀಡಿ ಹೊಸ ವಾದ್ಯ ಮೇಳಗಳಿಂದ ಯಕ್ಷಗಾನಕ್ಕೊಂದು ಹೊಸ ಆಯಾಮ ನೀಡಿದರು. ಹಲವರು ಕಾರಂತರು ಸಂಪ್ರದಾಯ ಬದ್ಧ ಯಕ್ಷಗಾನ ಕೊಲೆ ಮಾಡುತ್ತಿದ್ದಾರೆಂದು ಆರೋಪಿಸಿದರು. 'ಇದೊಂದು ಇನ್ನೊಂದು ಕಥಕ್ಕಳಿ' ಎಂದು ಆಡಿಕೊಂಡರು.

1972ರಲ್ಲಿ ಪುನಃ ತಮ್ಮ ಬ್ಯಾಲೆಯನ್ನು ಕಾರಂತರು ರಂಗದ ಮೇಲೆ ಪ್ರಯೋಗಿಸಿ ಯಶಸ್ವಿಗೊಳಿಸಿದರು. ಉಡುಪಿಯಲ್ಲಿ ಯಕ್ಷಗಾನ ಕೇಂದ್ರವೊಂದನ್ನು ಅವರು ಸ್ಥಾಪಿಸಿದರು. 1975ರಲ್ಲಿ ಉಡುಪಿಯ ಯಕ್ಷರಂಗ ಸ್ಥಾಪನೆಗೊಂಡಿತು. 1957–78ರ ಅವಧಿಯಲ್ಲಿ ತುಳುನಾಡಿನಿಂದ ಮೇಘಾಲಯದವರೆಗೆ ಯಕ್ಷರಂಗ 150ಕ್ಕೂ ಹೆಚ್ಚು ಪ್ರಯೋಗಗಳನ್ನು ನೀಡಿತು. ಕಾರಂತರ ಬ್ಯಾಲೆ ಮತ್ತು ಯಕ್ಷಗಾನ ಪ್ರಯೋಗಗಳು ಅವರಿಗೂ ಯಕ್ಷಗಾನಕ್ಕೂ ರಾಷ್ಟ್ರೀಯ ಮನ್ನಣೆ ದೊರಕಿಸಿಕೊಟ್ಟವು. ದೆಹಲಿಯ ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾದ ಕಲಾವಿದರು ಅಭಿನಯಿಸಿದ ಭೀಷ್ಮ ವಿಜಯ ಹಿಂದಿ ಯಕ್ಷಗಾನ ತುಂಬ ಜನಪ್ರಿಯ ಪ್ರಯೋಗ ಎನಿಸಿತು. ಗಯಚರಿತೆ ಯಕ್ಷಗಾನ ವೀಕ್ಷಿಸಿದ ಅಮೇರಿಕದ ಸಂಶೋಧನಾ ವಿದ್ಯಾರ್ಥಿ ಮಾರ್ಥಾ ಆಷ್ಟನ್ "ಯಕ್ಷಗಾನದ ಬಡಗುತಿಟ್ಟಿನ ಸೌಂದರ್ಯವೇನೆಂದು ನನಗೆ ಕಾರಂತರ ಈ ನಾಟಕ ನೋಡಿದಾಗ ತಿಳಿಯಿತು. ಅದರ ನೃತ್ಯ ಮತ್ತು ವೇಷಭೂಷಣಗಳ ನಡುವೆ ನಾನೊಂದು ಕಲ್ಪನಾ

ಲೋಕದಲ್ಲಿ ವಿಹರಿಸುತ್ತಿದ್ದೆ. ಇಂತಹ ಕಲೆ ಪತನೋನ್ಮುಖವಾಗುತ್ತಿದೆ ಎಂದಾಗ ನನಗೆ ದುಃಖವಾಯಿತು. ಅದರಲ್ಲಿಯ ಒಂದೊಂದು ಅಂಗವೂ ಕಲಾಸಾಧ್ಯತೆ ಬೆಳೆಸಬಲ್ಲಂಥದು. ಅಂದಾಗ ಇವೆಲ್ಲಾ ಮೇಳವಿಸಿದರೆ ಆ ಸೃಷ್ಟಿ ಎಷ್ಟು ಮಹೋನ್ನತವಾಗಿರಬೇಕು" ಎಂದಿದ್ದಾರೆ.

ಕಾರಂತರು ತಮ್ಮ ಬ್ಯಾಲೆಯಲ್ಲಿ ಸಂಪ್ರದಾಯದ ಪ್ರಸಂಗಗಳನ್ನೇ ಇಟ್ಟುಕೊಂಡರು. ಭಾಗವತರೂ ಇದ್ದರು. ಅವರಿಗೆ ಇದ್ದ ಏಕೈಕ ಉದ್ದೇಶ ಈ ಸುಂದರ ಕಲೆಯ ಸವಿಯನ್ನು ಸಮಸ್ತ ಭಾರತೀಯರೂ ಸವಿಯಬೇಕು. ಕಾರಂತರೇ ಹೇಳುವಂತೆ ಯಾವುದೇ ಸೃಜನಶೀಲ ಕಲೆ ತಟಸ್ಥವಾಗಿ, ಜಡವಾಗಿ, ದೀರ್ಘಕಾಲ ಉಳಿಯಲಾರದು. ಹಾಗೆ ಮಾಡಿದರೆ ಅದು ಕೆಲಸಕ್ಕೆ ಬಾರದ ಪೂಜಾ ವಸ್ತುವಾಗಿ ಅಂಧಶ್ರದ್ಧೆಯ ಪೂಜಾರಿಗಳಿಗೆ ಮಾತ್ರ ಒಪ್ಪೀತು. ಈ ಕಲೆ ಜೀವಂತ ವಸ್ತು. ಪ್ರತಿಯೊಂದು ಕಲೆಯೂ ಹಾಗೆಯೆ. ಅದು ತನ್ನಲ್ಲಿರುವ ಗುಣದೋಷಗಳ ಕಡೆಗೆ ಎಂದೂ ಕುರುಡಾಗದು. ಪರಿಪೂರ್ಣತೆಯ ಕಡೆ ಸಾಗುವುದು ಅದರ ಹಂಬಲ. ನಾಳಿನ ಸಾಧ್ಯತೆಗಳನ್ನು ಇಣುಕಿ ನೋಡುವುದು ಅದರ ಗುಣ. ಅಂಥ ಲಕ್ಷಣಗಳಿಗೆ ಅವಶ್ಯಕತೆಗಳಿಗೆ ಯಕ್ಷಗಾನ ರಂಗಭೂಮಿಯೊಂದು ಆಕ್ಷೇಪವೆನಿಸಬಲ್ಲದೆ ? ಅನಾದಿ ಕಾಲದಲ್ಲಿ ಯಕ್ಷಗಾನ ಎಂಬುದು ಇತ್ತೇ. ಅದೇಕೆ ಹುಟ್ಟಿಕೊಂಡಿತು. ಹಿಂದೆ ಇಲ್ಲದ ಒಂದು ಕಲಾ ಸಂಪ್ರದಾಯವನ್ನು ಮುಂದಿನವರು ಏಕೆ ಸೃಷ್ಟಿಸಿದರು ? ಎಂದೂ ಒಬ್ಬಾತ ಕೇಳಬಹುದು. ಜೀವನ ಪ್ರವಾಹ ಜಡವಲ್ಲ, ಅದು ಚಿರನೂತನ, ಆದರೆ ಆ ನಾವೀನ್ಯ ತನ್ನ ಪೂರ್ವಸಂಬಂಧವನ್ನು ಕಡಿದುಕೊಳ್ಳದೆ ಸಾಗಿದಾಗ ಅದು ತಲೆಮಾರಿಂದ ತಲೆಮಾರಿಗೆ ಮುಟ್ಟಿ ತನ್ನ ಕೆಲಸ ಮಾಡಬಲ್ಲದು".

ಅವರು ಇನ್ನೊಂದೆಡೆ ಹೇಳಿದಂತೆ 'ನಾನು ಮಾಡಿದ ಹಲವಾರು ಸೃಷ್ಟಿಗಳು ಕೊನೆಯ ಹಂತದಲ್ಲಿ ನನಗೂ ತೀರಾ ತೃಪ್ತಿ ಕೊಡದೇ ಹೋಗಬಹುದು. ಒಂಟಿ ವೇಷವೊಂದು ರಂಗಸ್ಥಳಕ್ಕೆ ಬಂದಾಗ ತೃಪ್ತಿಕೊಡಬಹುದಾದ ವೇಷಭೂಷಣ ಅದೇ ವೇಷ ಒಂದು ಗುಂಪಿನ ಜೊತೆಯಲ್ಲಿ ಕಾಣಿಸಿಕೊಂಡಾಗ ಅತೃಪ್ತವಾಗಿ ಕಾಣಿಸಬಹುದು. ಆದರೂ ಪ್ರಯತ್ನ ಮಾಡುತ್ತಾ ಮಾಡುತ್ತಾ ನಾಲ್ಕು ಹೆಜ್ಜೆ ಮುಂದಿಟ್ಟು ಒಂದಲ್ಲ ಒಂದು ದಿನ ತೃಪ್ತಿ ತಂದುಕೊಳ್ಳಬಹುದೆಂಬ ವಿಶ್ವಾಸ ನನ್ನದು'.

ಯಕ್ಷಗಾನದ ಇತ್ತೀಚಿನ ಒಲವು ಬದಲಾವಣೆಗಳ ಕಡೆಗೇ ಇದೆ. ಆದರೆ ಬದಲಾವಣೆಯಿಂದ ಅದರ ಅಂತಃಸತ್ವ ಕಡಿಮೆಯಾಗಬಾರದು. ಯಕ್ಷಗಾನದಲ್ಲಿ ಕಾರಂತರ ಪ್ರಯೋಗ ಒಂದೆಡೆ ನಡೆದಂತೆ ಇತರರೂ ಪ್ರಯೋಗಗಳನ್ನು ನಡೆಸಿದ್ದಾರೆ. ಏಸುಕ್ರಿಸ್ತನ ಜೀವನವನ್ನು ಯಕ್ಷಗಾನಕ್ಕೆ ಅಳವಡಿಸಿ ರಂಗದ ಮೇಲೆ ಪ್ರದರ್ಶಿಸಲಾಯಿತು. ಮಂಗಳೂರಿನ ಉದ್ಯೋಗಿಗಳೂ ಪದವೀಧರರೂ ಸೇರಿ ಇಂಗ್ಲಿಷ್

ಭಾಷೆಯಲ್ಲಿ ಯಕ್ಷಗಾನ ಪ್ರದರ್ಶಿಸಿದರು. ಹಾಡುಗಳನ್ನೆಲ್ಲಾ ಸಂಪೂರ್ಣವಾಗಿ ಕನ್ನಡದಲ್ಲಿ ಉಳಿಸಿಕೊಂಡು ಸಂಭಾಷಣೆಗಾಗಿ ಇಂಗ್ಲಿಷ್ ಬಳಸಲಾಯಿತು.

ಶಿವರಾಮ ಕಾರಂತರಿಂದ ಪ್ರಭಾವಿತರಾದ ಮದ್ದಲೆ ಕಲಾವಿದ ಕೆ. ಎಂ. ಕಾರಂತರು 20ರ ದಶಕದ ಯಕ್ಷಗಾನವೊಂದನ್ನು ಪ್ರಯೋಗಿಸಿದರು (1988). ಇದೊಂದು ಅತ್ಯಂತ ಯಶಸ್ವಿ ಪ್ರಯೋಗ. ಕಳೆದುಹೋದ ಯಕ್ಷಗಾನ ಯುಗವನ್ನು ಪುನಃ ಕಣ್ಣಮುಂದಿರಿಸಿತು. ವಿದ್ಯುದ್ದೀಪವಿಲ್ಲ, ಧ್ವನಿವರ್ಧಕವಿಲ್ಲ, ಕಣ್ಣು ಕೋರೈಸುವ ಆಭರಣಗಳಾಗಲಿ ನೈಲಾನ್ ಉಡುಪುಗಳಾಗಲಿ ಇರಲಿಲ್ಲ. ಆದರೆ ಹೊಸತನಕ್ಕೆ ಹೊಂದಿಕೊಂಡಿರುವ ಪ್ರೇಕ್ಷಕರಿಗೆ ಆ ಪ್ರಯೋಗ ತುಂಬ ಸಪ್ಪೆಯಾಗಿ ಗೋಚರಿಸಿತು.

ಉಡುಪಿಯ ರಥಬೀದಿಯ ಗೆಳೆಯರು ಷೇಕ್ಸ್‌ಪಿಯರ್‌ನ ಮ್ಯಾಕ್‌ಬೆತ್ ನಾಟಕವನ್ನು ಯಕ್ಷಗಾನವಾಗಿ ಪರಿವರ್ತಿಸಿ ಪ್ರದರ್ಶಿಸಿದರು. ಹಾಗೆಯೆ ಇಕ್ಬಾಲ್ ಎಂಬುವರು ಮ್ಯಾಕ್‌ಬೆತ್ ಯಕ್ಷಗಾನ ಪ್ರದರ್ಶಿಸಿದ್ದುಂಟು. ಸುಧಾರಣಾವಾದಿಗಳು ಈ ಪ್ರಯೋಗಗಳನ್ನು ಒಂದು ಹೊಸ ಅನುಭವವೆಂದು ಬಣ್ಣಿಸಿದರು. ಆದರೆ ಇದೊಂದು ಯಕ್ಷಗಾನದ ಅಣಕ.

ಕೆರೆಮನೆ ಶಂಭು ಹೆಗಡೆಯವರು ಕೋರಿಯಾಗ್ರಾಫಿಯಲ್ಲಿ ವಿಶೇಷ ತರಬೇತಿ ಪಡೆದು ಅದನ್ನು ರಂಗದಲ್ಲಿ ಬಳಸಿದರು. ಕರ್ಕಿ ನಾರಾಯಣ ಹಾಸ್ಯಗಾರರು ಕೇಂದ್ರ ಸಂಗೀತ ನಾಟಕ ಅಕಾಡೆಮಿಯಿಂದ ಶಿಷ್ಯವೇತನ ಪಡೆದು ಕುಣಿತದಲ್ಲಿ ಹೊಸ ನೃತ್ಯ ಶೈಲಿ ಬಳಸಿದರು.

ಗಣ್ಯ ವ್ಯಕ್ತಿಗಳು ಬಂದಾಗ ಅವರನ್ನು ಸ್ವಾಗತಿಸಲು ಯಕ್ಷಗಾನ ಕಲಾವಿದರನ್ನು ಮತ್ತು ಭೂತಕೋಲ ವೇಷದವರನ್ನು ಕಳುಹಿಸುವುದು ಒಂದು ಹೊಸ ಪದ್ಧತಿ. ಶಿವರಾಮ ಕಾರಂತರು ಇದನ್ನು ಕಟುವಾಗಿ ಖಂಡಿಸಿ "ಇದೇನು ಮೊಹರಂ ಹುಲಿ ವೇಷವೇ ?" ಎಂದು ಕೇಳಿದ್ದಾರೆ.

ಹಿಂದೆ ನಡೆಯುತ್ತಿದ್ದ ಜೋಡಾಟ ಈಗ ಕಡಿಮೆಯಾಗಿದೆ. ತೆಂಕು ಮತ್ತು ಬಡಗುತಿಟ್ಟಿನ ಕಲಾವಿದರನ್ನೆಲ್ಲಾ ಒಂದೇ ರಂಗದ ಮೇಲೆ ತಂದು ಆಖ್ಯಾನ ಪ್ರದರ್ಶಿಸಲಾಯಿತು. ಸ್ತ್ರೀ ವೇಷಗಳನ್ನು ಸ್ತ್ರೀಯರು ಮಾಡುವ ಕಾಲ ಇನ್ನೂ ಬಂದಿಲ್ಲ. ಆದರೆ ಸ್ತ್ರೀಯರೇ ಸೇರಿ ಯಕ್ಷಗಾನ ಪ್ರಯೋಗಿಸಿದ್ದುಂಟು. ಹಿರಿಯ ಭಾಗವತರಾದ ಉಪ್ಪೂರು ನಾರಾಯಣ ಭಾಗವತರು, ತರುಣ ಭಾಗವತರಾದ ಜಿ. ಆರ್. ಕಾಳಿಂಗ ನಾವುಡ ಇವರು ಮರೆಯಾದದ್ದು ಯಕ್ಷಗಾನಕ್ಕೆ ತುಂಬಲಾರದ ನಷ್ಟ. ಯಕ್ಷಗಾನ ಸಮಯ ಮೊಟಕುಗೊಳಿಸಿ ಅಲ್ಲಲ್ಲಿ ಪ್ರಯೋಗಿಸಲಾಗುತ್ತಿದೆ. ಮೈಸೂರು, ಬೆಂಗಳೂರು ಗಳಲ್ಲಿ ಇಂತಹ ಪ್ರಯೋಗಗಳು ಯಶಸ್ವಿಯೆನಿಸಿವೆ. ಥಿಯೇಟರ್ ಸೌಲಭ್ಯ ಇರುವಲ್ಲಿ ಸಿನಿಮಾದಂತೆ ಯಕ್ಷಗಾನವನ್ನು ಹಗಲಿನಲ್ಲೂ ಪ್ರದರ್ಶಿಸಲಾಗುತ್ತಿದೆ.

ಶೇಣಿ ಗೋಪಾಲಕೃಷ್ಣಭಟ್ಟರು ಹೇಳಿದಂತೆ "ಪ್ರಾಚೀನ ಭಾರತೀಯ ಸಂಸ್ಕೃತಿ

ನಾಗರಿಕತೆಯನ್ನು ಎತ್ತಿ ಹಿಡಿಯುವುದೇ ಯಕ್ಷಗಾನದ ಮೂಲೋದ್ದೇಶವಾಗಿದ್ದರೂ ಇಂದಿನ ನವೀನ ಯುಗಧರ್ಮಕ್ಕೆ ಅನುಗುಣವಾದ ಹೊಸ ಮೌಲ್ಯಗಳನ್ನು ಅದು ಕಡೆಗಣಿಸುವಂತಿಲ್ಲ. ಆಯಾ ಕಾಲ ಘಟ್ಟದ ಪ್ರೇಕ್ಷಕರ ಅಭಿರುಚಿ ಹಾಗು ಮನೋಧರ್ಮಗಳನ್ನು ಕಡೆಗಣಿಸಿ ಯಾವ ಕಲೆಯೂ ಬದುಕಿ ಬಾಳಬಾರದು. ಅದ ರಲ್ಲಿಯೂ ಯಕ್ಷಗಾನದಂತಹ ಸಾರ್ವಜನಿಕ ಕಲೆ. ಈ ಕುರಿತು ಬಹಳ ಎಚ್ಚರಿಕೆಯಿಂದ ಇರಬೇಕಾಗುತ್ತದೆ. ಪ್ರೇಕ್ಷಕರ ಅಭಿರುಚಿಯ ಪ್ರವಾಹದಲ್ಲಿ ಕೊಚ್ಚಿಹೋಗಿ ಅಡ್ಡದಾರಿ ಹಿಡಿಯುವ ಯಾವುದೇ ಕಲೆಯನ್ನಾದರೂ ವಿದ್ಯಾವಂತರಾದ ಪ್ರೇಕ್ಷಕರೂ ಕಲಾವಿದರೂ ಒಂದು ಗೂಡಿ ಸರಿದಾರಿಗೆ ತರಬೇಕೇ ಹೊರತು ಕೇವಲ ಕಲಾವಿದರನ್ನು ಅಥವಾ ಕಲಾ ವ್ಯವಸಾಯಿಗಳನ್ನು ಮಾತ್ರ ಹೊಣೆಗಾರರೆಂದುಅಪರಾಧಿಗಳ ಸ್ಥಾನದಲ್ಲಿ ನಿಲ್ಲಿಸುವುದು ಸರಿಯಲ್ಲ."

ಸುಪ್ರಸಿದ್ಧ ಯಕ್ಷಗಾನ ಕಲಾವಿದ ಮತ್ತು ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ವಿಜೇತ ಕೆರೆಮನೆ ಮಹಾಬಲ ಹೆಗಡೆ ಅವರು ಯಕ್ಷಗಾನ ರಂಗಭೂಮಿ ಕುರಿತಂತೆ ನೀಡಿರುವ ಪ್ರಾಯೋಗಿಕ ಆಲೋಚನೆಗಳು ಉಲ್ಲೇಖನೀಯವಾಗಿದೆ :

1. ಯಕ್ಷಗಾನ ಪ್ರದರ್ಶನ ಕಾಲದ ಮಿತಿಗೆ ಒಳಪಡಬೇಕು. ಮೂರು ತಾಸಿನ ಅವಧಿ ಯಲ್ಲಿ ಕಲಾಪ್ರದರ್ಶನ ಆಗಿ ಮುಗಿಯಬೇಕು.
2. ನಾವು ರಂಗದಲ್ಲಿ ಏನು ಮಾಡ್ತೇವೆ–ಏನು ಮಾಡಬೇಕು ಅನ್ನುವ ಸಂಬಂಧದಲ್ಲಿ ಪೂರ್ವಭಾವಿಯಾಗಿ ತರಬೇತಿಯ ಒಂದು ವ್ಯವಸ್ಥೆ ಬರಬೇಕು. ಈ ರೀತಿಯಿಂದ ಕಲಾವಿದರು ರಂಗಕ್ಕೆ ಬಂದ್ರೆ ಈಗಿನದಕ್ಕಿಂತ ಹತ್ತಾರುಪಟ್ಟು ಒಳ್ಳೇದು ಮಾಡ್ಲಿಕ್ಕೆ ಸಾಧ್ಯ ಉಂಟು.
3. ರಾಗ ತಾಳಗಳ ಕಟ್ಟಳೆಯನ್ನು ಪಡಕೊಂಡು ಯಕ್ಷಗಾನದ ಶೈಲಿಯನ್ನು ಬಿಡದೇ ಅಭಿನಯಕ್ಕೆ ಅನುಕೂಲವಾಗುವ ರೀತಿ ಹಾಡುವ ಕ್ರಮ ಬರಬೇಕು.
4. ಪಾತ್ರದ ಸಂಸ್ಕಾರ–ಸ್ವಭಾವವನ್ನು ಅಭಿವ್ಯಕ್ತಿಸುವ ರೀತಿಯಲ್ಲಿ ಅದರ ನೃತ್ಯ–ಅಭಿನಯಗಳು ರೂಪುಗೊಳ್ಳಬೇಕು.
5. ಸಾಂಪ್ರದಾಯಿಕ ವೇಷಭೂಷಣಗಳಲ್ಲಿ ಅಭಿನಯ ಪ್ರಕಟವಾಗಬೇಕು. ಇವೆಲ್ಲ ಬದಲಾವಣೆಯೋ ಪರಿಷ್ಕರಣವೋ ಆದ್ರೆ ಈಗಿನಕ್ಕಿಂತ ಪ್ರದರ್ಶನ ಹೆಚ್ಚು ಮೌಲಿಕವಾಗ್ತದೆ. ಪ್ರಜ್ಞಾವಂತರನ್ನು ಹೆಚ್ಚು ಮೆಚ್ಚಿಸ್ಲಿಕ್ಕೆ ಸಾಧ್ಯ.

ಯಕ್ಷಗಾನ ತಂತ್ರ ಬಳಸಿ ಹಲವು ಆಧುನಿಕ ನಾಟಕಗಳನ್ನು ಪ್ರಯೋಗಿಸಲಾಗಿದೆ. ಬಿ. ವಿ. ಕಾರಂತ, ಗಿರೀಶ್‌ಕಾರ್ನಾಡ್, ಕೆ. ವಿ. ಸುಬ್ಬಣ್ಣ ಅವರು ನಾಟಕಗಳಲ್ಲಿ

ಯಕ್ಷಗಾನ ತಂತ್ರ ಬಳಸಿ ಯಶಸ್ವಿಯಾದರು. ಗಿರೀಶ್‌ಕಾರ್ನಾಡರ ಹಯವದನವನ್ನು ಈ ನಿಟ್ಟಿನಲ್ಲಿ ಉಲ್ಲೇಖಿಸಬಹುದಾಗಿದೆ. ಹಬೀಬ್ ತನ್ವೀರ್ ತಮ್ಮ ಮಿಟ್ಟಿ ಕಾ ಘಾಯಿ ನಾಟಕದಲ್ಲಿ ಯಕ್ಷಗಾನದ ಹಲವು ಭಂಗಿಗಳನ್ನು ಅಳವಡಿಸಿಕೊಂಡರು. ಮರಾಠಿ ರಂಗ ಭೂಮಿಯಲ್ಲಿ ಯಶಸ್ವಿಗಳಿಸಿದ ವಿಜಯ್ ತೆಂಡೂಲ್ಕರ್ ಅವರ ಘಾಶೀರಾಮ್ ಕೊತ್ವಾಲದಲ್ಲಿ ನಾಟಕ ಪ್ರಾರಂಭವಾಗುವುದು ಯಕ್ಷಗಾನದಂತೆ ಗಣೇಶ ಸ್ತುತಿಯಿಂದ ನಟರೆಲ್ಲ ಗಣೇಶನ ಜೊತೆ ಕುಣಿಯುವ ತಂತ್ರ ಯಕ್ಷಗಾನದ್ದು. ಯಕ್ಷಗಾನದಿಂದ ಪ್ರಭಾವಿತರಾದ ಹಯವದನ ಹಿಂದಿ ಅವತರಣಿಕೆ ನಿರ್ದೇಶಿಸಿದವರು ಸತ್ಯದೇವ ದುಬೆ ಅವರು. ಕೆ. ವಿ. ಸುಬ್ಬಣ್ಣನವರ ನೀನಾಸಂ ಪ್ರದರ್ಶಿಸಿದ ಹಲವು ನಾಟಕಗಳಲ್ಲಿ ಯಕ್ಷಗಾನದ ತಂತ್ರಗಳನ್ನು ಬಳಸಲಾಗಿದೆ. ಡಾ. ವ್ಯಾಸರಾವ್ ನಿಂಜೂರ ಅವರ ಡೊಂಕುಬಾಲದ ನಾಯಕರು ಯಕ್ಷಗಾನ ತಂತ್ರ ಬಳಸಿ ಪ್ರದರ್ಶಿಸಿದ ಇನ್ನೊಂದು ನಾಟಕ. ಇದಕ್ಕೆ ಸಂಗೀತ ನೀಡಿದವರು ಕಡತೋಕ ಮಂಜುನಾಥ ಭಾಗವತರು. ಈ ನಾಟಕದ ಹಿಮ್ಮೇಳ ಬಯಲಾಟದ್ದು. ಹೀಗೆ ಹೊಸ ಹೊಸ ಪ್ರಯೋಗಗಳಿಗೆ ಯಕ್ಷಗಾನ ಹಿನ್ನೆಲೆ ಒದಗಿಸುವುದರೊಂದಿಗೆ ಸಂಪ್ರದಾಯವನ್ನು ಉಳಿಸಿಕೊಳ್ಳಲು ಹೆಣಗುತ್ತಿದೆ.

# ಭಾಗವಂತಿಕೆ ಮೇಳ

---

ಜಯಲಕ್ಷ್ಮಿ ಸೀತಾಪುರ

ಭಾಗವಂತಿಕೆ ಮೇಳ ಮಂಡ್ಯ, ತುಮಕೂರು, ಬೆಂಗಳೂರು, ಹಾಸನ ಜಿಲ್ಲೆಗಳ ಕೆಲವು ಭಾಗಗಳಲ್ಲಿ ಕಂಡುಬರುತ್ತದೆ. ಜನಪದ ಕಲಾ ಮೇಳಗಳಲ್ಲಿ ಭಾಗವಂತಿಕೆ ಮೇಳವು ಒಂದು ಪ್ರಮುಖವಾದ ಕಲೆ. ಹಿಂದಿನ ದಿನಗಳಲ್ಲಿ ಪೌರಾಣಿಕ ಕಥಾನಕಗಳೇ ಅದರಲ್ಲೂ ವಿಶೇಷವಾಗಿ ರಾಮಾಯಣ, ಮಹಾಭಾರತ, ಭಾಗವತ ಕತೆಗಳನ್ನು ಹಾಡುತ್ತಿದ್ದು ಇದರ ಉದ್ದೇಶ ಧರ್ಮಪ್ರಚಾರವಾಗಿತ್ತು. ಭಕ್ತಿಯ ಮರೆಯಲ್ಲಿ ನೀತಿನಿಯಮವನ್ನು ಪಾಲಿಸುವ ಮತ್ತೊಂದು ಹಾದಿ. ಆದರೆ ಇತ್ತೀಚೆಗೆ ರಾಮಾಯಣ ಕಾವ್ಯವನ್ನು ಹೆಚ್ಚಾಗಿ ಹಾಡುತ್ತಿದ್ದು, ಪ್ರಹ್ಲಾದ ಚರಿತೆಯು ನೀಳ್ಗತೆ, ವೆಂಕಟರಮಣ ಸ್ವಾಮಿ, ಚೆಲುವರಾಯಸ್ವಾಮಿ, ರಂಗಸ್ವಾಮಿ, ಶ್ರೀಕೃಷ್ಣ, ಮಂಗಳಾರತಿ ಸೇರ್ವೆ ಪದ ಸರಳುಪದ, ಗುಡಿಸುತ್ತುವ, ಗುಡಿಯೊಪ್ಪಿಸುವ ಪದಗಳಿಗೆ ಸೀಮಿತವಾಗಿದೆ. ಭಾಗವಂತಿಕೆ ಮೇಳದವರು ಕಾಗದದ ಹಸ್ತಪ್ರತಿಗಳನ್ನೇ ನಿಷ್ಠೆಯಿಂದ ತಮ್ಮ ಬಳಿ ಇಟ್ಟುಕೊಂಡು ಅಭ್ಯಾಸ ಮಾಡಿಕೊಂಡು ಹಾಡುತ್ತಾರೆ. ಇದಕ್ಕೆ ಧಾರ್ಮಿಕ ಹಿನ್ನೆಲೆ ಇರುವುದೇ ಮುಖ್ಯ ಕಾರಣ.

ಭಾಗವತರು ಎಂದರೆ ಭಗವಂತನ ಅವತಾರವೆಂದೇ ಪರಿಗಣಿಸುವ ಈ ಜನಪದರು ವೈಷ್ಣವ ಸಂಪ್ರದಾಯಕ್ಕೆ ಸೇರಿದವರು. ಅಂದರೆ ಶ್ರೀಹರಿಯ ಭಕ್ತರು. ಭಾಗವತ ಪರಂಪರೆಯ ಉಲ್ಲೇಖ ನಮಗೆ ಮಹಾಭಾರತದ ಶಾಂತಿಪರ್ವದಲ್ಲಿ ಬರುವ ನಾರಾಯಣೋಪಖ್ಯಾನದಲ್ಲಿ ದೊರೆಯುತ್ತದೆ. ಗ್ರಾಮದ ಯಾರೇ ವೈಷ್ಣವ ಭಕ್ತರಿದ್ದರೂ ಅವರು ತಾಳಗಳನ್ನು ಹಿಡಿಯಬಹುದು. (ಈ ಸಂಪ್ರದಾಯದಲ್ಲಿ ವಿಷ್ಣು ಅವತಾರವೆನಿಸಿದ ವೆಂಕಟರಮಣ, ರಂಗಸ್ವಾಮಿ, ಶ್ರೀರಾಮ, ಚೆಲುವರಾಯಸ್ವಾಮಿ, ನರಸಿಂಹಸ್ವಾಮಿ ಪದಗಳೇ ಹೆಚ್ಚು).

ಭಾಗವಂತಿಕೆ ದಕ್ಷಿಣ ಕರ್ನಾಟಕದ ಜನಪದ ಹಾಡುಗಾರಿಕೆಯ ಸಂಪ್ರದಾಯಗಳಲ್ಲಿ

ಸಾಹಿತ್ಯಿಕ ಭಾಗವನ್ನು ಪ್ರತಿನಿಧಿಸಿದರೆ ಪಟದಕುಣಿತ, ಕೋಡಂಗಿಯ ನೃತ್ಯಗಳು ಈ ಮೇಳದ ಕಲಾ ಪ್ರಕಾರಗಳೆನಿಸುತ್ತವೆ. ಪಟದ ಕುಣಿತ ಜನಪದ ನೃತ್ಯಗಳ ಸಾಲಿನಲ್ಲಿ ಬಹು ಅನುಪಮವಾದುದು. ನಂದಿಯ ಧ್ವಜಗಳು ಶೈವ ಮೂಲದ ಸಂಕೇತಗಳಾದರೆ ಪಟಗಳು ವೈಷ್ಣವ ಮೂಲಕ್ಕೆ ಸಂಬಂಧಪಡುತ್ತವೆ. ನಂದಿಯ ಕೋಲು ಸಾಮಾನ್ಯವಾಗಿ 15–18 ಅಡಿಗಳಷ್ಟು ಎತ್ತರವಿರುತ್ತದೆ. ಇದು ಅದರಷ್ಟು ಎತ್ತರವಿರದಿದ್ದರೂ ಆರೇಳು ಮಾರುಗಳಷ್ಟಾದರೂ ಉದ್ದವಿರುತ್ತದೆ. ಬಣ್ಣ ಬಣ್ಣದ ಬಟ್ಟೆಯನ್ನು ಸುತ್ತಿ ನೆತ್ತಿಯಲ್ಲಿ ಒಂದು ಛತ್ರಿಯನ್ನು ಅಳವಡಿಸಿರುತ್ತಾರೆ. ದೇವರ ಉತ್ಸವಗಳಲ್ಲಿ ಹಿಡಿದು ಹತ್ತಾರು ಮಂದಿ ಕುಣಿಯುತ್ತಾರೆ. ಅನಂತರ ಪಟಗಳನ್ನಿಟ್ಟು ಎರಡು ಸಾಲಾಗಿ ನಿಂತು ತಾಳ ಹಿಡಿದು ಮೈಮರೆತು ಸಾಮೂಹಿಕವಾಗಿ ಹಾಡುತ್ತಾರೆ.

ಭಾಗವಂತಿಕೆ ಆಚರಣೆಯಲ್ಲಿ ಒಂದು ನಿರ್ದಿಷ್ಟವಾದ ಕಾಲಾವಧಿ ಉಂಟು. ಕಾರ್ತೀಕಮಾಸದಲ್ಲಿ ದೀಪಾವಳಿ ಹಬ್ಬ ಇನ್ನೂ ಎರಡು ಮೂರು ವಾರಗಳಿವೆ ಎನ್ನು ವಾಗಲೇ ದೀಪಾವಳಿಗೆಂದು ಊರುಗಳಲ್ಲೇ ಹೆಚ್ಚು ಇವರ ಭಾಗವಂತಿಕೆ ಮೇಳದ ಮೈತ್ರಿ. ಈ ದೀವಳಿಗೆ ದಂಡು ಊರು ಊರಿನ ಮೇಲೆ ಹೋಗುವ ಮುನ್ನ ಒಬ್ಬ ಹಿಟ್ಟಿನ ಪಟವನ್ನು ಹಿಡಿದು ಮುಂದೆ ಹೋಗಿ ಇಷ್ಟು ಜನರಿಗೆ ಹಿಟ್ಟಾಗಬೇಕು ಎಂದು ಹೇಳುವ ಪರಿಪಾಠವನ್ನು ಇಟ್ಟುಕೊಂಡಿರುತ್ತಾರೆ. ತಮ್ಮ ಹೆಣ್ಣುಮಕ್ಕಳನ್ನು ಕೊಟ್ಟಿರುವ ಊರುಗಳಿಗೆ 'ಹಿಟ್ಟಿನಪಟ' ಹೊತ್ತು ವ್ಯಕ್ತಿ ಹೋಗುತ್ತಾನೆ. ಅವನನ್ನು ಕಂಡಾಗ ಆಯಾ ಹೆಣ್ಣುಮಕ್ಕಳು ತೌರಿನ ಮನೆಯವರು ಬರುವರೆಂದು ಸಂಭ್ರಮದಿಂದ ಊಟದ ವ್ಯವಸ್ಥೆಯನ್ನು ಮಾಡುತ್ತಾರೆ. ಈ ಸಂದರ್ಭಗಳಲ್ಲಿ ದವಸಧಾನ್ಯಗಳ ಸಂಗ್ರಹದ ಜೊತೆ ಕಾಣಿಕೆಯೂ ಸಂಗ್ರಹವಾಗುತ್ತದೆ. ಗ್ರಾಮಗಳಿಗೆ ತೆರಳುವ ಮುನ್ನ ಊರಿನ ದೇವಸ್ಥಾನದ ಮುಂದೆ ಮುಂಚಿತವಾಗಿ ಭಾಗವಂತಿಕೆ ಕಟ್ಟಿ ತಮಟೆ, ಕಹಳೆ, ನಗಾರಿ, ತಾಳಗಳನ್ನು ಪೂಜಿಸಿ, ಮೇಳ ನಡೆಸಿದ ನಂತರವೇ ಮುಂದಿನ ಊರುಗಳಿಗೆ ತೆರಳುವುದು. ಹೀಗೆ ಭಾಗವಂತಿಕೆಗಳನ್ನು ನಡೆಸುತ್ತಾ ಬಂದವರಿಗೆ ಮತ್ತೊಂದು ಮೇಳ ಎದುರಾದರೆ ಎರಡು ಮೇಳಗಳಲ್ಲಿ ಪೈಪೋಟಿ ಏರ್ಪಡುತ್ತದೆ. ಸವಾಲ್ ಜವಾಬ್‌ನಂತೆ ಹೊಸ ಹೊಸ ಹಾಡುಗಳನ್ನು ಕಟ್ಟಿ ಹಾಡುತ್ತಾರೆ. ಇದರಲ್ಲಿ ಯಾರೇ ಸೋತರೂ 'ಸೋತ ಕಾಣಿಕೆ' ಯನ್ನು ಕೊಟ್ಟು ಗೆದ್ದಮೇಳಕ್ಕೆ ತಮ್ಮ ಬಿರುದು ಬಾವಲಿಗಳನ್ನು ಅರ್ಪಿಸಿ ಹೊರಟುಹೋಗುತ್ತಾರೆ. ಇಂಥ ಘಟನೆಗಳು ಅನೇಕ ಸಂದರ್ಭಗಳಲ್ಲಿ ವಿರಸವಾಗಿ ಪರ್ಯಾವಸನವಾಗಿವೆ. ಸಂಗ್ರಹವಾದ ದವಸ, ಹಣ ದೀಪಾವಳಿಗೆ ಖರ್ಚು ಮಾಡಿ ಉತ್ಸವ ನಡೆಸಿ ಸರ್ವರೂ ಊಟಮಾಡುತ್ತಾರೆ.

ಭಾಗವಂತಿಕೆ ಕಥಾ ಚೌಕಟ್ಟಿನಲ್ಲಿ ಭಾಗವಂತಿಕೆಯ ಕಲಾವಿದರು ಬಹುಬೇಗ ಕತೆಯನ್ನು ಮುಗಿಸುವ ಆತುರದಲ್ಲಿರುವುದು ಕಂಡುಬರುತ್ತದೆ. ಆದರೆ ಕೆಲವು ಸ್ವಾರಸ್ಯಕರವಾದ ಸಂದರ್ಭಗಳನ್ನು ಸೃಷ್ಟಿಸಿರುವ ನಮ್ಮ ಜನಪದ ಕಲಾವಿದರನ್ನು

ಶ್ಲಾಘಿಸಬೇಕಾಗುತ್ತದೆ. ಮನಸ್ಸು ಮೆಚ್ಚಬೇಕು. ಸೀತಾಸ್ವಯಂವರಕ್ಕೆ ಲಕ್ಷ್ಮಣನೊಡಗೂಡಿ ತೆರಳುವ ರಾಮನ ಕೌಶಲ್ಯವನ್ನು ಇಲ್ಲಿ ನೋಡಿ...

ರಾಮರ ಕರೆಸಿದ ಕೌಶಿಕ ಮುನಿಯು
ನಾರಿ ಜಾನಕಿಯು ತರಬೇಕೆಂದು
ಪೇಳಲು ಶ್ರೀರಾಮರಿದ್ದರು ಬೇಗದಿ
ನಾರಿ ಜಾನಕಿಯು ನೋಡೋ ಲಕ್ಷ್ಮಣ

ಎಂದು ಪ್ರಾರಂಭಿಸಿ ಭಾಗವಂತಿಕೆ ಪದಗಳನ್ನು ಹಾಡುತ್ತಾರೆ. ಅಕ್ಕಿ ಪಡಿಗಳನ್ನು ಸ್ವೀಕರಿಸುತ್ತಾರೆ. ಮುಂದಿನ ಊರಿಗೆ ಹೊರಡುವ ಮುನ್ನ ಆ ಊರಿನಲ್ಲಿ ಸಂಪಾದಿಸಿದ ಅಕ್ಕಿ ಪಡಿಯಲ್ಲಿ ಸ್ವಲ್ಪವನ್ನು ಆ ಊರಿನ ಪೂಜಾರಿಗೆ ಕೊಡುತ್ತಾರೆ.

ದೀಪಾವಳಿಗೆ ದಂಡು ಬರುವ ಸೂಚನೆಯನ್ನು ನೀಡಲು 'ಹಿಟ್ಟಿನಪಟ' ಒಂದು ಮುಂದೆ ಹೋಗಿರುತ್ತದೆ. ಪಟವೊಂದನ್ನು ಹೊತ್ತ ಒಬ್ಬ ಮುಂದಾಗಿ ಹೋಗಿ ತಾವು ಹೋಗಲು ನಿರ್ಧರಿಸಿದ ಊರಿನ ದೇವಾಲಯದ ಬಳಿ ತಂದು ಅದನ್ನು ನಿಲ್ಲಿಸುತ್ತಾನೆ. ಅದನ್ನು ನೋಡಿದ ಹೆಣ್ಣುಮಕ್ಕಳು ತೌರಿನ ಪಟ ಬಂದಿತೆಂದು ಆನಂದ ಪಡೆತ್ತಾರೆ. ಬರುವ ಮಂದಿಗೆ ಊಟ ಉಪಚಾರದ ವ್ಯವಸ್ಥೆಯನ್ನು ಮುಂಚಿತವಾಗಿ ಅವರು ಮಾಡಿಕೊಳ್ಳಲು ಈ ಕ್ರಮವನ್ನು ಅನುಸರಿಸುತ್ತಾರೆ. ಊಟ, ವಸತಿಯನ್ನು ದೇವರೊಕ್ಕಲಿಗೆ ಸೇರದವರು ವಹಿಸಿಕೊಳ್ಳುತ್ತಾರೆ. ಮತ್ತೆ ಕೆಲವು ಊರುಗಳಲ್ಲಿ ಮನೆಗಿಬ್ಬರಿಗೆ ಊಟ ಹಾಕುತ್ತಾರೆ. ಅವರಿಗಾಗಿ ಹೆಚ್ಚುಗಟ್ಟಲೆ ಮಾಡುತ್ತಾರೆ. ದಂಡು ಹೋದವರು ಸಾಮಾನ್ಯವಾಗಿ ತಂಗುವುದು ದೇವಸ್ಥಾನದಲ್ಲಿಯೇ.

ಕೆಲವು ವೇಳೆ ಊರಾಡಲು ಹೊರಟಾಗ ಬೇರೆ ಬೇರೆ ಊರುಗಳ ಎರಡು ಮೇಳಗಳು ಎದುರಾದರೆ, ಹಾಡಿನ ಮೇಲಾಟ ಪ್ರಾರಂಭವಾಗುತ್ತದೆ. ಇಬ್ಬರೂ ಪ್ರತ್ಯೇಕವಾಗಿ ಭಾಗವಂತಿಕೆ ಕಟ್ಟಿ ಹಾಡತೊಡಗುತ್ತಾರೆ. ಯಾರೂ ಹೆಚ್ಚು ಕಾಲ ಸೋಲದೆ ಹಾಡುಗಳನ್ನು ಮಾಲೆ ಮಾಲೆಯಾಗಿ ಹಾಡುತ್ತಾರೋ ಅವರು ಗೆಲ್ಲುತ್ತಾರೆ. ಪುನರುಕ್ತಿಯಾಗದಂತೆ ಹೊಸ ಹೊಸ ಹಾಡುಗಳನ್ನು ಹಾಡಬೇಕಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಒಂದು ಬಗೆಯ 'ಸವಾಲ್' 'ಜವಾಬ್' ಸಂಪ್ರದಾಯದ ರೀತಿ ಕಲ್ಪಿತವಾಗುತ್ತದೆ. ಯಾವುದಾದರೂ ಒಂದು ಮೇಳ ಸೋಲಲೇಬೇಕು. ಸೋತ ತಂಡ ಕಂಬಳಿ, ಗದ್ದುಗೆ ಹಾಸಿ ಸೋತ ಕಾಣಿಕೆ ಅರ್ಪಿಸಿ ಹೊರಟು ಹೋಗಬೇಕು. ಎದುರು ಪಕ್ಷದ ಬಿರುದು ಬಾವಲಿಗಳನ್ನೆಲ್ಲಾ ಕಿತ್ತುಕೊಂಡು ಕಿತ್ತಾಡಿದ ವಿರಸ ಪ್ರಸಂಗಗಳೂ ಉಂಟೆಂದು ಹೇಳುತ್ತಾರೆ.

ಭಾಗವಂತಿಕೆ ಮೇಳದಲ್ಲಿ ಹಿಮ್ಮೇಳ, ಮುಮ್ಮೇಳ ಎರಡೂ ಇದ್ದು ಸಾಮಾನ್ಯವಾಗಿ ಎರಡು ಕಡೆಯೂ ಭಾಗವತರು ಸಾಲಾಗಿ ನಿಂತಿರುತ್ತಾರೆ. ಹಿಮ್ಮೇಳಕ್ಕಿಂತಲೂ ಮುಮ್ಮೇಳದವರ ಜವಾಬ್ದಾರಿ ಹೆಚ್ಚು. ಪ್ರತಿಯೊಂದು ಪದವನ್ನೂ ಎತ್ತಿ ಕೊಡಬೇಕಾದ್ದರಿಂದ ಮುಮ್ಮೇಳದವರ ಪಾತ್ರ ಕಷ್ಟದ್ದಾಗಿರುತ್ತದೆ. ಆದ್ದರಿಂದ ಕೆಲವು ಕಡೆ ಮುಮ್ಮೇಳಕ್ಕಿಂತ ಹಿಮ್ಮೇಳನದಲ್ಲಿ ಹೆಚ್ಚು ಜನರು ಕಂಡು ಬರುತ್ತಾರೆ. ಸಾಮಾನ್ಯವಾಗಿ ಎರಡೂ ಮೇಳಗಳಲ್ಲಿಯೂ ಎಂಟಕ್ಕಿಂತ ಹೆಚ್ಚು ಎಷ್ಟು ಜನ ಬೇಕಾದರೂ ಇರಬಹುದು.

ಸಾಮಾನ್ಯವಾಗಿ ಭಾಗವಂತಿಕೆ ಪದಗಳಲ್ಲಿ ಬರುವ ಪ್ರತಿ ಪದ್ಯಗಳಲ್ಲಿ ನಾಲ್ಕು ಸಾಲುಗಳಿದ್ದು ಮುಮ್ಮೇಳದರು ಮೊದಲನೇ ಸಾಲನ್ನು ಹಾಡುತ್ತಾರೆ. ಮುಮ್ಮೇಳದವರು ಪ್ರತಿ ಪದ್ಯದ ಪ್ರಾರಂಭದಲ್ಲಿ 'ಹೇ' ಧ್ವನಿಗೂಡಿಸುವುದುಂಟು. ಎರಡನೇ ಸಾಲನ್ನು ಹಿಮ್ಮೇಳದನವರು ಹಾಡುತ್ತಾರೆ. ಮೂರನೇ ಸಾಲನ್ನು ಮುಮ್ಮೇಳದವರು ಹಾಡಿದ ನಂತರ ಹಿಮ್ಮೇಳದವರು ಕೂಡ ಅದೇ ಸಾಲನ್ನು ಹಾಡುತ್ತಾರೆ. ನಂತರ ನಾಲ್ಕನೇ ಸಾಲನ್ನು ಮುಮ್ಮೇಳ ಮತ್ತು ಹಿಮ್ಮೇಳದವರು ಒಟ್ಟಿಗೆ ಕೂಡಿ ಹಾಡುತ್ತಾರೆ. ಪ್ರತಿ ಪದ್ಯಕ್ಕೆ ಪಲ್ಲವಿಯನ್ನು ಹಾಡುತ್ತಾರೆ. ಆರು ಮತ್ತು ಎಂಟು ಸಾಲುಗಳ ಪದ್ಯಗಳನ್ನು ಮುಮ್ಮೇಳದವರು ಹೇಳಿದ ನಂತರ ಮುಂದಿನ ಸಾಲನ್ನು ಹಿಮ್ಮೇಳದವರು ಹಾಡುತ್ತಾರೆ. ಮುಂದಿನ ಸಾಲುಗಳನ್ನು ಅದೇ ಧಾಟಿಯಲ್ಲಿ ಹಾಡಿ, ಕೊನೆಯಿಂದ ಎರಡನೇ ಸಾಲನ್ನು ಮುಮ್ಮೇಳದವರು ಹಾಡಿದ ನಂತರ ಹಿಮ್ಮೇಳದವರು ಹಾಡುತ್ತಾರೆ. ಕೊನೆಯ ಸಾಲನ್ನು ಎರಡೂ ಮೇಳದವರು ಹಾಡಿ ಮುಮ್ಮೇಳ ಹಿಮ್ಮೇಳದವರು ಕ್ರಮವಾಗಿ ಪಲ್ಲವಿ ಮತ್ತು ಅನುಪಲ್ಲವಿಯನ್ನು ಹಾಡುತ್ತಾರೆ.

ಭಾಗವಂತಿಕೆ ಪದವನ್ನು (ಗಳನ್ನು) ಹೇಳುವಾಗ ಬಳಸುವ ವಾದ್ಯವೆಂದರೆ ತಾಳವೊಂದೆ. ಕುಣಿಯಬೇಕೆಂದು ಕಾಲಿಗೆ ಗೆಜ್ಜೆ ಪದಗಳನ್ನು ಹೇಳುವಾಗ ಮಟ್ಟಿಗೆ ತಕ್ಕಂತೆ ಭಾಗವತರು ತಾಳ ಹಾಕುತ್ತಾರೆ. ಭಾಗವತರು ಹಾಡು ಹೇಳುತ್ತಾ ಹಾಕುವ ಗತ್ತಿಗೆ ಸ್ವಲ್ಪವೂ ಹುಸಿಯದಂತೆ ಕೋಡಂಗಿ ವೇಷಧಾರಿಯೊಬ್ಬ ಕುಣಿಯುತ್ತಿರುತ್ತಾನೆ. ಕೋಡಂಗಿಯ ಜೊತೆ ಹುಡುಗರು ಕುಣಿಯುತ್ತಿರುತ್ತಾರೆ.

ಕೋಡಂಗಿಯ ವೇಷ ವಿಶಿಷ್ಟವಾದದ್ದು. ಕೋಡಂಗಿ ಪಾಯಿಜಾಮು ಅಥವಾ ದೊಗಳೆ ಪ್ಯಾಂಟನ್ನು ಸೊಂಟದಿಂದ ಕೆಳಗೆ ಧರಿಸಿರುತ್ತಾನೆ. ಅದರ ಮೇಲೆ ನಿಲುವಂಗಿ ಉಟ್ಟು ಎದ್ದು ಕಾಣುವಂತೆ ನಿಲುವಂಗಿ ಅಥವಾ ಶರ್ಟಿನೊಳಗೆ ಬಟ್ಟೆ ತುಂಬಿರುತ್ತಾರೆ. ಕಾಲಿಗೆ ಗೆಜ್ಜೆ ಸೊಂಟಕ್ಕೆ ಗಂಟೆಯ ಸರ, ಸೆಣಬಿನಿಂದ ತಯಾರಿಸಿದ ಮೀಸೆಗಡ್ಡ ಕಟ್ಟಿರುತ್ತಾರೆ. ಮುಖಕ್ಕೆ ಅಲ್ಲಲ್ಲಿ ಕೆಂಪು ಬಿಳಿಯ ನಾಮದ ಚುಕ್ಕಿಗಳು, ಹಣೆಗೆ ವೈಷ್ಣವ ಸಂಪ್ರದಾಯದ ಗುರುತಾದ ಮೂರು ನಾಮಗಳನ್ನು ಬರೆದಿರುತ್ತಾರೆ. ತಲೆಗೆ ಬಿದಿರಿನಿಂದ ಹೆಣೆದ ಕುಲಾವಿಯನ್ನು ಹಾಕಿರುತ್ತಾರೆ. ಅದರ ತುದಿಗೆ ಗೊಂಡೆ ಹೂವಿನ

ಅಲಂಕಾರ ಮಾಡಿರುತ್ತಾರೆ. ಕುಲಾವಿ ಶಂಖುವಿನ ಆಕಾರದಂತೆ ಇರುತ್ತದೆ. ಕುಲಾವಿಗೂ ಮೂರು ನಾಮಗಳನ್ನು ಬರೆದಿದ್ದು ಅದರ ತುದಿಗೆ ಬೇವಿನ ಸೊಪ್ಪನ್ನು ಸಿಕ್ಕಿಸಿರುತ್ತಾರೆ. ಕೈಯಲ್ಲಿ ಒಂದು ಊರುಗೋಲು, ಬಲಗೈಯಲ್ಲಿ ಸಣ್ಣಗೆ ಸುತ್ತಿದ ಜಿಂಕೆಯ ಚರ್ಮವಿರುತ್ತದೆ. ಕೆಲವು ಕಡೆ ಊರುಗೋಲಿನ ಜೊತೆಗೆ ಬಿಲ್ಲನ್ನು ಹಿಡಿಯುವುದು ರೂಢಿಯಲ್ಲಿದೆ. ಊರಾಡಲು ಹೊರಟ ಇತರ ಭಾಗವಂತಿಕೆ ಮೇಳದವರ ವೇಷಭೂಷಣ ಇಂತಹವೇ ಇರಬೇಕೆಂದಿಲ್ಲ. ಸಾಮಾನ್ಯವಾಗಿ ತಂಡದವರೆಲ್ಲರೂ ಮೂರು ನಾಮಗಳನ್ನು ಧರಿಸಿರುತ್ತಾರೆ. ಇವರು ಪೇಟ, ಕಾಸೆ ಕಟ್ಟಿರುತ್ತಾರೆ. ಇತ್ತೀಚೆಗೆ ವೇಷಭೂಷಣಗಳಲ್ಲಿ ಏಕತೆ ಎಲ್ಲಿಯೂ ಕಂಡುಬರುವುದಿಲ್ಲ. ಚಪ್ಪಲಿ ಹಾಕುವುದು ನಿಷಿದ್ಧವಾಗಿರುತ್ತದೆ.

ಸಾಮಾನ್ಯವಾಗಿ ದೀವಳಿಗೆ ದಂಡು ಊರಾಡಲು ಹೋಗುವುದು ದೀವಳಿಗೆಗೆ ಎರಡು ವಾರ ಮುಂಚೆ. ಅಂದರೆ 3, 5, 9, 13, 15 ಹೀಗೆ ಬೆಸಸಂಖ್ಯೆ ಬರುವ ದಿನಗಳವರೆಗೆ ಹೋಗುತ್ತಿದ್ದರು. ಆದರೆ ಈಗ ಅದು ಒಂದೆರಡು ದಿನಗಳಿಗೆ ಇಳಿದಿದೆ.

ದೀವಳಿಗೆ ಸೇರಿದಂತೆ ಭಾಗವಂತಿಕೆ ಮೇಳ ಹೊರಡುವ ಮುನ್ನ ಸೂತಕ ಬಂದಲ್ಲಿ ಹೊರಡುವುದನ್ನು ಮುಂದೂಡುತ್ತಾರೆ. ಸೂತಕ ಕಳೆದ ನಂತರ ಶುಭ ದಿನವನ್ನು ನೋಡಿ ಊರಾಡಲು ಹೊರಡುತ್ತಾರೆ. ಯಾರಾದರೂ ಮರಣ ಹೊಂದಿದರೆ ಮಾತ್ರ ಊರಾಡಲು ಹೋಗುವುದನ್ನು ಮುಂದೂಡುತ್ತಾರೆ. ಮೈ ನೆರೆದರೆ ಅಥವಾ ಋತುಮತಿಯರಾದರೆ ಇವು ಲೆಕ್ಕಕ್ಕೆ ಬರುವುದಿಲ್ಲ. ಇಂತಹ ಸಮಯದಲ್ಲಿ ಸೂತಕದ ಮನೆಯವರು ಮಾತ್ರ ದಂಡಿನಲ್ಲಿ ಭಾಗವಹಿಸುವಂತಿಲ್ಲ. ಭಾಗವಹಿಸಲೇ ಬೇಕಾದಲ್ಲಿ ಆ ವ್ಯಕ್ತಿ ಅವರ ಮನೆಯಲ್ಲಿ ಮಲಗುವಂತಿಲ್ಲ. ಅವನು ದೇವರ ಗುಡಿಯಲ್ಲಿ ಮಲಗಬೇಕು. ಊರಾಡಲು ಹೋಗುವಾಗ ನಗಾರಿಗಳನ್ನು ಬಸವನ ಮೇಲೆ ಹೇರಿ ಬಡಿದುಕೊಂಡು ಹೋಗಲು ಬಸವನನ್ನು ಸಹಾಯಕವಾಗಿ ಬಳಸಿಕೊಳ್ಳುತ್ತಾರೆ. ಊರಾಡಿ ತಂದ ಅಕ್ಕಿ ಪಡಿಯನ್ನು ಕೆಲವು ದಿನಗಳ ನಂತರ ಆಚರಿಸುವ ಒಂದು ವಿಶೇಷ ಉತ್ಸವದಲ್ಲಿ ಬಳಸಿಕೊಳ್ಳಲಾಗುವುದು. ಆ ಸಂದರ್ಭದಲ್ಲಿ ಊರಿನಲ್ಲಿಯೂ ದವಸ ಧಾನ್ಯಗಳನ್ನು ಎತ್ತಿಕೊಂಡು ಒಂದೆಡೆ ಕಲೆತು ಅಡಿಗೆ ಮಾಡಿ ಇಷ್ಟದೈವಕ್ಕೆ 'ಎಡೆ' ಹಾಕುತ್ತಾರೆ. ಇದನ್ನು 'ಪರ' ಎಂದು ಕರೆಯುತ್ತಾರೆ. ಈ ಸಂಪ್ರದಾಯದಲ್ಲಿ ಪರವನ್ನು ಎರಡು ರೀತಿಯಲ್ಲಿ ಆಚರಿಸುತ್ತಾರೆ. ಒಂದು "ಚೊಕ್ಕ ಭೋಜನ" ಪರ ಮತ್ತೊಂದು ಮಾಂಸದ ಪರ. ಕೆಲವು ಕಡೆ ಮಾಂಸದ ಪರ ನಿಷಿದ್ಧ.

ಈ ಪರವನ್ನು ಮಾಡುವಾಗ ಕೆಲವು ನಿಷಿದ್ಧಗಳುಂಟು. ಯಾವ ದೋಷಗಳೂ ಆಗುವಂತಿಲ್ಲ. ಕಡಿದ ಮರಿಯ ರಕ್ತವನ್ನು ಕಾಲಿನಲ್ಲಿ ತುಳಿಯುವಂತಿಲ್ಲ, ನಾಯಿಗಳು ತಿನ್ನುವಂತಿಲ್ಲ, ಅದರ ಚರ್ಮವನ್ನು ಎಡೆ ಹಾಕುವವರೆಗೂ ಮಾರುವಂತಿಲ್ಲ. ಈಗ ಮಾಂಸದ ಪರವನ್ನು ಆಚರಿಸುವುದು ಕಡಿಮೆಯಾಗಿದೆ. ಐದಾರು ವರ್ಷಗಳಿಗೊಮ್ಮೆ

ಆಚರಿಸುತ್ತಾರೆ. ಕೆಲವು ಊರುಗಳಲ್ಲಿ ಪ್ರತಿ ವರ್ಷವೂ ಚೊಕ್ಕಭೋಜನ ಪರವು ನಡೆಯುತ್ತಿರುತ್ತದೆ. ಪರವನ್ನು ಕಾರಣಾಂತರಗಳಿಂದ ಎರಡು–ಮೂರು ವರ್ಷಗಳಿಗೆ ಆಚರಿಸಿದರೆ ಅಂತಹ ಊರಿನವರು ಪ್ರತಿವರ್ಷ ಊರಾಡಿ ಸಂಗ್ರಹಿಸಿದ 'ಅಕ್ಕಿಪಡಿ'ಯನ್ನು ಹರಾಜು ಮಾಡಿ ಬಂದ ಹಣವನ್ನು ಊರೊಟ್ಟಿನ ಹಣಕ್ಕೆ ಸೇರಿಸುತ್ತಾರೆ.

ಭಾಗವಂತಿಕೆ ಪದಗಳು ಬಹಳ ಪ್ರಾಚೀನವಾದವುಗಳು. ಅವುಗಳ ಪ್ರಾಚೀನತೆಯ ಬಗ್ಗೆ ಅನೇಕ ದಂತಕತೆಗಳಿದ್ದು ಅವು ಗಮನಾರ್ಹವಾದವುಗಳಾಗಿವೆ. ಭಾಗವಂತಿಕೆಯ ವೈಶಿಷ್ಟ್ಯವನ್ನು ಗುರುತಿಸಿದ ಸಿ. ಹಯವದನರಾವ್‌ರವರು "ಶೂದ್ರರಿಗಾಗಿ ತಿರುಮಲ ರಾಯನಿಂದ ರಚಿತವಾದವು ಭಾಗವಂತಿಕೆ ಪದಗಳು"—ಎಂಬ ವಿಷಯ ತಿಳಿಸುತ್ತಾರೆ. ಇದು ಯಾವ ಆಧಾರದ ಮೇಲೆ ನಿರ್ಣಯಿಸಿದ್ದಾರೆ ಎಂಬುದು ಖಚಿತವಾಗಿ ತಿಳಿಯುವುದಿಲ್ಲ. ಮತ್ತೆ ಕೆಲವರುಗಳಿಂದ ಕರ್ನಾಟಕವನ್ನಾಳುತ್ತಿದ್ದ ಹೊಯ್ಸಳ ಅರಸರ ಕಾಲದಲ್ಲಿ ರಾಮಾನುಜರು ರಚಿಸಿದರೆಂದು ತಿಳಿದುಬರುತ್ತದೆ.

ಭಾಗವಂತಿಕೆ ಪದಗಳ ಬಗ್ಗೆ (ರಚನೆಯ ಬಗ್ಗೆ) ಎಷ್ಟು ಜಿಜ್ಞಾಸೆಯಿದ್ದರೂ ಒಟ್ಟಿನಲ್ಲಿ ವೈಷ್ಣವ ಸಂಪ್ರದಾಯದ ಭಾಗವಾದ ಭಾಗವಂತಿಕೆ ಸಂಪ್ರದಾಯ ವೈಷ್ಣವ ಹಿನ್ನಲೆಯಲ್ಲಿ ಹುಟ್ಟಿತೆನ್ನಬಹುದು. ಇದನ್ನು ನೋಡಿದರೆ 800–900 ವರ್ಷಗಳ ಪ್ರಾಚೀನತೆಯನ್ನು ಭಾಗವಂತಿಕೆ ಹೊಂದಿದೆ ಎಂದು ಹೇಳಬಹುದು.

ನಾವು ಇವುಗಳೆಲ್ಲವನ್ನೂ ನೋಡಿದಾಗ ಭಾಗವಂತಿಕೆ ಸಂಪ್ರದಾಯ ಸ್ವಲ್ಪ ಮಟ್ಟಿಗೆ ಮಲೆನಾಡಿನ 'ಅಂಟಿಕೆಪಂಟಿಕೆ' ಸಂಪ್ರದಾಯವನ್ನು ಹೋಲುತ್ತದೆ. ಆದರೆ ದೀಪ ನೀಡುವ ಪದ್ಧತಿ ಇಲ್ಲಿಲ್ಲ. ಅಲ್ಲಿನ ಸಾಹಿತ್ಯಕ್ಕೂ ಇಲ್ಲಿನ ಸಾಹಿತ್ಯಕ್ಕೂ ಯಾವ ಸಂಬಂಧವೂ ಇಲ್ಲ. ಅದು ಶುದ್ಧ ಜನಪದ ಸಂಪ್ರದಾಯ. ಇಲ್ಲಿನದು ಶಿಷ್ಟ ಹಾಗೂ ಜನಪದಗಳ ನಡುವಿನ ಸಮ್ಮಿಶ್ರಣ ಸಂಪ್ರದಾಯ. ಇದರ ಬಗ್ಗೆ ಹೆಚ್ಚಿನ ಮಾಹಿತಿ ದೊರೆತಿಲ್ಲ.

ಭಾಗವಂತಿಕೆ ಸಾಹಿತ್ಯದ ಸಂಗ್ರಹ ಮತ್ತು ಅಧ್ಯಯನದ ಬಗ್ಗೆ ಬಹಳಷ್ಟು ನಡೆಯಬೇಕಾಗಿದ್ದು, ಈಗ ಸ್ವಲ್ಪ ಮಟ್ಟಿಗೆ ನಾಗಮಂಗಲ, ಚೆನ್ನರಾಯಪಟ್ಟಣದ ಸುತ್ತ ಮುತ್ತಲ ಸಂಗ್ರಹಕಾರ್ಯ ನಡೆದಿದ್ದು ಇನ್ನೂ ಹೆಚ್ಚಿನ ಕೆಲಸ ನಡೆಯಬೇಕಾಗಿದೆ. ಬೆಂಗಳೂರು ಜಿಲ್ಲೆಯ ಕನಕಪುರ, ಚನ್ನಪಟ್ಟಣ, ರಾಮನಗರ ಇನ್ನೂ ಮುಂತಾದ ತಾಲ್ಲೂಕುಗಳ ಸುತ್ತಮುತ್ತಲ ಪ್ರದೇಶಗಳಲ್ಲಿ ಭಾಗವಂತಿಕೆ ಸಂಪ್ರದಾಯ ಕಂಡು ಬಂದು ಇಲ್ಲಿಯವರೆವಿಗೂ ಭಾಗವಂತಿಕೆಗೆ ಸಂಬಂಧಿಸಿದಂತೆ ಯಾವ ಕಾರ್ಯವೂ ನಡೆಯದೆ ಇರುವುದು ಗಮನಾರ್ಹ ಸಂಗತಿ.

# ಅದ್ಭುತ ನಾಡಿಗ್ರಂಥಗಳು

---

ಜಿ. ವಿ. ಜಯಾರಾಜಶೇಖರ್

ನಮ್ಮ ಹತ್ತಿರದ ಬಂಧುಗಳೊಬ್ಬರ ಮನೆಗೆ ಹೋಗಬೇಕಿತ್ತು. ಅವರ ಮನೆಯಲ್ಲಿ ಉಪಯೋಗಿಸದೆ ಇಟ್ಟಿದ್ದ ವೀಣೆಯನ್ನು ನನ್ನ ಚಿಕ್ಕಮ್ಮನ ಮಗಳಿಗಾಗಿ ಕೊಂಡಿದ್ದೆ. ಅದರ ಬಾಬ್ತು ಅವರಿಗೆ ಹಣ ಕೊಡಬೇಕಿತ್ತು. ನನ್ನ ನಾಲ್ಕು ವರ್ಷ ಪ್ರಾಯದ ಚಿಕ್ಕ ಮಗಳನ್ನು ಕರೆದುಕೊಂಡು ಅವರ ಮನೆಗೆ ಹೋಗಿದ್ದೆ.

ತುಂಬಾ ಅಪರೂಪಕ್ಕೆ ಅವರ ಮನೆಗೆ ಹೋಗಿದ್ದೆನೆಂದು ಅವರು ಬಹುವಾಗಿ ಆದರಿಸಿದರು. ಅವರ ಹತ್ತಿರ 10 ನಿಮಿಷ ಮಾತನಾಡಿ ಆದ ಮೇಲೆ ನಾನು ಹೋದ ಕೆಲಸ ಮುಗಿಯಿತು. ಎಷ್ಟು ಬೇಡವೆಂದರೂ ಕೇಳದೆ ಅವರು ಒಳಗೆ ಹೋಗಿ ನನಗಾಗಿ ತಿಂಡಿ ತಯಾರಿಸಲು ಪ್ರಾರಂಭಿಸಿದರು.

ನಾನು ಡ್ರಾಯಿಂಗ್ ರೂಂನಲ್ಲಿ ಕುಳಿತು ಅಲ್ಲಿದ್ದ ಪತ್ರಿಕೆಗಳನ್ನು ನೋಡುತ್ತಿದ್ದೆ. ಏನೋ ಒಂದು ಥರಾ ಆಗಲು ಷುರುವಾಯ್ತು. ಸುಸ್ತು, ಸಂಕಟ, ಗಾಳಿಯಲ್ಲಿ ತೇಲುತ್ತಾ ಎಲ್ಲಿಗೋ ಹೋಗುತ್ತೇನೇನೋ ಎನ್ನುವಂತಾಗಿ, ತಲೆ "ಧಿಂ" ಎನ್ನುವಂತಾಯ್ತು. ಕುಳಿತಿರಲು ಆಗದೆ ಆ ರೂಮಿನಲ್ಲೇ ಸುತ್ತಾಡಿದೆ. ಪೇಪರ್‌ನಿಂದ ಗಾಳಿ ಬೀಸಿಕೊಂಡೆ. ಉಹುಂ, ಸರಿ ಹೋಗಲೇ ಇಲ್ಲ.

ನನಗೋ ಅನ್ನಲಾರೆ ಅನುಭವಿಸಲಾರೆ ಎಂಬಂತಾಗಿತ್ತು. ನನಗಾಗುತ್ತಿರುವ ಸಂಕಟವಲ್ಲಿ ಎಲ್ಲಿ ಇವರ ಮನೆಯಲ್ಲಿಯೇ ಈಗಲೇ ಸತ್ತು ಹೋಗುತ್ತೇನೋ ಎನ್ನಿಸುತ್ತಿತ್ತು. ಸೇರದಿದ್ದರೂ ಸೇರಿಸಿಕೊಂಡು ಸ್ವಲ್ಪ ತಿಂಡಿ ತಿಂದು, ಕೊಟ್ಟ ಹಾಲು ಕುಡಿದು "ಹೋಗಿ ಬರುತ್ತೇನೆಂದು" ಹೇಳಿ, ತತ್‌ಕ್ಷಣ ಅವರ ಮನೆ ಬಿಟ್ಟು ಹೊರಟೆ.

ಹೋದವಳೇ ಮಂಚದ ಮೇಲುರುಳಿ ರಾಜ ನನಗೇನೋ ಆಗಿದೆ ನೋಡೋ ! ಹೇಗ್ಹೇಗೋ ಆಗುತ್ತಿದೆ. ನಾನು ಸತ್ತು ಹೋಗುತ್ತಿದ್ದೇನೆ ಇಷ್ಟು ಹೊತ್ತಿನಲ್ಲಿ ನಿಮ್ಮ ಭಾವ ಮನೆಯಲ್ಲಿರುವುದಿಲ್ಲ. ಸ್ಯಾನಿಟೋರಿಯಂಗೆ (ಅಲ್ಲಿ ಅವರು ಮೆಡಿಕಲ್ ಸೂಪರಿ

ನ್‌ಟೆನ್‌ಡೆಂಟ್) ಫೋನ್ ಮಾಡಿ ಮನೆಗೆ ಬರಲು ಹೇಳು. ನನ್ನನ್ನು ನಮ್ಮ ಮನೆಗೆ ಕರೆದುಕೊಂಡು ಹೋಗು ನಮ್ಮ ಮನೆಯಲ್ಲೇ ಸಾಯುತ್ತೇನೆ" ಎಂದು ಅಳಲು ಪ್ರಾರಂಭಿಸಿದೆ. ಅವನು ನನ್ನ ಬಳಿ ಬಂದ ನಾಡಿ ಹಿಡಿದ, ಬಿ.ಪಿ. ನೋಡಿದ. "ಏನೂ ಆಗಿಲ್ಲ, ಚೆನ್ನಾಗಿಯೇ ಇದ್ದೀಯ, ಯಾಕೆ ಹೆದರುತ್ತೀಯಾ ಸುಮ್ಮನೆ" ಎಂದು ಧೈರ್ಯ ಹೇಳಿ ಏನೋ ಒಂದು ಮಾತ್ರೆ ನುಂಗಿಸಿದ.

ನನಗಾಗ ಸುಮಾರು 31–32ರ ವಯಸ್ಸು. ಜೀವನದಲ್ಲಿ ನೆಮ್ಮದಿಯಾಗಿರಲು ಒಬ್ಬ ಹೆಣ್ಣು ಮಗಳಿಗೆ ಏನು ಬೇಕೋ ಅವೆಲ್ಲವೂ ದೇವರ ದಯದಿಂದ ಇದ್ದುವು. ತಂದೆ, ತಾಯಿಗಳಿಗೆ ನಾನೆ ಹಿರಿಯ ಮಗಳು. ಧನ, ಧಾನ್ಯ, ಐಶ್ವರ್ಯದಿಂದ ನಂದಗೋಕುಲ ದಂತಹ ಮನೆ. ಅತಿ ಮಮತೆಯಿಂದ ನೋಡುವ ತಂದೆ ತಾಯಿಗಳು–ಅದರಲ್ಲೂ ಏನು ಬೇಕೆಂದರೆ ಅದನ್ನು ನಡೆಸುವ ಹಿರಿಯ ಮನದ ತಂದೆ, ಸುಸ್ಥಿತಿಯಲ್ಲಿರುವ ತಮ್ಮಂದಿರು, ತಂಗಿಯರು. ಮೆಚ್ಚಿ ಮದುವೆಯಾದ ನನ್ನನ್ನು ಪ್ರೀತಿಸುವ, ನಾನು ಪ್ರೀತಿಸುವ ವಿದ್ಯಾವಂತ, ಗುಣವಂತನಾದ ಆದರ್ಶ ಪತಿ. ಆತನಿಗೆ ಒಳ್ಳೆಯ ಅಧಿಕಾರ, ಅಂತಸ್ತು, ಮನೆತನದ ಹೆಗ್ಗಳಿಕೆ, ಇರಲು ಸೊಗಸಾದ ಸ್ವಂತಮನೆ, ಓಡಾಡಲು ಕಾರು, ಹೆಣ್ಣು–ಗಂಡು ಮಕ್ಕಳು, ಒಳ್ಳೆಯ ಆರೋಗ್ಯ—ಇದಕ್ಕಿಂತ ಇನ್ನೇನು ಬೇಕು ?

ಇಂತಹ ರೀತಿ ಇದ್ದ ನನಗೆ ಕೆಟ್ಟಕಾಲ ಪ್ರಾರಂಭವಾಯ್ತು. ನಮ್ಮ ಅತ್ತೆಯ ಮನೆಯಲ್ಲಿ ನೋಡಿದ ಎರಡು ಅಸಹಜ ಸಾವು—ಅದರಲ್ಲಿ ಒಂದು ಸಾವಿನ ಘಟನೆ ಯನ್ನು ಘಟಿಸುವ ಮೊದಲೇ ನನ್ನ ಕನಸಿನಲ್ಲಿ ಕಂಡದ್ದು—ಅದೇ ಸಮಯದಲ್ಲಿ ನಮ್ಮ ಯಜಮಾನರು ಊರಿನಲ್ಲಿಲ್ಲದೆ ನಾನು ಚಿಕ್ಕ ಮಕ್ಕಳೊಂದಿಗೆ ಒಂಟಿಯಾಗಿದ್ದುದು— ಬಹುಶಃ ಇಂತಹ ಭಯಕ್ಕೆ ಕಾರಣಗಳಾಗಿರಬೇಕು.

ನಮ್ಮವರು S.D.S. ಸ್ಯಾನಿಟೋರಿಯಂನ ಸೂಪರಿಂಟೆಂಡೆಂಟ್ ಆಗಿದ್ದರು. ಆಸ್ಪತ್ರೆಗೆ ಕರೆದುಕೊಂಡು ಹೋಗಿ ಕೆಲವು X–Ray ಫೋಟೋಗಳನ್ನು ತೆಗೆದು (ಈಗಿನಂತೆ ಸ್ಕ್ಯಾನಿಂಗ್ ಇರಲಿಲ್ಲ) ಆಗಲೇ wet-filmತರಿಸಿ, ನನ್ನೆದುರಿಗೇ ನೋಡಿ, "ಯಾವ ಕಾಹಿಲೆಯೂ ಇಲ್ಲ, ಈಗಲಾದರೂ ಸಮಾಧಾನವಾಯ್ತಾ" ಎಂದು ಹೇಳಿ, ಮನೆಗೆ ಕರೆದುಕೊಂಡು ಬಂದರು. ನನಗೆ ಸಮಾಧಾನವಾಯ್ತೆ ? ಉಹುಂ !

ಹೀಗೇ ಸುಮಾರು 2 ವರ್ಷಗಳ ಕಾಲ ಕಳೆದುಹೋಯ್ತು. ಗ್ರಹಗಳ ಕ್ರೂರ ದೃಷ್ಟಿ ಹೋಗಿ ನನಗೆ ಒಳ್ಳೆಯ ಕಾಲ ಬಂತೆಂದು ಕಾಣುತ್ತದೆ. ನಾಟಕರಂಗ ಮತ್ತು ಚಲನಚಿತ್ರ ರಂಗದ ಸುವಿಖ್ಯಾತ ತಾರೆಯೂ, ಪರೋಪಕಾರ ಬುದ್ಧಿಯುಳ್ಳ ವರೂ, ಅತ್ಯಂತ ಸಹೃದಯಿಯೂ ಆಗಿದ್ದ ಶ್ರೀಮತಿ ಬಿ. ಜಯಮ್ಮನವರನ್ನು ಅರಿಯದವರಾರು ? ಶ್ರೀಮಾನ್ ಜಿ. ಹೆಚ್. ವೀರಣ್ಣನವರೂ ನಮ್ಮ ತಂದೆಯ ಪೂರ್ವಜರ ಊರಿನವರು (ಗುಬ್ಬಿ) ಈ ಸತಿ, ಪತಿಗಳಿಬ್ಬರೂ ನಮ್ಮ ಕೌರಿನ ಪರಮಾಪ್ತರು, ಹಿತೈಷಿಗಳು.

ಒಂದು ದಿನ ಜಯಮ್ಮನವರು ನಮ್ಮ ಮನೆಗೆ ಬಂದಿದ್ದಾಗ ನನಗೆ ಮೈಸರಿ ಇಲ್ಲದ್ದು ತಿಳಿಯಿತು. ತಮಗೂ ಬಹಳ ಹಿಂದೆ ಇದೇ ರೀತಿ ತೊಂದರೆ ಆಗಿತ್ತೆಂದೂ ನಾಡಿಗ್ರಂಥ ಓದಿಸಿ, ಅವರಲ್ಲಿ ಬಂದ ಚಿಕಿತ್ಸೆಯನ್ನು ಮಾಡಿಕೊಂಡ ಮೇಲೆ ಸರಿ ಹೋಯಿತೆಂದೂ ತಿಳಿಸಿದರು "ನೀವೂ ಅದೇ ರೀತಿ ಮಾಡಿ, ಖಂಡಿತ ವಾಸಿಯಾಗುತ್ತೆ" ಎಂದು ಹೇಳಿದರು. ವರ್ಷಗಟ್ಟಲೆ ತೊಂದರೆ ಪಡುತ್ತಿದ್ದರೂ ತಮಗೆ ತಿಳಿಸದಿದ್ದುದಕ್ಕೆ ಆಕ್ಷೇಪಿಸಿದರು.

ಇಲ್ಲಿ ಇನ್ನೊಂದು ವಿಷಯ ಹೇಳಬಯಸುತ್ತೇನೆ. ನಮ್ಮ ಬಳಗದವರೊಬ್ಬರ ಮಗಳಿಗೆ ಸುಮಾರು 5–6 ತಿಂಗಳ ಮಗುವಾಗಿದ್ದಾಗ ಡಿಫ್ತೀರಿಯಾ ಬಂದಿತ್ತು. ಆಗ ಡಾಕ್ಟರೆ ಕೂಡಲೆ ರೋಗವನ್ನು ಕಂಡು ಹಿಡಿಯಲಿಲ್ಲ. ಅದು ಪ್ರಾಣಾಪಾಯಕರ ಕೆಟ್ಟ ಕಾಹಿಲೆಯಾದರೂ ಸುದೈವದಿಂದ ಮಗು ಬದುಕಿ ಉಳಿದಿತ್ತು. ಡಾಕ್ಟರ್ ಕಾಹಿಲೆ ಯನ್ನು ಗುರುತಿಸುವ ವೇಳೆಗೆ ಅದು ಗಂಟಲಿನಿಂದ ಮೂಗಿಗೆ ಹರಡಿ, ಮೂಗಿನೊಳಗೆಲ್ಲಾ ಕೊಳೆತು, ಕೆಟ್ಟ ವಾಸನೆ ಬರತೊಡಗಿತು. ಹೆಸರಾಂತ E.N.T. ಸರ್ಜನ್ಸ್ ಎಲ್ಲಾ ನೋಡಿ "ಇದು ಹಳೆ ಕಾಹಿಲೆ ಆಗಿಹೋಗಿದೆ. (Chronic Desease) ಗುಣಪಡಿಸಲು ಆಗದು" ಎಂದೇ ಹೇಳಿದರು.

ಆಗ ಜಯಮ್ಮನವರ ಮನೆಯಲ್ಲಿ ನಾಡಿ ಚಿಕಿತ್ಸೆ ಮಾಡುವುದನ್ನು ನೋಡಿದ್ದ ನನಗೆ ಈ ಮಗುವಿಗೂ ಏಕೆ ಚಿಕಿತ್ಸೆ ಮಾಡಿಸಬಾರದು. ಒಳ್ಳೆಯದಾಗುವಂತಿದ್ದರೆ ಆಗುತ್ತೆ. ಕೆಟ್ಟ ಪರಿಣಾಮಗಳಂತೂ ಆಗುವುದಿಲ್ಲವಲ್ಲ ಎನ್ನಿಸಿತು. ಜಯಮ್ಮನವರು ಬೇಕಾದ ವಿವರಗಳನ್ನು ತುಂಬಾ ಆಸ್ಥೆಯಿಂದ ಒದಗಿಸಿದರು. ಈ ವಿಷಯಗಳಲ್ಲಿ ಅಷ್ಟು ಆಸಕ್ತಿ, ನಂಬಿಕೆ ಇಲ್ಲದಿದ್ದ ಮಗುವಿನ ತಂದೆ, ತಾಯಿಯರನ್ನು ಒಪ್ಪಿಸಿ, ಆ ತಾಯಿಯನ್ನು ನಮ್ಮ ಕಾರಿನಲ್ಲಿ ಮದ್ರಾಸ್‌ಗೆ ಕರೆದೊಯ್ದು, ನಾಡಿಗ್ರಂಥವನ್ನು ಓದಿಸಿ, ಚಿಕಿತ್ಸಾ ಕ್ರಮವನ್ನು ಬರೆಸಿಕೊಂಡು ಬಂದು, ಅದರಂತೆ ಚಿಕಿತ್ಸೆ ಮಾಡಿದ ಮೇಲೆ—ಆಗ ಅವಳ ವಯಸ್ಸು ಸುಮಾರು 7–8 ವರ್ಷ ಇರಬಹುದು—ಆ ಕಾಹಿಲೆ ಸಂಪೂರ್ಣ ಗುಣ ಆಯ್ತು. ಅವಳಿಗೆ ಮೊದಲು ಚಿಕಿತ್ಸೆ ಮಾಡುತ್ತಿದ್ದ ಡಾಕ್ಟರು ತುಂಬಾ ಆಶ್ಚರ್ಯ, ಆನಂದ ಪಟ್ಟರು. ಸಿಕ್ಕಿದಾಗೊಮ್ಮೆ "ಏನು ಪವಾಡ ಮಾಡಿದೆ" ಎನ್ನುತ್ತಿರುತ್ತಾರೆ !

ಹೀಗಾಗಿ ನಾಡಿಗ್ರಂಥದ ವಿಷಯ ನನಗೆ ಅರಿಯದ್ದಲ್ಲ. ಅವರ ಚಿಕಿತ್ಸೆ ಮಾಡಿ ಕೊಳ್ಳಲು ಏನೂ ರೋಗವಿರಲಿಲ್ಲ. ಒಟ್ಟಿನಲ್ಲಿ ಈ ವಿಷಯ ತಿಳಿದಿದ್ದೂ, ಹೆಸರಾಂತ ವೈದ್ಯರ ಪತ್ನಿಯಾಗಿದ್ದೂ ಈ ರೀತಿ ನರಳುವುದೂ ನನ್ನ ಹಣೆಯಲ್ಲಿ ಬರೆದಿತ್ತು. ಈಗ ಜಯಮ್ಮನವರು ಹೀಗೆ ಹೇಳಿದ ಮೇಲೆ ಧೈರ್ಯ ಬಂತು. ನನ್ನ ಹಾಗೇ ಜೀರಿಯವರಿಗೂ ಆಗಿತ್ತು ; ಅವರಿಗೆ ವಾಸಿಯಾಗಿದೆ. ನನಗೂ ವಾಸಿಯಾಗ ಬಹುದು ಎಂಬ ಆಸೆ ಉದಿಸಿತು.

ಅನಂತರ ಜಯಮ್ಮನವರನ್ನು ಕರೆದುಕೊಂಡು ಮದ್ರಾಸ್‌ಗೆ ಹೋಗಿ ನಾಡಿಗ್ರಂಥ ಓದಿಸಿದೆವು. ಅಲ್ಲಿ ಚಂದ್ರಶೇಖರ್‌ನಾಡಾರ್ ಎಂಬುವರ ಮನೆಯಲ್ಲಿ ನಾಡಿಗ್ರಂಥ ಗಳಿದ್ದುವು. ಅವರು ತುಂಬಾ ನಿಸ್ಪೃಹತೆಯಿಂದ, ತಮ್ಮತನವನ್ನೇನೂ ತೋರದೆ ಗ್ರಂಥದಲ್ಲಿ ಇದ್ದುದನ್ನು ಮಾತ್ರ ಪ್ರಾಮಾಣಿಕತೆಯಿಂದ ಓದುತ್ತಿದ್ದರು. ಇತ್ತೀಚೆಗೆ ಅವರ ದಾಯಾದಿಗಳು ಹಿರಿಯರ ಈ ಆಸ್ತಿಯಲ್ಲಿ ತಮಗೂ ಭಾಗ ಬರಬೇಕೆಂದು ಗಲಾಟೆ ಎಬ್ಬಿಸಿ, ಅನೇಕ ಗ್ರಂಥಗಳನ್ನು ತಮ್ಮೊಂದಿಗೆ ತೆಗೆದುಕೊಂಡು ಹೋಗಿ ಅವುಗಳನ್ನು ನಿರುಪಯೋಗವಾಗುವಂತೆ ಒಂದುಕಡೆ ಹಾಕಿದ್ದಾರೆಂದು ಕೇಳಿದೆ. ತಮಗೆ ಉಪಯೋಗಕ್ಕೆ ಬಾರದಿದ್ದರೂ ಪರವಾಗಿಲ್ಲ ಬೇರೆಯವರಿಗೆ ಅದರಿಂದ ಅನುಕೂಲವಾಗಬಾರದು ಹೀಗಿರುತ್ತದೆ ದಾಯಾದಿ ಮಾತ್ಸರ್ಯ !

ತಾಳೆಗರಿಯಲ್ಲಿ ಸಾಸಿವೆ ಕಾಳಿನ ಗಾತ್ರದ ಅಕ್ಷರಗಳನ್ನೊಳಗೊಂಡಿರುತ್ತದೆ. ಈ ನಾಡಿಗ್ರಂಥ, ತಮಿಳು ಭಾಷೆಯಲ್ಲಿ ಶ್ಲೋಕ ರೂಪದಲ್ಲಿ ಪಾರ್ವತಿ ಮತ್ತು ಸುಬ್ರಹ್ಮಣ್ಯ ಸ್ವಾಮಿಯ ಸಂವಾದ ರೂಪದಲ್ಲಿರುತ್ತದೆ. ಅದರಲ್ಲಿರುವ ನನ್ನ ಜಾತಕವನ್ನು ಹುಡುಕಿ ಅವರು ಓದಿದಾಗ ಬಂದ ವಿವರಗಳನ್ನು ನೋಡಿದರೆ ಇಂದಿಗೂ ಆಶ್ಚರ್ಯವಾಗುತ್ತದೆ. ಆ ಬರಹ ಈಗಲೂ ನನ್ನ ಬಳಿ ಇಟ್ಟುಕೊಂಡಿದ್ದೇನೆ.

ನನ್ನ ತಂದೆ, ತಾಯಿಗಳ ಹೆಸರು, ತಂದೆಯ ವೃತ್ತಿ, ನನ್ನ ಸೋದರ–ಸೋದರಿಯರ ವಿವರ, ನಾನು ಹುಟ್ಟಿದ ಊರಿನ ಹೆಸರು, ನನ್ನ ಗಂಡನ ಹೆಸರು, ವೃತ್ತಿ, ನನಗೆ ಐದು ಜನ ಮಕ್ಕಳಲ್ಲಿ ಮೂರು ಗಂಡು, ಎರಡು ಹೆಣ್ಣು ಮಕ್ಕಳು ಎಂದು ಕರಾರುವಕ್ಕಾಗಿ ವಿವರವಾಗಿ ಓದಿದರು.

ಗ್ರಂಥದಲ್ಲಿ ಎಷ್ಟೋ ಭಾಗಗಳಿರುತ್ತವೆ. ನಮಗೆ ಬೇಕಾದ ಭಾಗ ಓದಿಸಬಹುದು. ಅವಕ್ಕೆ ಕಾಂಡಗಳೆಂದು ಹೆಸರು. ಕರ್ಮಕಾಂಡದ ಪ್ರಕಾರ ನನಗೆ ಆರು ತಿಂಗಳು ವ್ರತ ಮಾಡಬೇಕೆಂದು ಆದೇಶವಾಯ್ತು. ವ್ರತ ಎಂದರೆ ವಾರದ ಏಳು ದಿನಗಳಲ್ಲಿ ಒಂದೊಂದು ದಿನವೂ ಇಂತಹ ದೇವರ ಪೂಜೆ, ಇಂತಿಂತಹದೇ ಆಹಾರ ಎಂದು ಸೂಚಿಸಿರುತ್ತಾರೆ. ವ್ಯಾಯಾಮ, ಟಬ್‌ಸ್ನಾನ ಮುಂತಾದವು ಬಂದಿರುತ್ತವೆ.

ನನಗೆ ತುಂಬಾ ಕಠಿಣವಾದ ಪಥ್ಯ ಬಂದಿತ್ತು. 2 ದಿನ ಟಮಟೊ, ನಿಂಬೆಹಣ್ಣು ಅನಾನಸ್–2 ದಿನ ನುಗ್ಗೆಸೊಪ್ಪು, ಬಸಲೆಸೊಪ್ಪು, ಅಗಸೆಸೊಪ್ಪು–1 ದಿನ ಮೂಲಂಗಿ ನೆಲ್ಲಿಕಾಯಿ–ಒಂದು ದಿನ ಹೆಸರುಬೇಳೆ, ಅವರೆಬೇಳೆ–ಶನಿವಾರ 1 ದಿನ ಒಂದು ಹೊತ್ತು ಮಾತ್ರ ಮೇಲೆ ಬಂದಿರುವ ತರಕಾರಿ, ಬೇಳೆ, ಸೊಪ್ಪು, ಹಣ್ಣುಗಳೊಂದಿಗೆ ಅನ್ನ ಊಟ ಮಾಡಬಾರದು. ಮಿಕ್ಕ 6 ದಿನಗಳು ಬರೀ ಆಯಾ ತರಕಾರಿ, ಹಣ್ಣು, ಸೊಪ್ಪುಗಳಿಂದ ಹಸಿವನ್ನು ಅಡಗಿಸಿಕೊಳ್ಳಬೇಕು. ಇದರ ಜೊತೆಗೆ ಸಿಹಿ, ಕಾರ ವರ್ಜ್ಯ ! ಸಕ್ಕರೆ ಬೆರೆಸದೆ ಅಕಾಲದಲ್ಲಿ ಸಿಗುವ ರಸಹೀನ ಹಣ್ಣುಗಳಲ್ಲಿ ಇಡೀ ದಿನ ಕಳೆಯಬೇಕು. ಮುಳುಗುವವನು ಹುಲ್ಲುಕಡ್ಡಿಗೆ ಜೋತುಬೀಳುವಂತೆ ನಾನು ಇದಕ್ಕೇ ಅಂಟಿಕೊಂಡೆ.

ಸಾಮಾನ್ಯವಾಗಿ ನಾಡಿಚಿಕಿತ್ಸೆ ಮಾಡುವವರಿಗೆಲ್ಲಾ ಕಾಫಿ, ಟೀ ಬಿಡಬೇಕೆಂದು ಬರೆದಿರುತ್ತಾರೆ. ನನಗೆ ಅವೆರಡೂ ಅಭ್ಯಾಸ ಇಲ್ಲದರಿಂದ ಏನೂ ಕಷ್ಟವೆನಿಸಲಿಲ್ಲ. ಪಾಪ ಅವುಗಳ ಚಟ ಇರುವವರಿಗೆ ಸ್ವಲ್ಪ ಕಷ್ಟವೇ.

ಇವುಗಳ ಜೊತೆಗೆ ಬಿಸಿನೀರು, ತಣ್ಣೀರು, ಟಬ್‌ಸ್ನಾನ, ವಾಕಿಂಗ್, ಬೆಳಗ್ಗೆ ಸೂರ್ಯನಮಸ್ಕಾರ ಮುಂತಾದ ವ್ಯಾಯಾಮ, ಹೆಚ್ಚು ನೀರು ಕುಡಿಯುವುದು–ಹೀಗೆ ಆರು ತಿಂಗಳು ವ್ರತ ಮಾಡುವುದು, ನಂತರ ಬೆಟ್ಟದ ಮೇಲಿರುವ ಸುಬ್ರಹ್ಮಣ್ಯಸ್ವಾಮಿಗೆ ಮೂರುದಿನ ಪೂಜೆ ಮಾಡಿಸಿ, ಮೂರು ಜನ ಬಡವರಿಗೆ ಊಟ ನೀಡಬೇಕು. ಕೊನೆಯದಾಗಿ ತಿರುಚೆಂದೂರಿಗೆ ಹೋಗಿ ಸಮುದ್ರಸ್ನಾನ ಮಾಡಬೇಕು–ಇಷ್ಟು ನನಗೆ ಬಂದ ವ್ರತದ ನಿಯಮಗಳು.

ನನಗಾಗುತ್ತಿರುವ ತೊಂದರೆಯ ಮುಂದೆ ಇವೆಲ್ಲಾ ಏನು ಮಹಾ ಎನ್ನಿಸಿತು. ಅವರೇ ಪ್ರಾರಂಭ ಮಾಡಲು ಕೊಟ್ಟ ದಿನದಿಂದ ವ್ರತ ಶುರುಮಾಡಿದೆ. ಒಂದು ತಿಂಗಳಿನಲ್ಲೇ ಸುಮಾರು 22 ಪೌಂಡು ತೂಕ ಇಳಿದುಬಿಟ್ಟೆ. ಎಲ್ಲರೂ "ಒಂದು ತಿಂಗಳಿಗೇ ಇಷ್ಟು ಇಳಿದು ಹೋದೆ, ಇನ್ನೇನಾದರೂ ಅನಾಹುತ ಆದೀತು. ಈ ಕಠಿಣ ವ್ರತವನ್ನು ಬಿಟ್ಟುಬಿಡು" ಎಂದು ಬಹಳವಾಗಿ ಹೇಳಿದರು. "ನನಗೀಗ ಬೇರೆ ಯಾವ ಮಾರ್ಗವೂ ತೋರುತ್ತಿಲ್ಲ. ಗುಣವಾದರೆ ಇದರಲ್ಲಿ ಆಗಲಿ ಇಲ್ಲದಿದ್ದರೆ ಏನಾದರೂ ಪರವಾಗಿಲ್ಲ" ಎಂದು ದೃಢ ಮನಸ್ಸಿನಿಂದ ಮುಂದುವರಿಸಿದೆ. 6 ತಿಂಗಳು ಮುಗಿಸಿದೆ !

ನರಹರಿರಾಯನ ಗುಡ್ಡದ ಮೇಲಿರುವ ಶ್ರೀ ಸುಬ್ರಹ್ಮಣ್ಯಸ್ವಾಮಿಗೆ ಮೂರು ದಿನ ಹೋಗಿ ಪೂಜೆ ಮಾಡಿಸಿ, ಕೆಲವು ಬಡಭಿಕ್ಷುಗಳಿಗೆ ಊಟವಿಕ್ಕಿದೆ.

ಈ ವ್ರತ ಮಾಡುತ್ತಾ ಮಾಡುತ್ತಾ ಕ್ರಮೇಣ ನನ್ನ ತೊಂದರೆಗಳೆಲ್ಲಾ ಸೂರ್ಯಕಿರಣ ತಾಗಿದ ಮಂಜಿನಂತೆ ಮಾಯವಾದವು. ನನ್ನ ಈ ಪುನರ್ಜನ್ಮಕ್ಕೆ ಕಾರಣರಾದ ಶ್ರೀಮತಿ ಜಯಮ್ಮನವರನ್ನು ಕರೆದುಕೊಂಡು ನಮ್ಮ ಮನೆಯವರೆಲ್ಲಾ ತಿರುಚೆಂದೂರಿಗೆ ಹೋದೆವು. ನನಗೆ ಬಂದಿದ್ದ ಕೊನೆಯ ಚಿಕಿತ್ಸೆಯಾದ ಅಲ್ಲಿಯ ಸಮುದ್ರಸ್ನಾನವನ್ನು ಮಾಡಿದೆವು. ಅಲ್ಲಿರುವ ಶ್ರೀ ಸುಬ್ರಹ್ಮಣ್ಯಸ್ವಾಮಿಗೆ ಮನಃಪೂರ್ವಕವಾಗಿ ಸೇವೆ ಸಲ್ಲಿಸಿ ಬಂದೆವು.

# ಶಂಕರಾಚಾರ್ಯರ ಕಾವ್ಯಪ್ರತಿಭೆ

ಡಾ. ಸಿ. ಪಿ. ಕೃಷ್ಣಕುಮಾರ್

ಶ್ರೀ ಶಂಕರಾಚಾರ್ಯರ ಕೃತಿಗಳಲ್ಲಿ ಕಾವ್ಯಗುಣ ಎನ್ನುವಾಗ, ಅವರ ಸ್ತೋತ್ರ ಕೃತಿಗಳನಷ್ಟೆ ಪರಿಗಣಿಸಬೇಕಾಗುತ್ತದೆ ; ವೇದಾಂತ ಗ್ರಂಥಗಳನ್ನಲ್ಲ. ಆದರೆ ಅವರ ವೇದಾಂತ ಗ್ರಂಥಗಳಲ್ಲಿ ಕಂಡುಬರುವ ಗದ್ಯ ಸರಳ ಮತ್ತು ಉಜ್ವಲವಾಗಿದ್ದು, ಬಾಣನ ಪ್ರಸಿದ್ಧ ಗದ್ಯವನ್ನು ಉಜ್ವಲತೆಯಲ್ಲಿ ಹೋಲುತ್ತದೆ ಎಂಬ ಅಭಿಪ್ರಾಯವನ್ನು ಇಲ್ಲಿ ಲಕ್ಷಿಸಬಹುದು.

ಅದ್ವೈತದ ತುತ್ತತುದಿಯನ್ನೇರಿ 'ಶಿವೋऽಹಂ' ಎಂದು ಘೋಷಿಸಿದ ಶಂಕರಾಚಾರ್ಯರು ಅಲ್ಲಿಯೆ ವಿರಮಿಸಲಿಲ್ಲ ; ಲೋಕ ಸಂಗ್ರಹಕ್ಕಾಗಿ ಕೆಳಗಿಳಿದು ಬಂದರು ; ಕರ್ಮಯೋಗ, ಕಾವ್ಯಯೋಗ ಎರಡನ್ನೂ ಮೆರೆದರು. ಆಚಾರ್ಯರದು ಅನೇಕ ಮುಖಿ ವ್ಯಕ್ತಿತ್ವ : ಅವರು ಜ್ಞಾನಿ, ಭಕ್ತ, ವೇದಾಂತಿ, ವಾದಿ ಎಲ್ಲವೂ ಹೌದು. ಅಲ್ಲದೆ ಮಹಾ ದ್ರಷ್ಟಾರರಾದ ಅವರಿಗೆ ಕವಿಪದವಿಯೂ ಸಹಜವಾಗಿಯೆ ಸಿದ್ಧಿಸಿದೆ. ಅವರ ಭಾಷ್ಯ ಗಳಲ್ಲಿ ಮತ್ತು ಪ್ರಕರಣ ಗ್ರಂಥಗಳಲ್ಲಿ ಧೀಶಕ್ತಿಯ ಪ್ರಖರತೆ, ಪ್ರಗಾಢತೆಗಳು ವ್ಯಕ್ತ ವಾಗುವಂತೆ ಅವರ ಸ್ತೋತ್ರಗಳಲ್ಲಿ ಕವಿಹೃದಯದ ಆರ್ದ್ರತೆ ವಿದಿತವಾಗುತ್ತದೆ. ಅವು ಗಳಲ್ಲಿ ಅವರು ಮನೋಜ್ಞವಾದ ಕವಿತೆಯನ್ನು ಸಾಕಷ್ಟು ಕೊಟ್ಟಿದ್ದಾರೆ. ಒಟ್ಟಿನಲ್ಲಿ ಆಚಾರ್ಯರ ಆಧ್ಯಾತ್ಮಿಕ ದರ್ಶನದಂತೆ, ಕಾವ್ಯಪ್ರತಿಭೆಯೂ ಎತ್ತರದ್ದು.

ಶಂಕರಾಚಾರ್ಯರ ಜೀವನದಲ್ಲಿ ಮತ್ತು ಕೃತಿಗಳಲ್ಲಿ ಜ್ಞಾನಮಾರ್ಗ, ಭಕ್ತಿಮಾರ್ಗ ಗಳ ಸಮನ್ವಯವಿದೆ. ಅವರು ಅದ್ವೈತ ತತ್ತ್ವದ ಮೂಲಕ ನಿರ್ಗುಣೋಪಾಸನೆ ಯನ್ನು ಪ್ರತಿಪಾದಿಸಿರುವಂತೆ, ತಮ್ಮ ಸ್ತೋತ್ರಗಳ ಮೂಲಕ ಸಗುಣೋಪಾಸನೆಯನ್ನು ಪುರಸ್ಕರಿಸಿದ್ದಾರೆ ; ಯಾವುದೇ ಸಂಕುಚಿತ ಪಂಥ ಭಾವನೆಯಿಲ್ಲದೆ ಶಿವ, ವಿಷ್ಣು, ದೇವಿ ಮುಂತಾದವರನ್ನು ಸ್ತುತಿಸಿದ್ದಾರೆ. ತಾವು ಸಂಸಾರಸ್ಥರಲ್ಲದಿದ್ದರೂ, ವಿರಕ್ತಿಯ ಮೂರ್ತಿಯಾದ ಯತಿವರೇಣ್ಯರಾದರೂ, ಆಚಾರ್ಯರು ತಮ್ಮನ್ನು ಸಂಸಾರಿಯ ಪಾತ್ರದಲ್ಲಿ

ಒಮ್ಮೊಮ್ಮೆ ಪಾಪಿಯ ಪಾತ್ರದಲ್ಲಿ ಇರಿಸಿಕೊಂಡು, ಭಗವತ್ಕೃಪೆಗಾಗಿ, ಉದ್ಧಾರಕ್ಕಾಗಿ ಆರ್ತತೆಯಿಂದ ಹಂಬಲಿಸುವ ಪರಿಯಿದೆ, ಸ್ತೋತ್ರಗಳಲ್ಲಿ. ಸಾಮಾನ್ಯರ ಪರವಾಗಿ ಅವರಿಲ್ಲಿ ಮೊರೆಯಿಡುತ್ತಿದ್ದಾರೆ, ಸಮಷ್ಟಿಯ ಭಾವಗಳಿಗೆ ವೈಯಕ್ತಿಕ ಅಭಿವ್ಯಕ್ತಿ ಕೊಡುತ್ತಿದ್ದಾರೆ ಎನ್ನಿಸುತ್ತದೆ. ಎಂತಲೇ ನಮಗೆ ಅವರ ಕಳಕಳಿಯ ಕರೆ, ಮೊರೆಗಳಲ್ಲಿ ಹೃದಯಸಂವಾದ ಸಾಧ್ಯವಾಗುತ್ತದೆ.

ಶಂಕರಾಚಾರ್ಯರ ಕವಿಮನೋಧರ್ಮವನ್ನು ಪರಿಭಾವಿಸುವಾಗ, 'ಭಜ ಗೋವಿಂದಂ' ಸ್ತೋತ್ರದ ಮೊದಲ ಪದ್ಯವನ್ನು ನಾವು ಮೊದಲು ನೆನೆಯಬೇಕು :

ಭಜ ಗೋವಿಂದಂ ಭಜ ಗೋವಿಂದಂ
ಭಜ ಗೋವಿಂದಂ ಮೂಢಮತೇ
ಸಂಪ್ರಾಪ್ತೇ ಸನ್ನಿಹಿತೇ ಕಾಲೇ
ನ ಹಿ ನ ಹಿ ರಕ್ಷತಿ ಡುಕೃಞ್ಕರಣೇ

(ಎಲೈ ಮೂಢಮತಿ, ಗೋವಿಂದನನ್ನು ಭಜಿಸು. ಮೃತ್ಯು ಹತ್ತಿರವಾದಾಗ ವ್ಯಾಕರಣ ಸೂತ್ರಗಳು ನಿನ್ನನ್ನು ಕಾಪಾಡುವುದಿಲ್ಲ.) ಒಣಪಾಂಡಿತ್ಯಕ್ಕಿಂತ ಭಕ್ತಿಗೆ ಆಚಾರ್ಯರಿಲ್ಲಿ ಪ್ರಾಶಸ್ತ್ಯ ಕೊಡುತ್ತಿದ್ದಾರೆ. ಎಂದರೆ, ಅವರ ದೃಷ್ಟಿಯಲ್ಲಿ ಶಾಸ್ತ್ರಕ್ಕಿಂತ ಕಾವ್ಯ ಮೇಲುಗೈಯಾಗುತ್ತದೆ.

ಶಂಕರಾಚಾರ್ಯರ 'ಶಿವಾನಂದಲಹರಿ'ಯೊಂದು ಭಕ್ತಿನಿರ್ಭರವಾದ ಭಾವಗೀತೆ ; ಹೃದಯಸ್ಪರ್ಶಿಯಾದ ಆತ್ಮನಿವೇದನೆ ಅದರಲ್ಲಿ ಕಂಡುಬರುತ್ತದೆ. ಒಂದೆರಡು ಪದ್ಯಗಳನ್ನು ಮಾತ್ರ ನೋಡಬಹುದು.

ಶಿವನ ಕಿರಾತ ಲೀಲೆಯ ಕಥೆಯನ್ನು ಆಧರಿಸಿ, ಬೇಟೆಯ ಪ್ರತಿಮೆಯೊಂದನ್ನು ಸ್ವೋಪಜ್ಞವಾಗಿ ಕೊಡುತ್ತಾರೆ ಆಚಾರ್ಯರು :

ಮಾ ಗಚ್ಛ ತ್ವಮಿತಸ್ತತೋ ಗಿರಿಶ ಭೋ ಮಯ್ಯೇವ ವಾಸಂ ಕುರು
ಸ್ವಾಮಿನ್ನಾದಿ ಕಿರಾತ ಮಾಮಕಮನಃ ಕಾಂತಾರಸೀಮಾಂತರೇ
ವರ್ತಂತೇ ಬಹುಶೋ ಮೃಗಾ ಮದಜುಷೋ ಮಾತ್ಸರ್ಯಮೋಹಾದಯ
ಸ್ತಾನ್ ಹತ್ವಾ ಮೃಗಯಾವಿನೋದರುಚಿತಾಲಾಭಂ ಚ ಸಂಪ್ರಾಪ್ಸ್ಯಸಿ

(ಹೇ ಸ್ವಾಮಿ, ಆದಿಕಿರಾತ, ಅತ್ತಿತ್ತ ಹೋಗಬೇಡ ; ನನ್ನಲ್ಲೆ ನೆಲಸು. ನನ್ನ ಮನಸ್ಸಿನ ಕಾಡಿನಲ್ಲಿ ಮಾತ್ಸರ್ಯ, ಮೋಹ ಮುಂತಾದ ಕೊಬ್ಬಿದ ಮೃಗಗಳು ಅಸಂಖ್ಯವಾಗಿವೆ. ಅವುಗಳನ್ನು ಕೊಂದು, ಮೃಗಯಾವಿನೋದದ ಲಾಭವನ್ನು ಪಡೆ.)

ತಮ್ಮ ಚಿತ್ತಕ್ಕೆ ಯಾವಾಗಲೂ ಹೇಗೆ ಶಿವನ ಪದಕಮಲದ ಬಯಕೆ ಎಂಬುದನ್ನು ಆಚಾರ್ಯರು ಅನೇಕ ಹೋಲಿಕೆಗಳಿಂದ ಮನಗಾಣಿಸುತ್ತಾರೆ :

ಹಂಸಃ ಪದ್ಮವನಂ ಸಮಿಚ್ಛತಿ ಯಥಾ ನೀಲಾಂಬುದಂ ಚಾತಕಃ
ಕೋಕಃ ಕೋಕನದಪ್ರಿಯಂ ಪ್ರತಿದಿನಂ ಚಂದ್ರಂ ಚಕೋರಸ್ತಥಾ
ಚೇತೋ ವಾಂಛತಿ ಮಾಮಕಂ ಪಶುಪತೇ ಚಿನ್ಮಾರ್ಗಮೃಗ್ಯಂ ವಿಭೋ
ಗೌರೀನಾಥ ಭವತ್ಪದಾಬ್ಜಯುಗಲಂ ಕೈವಲ್ಯ ಸೌಖ್ಯಪ್ರದಮ್

(ಹೇ ಪ್ರಭು, ಪಾರ್ವತೀ ಪತಿ, ಹಂಸ ತಾವರೆಗೊಳವನ್ನು, ಚಾತಕ ಕಾರ್ಮೋಡವನ್ನು, ಚಕ್ರವಾಕ ಸೂರ್ಯನನ್ನು, ಚಕೋರ ಚಂದ್ರನನ್ನು ಬಯಸುವಂತೆ ನನ್ನ ಮನಸ್ಸು ಮೋಕ್ಷಸುಖವನ್ನು ಕೊಡುವ ನಿನ್ನ ಪಾದಪದ್ಮಗಳನ್ನು ನಿತ್ಯವೂ ಬಯಸುತ್ತದೆ.)

ತಮ್ಮ ಮನ ಶಿವನ ಅಡಿಗೆರಗಲಿ ಎಂದು ಮಾತ್ರವಲ್ಲ, ಆ ಅಡಿಗಳಿಗೆ ಪಾದುಕೆಗಳಾಗಲಿ ಎಂದು ಹಾರೈಸುತ್ತಾರೆ ಆಚಾರ್ಯರು : "ಮಚ್ಚೇತೋಮಣಿ ಪಾದುಕಾ ವಿಹರಣಂ ಶಂಭೋ ಸದಾಂಗೀಕುರು" (ಹೇ ಶಂಭು, ನನ್ನ ಚಿತ್ತವನ್ನು ಸದಾ ನಿನ್ನ ಮೆಟ್ಟುಗಳನ್ನಾಗಿ ಮಾಡಿಕೊಂಡು ವಿಹರಿಸು.) ಈ ಭಾವನೆ ನಿಜಕ್ಕೂ ಅಪೂರ್ವ.

"ಲಕ್ಷ್ಮೀನೃಸಿಂಹ ಸ್ತೋತ್ರ"ದ ಪ್ರತಿಪದ್ಯದಲ್ಲೂ ಶಂಕರಾಚಾರ್ಯರು "ಲಕ್ಷ್ಮೀ ನೃಸಿಂಹ ಮಮ ದೇಹಿ ಕರಾವಲಂಬಂ" ಎಂದು ಎದೆತುಂಬಿ ಪ್ರಾರ್ಥಿಸುತ್ತಾರೆ. ಈ ಪ್ರಾರ್ಥನೆಯಲ್ಲಿ ಆರ್ತತೆಯಷ್ಟೆ ಅಲ್ಲ, ಅರ್ಥವೂ ಇದೆ. ಲೋಕಕಂಟಕನಾಗಿದ್ದ ಹಿರಣ್ಯ ಕಶಿಪುವನ್ನು ಸೀಳಿಹಾಕಿದ ಹಸ್ತವೆ ತಾನೆ ಭಕ್ತನನ್ನು ಹಿಡಿದೆತ್ತಬೇಕಾದದ್ದು ? ಸಂಸಾರ ತಾಪದಿಂದ ತಮ್ಮನ್ನು ಪಾರುಮಾಡುವಂತೆ ಹೀಗೆ ಮೊರೆಯಿಡುತ್ತಾರೆ ಆಚಾರ್ಯರು :

ಸಂಸಾರದಾವದಹನಾತುರ ಭೀಕರೋರು—
ಜ್ವಾಲಾವಲೀಭಿರತಿದಗ್ಧತನೂರುಹಸ್ಯ
ತ್ವತ್ಪಾದ ಪದ್ಮಸರಸೀರುಮಾಗತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್

(ಸಂಸಾರವೆಂಬ ಕಾಳ್ಗಿಚ್ಚಿನ ಭಯಂಕರ ಜ್ವಾಲೆಗಳಿಂದ ಬೆಂದು ನೊಂದವನಾಗಿ ತಂಪಾದ ಕೊಳದಂತಿರುವ ನಿನ್ನ ಚರಣಗಳಿಗೆ ಶರಣು ಹೋಗಲು ಬಂದಿರುವೆ. ಹೇ ಲಕ್ಷ್ಮೀನರಸಿಂಹ, ನನಗೆ ನಿನ್ನ ಕರಗಳ ಆಸರೆಯನ್ನು ನೀಡು). ಪದ್ಯದ ಪೂರ್ವಾರ್ಧ ಭೀಕರ ಜ್ವಾಲೆಗಳ ಚಿತ್ರವನ್ನು ಸಮರ್ಥವಾಗಿ ಮೂಡಿಸುತ್ತದೆ. ಹೀಗೆಯೇ, ಸಂಸಾರದ

ದಾರುಣತೆಯನ್ನು ಮುಂದಿನ ಪದ್ಯ ಸರ್ಪದ ರೂಪಕದಿಂದ ಶಕ್ತಿವತ್ತಾಗಿ ಅಭಿನಯಿಸಿ ತೋರುವಂತಿದೆ :

ಸಂಸಾರ ಸರ್ಪಘನವಕ್ತ್ರಭಯೋಗ್ರ ತೀವ್ರ—
ದಂಷ್ಟ್ರಾಕರಾಲ ವಿಷದಗ್ಧ ವಿನಷ್ಟ ಮೂರ್ತೇ :
ನಾಗಾರಿವಾಹನ ಸುಧಾಬ್ಧಿ ನಿವಾಸ ಶೌರೇ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್

(ಸಂಸಾರ ಸರ್ಪದ ಭೀಕರವಾದ ಬಾಯಲ್ಲಿರುವ ಘೋರವೂ ತೀವ್ರವೂ ಆದ ಕರಾಳದಂತಗಳ ವಿಷದಿಂದ ದಗ್ಧನಾದ, ವಿನಷ್ಟ ಕಾಯನಾದ ನನಗೆ, ಹೇ ಗರುಡ ವಾಹನ, ಕ್ಷೀರಸಾಗರಶಯನ, ಲಕ್ಷ್ಮೀನೃಸಿಂಹ, ನಿನ್ನ ಕರಗಳ ಆಸರೆಯನ್ನು ನೀಡು).

'ಶಿವನಾಮಾವಲ್ಯಾಷ್ಟಕ'ದ ಪ್ರತಿ ಪದ್ಯದಲ್ಲೂ ಆಚಾರ್ಯರು "ಸಂಸಾರ ದುಃಖ ಗಹನಾಜ್ಜಗದೀಶ ರಕ್ಷ" (ಜಗದೀಶ, ಸಂಸಾರ ದುಃಖವೆಂಬ ದಟ್ಟವಾದ ಅಡವಿಯಿಂದ ನನ್ನನ್ನು ರಕ್ಷಿಸು) ಎಂದು ಬೇಡಿಕೊಳ್ಳುತ್ತಾರೆ. ಕಾಡು ಕಾಡಲ್ಲ ; ಈ ಸಂಸಾರದ ಕ್ಲೇಶವೆಂದರೆ ನಿಜವಾಗಿ ಕಾಡು. ಅದರಿಂದ ಬಿಡುಗಡೆಗೊಳ್ಳಬೇಕು.

'ದೇವ್ಯಪರಾಧಕ್ಷಮಾಪಣಸ್ತೋತ್ರ' ದಲ್ಲಿ ಬರುವ "ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ" (ಕೆಟ್ಟಮಗ ಹುಟ್ಟಿದರೂ ಹುಟ್ಟಬಹುದು, ಆದರೆ ಕೆಟ್ಟತಾಯಿ ಎಲ್ಲಿಯೂ ಇರುವುದಿಲ್ಲ) ಎಂಬ ಮಾತು ಪ್ರಸಿದ್ಧವಾದದ್ದು ; ತನ್ಮೂಲಕ ಶಂಕರಾಚಾರ್ಯರು ಭಗವತ್ಕಾರುಣ್ಯದ, ಅಂತೆಯೆ ಪಾಪಿಗಳ ಉದ್ಧಾರದ ಭರವಸೆಯನ್ನು ಕೊಟ್ಟಿದ್ದಾರೆ. ಕಿವಿಗೆ ಹಿತವಾದ ಅನುಪ್ರಾಸಸರಣಿಯನ್ನು ಆಚಾರ್ಯರು ಹೇಗೆ ತರಬಲ್ಲ ರೆಂಬುದಕ್ಕೆ 'ಶಿವಾಪರಾಧಕ್ಷಮಾಪಣ ಸ್ತೋತ್ರ'ದ ಈ ಪದ್ಯ ನಿದರ್ಶನ :

ಚಂದ್ರೋದ್ಭಾಸಿತ ಶೇಖರೇ ಸ್ಮರಹರೇ ಗಂಗಾಧರೇ ಶಂಕರೇ
ಸರ್ಪೈರ್ಭೂಷಿತ ಕಂಠಕರ್ಣವಿವರೇ ನೇತ್ರೋತ್ಥ ವೈಶ್ವಾನರೇ
ದಂತಿತ್ವಕ್ಕೃತ ಸುಂದರಾಂಬರಧರೇ ತ್ರೈಲೋಕ್ಯಸಾರೇ ಹರೇ
ಮೋಕ್ಷಾರ್ಥಂ ಕುರು ಚಿತ್ತವೃತ್ತಿಮಚಲಾಮನ್ಯೈಸ್ತು ಕಿಂ ಕರ್ಮಭಿಃ

ಶಂಕರರ ಸ್ತೋತ್ರ ಸಮುದಾಯದಲ್ಲಿ 'ಸೌಂದರ್ಯ ಲಹರಿ' ವಿಶಿಷ್ಟವಾಗಿ ನಿಲ್ಲುತ್ತದೆ. ಅದು ಸ್ತೋತ್ರ ಮಾತ್ರವಾಗಿರದೆ, ಮಂತ್ರಶಾಸ್ತ್ರವೆಂದೂ ವಿಖ್ಯಾತವಾಗಿದೆ. ಆದರೆ ಮಾಂತ್ರಿಕ, ತಾಂತ್ರಿಕ ಮೌಲ್ಯಗಳಿಂದ ಭಿನ್ನವಾದ ಕಾವ್ಯ ಮೌಲ್ಯವನ್ನೂ ಅದು ಅತಿಶಯವಾಗಿ ತಾಳಿಕೊಂಡಿದೆ. ಈ ಕೃತಿಯಲ್ಲಿ ಆಚಾರ್ಯರು ತ್ರಿಜಗನ್ಮಾತೆಯಾದ

ಆದಿಶಕ್ತಿಯನ್ನು ಭಕ್ತಿಭಾವ ಪರವಶತೆಯಿಂದ ಸ್ತುತಿಸಿದ್ದಾರೆ. ಶ್ರೀದೇವಿಯ ಮಹಿಮೆಯ ಸಂಕೀರ್ತನೆ, ಆ ತ್ರಿಪುರಸುಂದರಿಯ ಅನುಪಮ ಲಾವಣ್ಯದ ವರ್ಣನೆ, ಅವಳ ಕೃಪೆಯ ಯಾಚನೆ ಇವು 'ಸೌಂದರ್ಯ ಲಹರಿ'ಯ ತ್ರಿವೇಣಿ. ಆದಿಶಕ್ತಿಯ ಸೌಂದರ್ಯವನ್ನು ಆಚಾರ್ಯರು ಮುಡಿಯಿಂದ ಅಡಿಯವರೆಗೆ ಪರಿಪರಿಯಾಗಿ ಬಣ್ಣಿಸಿದ್ದಾರೆ. ಆದರೆ ಅದು ಸಾಂಪ್ರದಾಯಿಕ ಸ್ತ್ರೀವರ್ಣನೆಯ ಮಾದರಿಯಾಗಿರದೆ, ಜಗಜ್ಜನನಿಯನ್ನು ಶುದ್ಧ ಮುಗ್ಧ ಶಿಶುಭಾವದಿಂದ ಕಂಡು ಕಂಡರಿಸುವ ಉದಾತ್ತ ಸಾಹಸವಾಗಿದೆ. ಉದ್ದಕ್ಕೂ ಸ್ಥಾಯಿಯಾಗಿರುವ ಈ ಶಿಶು ಮನೋಧರ್ಮದಿಂದಲೇ 'ಸೌಂದರ್ಯ ಲಹರಿ' ಅನನ್ಯವಾಗಿರುವುದು. ಆದಿಶಕ್ತಿಯ ಕಲ್ಪನೆ ಹೆಣ್ಣಿನ ಕಲ್ಪನೆ, ನಿಜ ; ಆದರೆ ಆಕೆ ಸಾಮಾನ್ಯ ಹೆಣ್ಣಲ್ಲ—ಸಕಲ ಸೌಂದರ್ಯದ ಆಕರ, ಪರಬ್ರಹ್ಮ ಸ್ವರೂಪಿಕೆ, ವಿಶ್ವಾಕಾರೆ, ; ಅಖಿಲ ಲೋಕಗಳ ತಾಯಿ. ಅವಳ ಚೆಲುವನ್ನು ಒಂದು ಅತ್ಯುನ್ನತ ಮನೋಭೂಮಿಕೆಯಲ್ಲಿ ಸಂದರ್ಶಿಸಿದ್ದಾರೆ ಶಂಕರಾಚಾರ್ಯರು. ಆ ನೆಲೆಯಿಂದ ಮೂಮ್ಮಿರುವ ಈ ದೇವೀ ಸೌಂದರ್ಯವರ್ಣನೆ ಶೃಂಗಾರ ರಂಜಿತವಾದ ಸುಂದರ ರಚನೆಯಷ್ಟೆ ಆಗದೆ ಅಲೌಕಿಕ ಪ್ರಭಾವಳಿಯನ್ನುಳ್ಳ ಶಿವನ ಸೃಷ್ಟಿಯಾಗಿದೆ. ಕವಿಸಮಯಗಳು, ಚಮತ್ಕಾರಗಳು ಇರಲಿಲ್ಲವೆಂದಲ್ಲ ; ಆದರೆ ಅವು ಉದಾತ್ತ, ಭವ್ಯ ಕಲ್ಪನೆಗಳಿಗೆ ಪೂರಕವಾಗಿ ನಿಂತು ಸಾರ್ಥಕವಾಗಿವೆ. ಅಲ್ಲದೆ, ಸಾಮಾನ್ಯ ಸ್ತ್ರೀಗೆ ಅನ್ವಯಿಸಿದಾಗ ಉತ್ಪ್ರೇಕ್ಷೆಯಾಗಿ, ಕವಿಸಮಯವಾಗಿ ತೋರಬಹುದಾದ್ದು ಜಗನ್ಮಾತೆಯ ವಿಷಯದಲ್ಲಿ ಉಚಿತವಾಗುತ್ತದೆ.

ಇಲ್ಲಿ 'ಸೌಂದರ್ಯ ಲಹರಿ'ಯ ಕೆಲವೇ ಪದ್ಯಗಳನ್ನು (ಈ ಲೇಖಕನ) ಅನುವಾದ ದಲ್ಲಿ ನೋಡುವುದಷ್ಟೆ ಶಕ್ಯ. ಆದಿಶಕ್ತಿಯ ಪಾದಧೂಳಿಯ ಮಹಿಮೆಯನ್ನು ಅನೇಕ ರೂಪಕಗಳಿಂದ ನಿರೂಪಿಸುತ್ತಾರೆ ಆಚಾರ್ಯರು :

ಚರಣರಜ ವಿದಜ್ಞಾನಿ ಹೃದಯ ತಿಮಿರವನು ಕಳೆವ ದಿನಪ;
ಜಡರಿಗಿದುವೆ ಚೈತನ್ಯದೊಂದು ಮಕರಂದ ಭರಿತ ಸ್ತಬಕ ;
ಇದು ದರಿದ್ರಜನವೃಂದಕಹುದು ಚಿಂತಾಮಣಿಯ ಮಾಲೆ ;
ಜನ್ಮ ಜಲಧಿಯಲಿ ಮುಳುಗಿ ಹೋದವರಿಗಿದು ವರಾಹದಾಡೆ !

ವಿಷ್ಣುವಿನ ವರಾಹಾವತಾರ ಕಥೆಯ ಹಿನ್ನೆಲೆಯಲ್ಲಿ ವರಾಹದಾಡೆಯ ಪ್ರತಿಮೆ ಹೊಸ ಬಗೆಯಲ್ಲಿ ಬಳಕೆಗೊಂಡಿರುವುದು ಗಮನಾರ್ಹ.

ದೇವಿಯ ಅನುಗ್ರಹಕ್ಕೆ ಪಾತ್ರನಾದವನು ಸೂರ್ಯಚಂದ್ರ ಕುಚವುಳ್ಳ ಮೂಜಗ ವನ್ನು ಬೇಕಾದರೂ ಗೆಲ್ಲಬಲ್ಲ ಎಂದು ಆಚಾರ್ಯರು ಹೇಳುತ್ತಾರೆ, ಮೂರು ಲೋಕವೇ

ಒಂದು ಹೆಣ್ಣು, ಸೂರ್ಯ ಚಂದ್ರಮಂಡಲಗಳೆ ಅವಳ ಸ್ತನಯುಗ ಎಂಬ ಕಲ್ಪನೆ ವಿಷ್ಟು ಭೂಮವಾಗಿದೆ !

ಪಾರ್ವತಿಯ ಗಲ್ಲ ತಂದೆಯಾದ ಹಿಮವಂತನಿಗೆ ವಾತ್ಸಲ್ಯದ ಅನುಭವವನ್ನು, ಪತಿಯಾದ ಶಂಕರನಿಗೆ ಶೃಂಗಾರದ ಅನುಭವವನ್ನು ತಂದುಕೊಟ್ಟದ್ದು, ಆ ಸಂಕೀರ್ಣ ಚಿತ್ರವನ್ನು ಆಚಾರ್ಯರು ಹೀಗೆ ಕೊಡುತ್ತಾರೆ :

ವಾತ್ಸಲ್ಯದಿಂದ ಗಿರಿರಾಜ ತನ್ನ ಬೆರಳಿನಲಿ ಮುಟ್ಟಿದಂಥ
ಮತ್ತೆ ಮತ್ತೆ ಶಿವ ಅಧರಪಾನ ಕಾತರದೊಳೆತ್ತಿದಂಥ
ಶಂಭುವಿನ ಕೈಯಲಿರುವ ಕನ್ನಡಿಯ ಹಿಡಿಯಿದೆನಿಪ ನಿನ್ನ
ಎಣೆಯೆ ಇಲ್ಲದೀ ಗಲ್ಲವನು, ಶಿವೆಯೆ, ಎಂತು ಹೊಗಳಲಮ್ಮ !

ಗಣಪತಿ, ಷಣ್ಮುಖರು ಇಂದಿಗೂ ಕುಮಾರರಾಗಿಯೇ ಉಳಿದಿರುವ ರಹಸ್ಯವನ್ನು ಆಚಾರ್ಯರು ಬಿಡಿಸಿದ್ದಾರೆ. ಅವರು ಕುಡಿಯುವ ಲೋಕಮಾತೆಯ ಎದೆಹಾಲಿನ ಮಾಧುರ್ಯ ಅದಕ್ಕೆ ಕಾರಣವಂತೆ ! ದಿಟ, ಆ ಅಮೃತ ರಸದ ಮುಂದೆ ರತಿ ಕ್ಷುಲ್ಲಕ.

ಶ್ರೀದೇವಿಯ ಚರಣಾರವಿಂದದಲ್ಲಿ ಭ್ರಮರ ಭಾವದಿಂದ ವಿರಮಿಸಬಯಸುತ್ತಾರೆ ಶಂಕರಾಚಾರ್ಯರು :

ದೀನಜನ ಬಯಸುವೆಲ್ಲ ಸಿರಿಗಳನು ನಿಚ್ಚ ನೀಡುವಂಥ
ಸಾಂದ್ರ ಸೌಂದರ್ಯ ಪ್ರಕರಮಕರಂದ ರಸವ ಸೂಸುವಂಥ
ದಿವ್ಯ ಮಂದಾರ ಮಂಜರಿಯ ಸೊಬಗ ತಾಳಿಕೊಂಡು ನಿಂತ
ನಿನ್ನ ಚರಣದಲಿ ಮುಳುಗಿ ಜೀವವಿದು ತುಂಬಿಯಾಗಲಪ್ಪ !

ಭಕ್ತಚೇತನ ಇದಕ್ಕಿಂತ ಮಿಗಿಲಾದುದೇನನ್ನು ಕೇಳಿಕೊಳ್ಳಬಹುದು ?

ಈಗ 'ಭಜಗೋವಿಂದಂ' ಸ್ತೋತ್ರಕ್ಕೆ ಮರಳೋಣ. ಜನ್ಮಾಂತರ ಪರಿಭ್ರಮಣದ ಕೋಟಲೆಯನ್ನು ಆಚಾರ್ಯರು ಹೀಗೆ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ :

ಪುನರಪಿ ಜನನಂ ಪುನರಪಿ ಮರಣಮ್
ಪುನರಪಿ ಜನನಿ ಜಠರೇ ಶಯನಮ್
ಇಹ ಸಂಸಾರೇ ಬಹುದುಸ್ತಾರೇ
ಕೃಪಯಾಽಪಾರೇ ಪಾಹಿ ಮುರಾರೇ

ಇಲ್ಲಿ ಮತ್ತು ಇತರ ಪದ್ಯಗಳಲ್ಲಿ ಕೂಡ ಆಕರ್ಷಕವಾದ ಅಂತ್ಯಪ್ರಾಸ ಪ್ರಾಚುರ್ಯವಿದೆ.

"ನಾರೀಸ್ತನಭರನಾಭೀದೇಶ" ("ಹೆಣ್ಣುಗಳ ಬಿಣ್ಮೊಲೆ ಹೊಕ್ಕುಳ ಜಾಗ") ದಂತಹ ಪ್ರಲೋಭನೆಗಳಿಂದ ತಪ್ಪಿಸಿಕೊಂಡು, ಮೋಕ್ಷ ಸಂಪಾದಿಸುವುದು ಹೇಗೆಂಬುದನ್ನು 'ಭಜಗೋವಿಂದಂ' ಸರಸವಾಗಿ ಉಪದೇಶಿಸುತ್ತದೆ ; ಅದು 'ಮೋಹಮುದ್ಗರ'.

ಕಾಲಚಕ್ರ ಭರದಿಂದ ಉರುಳುತ್ತಿದೆ, ಆದ್ದರಿಂದ ಮೃತ್ಯು ಮುಟ್ಟುವುದಕ್ಕೆ ಮುನ್ನ ಎಚ್ಚೆತ್ತುಕೊಳ್ಳಬೇಕೆಂದು ಆಚಾರ್ಯರು ಮನಮುಟ್ಟುವಂತೆ ಹೇಳುತ್ತಾರೆ :

ದಿನಮಪಿ ರಜನೀ ಸಾಯಂ ಪ್ರಾತಃ
ಶಿಶಿರವಸಂತೌ ಪುನರಾಯಾತಃ
ಕಾಲಃ ಕ್ರೀಡತಿ ಗಚ್ಛತ್ಯಾಯು–
ಸ್ತದಪಿ ನ ಮುಂಚತ್ಯಾಶಾವಾಯುಃ

(ಹಗಲಿರುಳುಗಳು, ಬೆಳಗು ಬೈಗುಗಳು, ಶಿಶಿರ ವಸಂತಗಳು ಬಂದು ಬಂದು ಹೋಗುತ್ತಿವೆ. ಕಾಲ ಆಟವಾಡುತ್ತಿದೆ. ಆಯುಸ್ಸು ಕಳೆಯುತ್ತಿದೆ. ಆದರೂ ಆಸೆ ತೊಲಗುವುದಿಲ್ಲ. ಪ್ರಕೃತಿಯ ದ್ವಂದ್ವಗಳ ಚೆಲುವಿನ ಚಿತ್ರಣ ಇಲ್ಲಿದೆ ; ಆದರೆ ಅದನ್ನು ದಾಟಿ ಹೋಗುತ್ತಾರೆ ಆಚಾರ್ಯರು.

ಕಾಲಕ್ರೀಡೆಯ ಪ್ರಭಾವದಿಂದ ಪಾರಾಗುವುದು ಮನುಷ್ಯನ ಗುರಿಯಾಗಬೇಕು. ಅದಕ್ಕಿರುವ ಉಪಾಯವನ್ನು ಶಂಕರಾಚಾರ್ಯರು ಹೃದ್ಯವಾಗಿ ಹೇಳಿಕೊಟ್ಟಿದ್ದಾರೆ. ಅದರ ಒಂದು ಅಂಗವಾಗಿ ಕಂಡುಬರುತ್ತದೆ, ಅವರ ಕಾವ್ಯಕ್ರೀಡೆ. ಜಗತ್ತು ಮಾಯೆ ಯೆಂಬುದು ಆಚಾರ್ಯರ ಅಂತಿಮ ನಿಲುವು. ಆದರೆ ಅದನ್ನು ಅಭಿವ್ಯಕ್ತಿಸುವ ಅವರ ವಾಣಿ ಬರಿಯ ಮಾಯೆಯಲ್ಲ ! ಅದರಲ್ಲಿ ಸೌಂದರ್ಯವಿದೆ ; ಜೊತೆಗೆ ಸತ್ಯವಿದೆ, ಶಿವವಿದೆ. ಅದರಿಂದ ಆನಂದ ಲಾಭವೂ ಉಂಟು, ಮಂಗಳ ಪ್ರಾಪ್ತಿಯೂ ಉಂಟು.

# ಕುಮಾರವ್ಯಾಸ ಭಾರತದಲ್ಲಿ ಭಕ್ತಿ ನೀತಿ ಮತ್ತು ಧರ್ಮ ಪ್ರತಿಪಾದನೆ

ಡಾ॥ ಕೆ. ವಿ. ಶ್ರೀನಿವಾಸಮೂರ್ತಿ

ಕಾವ್ಯದಲ್ಲಿ ಪುರುಷಾರ್ಥದ ಪ್ರತಿಪಾದನೆ ಅತ್ಯಾವಶ್ಯಕವೆಂಬ ದೃಷ್ಟಿ ನಮ್ಮ ಕವಿಗಳದು. ಕಾವ್ಯದ ವಸ್ತು ಏನೇ ಆಗಿರಲಿ ಇದು ಅಗತ್ಯವೆಂಬ ತೀರ್ಮಾನದಿಂದ, ನೀತಿ, ಧರ್ಮತತ್ವಗಳ ಪ್ರತಿಪಾದನೆಯನ್ನು ನಮ್ಮ ಕವಿಗಳು ಮಾಡಿದ್ದಾರೆ. ರಸಾಸ್ವಾದನೆಗೆ ಇವುಗಳಿಂದ ಅಡ್ಡಿಯೆಂದು ಭಾವಿಸಿದಲಾಕ್ಷಣಿಕರು, ಈ ಬಗೆಯ ನಿರೂಪಣೆಯನ್ನೊಪ್ಪದೆ ಆಕ್ಷೇಪಿಸಿರುವುದೂ ಉಂಟು. ಆಕ್ಷೇಪಣೆಗಳಿಗೆ ಕಿವಿಗೊಡದೆ ಕವಿಗಳು ಸಂಪ್ರದಾಯವೋ ಎಂಬಂತೆ ಇವುಗಳ ನಿರೂಪಣೆಯನ್ನು ಮುಂದುವರಿಸಿಕೊಂಡೇ ಬಂದರು.

೧೫ನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಕುಮಾರವ್ಯಾಸನ ಭಾರತ ಮಹಾಕಾವ್ಯವೆಂದು ಅಂಗೀಕರಿಸಿದ್ದಾಗಿದೆ. ಕೃತಿಯ ಅಧ್ಯಯನದ ಫಲವಾಗಿ ಸಾಕಷ್ಟು ವಿಮರ್ಶೆಗಳು ಪ್ರಕಟಗೊಂಡಿವೆ. ಈ ವಿಮರ್ಶೆಗಳಲ್ಲಿ ಕೃತಿಯ ಮೇಲ್ಮೆಯ ಪರಿಚಯವಾಗುವಂತೆ, ಅದರ ದುರ್ಬಲ ಅಂಶಗಳ ಪರಿಚಯವೂ ಆಗುತ್ತದೆ. ಕುಮಾರವ್ಯಾಸ ಭಾರತದಲ್ಲಿ ಭಕ್ತಿ, ನೀತಿ ಮತ್ತು ಧರ್ಮತತ್ತ್ವಗಳ ಪ್ರತಿಪಾದನೆ ಪ್ರಮಾಣವನ್ನು ಮೀರಿದೆ ಎಂಬರ್ಥದ ಅಭಿಪ್ರಾಯಗಳನ್ನು ವಿಮರ್ಶಕರು ವ್ಯಕ್ತಪಡಿಸಿದ್ದಾರೆ. ಈ ಅಭಿಪ್ರಾಯಗಳ ಸೂಕ್ತಾಸೂಕ್ತತೆಗಳನ್ನು ಪರಿಶೀಲಿಸುವುದು ಈ ಲೇಖನದ ಉದ್ದೇಶವಾಗಿದೆ.

ವಿಮರ್ಶೆಯ ಸಂದರ್ಭದಲ್ಲಿ ವ್ಯಕ್ತಗೊಂಡಿರುವ ಅಭಿಪ್ರಾಯಗಳಿವು :

1. "ಕಾವ್ಯದ ಕಟ್ಟಳೆಯಿಂದ ಕೇಶವ ಕೀರ್ತನೆ ಹದಣು ಮೀರಿದರೂ, ಕವಿಯ ಚಿತ್ತವೃತ್ತಿಯಿಂದ ಕಾವ್ಯೋದ್ದೇಶದಿಂದ ಅನಿವಾರ್ಯ."[1]

2. "ಕುಮಾರವ್ಯಾಸನ ಸಂಯಮಕ್ಕೆ ತಡೆಯದಾಗುವ ಎಡೆಗಳೆಂದರೆ ದೇವತಾ ಸ್ತುತಿ ಭಾಗಗಳು, ನೀತಿ ಬೋಧೆಯ ನಿರ್ವಚನಗಳು"2
3. "ನಾರಣಪ್ಪನಿಗೆ ಇನ್ನೊಂದು ಪ್ರಬಲ ವ್ಯಾಮೋಹ ನೀತಿಬೋಧೆ"3
4. "ಕನ್ನಡ ಭಾರತದಲ್ಲಿ ಕೃಷ್ಣ ವಿದುರ ನಾರದ ಶುಕ ಸನತ್ಸುಜಾತ ನಹುಷ ಧೌಮ್ಯ ವೇದವ್ಯಾಸರು ಬುದ್ಧಿವಾದದ ಭಾರಿ ಧರ್ಮಗೋಳಗಳು. ಈ ವಿಚಾರದಲ್ಲಿ ಮಹಾಭಾರತವೂ ಕೊಂಚ ಹಿಂದೆ"4

ಅಭಿಪ್ರಾಯ ಸ್ವಾತಂತ್ರ್ಯ ಎಲ್ಲರಿಗೂ ಇದ್ದದ್ದೇ. ಆದರೆ ಕುಮಾರವ್ಯಾಸ ಭಾರತದ ಯಾವ ಪ್ರತಿಯನ್ನು ನೋಡಿದ್ದರಿಂದ ಈ ಅಭಿಪ್ರಾಯ ಮೂಡಿ ಬಂದಿ ತೆಂಬುದೇ ಪ್ರಶ್ನೆ. ಏಕೆಂದರೆ ಕುಮಾರವ್ಯಾಸ ಭಾರತದ ಅತಿ ಪ್ರಾಚೀನ ಹಸ್ತಪ್ರತಿ ಯಲ್ಲಿ 10 ಪರ್ವ–147 ಸಂಧಿ–7971 ಪದ್ಯಗಳಿವೆ. ಕವಿಚರಿತಕಾರರು ನೋಡಿದ್ದ ಪ್ರತಿಯಲ್ಲಿ 10 ಪರ್ವ–152 ಸಂಧಿ–8279 ಪದ್ಯಗಳಿದ್ದುವು. ಈಗ ಪ್ರಚಲಿತವಾಗಿ ರುವ ಮುದ್ರಿತ ಪ್ರತಿಯಲ್ಲಿ 10 ಪರ್ವ–152 ಸಂಧಿ–8164 ಪದ್ಯಗಳು ಕಂಡು ಬರುತ್ತವೆ.5

ಈ ಪ್ರಚಲಿತ ಮುದ್ರಿತ ಪ್ರತಿಯಲ್ಲಿ ಭಕ್ತಿ, ನೀತಿ ಮತ್ತು ಧರ್ಮ ಇವುಗಳ ಪ್ರತಿ ಪಾದನೆಗೆ ಸಂಬಂಧಿಸಿದ ಪದ್ಯಗಳನ್ನು ಲೆಕ್ಕಹಾಕಿದರೆ–ಭಕ್ತಿಗೆ 308 ಪದ್ಯಗಳು ; ನೀತಿಗೆ 323 ಪದ್ಯಗಳು ಮತ್ತು ಧರ್ಮಪ್ರತಿಪಾದನೆಗೆ 233 ಪದ್ಯಗಳೂ ಬಳಕೆಯಾಗಿವೆ. ಇವುಗಳ ಒಟ್ಟು ಸಂಖ್ಯೆ 764 ಮಾತ್ರ. ಎಂದರೆ ವಿಮರ್ಶಕರು ಅತಿ ಎಂದು ಭಾವಿಸಿ ರುವ ಭಕ್ತಿ, ನೀತಿ ಮತ್ತು ಧರ್ಮ ಪ್ರತಿಪಾದನೆಗಳಿಗೆ ಬಳಕೆಯಾಗಿರುವ ಪದ್ಯಗಳ ಸಂಖ್ಯೆ ಶೇ 9.5ರಷ್ಟೂ ಇಲ್ಲ ! ವ್ಯಾಸಭಾರತದೊಂದಿಗೆ ಹೋಲಿಸಿದರೆ ಇದು ಏನೇನೂ ಅಲ್ಲ.

ಮೇಲೆ ನಿರೂಪಿಸಿದ ವಿಮರ್ಶಕರ ಅಭಿಪ್ರಾಯಗಳು ತೌಲನಿಕ ಮನೋಧರ್ಮ ದಿಂದ ಪ್ರಕಟವಾಗಿವೆ ಎನ್ನುವುದಾದರೆ, ಕುಮಾರವ್ಯಾಸ ಭಾರತವನ್ನು ಅಧ್ಯಯನ ಮಾಡುವಾಗ ಅವರು ಮನಸ್ಸಿನಲ್ಲಿಟ್ಟುಕೊಂಡಿದ್ದ ಮತ್ತೊಂದು ಕೃತಿ ಯಾವುದು ? ವ್ಯಾಸ ಭಾರತವೇ ? ಪಂಪಭಾರತವೆ ? ವ್ಯಾಸಭಾರತ ಮನಸ್ಸಿನಲ್ಲಿದ್ದಿದ್ದರೆ ಈ ಅಭಿ ಪ್ರಾಯಗಳು ಖಂಡಿತ ಪ್ರಕಟವಾಗುತ್ತಿರಲಿಲ್ಲ. ಏಕೆಂದರೆ ಮಹಾಭಾರತದ ಪ್ರಧಾನ ಉದ್ದೇಶ ನೀತಿ ಮತ್ತು ಧರ್ಮಗಳ ಪ್ರತಿಪಾದನೆ. ಮಹಾಭಾರತದ ಅರ್ಧಭಾಗವೇ ಧರ್ಮ ಮತ್ತು ನೀತಿಗಳ ನಿರೂಪಣೆಗೆ ವಿನಿಯೋಗವಾಗಿದೆ.6 ಪಂಪಭಾರತವೇ ವಿಮರ್ಶಕರ ಮನಸ್ಸಿನಲ್ಲಿತ್ತೆನ್ನುವುದಾದರೆ, ಹಿಂದೆ ಸೂಚಿಸಿದ ಅಭಿಪ್ರಾಯಗಳು ವ್ಯಕ್ತವಾಗಲು ಸಾಧ್ಯ ವಾಗುತ್ತದೆ. ಏಕೆಂದರೆ ಪಂಪಭಾರತದಲ್ಲಿ ಧರ್ಮ ಮತ್ತು ನೀತಿ ಪ್ರತಿಪಾದನೆ ತುಂಬ ಗೌಣ. ಭಕ್ತಿಯ ನಿರೂಪಣೆ ಇಲ್ಲವೇ ಇಲ್ಲ ಎಂದರೂ ತಡೆಯುತ್ತದೆ.

ಯಾವ ಕಾವ್ಯ ಮತ್ತೊಂದು ಕೃತಿಗೆ ಆಕರವಾಗಿರುತ್ತದೋ, ಅದರೊಂದಿಗೆ ತುಲನಾತ್ಮಕ ದೃಷ್ಟಿಯಿಂದ ಪರಿಶೀಲಿಸುವುದು ಸಮರ್ಪಕ. ಆಗ ಕೃತಿಯಲ್ಲಿ ಯಾವುದರ ಅಂಶ ಹೆಚ್ಚು ? ಏಕೆ ? ಎಂಬುದನ್ನು ತಿಳಿಯಲು ಸಾಧ್ಯವಾಗುತ್ತದೆ. ಕುಮಾರವ್ಯಾಸ ಭಾರತಕ್ಕೆ ವ್ಯಾಸಭಾರತವೇ ಆಕರ ; ಪಂಪಭಾರತವಲ್ಲ. ವಸ್ತು ಕುಮಾರವ್ಯಾಸ ಮತ್ತು ಪಂಪಭಾರತಗಳಿಗೆ ಒಂದೇ ಆಗಿದ್ದರೂ, ಉದ್ದೇಶದಲ್ಲಿ ಸಾಮ್ಯವಿಲ್ಲ. ಉದ್ದೇಶದಲ್ಲಿ ಸಾಮ್ಯವಿಲ್ಲದ ಎರಡು ಕೃತಿಗಳನ್ನು ಹೋಲಿಸಿ ತೀರ್ಮಾನಗಳನ್ನು ನೀಡಿದಾಗ, ಕವಿಗೆ ಇಲ್ಲವೇ ಕಾವ್ಯಕ್ಕೆ ಅಪಚಾರವಾಗುವಂಥ ಅಭಿಪ್ರಾಯಗಳು ಪ್ರಕಟಗೊಳ್ಳುವುದು ಸಹಜ.

ಭಕ್ತಿ, ನೀತಿ ಮತ್ತು ಧರ್ಮ-ಇವುಗಳಲ್ಲಿ ಯಾವುದು ಯಾವ ಸಂದರ್ಭದಲ್ಲಿ ಹೇಗೆ ನಿರೂಪಿತವಾಗಿದೆ ? ಇವುಗಳ ನಿರೂಪಣೆಯಿಂದ ಒಂದು ಸಂದರ್ಭಕ್ಕೆ ಶೋಭೆ ಯುಂಟಾಗಿದೆಯೇ ಕಾವ್ಯ ಸಂದರ್ಭಕ್ಕೆ ಹೊಂದಿಕೊಳ್ಳದೆ ಪ್ರತ್ಯೇಕವಾಗಿ ನಿಂತು ನಿರಸ ವಾಗಿದೆಯೆ ? ಅಥವಾ ಬೇಸರಕ್ಕೆ ಕಾರಣವಾಗಿದೆಯೆ ? ಎಂಬ ಪ್ರಶ್ನೆಗಳಿಗೆ ದೊರಕುವ ಉತ್ತರ ವಸ್ತು ನಿಷ್ಠವಾಗಿದ್ದಲ್ಲಿ ಅದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಕೇವಲ ವೈಯಕ್ತಿಕ ಅಭಿರುಚಿಯನ್ನು ಆಧರಿಸಿ ಕೊಡುವ ಅಭಿಪ್ರಾಯ ಅಥವಾ ತೀರ್ಮಾನ ಪೊಳ್ಳಾಗುತ್ತದೆ. ಇನ್ನು ಮುಂದೆ ನಿದರ್ಶನಗಳೊಂದಿಗೆ ವಿಮರ್ಶಕರ ಅಭಿಪ್ರಾಯ ಎಷ್ಟರ ಮಟ್ಟಿಗೆ ಸಮರ್ಪಕ ಎಂಬುದನ್ನು ವಿಚಾರಿಸಬಹುದು.

ಪರಿಶೀಲನೆಯ ಅನುಕೂಲದ ದೃಷ್ಟಿಯಿಂದ ಕುಮಾರವ್ಯಾಸಭಾರತದಲ್ಲಿರುವ ಭಕ್ತಿ ನೀತಿ ಮತ್ತು ಧರ್ಮ ಪ್ರತಿಪಾದಕ ಸಂದರ್ಭಗಳನ್ನು ಭಕ್ತಿ ಸಂದರ್ಭ, ನೀತಿ ಸಂದರ್ಭ ಮತ್ತು ಧರ್ಮ ಸಂದರ್ಭ ಎಂದು ವರ್ಗೀಕರಿಸಿಕೊಳ್ಳಬಹುದು. ಹೀಗೆ ವಿಭಾಗ ಮಾಡಿದ ಮಾತ್ರಕ್ಕೆ ಕಾವ್ಯದಲ್ಲಿ ಅನ್ಯತ್ರ ಎಲ್ಲಿಯೂ ಇವುಗಳ ನಿರೂಪಣೆ ಇಲ್ಲ ಎಂದರ್ಥವಲ್ಲ, ಪದ್ಯಗಳ ಲೆಕ್ಕಾಚಾರದಲ್ಲಿ ಅವುಗಳನ್ನು ಸೇರಿಸಿಕೊಂಡೇ ತೀರ್ಮಾನ ಮಾಡಲಾಗಿದೆ. ಇಲ್ಲಿ ಪ್ರಮುಖ ಸಂದರ್ಭಗಳನ್ನು ಮಾತ್ರ ಪ್ರಸ್ತಾಪಿಸಲಾಗಿದೆ.

## 1. ಭಕ್ತಿಸಂದರ್ಭ :

ಕುಮಾರವ್ಯಾಸ ಭಾರತದ, ಕಥೆಯ ಪದರದಲ್ಲಿ ಸೇರಿಕೊಂಡಿರುವ, ಭಕ್ತಿಯ ನಿರೂಪಣಾ ಚಿತ್ರಗಳಲ್ಲಿ ಪ್ರಧಾನವಾದ, ಸಂದರ್ಭಗಳೆಂದರೆ ರಾಜಸೂಯಯಾಗದ ಸಂದರ್ಭ, ದ್ರೌಪದಿಯ ಅಕ್ಷಯ ವಸ್ತ್ರ ಪ್ರಸಂಗ, ದೂರ್ವಾಸಾತಿಥ್ಯದ ಸಂದರ್ಭ. ಇಂದ್ರಕೀಲ ಪ್ರಸಂಗ, ಶ್ರೀಕೃಷ್ಣ ಸಂಧಾನದ ಸಂದರ್ಭ ಮತ್ತು ಭಗವದ್ಗೀತೋಪದೇಶ ಸನ್ನಿವೇಶದಲ್ಲಿ ಪ್ರಕಟವಾಗುವ ಅರ್ಜುನನ ಭಕ್ತಿಯ ಅಭಿವ್ಯಕ್ತಿ-ಇವುಗಳು. ಇವಲ್ಲದೆ ಅಲ್ಲಲ್ಲ ದ್ರೌಪದಿ, ಭೀಮ, ಭೀಷ್ಮ ಮುಂತಾದ ಪಾತ್ರಗಳು ಭಕ್ತಮನೋಭಾವವನ್ನು ಪ್ರಕಟಿಸುವ ಕಡೆಗಳಲ್ಲಿ ಭಕ್ತಿಯ ವರ್ಣನೆ ಕಾಣಿಸುತ್ತದೆ. ಆದರೆ ಅವು ದೀರ್ಘವಾಗಿಲ್ಲ: ಸಹೃದಯನ ಗಮನಕ್ಕೆ ಬಾರದಷ್ಟು ಸಂಗ್ರಹವಾಗಿವೆ, ಆದರೆ ಅದೇ ಹೆಚ್ಚು ಎನ್ನು

ವಷ್ಟು ಸಂಖ್ಯೆಯಲ್ಲಿ ಸಂದರ್ಭಗಳಿಲ್ಲ. ಆದುದರಿಂದ ಇಲ್ಲಿ ಅವುಗಳನ್ನು ಗಮನಿಸ ಹೋಗುವುದಿಲ್ಲ. ಅವು ಸನ್ನಿವೇಶಾನುಸಾರಿಯಾಗಿದೆ, ರಸಾನುಭವಕ್ಕೆ ಅಡ್ಡಿಯಾಗು ವಂತಿಲ್ಲ ಎಂದಷ್ಟು ಹೇಳಿದರೆ ಸಾಕು.

ಅ) ರಾಜಸೂಯಯಾಗದಲ್ಲಿ ಶಿಶುಪಾಲವಧೆಯ ಸನ್ನಿವೇಶವಿದೆ. ಅಲ್ಲಿ ಭೀಷ್ಮರು ಕೃಷ್ಣನ ಮಹಿಮೆಯನ್ನು ವರ್ಣಿಸುವ ಸಂದರ್ಭ ವಿಸ್ತಾರವಾಗಿ ಮೂಡಿ ಬಂದಿದೆ. ಕುಮಾರವ್ಯಾಸ ಭಾರತದ ಭೀಷ್ಮ ವಿಷ್ಣುಭಕ್ತ. ಅವನೇ ಸಭೆಗೆ ಕೃಷ್ಣನ ಹಿರಿಮೆಯನ್ನು ತಿಳಿಸ ಹೊರಟಾಗ ದಶಾವತಾರದ ಚಿತ್ರ, ಭಾಗವತದ ಚಿತ್ರ ಇವುಗಳೆಲ್ಲ ಪ್ರಕಟಗೊಂಡಿವೆ. ಅಗ್ರಪೂಜೆಗೆ ಕೃಷ್ಣ ಅರ್ಹನೆಂದು ಹೇಳಲು ಮಾತ್ರವೇ ಭೀಷ್ಮ ಹೊರಟದ್ದು. 53 ಪದ್ಯಗಳು ಇದಕ್ಕೆ ಮೀಸಲಾಗಿದೆ. ಇದರ ಪರಿಣಾಮವಾಗಿ, ಶಿಶುಪಾಲನ ವರ್ತನೆಯಿಂದ ಸಭೆಯಲ್ಲುಂಟಾದ ತೀವ್ರ ಕ್ಷೋಭೆಯ ಗಾಂಭೀರ್ಯ ಕುಗ್ಗುತ್ತದೆ. ಕಥೆ ಹಿಂದಕ್ಕೆ ಸರಿಯುತ್ತದೆ. ಇಷ್ಟು ದೀರ್ಘವಾದ ವರ್ಣನೆಯಿಂದ ಕಥಾವಸ್ತುವಿಗೆ ಯಾವುದೇ ರೀತಿಯ ವಿಶೇಷಲಾಭವಿಲ್ಲ. ಹರಿಹರನ ರಗಳೆಗಳಲ್ಲಿ ಭಕ್ತಿ ಯೊಂದು ರಸವಾಗಿ ಅನುಭೂತವಾಗುವಂತೆ ಇಲ್ಲಿ ಆಗುವುದಿಲ್ಲ.

ವ್ಯಾಸಭಾರತದಲ್ಲಿ ಇದೇ ಸನ್ನಿವೇಶದಲ್ಲಿ ಕೃಷ್ಣನ ಮಹಿಮೆ, ಹಿರಿಮೆಗಳ ವರ್ಣನೆಗೆ 497 ಶ್ಲೋಕಗಳು ಮೀಸಲಾಗಿವೆ.7 ಕುಮಾರವ್ಯಾಸಭಾರತದಲ್ಲಿ 53 ಪದ್ಯಗಳು ಮೀಸಲಾಗಿವೆ.8 ಪಂಪಭಾರತದಲ್ಲಿ ಈ ಪ್ರಸಂಗವನ್ನು 1 ವೃತ್ತ ಮತ್ತು 24 ಕಂದ ಪದ್ಯಗಳಲ್ಲಿ ನಿರೂಪಿಸಲಾಗಿದೆ. ಇಲ್ಲಿ ಭಕ್ತಿಯ ಸ್ಪರ್ಶವೂ ಇಲ್ಲ.

ವ್ಯಾಸಭಾರತದಲ್ಲಿಯ ದೀರ್ಘವಾದ ವರ್ಣನೆ ಸನ್ನಿವೇಶದ ರಸಾನುಭವಕ್ಕೆ ಅಡ್ಡಿ ಯಾಗಿರುವಂತೆಯೇ, ಕುಮಾರವ್ಯಾಸಭಾರತದಲ್ಲೂ ಆಗಿದೆ. ಕುಮಾರವ್ಯಾಸನ ದೃಷ್ಟಿ ಯಲ್ಲಿ ಭಾರತದ ಕಥೆ 'ಕಮಲದಳಾಯತಾಕ್ಷನ ಬಾಲಕೇಳಿ ವಿಧೂತ ಕಿಲ್ಬಿಷ' ದ ಕಥೆ ಯಾಗಿದೆ. ಆದ್ದರಿಂದ ಅವನು ವರ್ಣನೆಯನ್ನು ಸಂಗ್ರಹಿಸಿಲ್ಲ. ಕವಿಯ ಕಾವ್ಯೋದ್ದೇ ಶಕ್ಕೆ ವರ್ಣನೆ ಪೂರಕವಾಗಿದೆ. ಪಂಪ ಇಲ್ಲಿ ಮಿತಭಾಷಿಯಾಗಲು ಕಾರಣವೇನೆಂದರೆ, ಕೃತಿಗೆ ಕೃಷ್ಣನಾಯಕನಲ್ಲ. ಆದ್ದರಿಂದ ಕುಮಾರವ್ಯಾಸಭಾರತದ ಈ ಸಂದರ್ಭದೊಂದಿಗೆ ಪಂಪಭಾರತ ಅದೇ ಸಂದರ್ಭವನ್ನಿಟ್ಟು ನೋಡುವುದು ಸರಿಯಲ್ಲ. ವ್ಯಾಸರ ನಿರೂಪಣೆ ಯೊಂದಿಗೆ ಹೋಲಿಸಿನೋಡಿದರೆ ಕುಮಾರವ್ಯಾಸನ ವರ್ಣನೆ ಹೆಚ್ಚಿಸುವಂತಿಲ್ಲ. ಆದರೂ ಇದೊಂದೆಡೆಯಲ್ಲಿ ಮಹಿಮೆಯ ವರ್ಣನೆ ಪುರಾಣವೆನ್ನಿಸಿ ಬೇಸರತರಿಸುವಂತಿದೆ ಎಂಬುದು ನಿಜ.

ಆ) ಅಕ್ಷಯ ವಸ್ತ್ರ ಪ್ರಸಂಗದಲ್ಲಿ ಭಕ್ತಿಯ ನಿರೂಪಣೆ ಕುಮಾರವ್ಯಾಸ ಭಾರತದಲ್ಲಿ ವಿಸ್ತಾರವಾಗಿಯೂ, ವ್ಯಾಸ ಭಾರತದಲ್ಲಿ ಅತಿ ಸಂಗ್ರಹವಾಗಿಯೂ ಮೂಡಿ ಬಂದಿದೆ. ವ್ಯಾಸಭಾರತದ ನಿರೂಪಣೆ ಸಪ್ಪೆಯೂ ಹೌದು. ಕುಮಾರವ್ಯಾಸನ ವರ್ಣನೆ

ಅತಿ ವಿಸ್ತರಿಸುವುದಿಲ್ಲ. ಕಥೆಯ ಓಟಕ್ಕೆ ಅಡ್ಡಿಯಾಗಿಲ್ಲ. ವ್ಯಾಸ ಭಾರತದಲ್ಲಿ ದ್ರೌಪದಿಯ ಆರ್ತಭಕ್ತಿಯ ಪ್ರತಿಪಾದನೆಗೆ ಮೀಸಲಾಗಿರುವ ಶ್ಲೋಕಗಳು ಮೂರು.[9] ಕುಮಾರವ್ಯಾಸ ಭಾರತದಲ್ಲಿ 21 ಪದ್ಯಗಳು ಮೀಸಲಾಗಿವೆ.[10] ಇಲ್ಲಿ ದ್ರೌಪದಿಯ ಭಕ್ತ ಹೃದಯದ ಮೊರೆ ಸಹೃದಯನನ್ನು ಕರಗಿಸಲು ಶಕ್ತವಾಗಿದೆ. ಕವಿಯ ಅಂತರಂಗದ ಭಕ್ತಿಗೆ, ಬಾಹ್ಯಾಭಿವ್ಯಕ್ತಿಯನ್ನು ನೀಡುವಾಗ, ಅದು ದೀರ್ಘವಾಗಿದ್ದರೂ ಸಂದರ್ಭಕ್ಕೆ ಹೊರತಾಗಿ ನಿಲ್ಲುವುದಿಲ್ಲ : ರಸಾಸ್ವಾದನೆಗೆ ಅಡ್ಡಿಯಾಗುವುದಿಲ್ಲ.

ತುಂಬಿದ ಸಭೆಯಲ್ಲಿ ದುಶ್ಶಾಸನ ಅವಳ ವಸ್ತ್ರಕ್ಕೆ ಕೈ ಹಾಕಿದಾಗ, 'ಸೆರಗಬಿಡಿಸಿರೆ ತಂದೆ' ಎಂದು ಅಲ್ಲಿದ್ದ ಸ್ತ್ರೀಯರನ್ನು, ಹಿರಿಯರನ್ನು, ರಾಜರನ್ನು ಮತ್ತು ಮಂತ್ರಿಗಳನ್ನು ಯಾಚಿಸಿದಳು. 'ಶರಣಾಗತೆಯಾನುಳುಹಿಕೊಂಬುದದು ಧರ್ಮ' ಎಂದು ಎಚ್ಚರಿಸಿದಳು. ಅವಳ ಅಸಹಾಯಕತೆಯಿಂದ ಮೂಡಿಬಂದ ಮೊರೆ, ಅಲ್ಲಿದ್ದವರ ಹೃದಯವನ್ನು ಕರಗಿಸಿದರೂ, ಪರಿಣಾಮದಲ್ಲಿ ಫಲ ಕಾಣಲಿಲ್ಲ. ಮನುಷ್ಯ ಪ್ರಯತ್ನ ಭಗವಂತನ ರಕ್ಷೆಯನ್ನು ಕೋರುವ ಮಟ್ಟವನ್ನು ಮುಟ್ಟಿತು. ಗತ್ಯಂತರವಿಲ್ಲದೆ ಹೋದಾಗ, ಅವಳ ತೀವ್ರ ಸಂಕಟದಿಂದೊಡಗೂಡಿದ ಮೊರೆ ಕೃಷ್ಣನೆಡೆಗೆ ತಿರುಗಿದ್ದು ಸಹಜ. ಕವಿಯ ದೃಷ್ಟಿಯಲ್ಲಿ ಕೃಷ್ಣ ಮನುಜ ವೇಷದಲ್ಲಿದ್ದರೂ ದೇವನೇ. ವೇದಗಳಿಗೆ, ಋಷಿ ಮುನಿಗಳಿಗೆ ನಿಲುಕದ ಅಪ್ರತಿಮನ ಮನ ಕರಗುವುದು ಸುಲಭವಲ್ಲವೆಂಬುದನ್ನು ಕುಮಾರವ್ಯಾಸ ಬಲ್ಲ. ಆದ್ದರಿಂದಲೇ ದ್ರೌಪದಿಯ ಮೊರೆಯ ಚಿತ್ರ ದೀರ್ಘವಾಗಿ ಮೂಡಿಬಂದಿದೆ.

'ಸುಲಿವರೂರೊಳಗುಟ್ಟ ಸೀರೆಯ' 'ಸೆಳೆವರಸುವನು ಖಳರು ಸೀರೆಯ ಸುಲಿದರುಳಿಯೆನು' 'ಕರುಣಾಜಲಧಿಯೇ ಕೈಗಾಯಿ' ಎಂಬಲ್ಲಿ ದ್ರೌಪದಿಗಿರುವ ಭಯ, ಭಗವತ್ ಕೃಪೆಯ ಕಾತುರಗಳು ಧ್ವನಿತವಾಗುತ್ತವೆ. 'ಸೀರೆಯಸುಲಿದರುಳಿಯೆನು' ಎಂಬುದು ಅವಳ ನಿರ್ಧಾರಾತ್ಮಕ ಅಭಿವ್ಯಕ್ತಿಯೇ ಆಗಿದೆ. ಕೃಷ್ಣನ ಮಹಿಮೆಗಳನ್ನು ಸ್ಮರಿಸುತ್ತಾ, ತನ್ನ ಸ್ಥಿತಿ ಸಹ ಈಗ ದಯವನ್ನು ತೋರಲು ಅರ್ಹವಾದದ್ದೆಂಬುದನ್ನು ದ್ರೌಪದಿ ಪ್ರಕಟಿಸಿದ್ದಾಳೆ. ಮೊದಲು ಮೊರೆ. ನಂತರ ಭಗವಂತನನ್ನೇ ಪ್ರಶ್ನಿಸುವ ಮಟ್ಟಕ್ಕೇರಿದ್ದಾಳೆ ದ್ರೌಪದಿ. 'ಚರಣಭಜಕರ ಮಾನಹಾನಿಯ ಪರಿಬವಾರದು' 'ಭಕ್ತವತ್ಸಲನಹರೆ ಸಲಹು' 'ನಾರಿಯಕ್ಕೆಯ ನಿಲಿಸಲೇನರಿದು' ಎಂದು ಪ್ರಶ್ನಿಸುತ್ತಾಳೆ. ಕೊನೆಗೂ ಅವಳ ದೃಢನಂಬಿಕೆ, ಅಚಲಭಕ್ತಿ, ಪ್ರಾಣಸಂಕಟದಿಂದ ಪಾರಾಗಲು ಸಹಕರಿಸುತ್ತದೆ. ಕರುಣರಸಕ್ಕೆ ಪೂರಕವಾಗಿರುವ ಈ ವರ್ಣನೆ ಕಾವ್ಯದ ಮಗ್ಗದಲ್ಲಿ ಸೇರಿಹೋಗಿದೆ. ಆದ್ದರಿಂದ ಇಲ್ಲಿ ಅತಿಯಾಯಿತು ವರ್ಣನೆ ಎನ್ನಲಾಗುವುದಿಲ್ಲ.

೩) ಇಂದ್ರಕೀಲ ಪ್ರಸಂಗದಲ್ಲಿ, ಅರ್ಜುನನ ಪಶ್ಚಾತ್ತಾಪನಿಮಿತ್ತವಾಗಿ ಮೂಡಿಬಂದಿರುವ ಭಕ್ತಿಯ ಚಿತ್ರ ವ್ಯಾಸಭಾರತದಲ್ಲಿ ವಿಸ್ತಾರವಾಗಿ ಮೂಡಿಬಂದಿರುವಂತೆಯೇ

ಕುಮಾರವ್ಯಾಸಭಾರತದಲ್ಲಿ ಇದು ಸಂಗ್ರಹವಾಗಿ ಮೂಡಿಬಂದಿದೆ. ವ್ಯಾಸಭಾರತದೊಂದಿಗೆ ಹೋಲಿಸಿದರೆ ಕುಮಾರವ್ಯಾಸ ಭಾರತದಲ್ಲಿ ಇದು ಸಂಗ್ರಹವಾಗಿ ಮೂಡಿಬಂದಿದೆ. (ಕಭಾಕಮಂ : ಅಪ-ಸಂ 6-ಪ 42-93) ಅರ್ಜುನನ ಮನಸ್ಸಿನ ಚಾಂಚಲ್ಯದ ಚಿತ್ರ, ಸಾಮಾನ್ಯನೊಬ್ಬನ ಮನೋವ್ಯಾಪಾರವೇ ಆಗಿದೆ. ವೀರನಾಗಿ ಕಿರಾತನೆದುರಿಗೆ ನಿಂತು, ಭಂಗಕ್ಕೊಳಗಾದ ಅರ್ಜುನ ಮಹೇಶ್ವರನ ಮೊರೆ ಹೊಕ್ಕ• 'ತ್ರಿಯಂಬಕ ಪುಷ್ಟಿವರ್ಧನ ಕರುಣಿಸು' ಎಂದು ಬೇಡಿದ. ಕೊನೆಗೆ ಕಿರಾತನೇ ತಾನು ಪ್ರತ್ಯಕ್ಷ ಮಾಡಿಕೊಳ್ಳಲು ಪ್ರಯತ್ನಿಸಿದ ತ್ರಿಯಂಬಕನೆಂಬುದು ತಿಳಿದಾಗ "ಭಯಾನಕವೆತ್ತ ರಸದಲ್ಲಿ ಮುಳುಗಿದವು ಕಂಗಳು". ಪಶ್ಚಾತ್ತಾಪಭರಿತ ಭಕ್ತಿಯ ಚಿತ್ರಣದ ಹಿರಿಮೆಯನ್ನರಿಯಲು ಒಂದೆರಡು ನಿದರ್ಶನಗಳನ್ನು ಕೊಡಬಹುದು.

ಗಾಹು ಹತ್ತಾ ಹತ್ತಿಗಡ ನಿ । ರ್ದೇಹನೊಡನೆ ಮಹಾಶರೌಘಕೆ<br>
ಮೋಹುಗಡ ಜೀವನವು ಮೃತ್ಯುಂಜಯನ ಸೀಮೆಯಲಿ<br>
ಅಹ ಮೂದಲೆಗಡ ಸುನಿಗಮ । ವ್ಯೂಹದೂರನಕೂಡೆ ಹರನೊಡ<br>
ನಾಹವಕೆ ಸಮಜೋಳಿ ನಾವ್ಗಡ ಶಿವ ಶಿವಾಯೆಂದ.

(ಅಪ-ಸಂ 6-ಪ 60)

ಏವಗೆರಡುಕಣ್ಣು ವಿಶ್ವತೋಚ । ಕ್ಷುವಿನೊಡನೆ ಸಕ್ರೋಧದರುಶನ<br>
ವೆವಗೆರಡು ಭುಜ ವಿಶ್ವತೋಭುಜನೊಡನೆ ಸಂಗ್ರಾಮ<br>
ಭುವನ ಚರಣನ ವಿಶ್ವತೋಮುಖ । ಶಿವನ ನಮ್ಮಿಕಾಲುನಾಲಗೆ<br>
ಯುವಗೆಡಿಸಿ ಗೆಲಲಾವ್ ಸಮರ್ಥರೆ ಶಿವಶಿವಾಯೆಂದ

(ಅಪ-ಸಂ 6-ಪ 61)

ಈ ಮೇಲಿನ ಪದ್ಯಗಳಲ್ಲಿ ಸ್ವನಿಂದೆಯೊಂದಿಗೆ, ಶಿವನ ಸ್ತುತಿಯೂ ಸೊಗಸಾಗಿ ಬೆರೆತುಕೊಂಡಿದೆ. ಇನ್ನುಳಿದ ಪದ್ಯಗಳನ್ನು ಗಮನಿಸಿದಾಗ (ಅಪ-ಸಂ 6-ಪ 80-91) ಅವು ಹರಿಹರನ ರಗಳೆಗಳಲ್ಲಿ ಕಾಣುವ ಭಕ್ತಿ ಚಿತ್ರದಂತೆಯೇ ಇವೆ. ಅವುಗಳ ಓಟವೂ ರಗಳೆಯ ತೆರನಂತೆಯೇ ಇದೆ. ಹರಿಹರನ ರಗಳೆಗಳಲ್ಲಿ ಭಕ್ತಿ ಆಸ್ವಾದ್ಯವಾಗುವಂತೆ ಇಲ್ಲೂ ಆಗುತ್ತದೆ. ಸ್ವತಃ ಕುಮಾರವ್ಯಾಸನೇ ಭಕ್ತನಾಗಿದ್ದಾನೆ. ತಾನು ಕವಿಯಾಗಿ ವರ್ಣಿಸಹೋಗಿಲ್ಲ : ಭಕ್ತನಾಗಿಯೇ ಮೈಮರೆತು ಹಾಡಿದ್ದಾನೆ. ಭಕ್ತಿಯ ಚಿತ್ರ ಕಾವ್ಯದ ಅಂಗವಾಗಿ ಪರಿಣಮಿಸಿದೆ.

ಈ) ದುರ್ವಾಸಾತಿಥ್ಯ ಸನ್ನಿವೇಶವು ಅಪತ್ತನ್ನೇ ಆಧಾರವಾಗಿ ಹೊಂದಿದ ಅಕ್ಷಯವಸ್ತ್ರಪ್ರಸಂಗಕ್ಕೆ ಸದೃಶವಾಗಿದೆ. ಇಲ್ಲಿ ದುರ್ವಾಸರ ಶಾಪದ ಅಂಜಿಕೆ, ಅಲ್ಲಿ

ಮಾನಹೋಗುವುದೆಂಬ ಅಂಜಿಕೆ ಅಷ್ಟೆ. ಇಲ್ಲೂ ಪಾಂಡವರು ಅಸಹಾಯಕರು, ಅಲ್ಲೂ ಅಸಹಾಯಕರೇ ಆಗಿದ್ದರು. ಅಲ್ಲಿ ಭಕ್ತಿ ದ್ರೌಪದಿಯನ್ನು ಪಾರುಮಾಡಿದಂತೆ, ಇಲ್ಲೂ ಅವಳ ಭಕ್ತಿ ದ್ರೌಪದಿಯೊಂದಿಗೇ ಪಾಂಡವರ ಮಾನವನ್ನು ಕಾಪಾಡುತ್ತದೆ. ಈ ಸನ್ನಿವೇಶದಲ್ಲಿ ದ್ರೌಪದಿಯ ಆರ್ತಭಕ್ತಿಯ ರಸವತ್ತಾದ ಚಿತ್ರವನ್ನು ಕುಮಾರವ್ಯಾಸ ಭಾರತದಲ್ಲಿ ಕಾಣಬಹುದು. ವ್ಯಾಸಭಾರತದಲ್ಲಿ ದ್ರೌಪದಿಯ ಭಕ್ತಿಯ ಚಿತ್ರ 9 ಶ್ಲೋಕಗಳಲ್ಲಿ ಮೂಡಿಬಂದಿದ್ದರೆ "ಕುಮಾರವ್ಯಾಸ ಭಾರತದಲ್ಲಿ"11 ಪದ್ಯಗಳಲ್ಲಿ ಭಕ್ತಿಯ ಚಿತ್ರಣವಿದೆ.12 ಕಥೆಯ ಓಟಕ್ಕೆ ರಸಾಸ್ವಾದಕ್ಕೆ ಇಲ್ಲಿಯ ಭಕ್ತಿನಿರೂಪಣಾಸ್ತೋತ್ರ ಪೂರಕವಾಗಿಯೇ ಇದ್ದು, ಬೇಸರ ತರಿಸುವಂತಿಲ್ಲ.

ಕೌರವನ ಕೋರಿಕೆಯ ಮೇರೆಗೆ ಆತಿಥ್ಯ ಬೇಡಲು ದುರ್ವಾಸ ಪಾಂಡವರ ಬಳಿಗೆ ಬರುವ ವೇಳೆಗೆ, ಸೂರ್ಯ ಕೊಟ್ಟ ಅರ್ಘ್ಯಪಾತ್ರೆ ಪ್ರಯೋಜನಕ್ಕೆ ಬರುವಂತಿರಲಿಲ್ಲ) ಅರಸಿಯಾರೋಗಿಸಿದ ಭಾವವನರಿದು, ಧರ್ಮರಾಯ ದಿಕ್ಕೆಟ್ಟು ಹೋದ. 'ನುಡಿ ಗನೃತ' ಸಂಭವಿಸುವುದೆಂದು ಅವನ ಅಂಜಿಕೆ. ಕೊನೆಗೆ ಧೌಮ್ಯರು ದ್ರೌಪದಿ ಪ್ರಾರ್ಥಿಸಲಿ—"ಕಾಮಿನಿಗೆ ಕರಗುವನು ಕೃಷ್ಣನು' ಎಂದು ಸೂಚಿಸಿದರು. ಆ ಸಂದರ್ಭ ಹೀಗಿತ್ತು :

ಭೂಸುರರ ಕಳವಳವ ನೃಪನಾ । ಕ್ಲೇಶವನು ಪವಮಾನಸುತನಾ
ಕ್ರೋಶವನು ನರನಾಟವನು ಮಾದ್ರೇಯರು ಪಟಳವ
ಆ ಸರೋಜಾಸನೆ ನಿರೀಕ್ಷಿಸು। ತಾಸುರದ ದುಃಖದಲಿ ಮುನಿಮಂತ್ರೋಪ
ದೇಶದ ಬಲುಮೆಯಿಂದವೆ ನೆನೆದಳಚ್ಯುತನ (ಅಪ–ಸಂ 16–ಪ 21)

ಕಳವಳದಿಂದಲೇ ಬಂದಿರುವ ಆಪತ್ತಿನ ಸ್ವರೂಪದ ಅರಿವಾಗಿದೆ ದ್ರೌಪದಿಗೆ. ಈಗ ಪಾಂಡವರನ್ನು ಕಾಯ್ದುಕೊಳ್ಳುವುದು ಅವಳ ಹೊಣೆಯಾಗಿದೆ. ದುರ್ವಾಸನ ಆಗಮನದಿಂದಾಗುವ ದುಸ್ಥಿತಿಯನ್ನು ಅವಳು ಕೃಷ್ಣನ ಮುಂದಿಡುವುದು ಹೀಗೆ.

ನೀಲಕಂಠನ ನೇತ್ರವಹ್ನಿ । ಜ್ವಾಲೆಗಾಹುತಿಯಾಗಿ ಮುಗ್ಗಿದ
ಕಾಲಕಾಮನ ಪಥವ ಪಡೆವರು ಪಾಂಡುನಂದನರು
ಹಿಳುಹಿಟಪ್ಪೆಯೆನ್ನ ನುಡಿಯನು । ಪಾಲಿಸೈ ಸಂಕಲ್ಪವಳಿದೊಡೆ
ಹಾಳುಹೊರುವುದು ಕೃಷ್ಣ ಮೈದೋರೆಂದಳಿಂದುಮುಖಿ

(ಅಪ–ಸ 16–ಪ 24)

ಕೃಷ್ಣನನ್ನು ಎಚ್ಚರಿಸುವ ರೀತಿ ವಿಶಿಷ್ಟವಾಗಿದೆ. ಆಪತ್ತನ್ನು ಧ್ವನಿಸುವ ಪದಬಂಧ ಸಂಸ್ಕೃತ ಪದಗಳಿಂದ ಕೂಡಿ ಪಾಂಡವರಿಗೆ ಬಂದಿರುವ ಅಪಾಯವನ್ನು ಮನಮುಟ್ಟಿಸು

ವಂತಿದೆ. ಬಗೆಬಗೆಯ ಸ್ತುತಿಗೊಲಿದ ಕೃಷ್ಣ ಕಾಣಿಸಿಕೊಂಡು ಮೈದಡವಿದರೂ ಎಚ್ಚರವಿಲ್ಲದ ತಲ್ಲೀನತೆ ಅವಳದು. ಕೃಷ್ಣನು 'ಮೌನಮುದ್ರೆಯದೇನು' ಎಂದು ಕೇಳಿದಾಗ, ದ್ರೌಪದಿಯ ಪ್ರತಿಕ್ರಿಯೆಯ ಚಿತ್ರವಿದು :

ಉಬ್ಬಿದಳು ಹರುಷದಲಿ ದುಗುಡದ । ಕೊಬ್ಬು ಮುರಿದುದು ಪುಳಕವಾಳಿಯೊ
ಳೊಬ್ಬುಳಿಯೊಳೆಡೆ ಹಾಯ್ದು ನಿಂದವು ನಯನ ವಾರಿಗಳು
ಸಭ್ಯತಾಲತೆ ಹೂತು ಹಸರಿಸಿ । ಹಬ್ಬಿ ಫಲವಾದಂತೆ ಕಾಯದ
ನಿಬ್ಬರದಲೀಡಾಡಿದಳು ಹರಿಪದ ಪಯೋಜದಲಿ (ಅಪ-ಸಂ 16-ಪ 34)

ಭಕ್ತಿಭರಿತ ಚೇತನದ ಈ ಚಿತ್ರ ಸಹೃದಯರನ್ನು ಮೆಚ್ಚಿಸುತ್ತದೆ. 'ಸಭ್ಯತಾಲತೆ'ಯು ಈ ಚಿತ್ರವನ್ನು ಪರಿಭಾವಿಸುವುದೊಂದೇ ದಾರಿ. ಹೀಗೆ ಸಂಕಟವನ್ನು ಪಾರಮಾಡಲಗತ್ಯವಾದಷ್ಟು ಭಕ್ತಿಯ ಚಿತ್ರ ತನ್ನ ತೀವ್ರ ರೂಪದಲ್ಲಿ ಮೂಡಿಬಂದಿದೆ. ಯುದ್ಧಪ್ರಸಂಗ ಇನ್ನೂ ದೂರವಿರುವುದರಿಂದ, ಕಥಾಂತರವಾಗುವುದಿಲ್ಲ. ರಸಕ್ಕೂ ಚ್ಯುತಿ ಬರುವುದಿಲ್ಲ. ಕೃಷ್ಣಕಾಣಿಸಿಕೊಂಡ ಮೇಲೆ ಕೇಳುವುದೇನು ? ಅವನ ಸ್ತುತಿ ಮಾಡಲುಪಕ್ರಮಿಸಿದಾಗ 'ಸ್ತೋತ್ರಕೀಗಳು ಸಮಯವೇ ಹೇಳೀತಕೀ ಸ್ತುತಿ ತಂಗಿ' ಎಂಬು ಕೃಷ್ಣನೇ ಎಚ್ಚರಿಸಬೇಕಾಯಿತು. ದ್ರೌಪದಿಗೋ ಭಕ್ತವತ್ಸಲ ಬಂದ ಮೇಲೆ, ಬಾಯಿಬಿಟ್ಟು ಹೇಳುವುದಕ್ಕೇನಿದೆ ? ಭಕ್ತಿಯ ಹಿರಿಮೆ ಇದು.

ಉ) ಕುಮಾರವ್ಯಾಸ ಭಾರತದ ಉದ್ಯೋಗ ಪರ್ವದಲ್ಲಿ, ವಿದುರನ ಭಕ್ತಿಯ ಚಿತ್ರವಿದೆ. ಅದು ಸಹ ಔಚಿತ್ಯದಿಂದಲೇ ಕೂಡಿದೆ.13 ಕುಮಾರವ್ಯಾಸಭಾರತದ ಚಿತ್ರ ವ್ಯಾಸ ಭಾರತದಲ್ಲಿಲ್ಲ. ರಜ್ಜುವಿನಿಂದ ಕಟ್ಟಲು ಬಯಸಿದ, ಸಾರವಸ್ತುಗಳಿಂದ ಪಾಕಮಾಡಿಸಿದ ಕೌರವನಿಗಿಂತ, ಭಕ್ತ ವಿದುರನ ಮನೆಯ ಒಕ್ಕುಡಿತೆ ಹಾಲೇ ಕೃಷ್ಣನಿಗೆ ಪ್ರಿಯವಾಯಿತೆಂಬುದನ್ನು ಮನಗಾಣಿಸಲು ಭಕ್ತಿಯ ಚಿತ್ರ ಬಂದಿದೆ. ಭಗವಂತನನ್ನು ಭಕ್ತಿಯ ಪಾಶದಿಂದ ಮಾತ್ರವೇ ಬಂಧಿಸಲು ಸಾಧ್ಯವೆಂಬ ಧ್ವನಿಯಿದೆ ಅಲ್ಲಿ. ವಿದುರನ ಭಕ್ತಿಯ ಚಿತ್ರ ಪದ್ಯಗಳಲ್ಲಿ ಮೂಡಿ ಬಂದಿದೆ. ಇದರಿಂದ ರಸಾಸ್ವಾದಕ್ಕೆ ಯಾವುದೇ ಧಕ್ಕೆಯಿಲ್ಲ.

ಕೃಷ್ಣನ ಸಿರಿವೋಗದ ದರ್ಶನವಾದೊಡನೆಯೆ ವಿದುರನಿಗೆ ಆದ ಸಂತೋಷದ ಅದ್ಭುತ ಚಿತ್ರವಿದು.

"ತನುವಮರೆದನು ಪುಳಕ ಜಲದಲಿ। ನೆನೆದು ನಾರಾಯಣನ ಪದ ದರು
ಶನದ ಹರುಷಾರಣ್ಯದಲಿ ಮನ ಹೊಲಬುದಪ್ಪಿದನು" (ಉಪ-ಸಂ8-ಪ8)

"ಎಲೆಲೆ ಬಕುತರ ಭಾಗ್ಯಶಾಲಿಯು । ಬೆಳಗಳಿವೆಲಾ ವಿಬುಧನುತ ಪದ
ನಳಿನಯುಗಳದಲೊಡಲ ನೀಡಾಡಿದನು ಹರುಷದಲಿ"
(ಉಪ-ಸಂ 8-ಪ 10)

"ನೋಡಿದನು ಮನದಣಿಯೆ ಮಿಗೆ ಕೊಂ । ಡಾಡಿದನು ಬೀದಿಯಲಿ ಹರಿದೆಡೆ
ಯಾಡಿದನು ಭ್ರಮೆಯಾಯ್ತು ವಿದುರಗೆಂಬ ಗಾವಳಿಯ
ಕೂಡೆ ಕುಣಿದನು ಮನೆಯ ಮುಂದಿಂ । ದಾಡಿದನು ಮೈಮರೆದ ಹರುಷದ
ಗಾಡಿಕೆಯಲಪ್ರತಿಮನೆಸೆದನು ಬಕುತಿ ಕೇಳಿಯಲಿ (ಉಪ-ಸಂ 8-ಪ 11)

ಭಕ್ತಿ ನಿರೂಪಣೆಯ ಸಂದರ್ಭದಲ್ಲಿ ಇಂಥ ಸೊಗಸಾದ ಚಿತ್ರಗಳು ಕಾಣಿಸಿಕೊಂಡು ಬೇಸರ ಪರಿಹಾರ ಮಾಡುತ್ತವೆ.

ಊ) ರಾಯಭಾರಿಯಾಗಿ ಬಂದಿದ್ದ ಕೃಷ್ಣ, ಕೌರವನೋಲಗಕ್ಕೆ ಹೋಗುವ ಸಂದರ್ಭದ 6 ಷಟ್ಪದಿಗಳಲ್ಲಿ ಭಕ್ತಿಯ ನಿರೂಪಣೆಯಿದೆ.14 ವ್ಯಾಸಭಾರತದಲ್ಲಿ ಈ ಸ್ತೋತ್ರವಿಲ್ಲ. ಕುಮಾರವ್ಯಾಸನ ವರ್ಣನೆಗೆ ಔಚಿತ್ಯವಿದೆ. ಈ ವರ್ಣನೆಯ ಸೊಗಸನ್ನು, ಕೌರವನ ಆಸ್ಥಾನ ವರ್ಣನೆಯ ಹಿನ್ನೆಲೆಯಲ್ಲಿ ಪರಿಶೀಲಿಸುವುದು ಅತ್ಯಗತ್ಯ. ಎಂದರೆ ಕೌರವನ ಆಸ್ಥಾನ ವೈಭವ, ಅವನ ಮನಸ್ಥಿತಿ, ಆಸ್ಥಾನದ ಮಂತ್ರಿ ಹಾಗೂ ಕರಣಿಕರ ಮೇಧಾಶಕ್ತಿ ಮತ್ತು ಮಹಾವೀರರ ಉಪಸ್ಥಿತಿ–ಇವುಗಳ ಹಿನ್ನೆಲೆಯಲ್ಲಿ ಪರಿಭಾವಿಸಬೇಕು. ಕೃಷ್ಣನೊಬ್ಬನೇ ರಥದಲ್ಲಿ ಹೋಗುತ್ತಿದ್ದಾನೆ. ಅವನು ಮಾನವ ವೇಷದಲ್ಲಿದ್ದರೂ, ದೈವವೆಂಬ ನಂಬಿಕೆ ಕವಿಯದು. ಆದುದರಿಂದಲೇ ಅವನ ಸ್ತುತಿ. ಆ ಸಂದರ್ಭದಲ್ಲಿ ಬರುವ ಈ ಪದ್ಯಗಳನ್ನು ನೋಡಿ :

ಅರಸ ಬಂದನು ಭಾಗವತ ಜನ । ಪರುಷ ಬಂದನು ಭಕ್ತವತ್ಸಲ
ಕರುಣಿ ಬಂದನು ತನ್ನ ನೆನೆದರೆ ಪರಮ ಪದವೀವ
ಪರಮ ಪುರುಷೋತ್ತಮನು ಬಂದನು । ದುರಿತ ದುರ್ಗ ವಿಭಾಡ ಬಂದನು
ಸುರರ ಸಲಹುವ ದೇವ ಬಂದನು ನೃಪತಿಯರ ಮನೆಗೆ
(ಉಪ-ಸಂ 8-ಪ 53)

'ನೃಪತಿಯುರ ಮನೆಗೆ' ದೇವ ಬಂದ ಎಂಬುದನ್ನು ಗಮನಿಸಿ. ಅವನು ಬಂದಿರುವುದು ದುರಿತದುರ್ಗವನ್ನು ವಿಭಾಡಿಸುವುದಕ್ಕಾಗಿ. ಕವಿಯ ದೃಷ್ಟಿಯಲ್ಲಿ ಆ ದುರಿತ ಕೌರವನಲ್ಲದೆ ಮತ್ತಾರು ? ಈ ಮುಂದಿನ ಪದ್ಯವನ್ನು ನೋಡಿ, ಬಿರುಗಾಳಿ ಬೀಸಿದ ಅನುಭವ ವಾಗುತ್ತದೆ. ಕೌರವನ ವೈಭಗಳೆಲ್ಲ ಪುಡಿ ಪುಡಿಯಾಗುವ ಸಮಯ ಬಂತೆಂಬ ಅರಿವೂ ಉಂಟಾಗುತ್ತದೆ.

ಕ್ಷೀರವಾರಿಧಿಶಯನ ಬಂದನು । ವಾರಿಜೋದರ ಕೃಷ್ಣ ಬಂದನು
ಧಾರುಣಿಯ ಹೊರೆಯಿಳುಗಲೋಸುಗ ಮನುಜ ವೇಷದಲಿ
ಭೂರಿದನು ಜರನೊರಸಿ ಕೌರವ । ವಾರಿಧಿಯ ಮುಕ್ಕಳಿಸಲೋಸುಗ
ಭೋರನೈತರುತಿದ್ದನಂಧನೃಪಾಲನರಮನೆಗೆ ಉಪ-ಸಂ. 8-ಪ. 54

ಕೃಷ್ಣನ ಹಿರಿಮೆ, ಅವನು ಅವತರಿಸಿರುವ ಉದ್ದೇಶ, ಹಿಂದಿನ ಅವನ ಸಾಧನೆಗಳ ನೆನಪಿ ನೊಂದಿಗೆ, ಕೌರವ ಕುಲವನ್ನು ಮುಕ್ಕಳಿಸಲು ಬರುತ್ತಿರುವ ವೇಗ ಕಣ್ಣಿಗೆ ಕಟ್ಟಿದಂತಾ ಗುತ್ತದೆ. ಭಕ್ತಿಯ ಪ್ರತಿಪಾದನೆಯಲ್ಲಿರುವುದು ನಿಜ. ಆದರೆ ಅದು ಕವಿಯದು. ಹಾಗಿದ್ದರೂ ಅದು ಮೂಲಕಥೆಯೊಂದಿಗೆ ಸಂಬಂಧಪಡೆದುಕೊಂಡು ಪ್ರತ್ಯೇಕತೆಯನ್ನು ಕಳೆದುಕೊಂಡು ಬಿಟ್ಟಿದೆ. ದೈವಶಕ್ತಿಯ ಮುಂದೆ ಮಾನವಶಕ್ತಿ ಏನೇನೂ ಅಲ್ಲ. ಅವನು ಭಕ್ತರಕ್ಷಕ, ದುಷ್ಟಶಿಕ್ಷಕ ಎಂಬ ತತ್ವ ಇಲ್ಲಿ ಪ್ರತೀತವಾಗಿದೆ. ಇದು ಸನ್ನಿವೇಶಾನು ಗುಣವಾಗಿದ್ದು ಬೇಸರ ತರಿಸುವಂತಿಲ್ಲ.

ಏ) ಭಗವದ್ಗೀತೆಯ ಪ್ರಸಕ್ತಿ ವ್ಯಾಸಭಾರತದಲ್ಲಿ ವಿಸ್ತಾರವಾಗಿ ಮೂಡಿಬಂದಿದೆ. ಅದೇ ರೀತಿಯಲ್ಲಿ ಕುಮಾರವ್ಯಾಸ ಭಾರತದಲ್ಲಿ ಸಹ ಮೂಡಿಬಂದಿದೆ. ಇಲ್ಲಿ ಪ್ರಸ್ತುತವಾದದ್ದು ವಿಶ್ವರೂಪವನ್ನು ನೋಡಿದ ಅರ್ಜುನನ ಭಕ್ತಿಯ ಅನುಭವದ ಚಿತ್ರ 'ಅಗ್ಗ'ದ ವಿಶ್ವರೂಪವನ್ನು ತೋರಿಸಿದಾಗ ಅರ್ಜುನನ ಅಹಂಕಾರ ಪುಡಿಯಾಗಿ, ತನ್ನ ತಿಳುವಳಿಕೆಗೆ ತಾನೇ ಪಶ್ಚಾತ್ತಾಪ ಪಡುತ್ತಾನೆ. ಒಂದು ರೀತಿ ಇಂದ್ರಕೀಲದಲ್ಲಿ ತಾನು ಹೋರಾಡಿದ್ದು ಶಿವನೊಂದಿಗೆ ಎಂಬುದರ ಅರಿವಾದಾಗ, ಅರ್ಜುನ ಹೇಗೆ ವರ್ತಿಸಿದನೋ ಅದೇ ರೀತಿ ಅವನ ವರ್ತನೆ ಇಲ್ಲೂ ಇದೆ. ಇಲ್ಲಿಯ ವರ್ಣನೆಯಲ್ಲಿ ಶುದ್ಧ ಭಕ್ತಿಯಿದೆ ಎನ್ನುವಂತಿಲ್ಲ. ಸನ್ನಿವೇಶಕ್ಕೆ ಮೆರಗನ್ನು ಕೊಡುವ ಎಲ್ಲ ಚೆಲುವೂ ಇದೆ. ಈ ವರ್ಣನೆಗೆ 29 ಪದ್ಯಗಳನ್ನು ಕವಿ ವಿನಿಯೋಗಿಸಿದ್ದಾನೆ. ಕೃಷ್ಣನ 'ವಿರೂಪ' ಸ್ವರೂಪವನ್ನು ಸೆರೆಹಿಡಿದ ಅರ್ಜುನನ ಸ್ಥಿತಿಯ ಚಿತ್ರ ಅದ್ಭುತವಾಗಿದೆ.

ಪರುಷ ಕಲ್ಲೆಂದಳುಕಿ ಸುರತರು । ಮರನು ತೆಗೆಯೆಂದಮರಧೇನುವ
ಪರರ ಮನೆಯಲಿ ಮಾರಿ ಚಿಂತಾಮಣಿಗೆ ಕೈಮುಚುಕಿ

ಪರಳು ತೆಕ್ಕೆಯಿದೆಂಬ ಪಾಪಿಗೆ ಪರಮಗುರು ನಾನಾದೆನೈ ಮುರ
ಹರನ ಮೈದುನನೆಂದು ಗರ್ವಿಸಿ ಕೆಟ್ಟೆನಕಟೆಂದ (ಭೀಪ-ಸಂ. 3-ಪ.71)

ಲೋಕವರಿಯಲನಂತ ವೇದವು । ಮೂಕನಾದವುಜೀಯ ಜಪನವಿ
ವೇಕಿವಾನವ ಮಶಕವಿದು ನಿಮ್ಮಳತೆ ಗೈದುವುದೇ (ಭೀಪ-ಸಂ. 3-77)

ಈ ಪದ್ಯಗಳು ಅಹಂಕಾರ ನಿರಸನವಾದಾಗ, ಮಾನವನ ಅರಿವಿಗೆ ಸಿಲುಕುವ ಸತ್ಯದರ್ಶನ ಮಾಡಿಸುತ್ತಿವೆ. ದೇವನ ಹಿರಿಮೆಯು ಅರಿವಾದಾಗ, ಸ್ತೋತ್ರ ದೀರ್ಘವೆಂಬ ಭಾವನೆ ಬೆಳೆಯಲು ಅವಕಾಶವೆಲ್ಲಿ ?

ಹೀಗೆ ಕುಮಾರವ್ಯಾಸ ಭಾರತದ ಗಾತ್ರವನ್ನು ಗಮನಿಸಿದರೆ, ವಿದ್ವಾಂಸರು ಭಾವಿಸುವಂತೆ ಕೇಶವ ಕೀರ್ತನೆ ಹದಮೀರಿದೆ ಎನ್ನಲಾಗುವುದಿಲ್ಲ. ಪಂಪ ಭಾರತ ದೊಂದಿಗೆ ಹೋಲಿಸಿದಾಗ ಭಕ್ತಿ ನಿರೂಪಣೆ ಅತಿ ಎನ್ನಿಸುವುದು ಸಹಜ. ಆದರೆ ಕವಿಗಳ ಉದ್ದೇಶದಲ್ಲಿರುವ ಅಂತರವನ್ನು ಗ್ರಹಿಸಬೇಕಾದ್ದು ಅಗತ್ಯವಲ್ಲವೆ ? ಕುಮಾರವ್ಯಾಸ ಭಾರತದ ಭಕ್ತಿಪ್ರತಿಪಾದಕ ಪದ್ಯಗಳೆಲ್ಲವೂ ಅತಿ ಉತ್ಕೃಷ್ಟಕಾವ್ಯ ಎಂಬುದು ಅಭಿಪ್ರಾಯ ವಲ್ಲ. ಇಂಥ ಕಾವ್ಯವೊಂದಿದೆ ಎಂದು ಯಾವುದೇ ಸಾಹಿತ್ಯದಲ್ಲಿ ಹೆಸರಿಸಲಾದೀತೆ ? ಕುಮಾರವ್ಯಾಸನಿಗೆ 'ಕಲಿಯುಗದಲ್ಲಿ ಫಲಿಸುವುದು ಲಕ್ಷ್ಮೀಲೋಲ ನಾಮಸ್ತುತಿ' ಎಂಬ ನಂಬಿಕೆ ಇದೆ. ಈ ನಂಬಿಕೆಯ ಕಾರಣದಿಂದಾಗಿ ಸಂದರ್ಭ ಸಿಕ್ಕಾಗ ವರ್ಣಿಸುತ್ತಾನೆ. ಎಸ್. ವಿ. ರಂಗಣ್ಣನವರು ಹೇಳಿರುವಂತೆ ಕವಿಯ ಚಿತ್ತ ವೃತ್ತಿಯಿಂದ ಇದು ಅನಿವಾರ್ಯ. ಆದರೆ ಕಾವ್ಯದ ಕಟ್ಟಳೆಯನ್ನು ಮೀರಿ ಬಂದಿವೆ ಎಂದು ಸಾಧಿಸಲು ಸಾಧ್ಯವಾಗುವುದಿಲ್ಲ.

## 2. ನೀತಿ ಸಂದರ್ಭ :

ವ್ಯಾಸಭಾರತದಲ್ಲಿ ನೀತಿಬೋಧೆಗೆ ಪ್ರಾಶಸ್ತ್ಯವಿದೆ. ಅದೇ ಕುಮಾರವ್ಯಾಸ ಭಾರತಕ್ಕೆ ಆಕರವಾಗಿರುವುದರಿಂದ, ಕಥೆಗೆ ಅಗತ್ಯವಾದಷ್ಟಾದರೂ ನೀತಿಬೋಧೆ ಕಾಣಿಸಿ ಕೊಳ್ಳುವುದು ಅನಿವಾರ್ಯ. ಈ ಮಾತಿಗೆ ಪಂಪನೂ ಹೊರತಲ್ಲ.

ಕುಮಾರವ್ಯಾಸನಿಗೆ ಕಥೆಯಮೇಲೆ ನಟ್ಟದೃಷ್ಟಿ. ವ್ಯಾಸಭಾರತದಲ್ಲಿರುವ ದೀರ್ಘ ಮತ್ತು ಅನಗತ್ಯ ಎಂದು ತೋರಿದ ಉಪನ್ಯಾಸಗಳನ್ನು, ಸಂವಾದಗಳನ್ನು ಬಿಟ್ಟು, ನೀತಿ ಬೋಧೆಯ ಸ್ಥಾನದಲ್ಲಿ ರಸಪೋಷಕ ಸಂಗತಿಗಳನ್ನು ತಂದಿರುವುದುಂಟು. ಈ ಮೊದಲೆ ಕುಮಾರವ್ಯಾಸ ಭಾರತದಲ್ಲಿ ನೀತಿಪ್ರತಿಪಾದನೆಗೆ 323 ಪದ್ಯಗಳು ಮೀಸಲಾಗಿವೆ ಎಂದು ಹೇಳಿದ್ದಾಗಿದೆ ಎಂದರೆ ಶೇ 4ರಷ್ಟು.

ಭಾರತದ ಕಥೆಯಲ್ಲಿ ನೀತಿಪ್ರಸಕ್ತಿ ಕಾಣಿಸಿಕೊಳ್ಳುವ ಪ್ರಮುಖ ಎಡೆಗಳೆಂದರೆ ಸಭಾಪರ್ವದಲ್ಲಿ ನಾರದ ನೀತಿಬೋಧೆ, ಆದಿಪರ್ವದಲ್ಲಿ ಶಕುನಿಯ ನೀತಿಬೋಧೆ

ಉದ್ಯೋಗ ಪರ್ವದಲ್ಲಿ ಕೃಷ್ಣನ ನೀತಿಬೋಧೆ, ವಿದುರನ ನೀತಿಬೋಧೆ—ಇವುಗಳು. ಇನ್ನುಳಿದ ಸ್ಥಳಗಳಲ್ಲಿ ಅಲ್ಲಲ್ಲಿ ನೀತಿ ಪ್ರಸಕ್ತಿ ಕಾಣಿಸಿಕೊಳ್ಳುತ್ತವೆಯಾದರೂ ಅವು ಎದ್ದು ನಿಲ್ಲುವಂತಿಲ್ಲ. ನಿದರ್ಶನಕ್ಕೆ ಅರ್ಜುನನನ್ನು ಇಂದ್ರಕೀಲಕ್ಕೆ ಕಳುಹಿಸಿಕೊಡುವ ಸಂದರ್ಭದಲ್ಲಿ ವ್ಯಾಸ ಮತ್ತು ಧರ್ಮರಾಯ ಅವನಿಗೆ ನೀತಿಯನ್ನು ಹೇಳುವುದು ; ಮಗ ದಾರಿ ತಪ್ಪುತ್ತಿರುವುದನ್ನು ಗಮನಿಸಿದ ಧೃತರಾಷ್ಟ್ರ ಕೌರವನಿಗೆ ನೀತಿಹೇಳುವುದು, ಹೀಗೆಯೇ ಭೀಷ್ಮ ಮತ್ತು ವಿದುರರು ನೀತಿಯನ್ನು ಬೋಧಿಸುವುದು. ಇವುಗಳಿಂದ ಕಾವ್ಯಕ್ಕೆ ಪ್ರಯೋಜನವಾಗಿದೆ ಆದ್ದರಿಂದ ಇವುಗಳನ್ನು ಕುರಿತು ವಿಚಾರ ಮಾಡಿಲ್ಲ.

ಅ) ಸಭಾಪರ್ವದಲ್ಲಿರುವ ನಾರದ ನೀತಿ ಬೋಧೆ, ವ್ಯಾಸ ಭಾರತದ 380 ಶ್ಲೋಕಗಳಲ್ಲಿ ನಿರೂಪಿತವಾಗಿದ್ದರೆ,15 ಕುಮಾರವ್ಯಾಸ ಭಾರತದಲ್ಲಿ 71 ಪದ್ಯಗಳಲ್ಲಿ ನಿರೂತವಾಗಿದೆ.16 ನೀತಿ ನಿರೂಪಣೆ ಇಲ್ಲಿ ದೀರ್ಘವಾಗಿದ್ದು, ಬೇಸರ ತರಿಸುವಂತಿವೆ ಎಂಬುದು ನಿಜ. ಏಕೆಂದರೆ ಕಥೆಯ ದೃಷ್ಟಿಯಿಂದ, ನಾರದನ ಕಾರ್ಯವು, ರಾಜಸೂಯ ಯಾಗ ಮಾಡುವ ಬಯಕೆಯನ್ನು ಧರ್ಮರಾಯನ ಅಂತರಂಗದಲ್ಲಿ ಬಿತ್ತುವುದಷ್ಟೇ ಆಗಿತ್ತು. ಆದ್ದರಿಂದ ವ್ಯಾಸ ಮತ್ತು ಕುಮಾರವ್ಯಾಸ ಇಬ್ಬರೂ ನೀತಿಬೋಧೆ ಬೇಸರವಾಗುವಂತೆ ನಿರೂಪಿಸಿದ್ದಾರೆ. ವ್ಯಾಸಭಾರತ ಪುಣ್ಯಕರವಾದ ಕಥೆ ಎಂಬುದನ್ನು ಪ್ರತಿಪಾದಿಸಲು ಕಾವ್ಯರಚನೆ ಮಾಡಿರುವ ಕುಮಾರವ್ಯಾಸ, ಅವರನ್ನೇ ಅನುಸರಿಸಿದ್ದಾನೆ.

ಆ) ಕುಮಾರವ್ಯಾಸ ಭಾರತದ ಆದಿಪರ್ವದಲ್ಲಿ ಶಕುನಿ ಕೌರವನಿಗೆ ರಾಜನೀತಿ ಬೋಧಿಸುವ ಸಂದರ್ಭವಿದೆ. ಇದೇ ಸಂದರ್ಭ ವ್ಯಾಸಭಾರತದ ಸಭಾಪರ್ವದಲ್ಲಿದೆ. ವ್ಯಾಸಭಾರತದಲ್ಲಿ ನೀತಿ ನಿರೂಪಣೆಗೆ 10 ಶ್ಲೋಕಗಳು ಮೀಸಲಾಗಿದ್ದರೆ17 ಕುಮಾರವ್ಯಾಸ ಭಾರತದಲ್ಲಿ 42 ಪದ್ಯಗಳು ಮೀಸಲಾಗಿವೆ.18 ಕುಮಾರವ್ಯಾಸನ ನಿರೂಪಣೆ ವಿಸ್ತಾರವಾಗಿದ್ದರೂ, ಔಚಿತ್ಯದಿಂದ ಕೂಡಿದೆ. ಶಕುನಿ ತಾನು ಕೌರವರ ಹಿತೈಷಿ ಎಂಬುದನ್ನು ಸ್ಥಾಪಿಸುವ ಪ್ರಯತ್ನದಲ್ಲಿದ್ದಾನೆ. ಕೌರವನಿಗೆ ಪ್ರಿಯವಾದುದನ್ನು ಹೇಳಿದರೆ ಸಾಧ್ಯವೆಂಬ ಅರಿವು ಅವನಿಗಿದೆ. ಇನ್ನುಳಿದ ಹಿರಿಯರ ಮಾತುಗಳ ಪರಿಣಾಮ ಕೌರವನ ಮೇಲಾಗದಂತೆ, ಪರಿಣಾಮಕಾರಿಯಾಗಿ ಹೇಳಬೇಕಾದ ಅಗತ್ಯ ಅವನಿಗೆ ಕಂಡಿದೆ.

ಶಕುನಿಯ ಬೋಧೆ, ದುರ್ಬೋಧೆ ಎನ್ನಿಸಿದರೂ, ಅಲ್ಲಿರುವುದು ರಾಜನೀತಿ. ಶತ್ರುಗಳನ್ನುಪೇಕ್ಷಿಸದೆ ಎಚ್ಚರದಿಂದಿದ್ದು ನಾಶಮಾಡಬೇಕೆಂಬುದು ಅವನ ನೀತಿಯ ಸಾರ. ಕುಮಾರವ್ಯಾಸನ ನಿರೂಪಣೆ ಆಕರ್ಷಕವಾಗಿದ್ದು ಸರಳವಾಗಿದೆ. ಕೌರವನಿಗೆ ಪಾಂಡವರ ಮೇಲಣ ವೈರ ದ್ವಿಗುಣಗೊಳ್ಳಲು ಸಹಕಾರಿಯಾಗಿದೆ. ಈ ಸಂದರ್ಭದಲ್ಲಿ ಬರುವ ಒಂದೆರಡು ನಿದರ್ಶನಗಳನ್ನು ನೋಡಿ :

ದೊಳೆಯಲೇ ಮುರುಡಿಸಲು ಬೇಹುದು । ಬಲಿದ ಬಳಿಕದು ನಿನ್ನ ಹವಣೇ
ಇಳೆಯೊಳರ್ಧವನಿತ್ತು ರಿಪುಗಳ ಪೆಚ್ಚಿ ಸಿದ ಬಳಿಕ
ಗೆಲುವನಾವನು ದೇವದಾನವ । ರೊಳಗೆ ಭೀಮಾರ್ಜುನರ ಕೈಮನ
ದಳವನರಿಯಾ ಭಾರದ್ಯೆ ಮೇಲೆಂದನಾ ಶಕುನಿ (ಅಪ–ಸಂ 8–ಪ 18)

ಇದು ಬೋಧೆಯೇ ನಿಜ. ಆದರೆ ಕಾವ್ಯದ ವಸ್ತುವಿನಿಂದ ಪ್ರತ್ಯೇಕವಾಗುಳಿದಿದ್ದೂ, ಪ್ರತ್ಯೇಕವಾಗುಳಿಯದೆ ಸೇರಿಹೋಗಿದೆ. ಪಾಂಡವರು ಬಲಿಷ್ಠರಾದರೆ ಕಷ್ಟವೆಂಬ ಎಚ್ಚರಿಕೆಯನ್ನೊಳಗೊಂಡು, ಕೌರವನಲ್ಲಿ ತಳಮಳವನ್ನುಂಟುಮಾಡಲು ಶಕ್ತವಾಗಿದೆ.

ವಿಷವಣುವೆಂದಳುಕದುಪಭೋ । ಗಿಸಲು ಕೊಲ್ಲದೆ ಬಿಡುವುದೇ ಕರ
ಗಸದ ನಡುಬಡವಾದರೆಯು ಕುಯ್ದಿಕ್ಕದೇ ತರುವ
ಶಿಶುವಿವನು ಸಾಮರ್ಥ್ಯ ಪುರುಷನೆ । ಪುಸಿಕಣಾಯೆಂದುಳುಹಿದೊಡೆರ
ಕ್ಕಸನು ಮುಂದಕ್ಕೆ ತನಗವನೆಂದನಾ ಶಕುನಿ (ಅಪ–ಸಂ 8–ಪ 28)

ಇಂತಹ ನಿರೂಪಣೆಗಳು, ಸಹೃದಯನನ್ನು ಬೆರಗಾಗಿಸುತ್ತವೆ. ನೀತಿಬೋಧೆಯ ಚಾಪಲ್ಯದಿಂದ ಇದು ವಿಸ್ತಾರವಾಗಿಲ್ಲ : ನಿರ್ದಿಷ್ಟ ಉದ್ದೇಶದಿಂದ ವಿಸ್ತಾರವಾಗಿದೆ. ರಸಾನುಭವಕ್ಕೆ ಇದರಿಂದ ಅಡ್ಡಿಯಾಗುವುದಿಲ್ಲ. ಕಾವ್ಯದ ಹೊರಗಿನ ಸಂಗತಿಯಾಗಿ ನಿಲ್ಲದೆ, ಕಾವ್ಯದ ಅಂಗವಾಗಿಯೇ ಪರಿಣಮಿಸಿದೆ ಈ ಪ್ರಸಂಗ.

ಇ) ವ್ಯಾಸಭಾರತದಲ್ಲಿ ವಿದುರನ ನೀತಿಬೋಧೆ 521 ಶ್ಲೋಕಗಳಲ್ಲಿ ಮೂಡಿ ಬಂದಿದೆ.19 ಉದ್ಯೋಗ ಪರ್ವದ ಮೂರನೇ ಸಂಧಿಯಲ್ಲಿ, 135 ಪದ್ಯಗಳಲ್ಲಿ ಕುಮಾರವ್ಯಾಸನ ವಿದುರ ನೀತಿಬೋಧೆ ಮಾಡಿದ್ದಾನೆ. ಈ ನಿರೂಪಣೆ ಕಥೆಗೆ ಸಂಬಂಧಿಸದೆ ಪ್ರತ್ಯೇಕವಾಗಿ ನಿಲ್ಲುವುದರಿಂದ ಬೇಸರ ತರಿಸುವಂತೆ ಇದೆ. ಆದರೂ ಮೂಲದಲ್ಲಿರುವ ಸುಧನ್ವ ವಿರೋಚನರ ವಿವಾದ, ದತ್ತಾತ್ರೇಯ ಮತ್ತು ಸಾಧ್ಯ ದೇವತೆಗಳ ಸಂವಾದವನ್ನು ಕುಮಾರವ್ಯಾಸ ಬಿಟ್ಟಿರುವುದರಿಂದ, ಅತಿ ವಿಸ್ತಾರವಾದ ನಿರೂಪಣೆಯು ಬೇಸರಕ್ಕೆ ಕಾರಣವಾಗುವುದೆಂಬ ಅರಿವು ಅವನಿಗಿತ್ತೆಂದು ಸ್ಪಷ್ಟವಾಗುತ್ತದೆ. ಆದರೂ ಭಿನ್ನ ಅಭಿರುಚಿಯ ಓದುಗರನ್ನು ಕುಮಾರವ್ಯಾಸ ಗಮನದಲ್ಲಿಟ್ಟಿರುವುದು ಸಮರ್ಥನೀಯವೇ ಆಗಿದೆ. ವ್ಯಾಸಭಾರತದ ಹಿರಿಮೆಯನ್ನು ಎತ್ತಿ ಹಿಡಿಯಲೆಂದೇ ಕೃತಿರಚನೆ ಮಾಡಿದ ಕುಮಾರವ್ಯಾಸ. ವ್ಯಾಸರ ದಾರಿಯಲ್ಲೇ ನಡೆದಿದ್ದರೂ, ಮೂಲಕ್ಕೆ ಹೋಲಿಸಿದರೆ, ನೀತಿ ನಿರೂಪಣೆ ಸಹಿಸಲಾಗದಷ್ಟು ವಿಸ್ತಾರವಾಗಿದೆ ಎನ್ನುವಂತಿಲ್ಲ.

ಒಟ್ಟಿನಲ್ಲಿ ನೀತಿ ಬೋಧನೆಯ ಸಂದರ್ಭಗಳು ಕಾವ್ಯದಲ್ಲಿ ಕಡಿಮೆ. ಇರುವ ಮೂರು ಪ್ರಸಂಗಗಳಲ್ಲಿ ಉಚಿತವೆಂದು ತೋರುವ ವರ್ಣನೆಯಿರುವುದು ಶಕುನಿಯ ಬೋಧೆಯ ಸಂದರ್ಭದಲ್ಲಿ ಮಾತ್ರ. ಇನ್ನುಳಿದಂತೆ ಹಲವೆಡೆಗಳಲ್ಲಿ ಪ್ರಾಸಂಗಿಕವಾಗಿ ಬರುವ ನೀತಿ ಬೋಧೆ ತುಂಬ ಸಂಗ್ರಹವಾಗಿದ್ದು ಕಥೆಗೆ ಹೊಂದಿಕೊಳ್ಳುವುದರಿಂದ ಬೇಸರ ತರಿಸುವಂತಿಲ್ಲ.

**ಧರ್ಮಸಂದರ್ಭ :**

ವ್ಯಾಸಭಾರತದೊಂದಿಗೆ ಹೋಲಿಸಿದರೆ, ಕುಮಾರವ್ಯಾಸ ಭಾರತದಲ್ಲಿ ಧರ್ಮ ಸಂಬಂಧಿಯಾದ ಉಪದೇಶ ತುಂಬಾ ಕಡಿಮೆ. ಕುಮಾರವ್ಯಾಸಭಾರತದಲ್ಲಿ ಅತಿ ವಿಸ್ತಾರವೆಂದು ಹೇಳಬಹುದಾದದ್ದು ಸನತ್ಸುಜಾತರ ಧರ್ಮಬೋಧೆ. ವ್ಯಾಸಭಾರತ ದಲ್ಲಿ ಇದು ಐದು ಅಧ್ಯಾಯಗಳಲ್ಲಿದ್ದು 172 ಶ್ಲೋಕಗಳಲ್ಲಿ ನಿರೂಪಿತವಾಗಿದೆ.[20] ಕುಮಾರವ್ಯಾಸ ಭಾರತದಲ್ಲಿ 114 ಪದ್ಯಗಳು ಮೀಸಲಾಗಿವೆ.[21] ಇಲ್ಲಿ ಕುಮಾರವ್ಯಾಸ ಯಾವುದನ್ನು ಧರ್ಮವೆಂದು ಪರಿಗಣಿಸಿದ್ದನೋ ಅದರ ನಿರೂಪಣೆಯಿದೆ. ಬದುಕಿನಲ್ಲಿ ಯಾವುದು ಮುಖ್ಯವೆಂದು ನಂಬಿದ್ದನೋ ಅದರ ನಿರೂಪಣೆಯಿದೆ–ವ್ಯಾಸಭಾರತದ ಉಪದೇಶ ಅಲ್ಲಿಲ್ಲ.

ಇನ್ನುಳಿದಂತೆ ಅರಣ್ಯಪರ್ವದಲ್ಲಿ ಧರ್ಮಬೋಧೆಯ ಪ್ರಸಕ್ತಿಗಳಿವೆ. ನಹುಷ ಮತ್ತು ಯಕ್ಷ ಸಂದರ್ಭಗಳು ಉಲ್ಲೇಖಾರ್ಹವಾಗಿವೆ. ಇವು ಅಷ್ಟು ದೀರ್ಘವಾಗಿಲ್ಲ. ಧರ್ಮವ್ಯಾಧನ ಕಥೆಗೂ ಇದೇ ಮಾತು ಅನ್ವಯವಾಗುತ್ತದೆ. ಕಾಲಸೂಚಕತೆಯ ದೃಷ್ಟಿಯಿಂದ ಉಪಾಖ್ಯಾನಗಳು ಬಂದಿವೆ. ಅವು ಅನಾವಶ್ಯಕವೆಂದು ಹೇಳುವಂತಿಲ್ಲ. ಅವು ಬೇಸರ ತರಿಸುವಷ್ಟು ವಿಸ್ತಾರವಾಗಿಯೂ ಇಲ್ಲ.

ಈವರೆಗಿನ ವಿವೇಚನೆಯಿಂದ 'ಕೇಶವಕೀರ್ತನೆ ಹವಣು ಮೀರಿದೆ' ಎನ್ನಲು ಅವಕಾಶವಿಲ್ಲ ಎಂಬುದು ಸ್ಪಷ್ಟ. ನೀತಿ ಪ್ರಸಕ್ತಿ ವ್ಯಾಸಭಾರತದೊಂದಿಗೆ ಹೋಲಿಸಿದರೆ ಕಡಿಮೆಯೇ. ಧರ್ಮಬೋಧೆಯ ವಿಷಯದಲ್ಲಿ ವಿಮರ್ಶಕರ ಮಾತು ಅತಿ ಉತ್ಪ್ರೇಕ್ಷೆಯಿಂದ ಕೂಡಿದ್ದು ಎಂಬುದು ಸ್ಪಷ್ಟವಾಗುತ್ತದೆ.

## ಅಡಿ ಟಿಪ್ಪಣಿಗಳು

1. ಎಸ್. ವಿ. ರಂಗಣ್ಣ : ಕುಮಾರವ್ಯಾಸ, ಪು. 42
2. ಟಿ. ವಿ. ವೆಂಕಟಾಚಲಶಾಸ್ತ್ರಿ : ಕುಮಾರವ್ಯಾಸ ಭಾರತ ಸಂಗ್ರಹ, ಉಪೋದ್ಘಾತ, ಸಂ.ಎಂ.ವಿ.ಸೀ., ಪು. 37
3. ಎಸ್. ವಿ. ರಂಗಣ್ಣ : ಕುಮಾರವ್ಯಾಸ, ಪು. 45

4. ಅದೇ : " , ಪು. 44
5. ಟಿ. ವಿ. ವೆಂಕಟಾಚಲಶಾಸ್ತ್ರಿ : ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ 5, ಪು. 583
6. ಎ. ಆರ್. ಕೃಷ್ಣಶಾಸ್ತ್ರಿ : ವಚನಭಾರತ-1989, ಪೀಠಿಕೆ, ಪು. 37-42
7. ಮಹಾಭಾರತ ಪ್ರಥಮ ಖಂಡ : ಶಿಶುಪಾಲವಧಪರ್ವ, ಅಧ್ಯಾಯ 36-46 ಪೂರ್ತಿ
8. ಕರ್ಣಾಟಭಾರತ ಕಥಾಮಂಜರಿ : (ಸಂ) ಕುವೆಂಪು-ಮಾಸ್ತಿ, ಸಪ-ಸಂ 9-ಪೂರ್ತಿ
9. ಶ್ರೀಮನ್ಮಹಾಭಾರತ : ಸಂಪುಟ 4, ಪು. 1781
10. ಕರ್ಣಾಟಭಾರತ ಕಥಾ ಮಂಜರಿ : (ಸಂ) ಕುವೆಂಪು-ಮಾಸ್ತಿ, ಸಭಾ-ಸಂ. 14-ಪ. 109-129
11. ಮಹಾಭಾರತ ದ್ವಿತೀಯಖಂಡ : ವನಪರ್ವ, ಅಧ್ಯಾಯ 283, ಶ್ಲೋಕ 8-16
12. ಕರ್ಣಾಟಭಾರತ ಕಥಾಮಂಜರಿ : (ಸಂ) ಕುವೆಂಪು-ಮಾಸ್ತಿ, ಅರಣ್ಯ-ಸಂ. 8, ಪ. 22-29, 35-36
13. ಅದೇ : " ಉದ್ಯೋಗ ಪರ್ವ-ಸಂ 8, ಪ 5-15
14. ಅದೇ : " ಉದ್ಯೋಗಪರ್ವ-ಸಂ 9-ಪ 59-54;56
15. ಮಹಾಭಾರತ ಪ್ರಥಮ ಖಂಡ : ಸ.ಪ, ರಾಜಸೂಯಪರ್ವ, ಅಧ್ಯಾಯ 5-12ಪೂರ್ತಿ
16. ಕರ್ಣಾಟಭಾರತ ಕಥಾ ಮಂಜರಿ : (ಸಂ) ಕುವೆಂಪು-ಮಾಸ್ತಿ, ಸಭಾ, ಸಂ 1, ಪ 22-93
17. ಮಹಾಭಾರತ ಪ್ರಥಮ ಖಂಡ : ಆದಿಪರ್ವ, ಅಧ್ಯಾಯ 199, ಪು 483-84
18. ಕರ್ಣಾಟಭಾರತ ಕಥಾ ಮಂಜರಿ : ಪೂರ್ವೋಕ್ತ, ಆದಿಪರ್ವ, ಸಂ 8, ಪು 12-54
19. ಮಹಾಭಾರತ ತೃತೀಯಖಂಡ : ಉದ್ಯೋಗಪರ್ವ, ಅಧ್ಯಾಯ 33-41
20. ಅದೇ : " ಅಧ್ಯಾಯ 42-46
21. ಕರ್ಣಾಟಭಾರತ ಕಥಾ ಮಂಜರಿ : (ಸಂ) ಕುವೆಂಪು-ಮಾಸ್ತಿ, ಉದ್ಯೋಗಪರ್ವ, ಸಂ 4, ಪ 9-120

# ಬಸವಪೂರ್ವದ ಒಂದು ವಿಶಿಷ್ಟ ಅಭಿವ್ಯಕ್ತಿ : ಸಕಳೇಶ ಮಾದರಸ

ಡಾ|| ಎಸ್. ವಿದ್ಯಾಶಂಕರ್

ಸಕಳೇಶ ಮಾದರಸನು ಬಸವಣ್ಣನ ಹಿರಿಯ ಸಮಕಾಲೀನ. ಬಸವಣ್ಣನ ಬಲವಾದ ಆಕರ್ಷಣೆಗೆ ಒಳಗಾಗಿ ಆಂಧ್ರದ ಕಡೆಯಿಂದ ಇವನು ಕಲ್ಯಾಣಕ್ಕೆ ಬಂದನು. ಆಂಧ್ರದ ಕಲ್ಲುಕುರಿಕೆಯ ರಾಜ ಮಲ್ಲಿಕಾರ್ಜುನನ ಮಗನಾದ ಇವನು ವೈರಾಗ್ಯದಿಂದ ಅರಸುತನವನ್ನು ತೊರೆದು ಶ್ರೀಶೈಲಕ್ಕೆ ಹೊರಟನು* ಮಾರ್ಗ ಮಧ್ಯೆ ಅಂಬೆ ಎಂಬ ಗ್ರಾಮದ ಜನರು ಇವನ ಪೂಜಾನಿಷ್ಠೆಗೆ ಮನಸೋತು ಇವನನ್ನು ತಮ್ಮಲ್ಲಿಯೇ ನಿಲ್ಲಿಸಿಕೊಂಡರು. ಇವನ ಪೂಜಾವೈಭವಕ್ಕೆ ಆಕರ್ಷಿತರಾದ ಜನ ಇವನ ಶಿಷ್ಯರಾಗ ತೊಡಗಿದರು. ಶಿಷ್ಯರ ಬಳಗ ಹೆಚ್ಚುತ್ತಾ ಹೋದಂತೆ ಇವನ ಪ್ರತಿಷ್ಠೆಯೂ ಬೆಳೆಯಿತು. ಭಕ್ತರ ಮನೆಗೆ ಪೂಜೆಗೆ ಹೋದಲ್ಲಿ ಪೂಜಾಕಾರ್ಯಗಳಿಗೆ ಅವರಿಂದ ಹನ್ನೆರಡು ಹಣ ತೆಗೆದುಕೊಳ್ಳುತ್ತಿದ್ದನು. ಒಮ್ಮೆ ಭಕ್ತನೋರ್ವನು ತನ್ನ ಮಗಳನ್ನು ಒತ್ತೆಯಿಟ್ಟು ಅದರಿಂದ ಬಂದ ಹಣದಿಂದ ಸಕಲೇಶನನ್ನು ಮನೆಗೆ ಕರೆದುಕೊಂಡು

---

* ಶ್ರೀಶೈಲಕ್ಕೂ ಸಕಳೇಶ ಮಾದರಸನಿಗೂ ನಿಕಟವಾದ ಸಂಬಂಧವಿದೆ. ಅವನ ಬದುಕಿನ ಅನೇಕ ವೈಯಕ್ತಿಕ ಸಂಗತಿಗಳು ಅವನ ವಚನಗಳಲ್ಲಿ ಕಾಣಿಸಿಕೊಂಡಿದ್ದು, ಅವುಗಳಲ್ಲಿ ಶ್ರೀಶೈಲದ ಸಂಬಂಧವೂ ಒಂದು.

"ದೇಶ ದೇಶಾಂತರವ ತಿರುಗಿ ತೊಳಲಿ ಬಳಲಿ,
ಕೆಲರ ಹಳಿದು, ಕೆಲರ ಹೊಗಳಿ ವೃಥಾ ಹೋಯಿತ್ತೆನ್ನ ಸಂಸಾರ.
ಗಿರಿಶಿಖರದ ಮೇಲೆ ಲಿಂಗಧ್ಯಾನದಲಿ
ಮೌನಿಯಾಗಿರಿಸೆನ್ನ, ಸಕಳೇಶ್ವರಯ್ಯಾ." (ವ. ೬೬)
"...ಸಕಳೇಶ್ವರದೇವಾ, ಶರಣೆಂದು ವೀಣಾವಾದ್ಯವ ಬಾರಿಸುತ
ಆಡಿ ಹಾಡುವ ಸುಖವೆನಗೆಂದಪ್ಪುದೊ ಶ್ರೀಶೈಲದಲ್ಲಿ ?" (ವ. ೭೨)

ಬಂದು ಗುರುಸೇವೆ ಮಾಡಿದನು. ಅಷ್ಟವಿಧಾರ್ಚನೆ ಷೋಡಶೋಪಚಾರಗಳ ಸಂಭ್ರಮದಲ್ಲಿ ಮೈಮರೆತಿದ್ದ ಸಕಳೇಶನಿಗೆ ಲಿಂಗಕ್ಕೆ ಆರತಿ ಬೆಳಗುವಾಗ ಒತ್ತೆಯಾಗಿದ್ದ ಭಕ್ತನ ಮಗಳು ಲಿಂಗದಲ್ಲಿ ಕಾಣಿಸಿಕೊಂಡಳು. ಆಗ ಅವನಿಗೆ ತಪ್ಪಿನ ಅರಿವಾಯಿತು. ರಾಜವೈಭವವನ್ನು ಬಿಟ್ಟ ನನಗೆ ಇನ್ನು ಶಿವಪೂಜಾ ವೈಭವವೂ ಬೇಡವೆಂದು ಶ್ರೀಶೈಲದ ಶಿವಯೋಗಿ ಮಲ್ಲರಸನಲ್ಲಿಗೆ ಬಂದು ಅವನಿಂದ ಬೋಧೆ ಪಡೆದು ಉಗ್ರವಾದ ತಪಸ್ಸಿಗೆ ಕುಳಿತನು.

ಸಕಳೇಶನ ಮನಸ್ಸನ್ನು ಒರೆಹಚ್ಚಿ ನೋಡಬೇಕೆಂದು ಶಿವಯೋಗಿ ಮಲ್ಲರಸನು ಕುರುಬನ ವೇಷ ತೊಟ್ಟು ಸಕಳೇಶನು ತಪಸ್ಸು ಮಾಡುತ್ತಿದ್ದಲ್ಲಿಗೆ ಬಂದು ನಾನಾ ಬಗೆಯಲ್ಲಿ ಅವನನ್ನು ನಿಂದಿಸಿ ಅವನ ಮೈಮೇಲೆ ಎಲೆಗಳನ್ನು ಸುರುವಿ ತಪೋಭಂಗ ಮಾಡಿದನು. ತನ್ನ ಮನಶ್ಶಾಂತಿಗೆ ಭಂಗ ಬಂದುದನ್ನು ಕಂಡು ಕೆರಳಿದ ಸಕಳೇಶನು ಆ ಕುರುಬನಿಗೆ ಶಾಪ ಕೊಡಲು ಹೊರಟನು. ಆಗ ಮಲ್ಲರಸನು ತನ್ನ ನಿಜರೂಪು ತೋರಿದನು. ಉಗ್ರ ತಪಸ್ಸಿಗೆ ಕುಳಿತರೂ ಕೋಪ ತಾಪಗಳಿಗೆ ಒಳಗಾದ ತನ್ನ ಬಗೆಗೆ ಅವನಿಗೆ ನಾಚಿಕೆಯಾಯಿತು.

ಅಡವಿಗೆ ಹೋಗಿ ಏವೆನು ?
ಮನದ ರಜ ತಮ ಬಿಡದು.
ಆಡ ಕಾವನ ತೋರಿ
ಗಿಡವ ಕಡಿವನ ಬಡಿದೆ.
ಆಶ್ರಮವ ಕೆಡಿಸಿತ್ತಲ್ಲ !
ಸಕಳೇಶ್ವರದೇವಾ, ನಿಮ್ಮ ಮಾಯೆ
ಎತ್ತ ಹೋದಡೂ ಬೆನ್ನ ಬಿಡದು !" (ವ. ೭)

ಎಂಬ ವಚನ ಅಂತರಂಗದಿಂದ ಮೂಡಿಬಂದಿರಬಹುದು. ತಪಸ್ಸಿಗೆ ಕುಳಿತರೂ ಕೋಪ ತಾಪಗಳು ಮಾಯೆಯ ರೂಪದಲ್ಲಿ ತನ್ನನ್ನು ಕಾಡಿದ್ದನ್ನು ಕಂಡು ಅವನಿಗೆ ನಾಚಿಕೆಯಾಯಿತು. ತಪೋಮಾರ್ಗವನ್ನು ಬಿಟ್ಟು, ತನ್ನ ಗುರು ಮಲ್ಲರಸನ ಸೂಚನೆಯಂತೆ, ಕಲ್ಯಾಣದ ಶಿವಶರಣರೆಡೆಗೆ ಬರುವನು.

ಸಕಳೇಶ ಮಾದರಸನು ಬಸವಣ್ಣನವರ ವ್ಯಕ್ತಿತ್ವದ ಚುಂಬಕಶಕ್ತಿಗೆ ಆಕರ್ಷಿತನಾಗಿ ಕಲ್ಯಾಣಕ್ಕೆ ಬಂದು ಅವರ ವಚನಗಳಿಂದ ಪ್ರೇರಣೆ ಪಡೆದು 'ಸಕಳೇಶ್ವರದೇವಾ' ಎಂಬ ಅಂಕಿತದಲ್ಲಿ ವಚನಗಳನ್ನು ರಚಿಸಿರುವನು. ಒಂದು ವಚನದಲ್ಲಿ ಭಕ್ತಸ್ಥಲದ ಬಸವಣ್ಣ, ಐಕ್ಯಸ್ಥಲದ ಅಜಗಣ್ಣ, ಶರಣ ಸ್ಥಲದ ಪ್ರಭುದೇವ—ಇವರು ಮೂವರೆ ಶರಣರು ಇವರಂತೆ 'ಹಿಂದೆ ಆದವರಿಲ್ಲ, ಮುಂದೆ ಆಹವರಿಲ್ಲ' ಎಂದು ಹೇಳಿರುವನು

(ವ. ೯೦). ಇನ್ನೊಂದು ವಚನದಲ್ಲಿ, ಬಸವಣ್ಣನ ಭಕ್ತಿಪ್ರಸಾದ, ಚೆನ್ನಬಸವಣ್ಣನ ಜ್ಞಾನ ಪ್ರಸಾದ, ಪ್ರಭುದೇವರ ಬಯಲಪ್ರಸಾದ, ಮಡಿವಾಳಯ್ಯನ ಶರಣಪ್ರಸಾದ, ಸಿದ್ಧರಾಮಯ್ಯನ ನಿರ್ಮಲ ಪ್ರಸಾದ, ಮರುಳ ಶಂಕರದೇವರ ಪ್ರಸನ್ನ ಪ್ರಸಾದ, ಏಳ್ನೂರೆಪ್ಪತ್ತಮರಗಣಗಳ ಪರಮ ಪ್ರಸಾದವ ಕೊಂಡು ಬದುಕಿದೆ ಎಂದು ಹೇಳಿರುವನು (ವ. ೮೬). ಈ ವಚನಗಳ ಭಾವವನ್ನು ಲಕ್ಷಿಸಿದಾಗ ಸಕಳೇಶ ಮಾದರಸನು ವಯಸ್ಸಿನಲ್ಲಿ ಬಸವಣ್ಣನಿಗಿಂತ ಹಿರಿಯನಾಗಿದ್ದರೂ ಬಸವಾದಿ ಪ್ರಮಥರ ಪ್ರಭಾವಕ್ಕೆ ಒಳಗಾಗಿ ವಚನ ರಚನೆ ಮಾಡಿದಂತೆ ತೋರುತ್ತದೆ. ಬಸವಣ್ಣನ ವಚನಗಳನ್ನು ಮೇಲಿಂದ ಮೇಲೆ ಓದಿ ಅದರ ಪ್ರಭಾವಕ್ಕೆ ಒಳಗಾಗಿ ವಚನಗಳನ್ನು ಬರೆದಂತೆ ತೋರುತ್ತದೆ. ವಚನಗಳ ರೂಪ (Form) ನೋಡಿದಾಗ, ವಸ್ತು (Content) ಹಾಗೂ ಅದರ ನಿರೂಪಣಾ ವಿಧಾನವನ್ನು ಗಮನಿಸಿದಾಗ, ವಚನಗಳ ಭಾವಗಳನ್ನು ನೋಡಿದಾಗ ಬಸವಣ್ಣನ ವಚನಗಳ ನೆರಳು ದಟ್ಟವಾಗಿ ಕವಿದಿರುವುದು ಮೊದಲ ಓದಿಗೇ ಗೋಚರವಾಗುತ್ತದೆ. ಬಸವಣ್ಣನ ವ್ಯಕ್ತಿತ್ವದ ಗಾಢ ಪ್ರಭಾವ ಇವನ ಮೇಲಾಗಿರುವುದಕ್ಕೆ ಕೆಳಗಿನ ಈ ವಚನವೊಂದೇ ಸಾಕು :

> "ಶ್ರೀ ಗುರುವೆ ಬಸವ, ಸ್ಥೂಲಕ್ಕೆ ಸ್ಥೂಲ, ಸೂಕ್ಷ್ಮಕ್ಕೆ ಸೂಕ್ಷ್ಮ ಬಸವ.
> ಶತಕೋಟಿ ಬ್ರಹ್ಮಾಂಡಗಳು ನಿನ್ನ ರೋಮದ ತುದಿಯಲ್ಲಿಪ್ಪವು ಬಸವ.
> ಎನ್ನ ಭವವೆಂಬ ವಾರಿಧಿಯ ದಾಂಟುವುದಕ್ಕೆ
> ನಿನ್ನ ಬಾಲತುದಿಯ ಎಯ್ದಿದೆನು ಬಸವ.
> ಆರಾಧ್ಯಪ್ರಿಯ ಸಕಳೇಶ್ವರಾ,
> ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು." (ವ. ೧೧೪)

ಸಕಳೇಶ ಮಾದರಸ ಹಠಯೋಗಿಯಾಗಿ ಅದರ ನಿಸ್ಸಾರತೆಯನ್ನು ಮನಗಂಡಿರುವನು. 'ಯೋಗಿ, ಜೋಗಿ, ತಪಸಿ, ಸನ್ಯಾಸಿ, ನರಮಾಂಸಕ, ನೀಲಪಟರು ಸುಳಿವರು ಕ್ಷುಧೆ ಕಾರಣ. ತೋರಿ, ಮಾರಿಯುಂಬ ಬೆವಹಾರಿಗಳು'—ಎಂದು ಇವರನ್ನು ಟೀಕಿಸಿರುವನು (ವ. ೧೦೧). ಸಂಸಾರ ಬಂಧನದಿಂದ ಮುಕ್ತನಾಗಲು ಏಕಾಂತವನ್ನರಸಿ ಕಾಡಿಗೆ ಹೋಗಿ ತಪಸ್ಸು ಮಾಡುವವರನ್ನು ಕಂಡು 'ಆರುವನೊಲ್ಲೆನೆಂದು ಅರಣ್ಯವ ಹೊಗುವುದು ಕಾರ್ಯವಲ್ಲ, ಮರುಳತನ. ಊರೊಳಗಿದ್ದರೆ ನರರ ಹಂಗು, ಅರಣ್ಯದೊಳಗಿದ್ದರೆ ತರುಗಳ ಹಂಗು......' ಪರಾತ್ಪರ ವಸ್ತುವನ್ನು ತಿಳಿಯದ ಶರಣರು, ಲಿಂಗೈಕ್ಯರು, "ಗಿರಿ ಗಹನ ಗಹ್ವರದೊಳಗಿದ್ದಲ್ಲಿ ಫಲವೇನೊ ? ಮನ ಲೇಸಾಗಿದ್ದಡೆ ಸಾಲದೆ ? ಎಂದು ವ್ಯಂಗ್ಯಮಾಡುವನು. ಪರಮಸುಖಿಯಾಗಿರ್ಪ ಶರಣನ ಹೃದಯದಲ್ಲಿ ಸದಾ ಸನ್ನಿಹಿತನು ಸಕಳೇಶ್ವರದೇವ" ಎಂದು ಅಭಿಪ್ರಾಯ

ಪಡುವನು (ವ. ೭೪) ತುಂಬು ಭಕ್ತಿಯ ಓಜಃಪೂರ್ಣ ವ್ಯಕ್ತಿತ್ವ ಸಕಳೇಶ ಮಾದರಸನದು :

"ನರರನುಪಧಾವಿಸಿ ಅವರಿಚ್ಛೆಗೆ ನುಡಿದು
ಬೆಂದ ಒಡಲ ಹೊರೆದು, ಹಿರಿಯರೆನಿಸಿಕೊಂಬ
ಡಂಬಕತನಕಾನಂಜುವೆನಯ್ಯಾ.
ಹಿರಿದಡವಿಯ ಗಿರಿಗಹ್ವರದೊಳಗೆ ಪರಿಪರಿಯ ಹೂಪತ್ರೆಯ ತಂದು,
ಬಿಡದೆ ಲಿಂಗದೇವನ ಪೂಜಿಸುತ
ನೋಡುವ ಸುಖವೆಂದಪ್ಪುದೊ ಎನಗೆ ?
ಸಕಳೇಶ್ವರದೇವಾ, ಶರಣೆಂದು ವೀಣಾವಾದ್ಯವ ಬಾರಿಸುತ,*
ಆಡಿ ಹಾಡುವ ಸುಖವೆನಗೆಂದಪ್ಪುದೊ ಶ್ರೀಶೈಲದಲ್ಲಿ ?" (ವ. ೭೨)

"ಷಡು ಸಮ್ಮಾರ್ಜನೆಯ ಮಾಡೆನೆ, ರಂಗವಾಲಿಯನಿಕ್ಕೆನೆ ?
ಹೂ ಅಗ್ಘವಣಿಯ ತಾರೆನೆ ? ಪೂಜಾ ರಚನೆಯ ಮಾಡೆನೆ ?
ಅಷ್ಟವಿಧಾರ್ಚನೆಯ ಮಾಡೆನೆ ? ಮಾಡುವವರಿಗೆ ನೀಡಿ ಕೊಡೆನೆ ?
ವೀಣೆಯ ಬಾರಿಸಿ,* ಸಕಳೇಶ್ವರಂಗೊಂದು ಗೀತವ ಪಾಡೆನೆ ?
ಇಂಥಾ ಪರಿಯಲಿ ಸುಖಿಮಾಡಿ ಸಲಹುವ, ಇಂತಪ್ಪ ಆಳುದರೊಳರೆ?"
(ವ. ೧೧೫)

"ಹಿರಿಯ ಅಡವಿಯ ಕಲ್ಲಗವಿಯ ಗಹ್ವರದೊಳಗೆ
ಬಿದಿರಲರಳಿಗೆಯಲಗ್ಘವಣಿಯ ತಂದು, ದೇವದಾರಿಯ ಗಂಧವ ತೇದು,
ತಾವರೆಯ ನೆಯ್ದಿಲ ಹೂವನೆ ತಂದು, ಲಿಂಗವ ಸಿಂಗಾರವ ಮಾಡಿ,
ನೋಡುವದೆಂದು ದೊರಕೊಂಬುವುದೊ ಎನಗೆ ?
ಸಕಳೇಶ್ವರದೇವಾ, ಮುಂದಿನ ವರವನೊಲ್ಲೆ.
ಇಂದು ಎನಗಿದು ಪರಮಸುಖವು." (ವ. ೧೩೩)

ಮೇಲಿನ ಮೂರೂ ವಚನಗಳು ಅವನ ಭಕ್ತಿಮಯ ಜೀವನದ ಪರಿಚಯ ಮಾಡಿಕೊಡುತ್ತವೆ. ಮೂರನೆಯ ವಚನವಂತೂ ಅವನ ಸ್ಫಟಿಕಸದೃಶವಾದ ಭಕ್ತಿಯನ್ನೂ

---

* ಸಕಳೇಶ ಮಾದರಸನ ವಚನಗಳಲ್ಲೂ ವೀಣೆಯ ಉಲ್ಲೇಖ ಬರುವುದನ್ನು ಗಮನಿಸಿದರೆ, ಅತ್ರ ವೀಣೆ ನಡೆಸುತ್ತಾ ತನ್ಮಯನಾಗಿ ಹಾಡುತ್ತ 'ನಾದಪ್ರಿಯ'ನಾದ ಶಿವನಿಗೆ ಭಕ್ತಿಕೈಂಕರ್ಯವನ್ನು ಸಲ್ಲಿಸುತ್ತಿದ್ದಿರಬಹುದೆನ್ನಿಸುತ್ತದೆ.

ವ್ಯಕ್ತಿತ್ವವನ್ನೂ ಜೊತೆ ಜೊತೆಯಲ್ಲಿಯೇ ತಿಳಿಯಪಡಿಸುತ್ತದೆ. ಪೂಜೆಯಲ್ಲಿಯೇ ಜೀವನದ ಸಾರ್ಥಕತೆಯನ್ನು ಕಂಡುಕೊಂಡ ಈ ಹಿರಿಯ ಚೇತನ ಪೂಜೆಯ ಮುಂದೆ ಯಾವ ಪದವಿಯೂ ಸುಖವನ್ನೀಯದು, ಆ ಪೂಜಾಸ್ಥಿತಿಯಲ್ಲಿನ ಅಲೌಕಿಕವಾದ ಸುಖವೇ ಪರಮಸುಖವು ಎಂದು ತೀರ್ಮಾನ ತೆಗೆದುಕೊಳ್ಳುವುದು ಅಚ್ಚರಿಯೆನಿಸುತ್ತದೆ.

"ಸರ್ಪದಷ್ಟವಾದವರು ತಮ್ಮ ತಾವರಿಯರು.
ಕಾಮದಷ್ಟವಾದವರು ಲಜ್ಜೆ ನಾಚಿಕೆಯ ತೊರೆವರು.
ಸಂಸಾರದಷ್ಟವಾದವರು ಪರಮಾರ್ಥವನರಿಯರು.
ಲಿಂಗದಷ್ಟವಾದಡೆ ಅಂಗವೆನಲಿಲ್ಲ,
ಆರಾಧ್ಯಪ್ರಿಯ ಸಕಳೇಶ್ವರದೇವನಲ್ಲಿ ಸುಖಿಯಾಗಿದ್ದರು." (ವ. ೧೨೩)

ಲಿಂಗದಷ್ಟವಾದ ಸಕಳೇಶ ಮಾದರಸ ಮೈಮೇಲಿನ ಪರಿವೆಯನ್ನೇ ಮರೆತು ಸುಖಿಯಾಗುವನು. ಅಂತಹ ಅನುಪಮ ಭಕ್ತಿ ವಿಶೇಷ ಅವನದು. ಅರ್ಚಿಸಿ ಪೂಜಿಸಿ ವರವ ಬೇಡದ ನಿಷ್ಕಾಮ ಭಕ್ತಿ ಅವನದು. ಆದ್ದರಿಂದಲೇ 'ನಿನ್ನ ಹಂಗೇನು ಹರಿಯೇನು, ಅಂಜದೆ ನುಡಿವೆನು' ಎನ್ನುವ ಎದೆಗಾರಿಕೆ; ವರವನ್ನು ಬೇಡಿದ್ದೇ ಆದರೆ 'ಬಾರದ ಭವಂಗಳಲ್ಲಿ ಎನ್ನ ಬರಿಸು' ಎನ್ನುವ ಧೈರ್ಯ (ವ. ೭೫)

ಭಕ್ತನಿಗೆ ಸಂಸಾರದ ಬಳಲಿಕೆಯಾದರೆ, ಶಿವನಿಗೆ ಭಕ್ತನನ್ನು ಕಾಡುವ ಬಳಲಿಕೆ. ಈ ಬಳಲಿಕೆ ಇಬ್ಬರಿಗೂ ಸರಿ. ಶಿವನ ಹೆಚ್ಚೇನು ಭಕ್ತನ ಕುಂದೇನು ? ಶಿವನು ಭಕ್ತದೇಹಿಕ ದೇವನಾದುದರಿಂದ ಈ ಸದರದ ಸವಾಲು ! ಸಕಳೇಶ ಮಾದರಸ 'ಸಚರಾಚರಕ್ಕೆ ಸಕಳೇಶ್ವರನಿಂದ ಬಿಟ್ಟು ದೈವವಿಲ್ಲ' ಎಂದು ನಂಬಿರುವವನು (ವ. ೧೭); ಕಷ್ಟವನ್ನು ಕೊಡುವವನೂ ಕಷ್ಟಗಳನ್ನು ನಿವಾರಿಸಿ ಕಾಯುವವನೂ ಸಕಳೇಶ್ವರನೇ ಎಂದು ನಂಬಿರುವವನು (ವ. ೧೦). ಆ ಧೈರ್ಯದಿಂದಲೇ

"ಎನ್ನ ಈ ಸಂಸಾರದ ಬಾಳುವೆ ನೆಲೆಯಿಲ್ಲ ಕಂಡಾ !
ಅಡದೆ ಶಿವನೆ ನೀನು ಕಾಡುವ ಕಾಟ ನೆಲೆಯಿಲ್ಲ.
ಸಂಸಾರದ ಕೂಡೆ ಕಾಡುವುದು ಲಯ.
ಇಂತೀ ಎರಡೂ ಲಯವಾದಡೆ
ನಾನೂ ನೀನೂ ಕೂಡಿ ನಿತ್ಯರಾಗಿ ಸುಖಿಯಿಸುವ, ಸಕಳೇಶ್ವರದೇವಾ."
(ವ. ೩೦)

ಮಹಾಮಹಿಮ ಸಕಳೇಶ್ವರಲಿಂಗದ ಇದಿರಿನಲ್ಲಿ ಭಕ್ತನ ಭಾಷೆ ಎಂತಹದೆಂಬುದನ್ನು ಅವನ ಮಾತಿನಲ್ಲಿಯೇ ಕೇಳಿ :

"......ಪರವಧುವೆನ್ನ ಹೆತ್ತತಾಯಿ ಸಮಾನ.
ಇದ್ದವರೆನ್ನ ಸಹೋದಯ ಸ್ತ್ರೀಯ ಸಮಾನ.
ಪಣ್ಯಾಂಗನೆಯರ ಸಂಗವೆನಗೆ ನಾಯ ಮಾಂಸ ನರರಡಗಿನ ಸಮಾನ.
ದಾನವರ ಸಂಗವೆನಗೆ ಸೂಕರನ ಮಲದ ಸಮಾನ.
ಇಹಿಂಗೆಂದು ಭಾಷೆಯ ಮಾಡಿ, ತಿರುಗಿ ಆಸೆ ಮಾಡಿ ಕೂಡಿದೆನಾದಡೆ,
ನಿಮ್ಮ ಪ್ರಸಾದಕ್ಕೆ ಬಾಯಿದೆರೆಯೆನು.
ತನು ಲೋಭದಿಂದ ಕೂ[ಡಿದೆನಾದ]ಡಾ ತನುವ ದಿಗುಬಲಿಗೊಡುವೆನು.
ಕೊಡದಿರ್ದಡೆ, ಧರೆ ಚಂದ್ರಾರ್ಕರುಳ್ಳನ್ನಬರ ಅರಸು ನರಕದಲ್ಲಿಕ್ಕು.
ಸೂಕರ ನಾಯಿ ವಾಯಿಸ ಗಾರ್ದಭ ಬಸುರಲ್ಲಿ ಬರಿಸು.
ಬರಿಸದಿದ್ದಡೆ ನಿಮಗೆ ನಿಮ್ಮಾಣೆ ಸಕಳೇಶ್ವರಾ." (ವ. ೨೦)

ಸಕಳೇಶ ಮಾದರಸ ರಾಜನಾಗಿದ್ದು ಆ ವೈಭವವನ್ನು ವೈರಾಗ್ಯ ಕಾರಣವಾಗಿ ತೊರೆದುಬಂದವನು ; 'ಸರ್ವ ಸಂಗ ಪರಿತ್ಯಾಗವ ಮಾಡಿ, ಲಿಂಗ ಗೂಡಾಗಿ, ತನು ಪರಿಣಾಮವನೈದಿ ಪೆರತನರಿಯದೆ' ಇರುವ ಧ್ಯೇಯದಿಂದ ಬಂದವನು (ವ. ೧೨೫). ಆದರೂ ಶಿವಭಕ್ತನನ್ನು ನಾನಾ ರೀತಿಯಲ್ಲಿ ಪರೀಕ್ಷೆ ಮಾಡುವನು :

"ಸರ್ವಸಂಗ ಪರಿತ್ಯಾಗಿಯೆಂದಡೆ ಭೋಗಕ್ಕೆ ಮರುಗಿಸುವೆ.
ಪಾಕನೇಮಿಯೆಂದಡೆ ಷಡುರಸಾನ್ನಕ್ಕೆರಗಿಸುವೆ.
ಮೌನವ್ರತಿಯೆಂದಡೆ ಸನ್ನೆಯಲಿ ಬೇಡಿಸುವೆ.
ಬ್ರಹ್ಮಚಾರಿಯೆಂದಡೆ ಅಂಗನೆಯರಿಗೆರಗಿಸುವೆ.
ಸಕಳೇಶ್ವರದೇವಾ, ಎನ್ನನಾಳವಾಡಿ ಕಾಡುವೆ." (ವ. ೧೨೬)

ಶಿವನದು 'ಕಾಡುವ ಭಾಷೆ'ಯಾದರೆ ಭಕ್ತನದು 'ಓಡದ ಭಾಷೆ'. ಶಿವನದು 'ಶಕ್ತಿಯ ಬಲ'ವಾದರೆ ಭಕ್ತನದು 'ಸತ್ಯದ ಬಲ'. ಇಬ್ಬರ ಗೆಲ್ಲ ಸೋಲಕ್ಕೆ ಕಡೆಯಿಲ್ಲ. ಈ ಇಬ್ಬರಿಗೆಯೂ ಒಡೆಯರಿಲ್ಲದ ಲೆಂಕ.*

ಸಕಳೇಶ ಮಾದರಸ ವ್ಯಕ್ತಿತ್ವದ ಬಹು ಮುಖ್ಯ ಭಾಗ ವೀರ ವಿರಕ್ತಿ. ಅವನೇ

* 'ಲೆಂಕವಾಳಿ' ಎಂಬುದು 10 ಮತ್ತು 11ನೇ ಶತಮಾನದ ಸಾಮಾಜಿಕ ಮೌಲ್ಯ. ಸೇವಕಾ ವೃತ್ತಿಯಲ್ಲಿ ತನ್ನ ಒಡೆಯನಿಗೆ ಎರಡಿಲ್ಲದ ನಿಷ್ಠೆಯನ್ನು ಪ್ರಕಟಪಡಿಸುವುದು ಈ ಮೌಲ್ಯದ ಪ್ರಧಾನ ಗುಣ. 'ಈ ಇಬ್ಬರಿಗೆಯೂ ಒಡೆಯರಿಲ್ಲದ ಲೆಂಕ' ಎಂಬ ಸಾಲಿನಲ್ಲಿ ಸ್ವಾಮಿ-ಭೃತ್ಯ ಭಾವವೇ ಇಲ್ಲದ ನಿಲುವು ಕಂಡುಬರುತ್ತದೆ.

ಹೇಳುವಂತೆ, ಮನದ ಮೇಲೆ ಬ್ರಹ್ಮಚಾರಿತ್ವ ಅಳವಡಬೇಕು (ವ. ೯೯). ಅವನ ಅಭಿಮತದಂತೆ ಕಾಮನು ಅರಿಯದ ನಿರ್ಭಾಗ್ಯರನ್ನು ತನ್ನ ಮನ್ಮಥ ಶರಗಳಿಂದ ಘಾಸಿ ಮಾಡುವನು, ತನ್ನಂಥವರನ್ನು ಕಂಡದ್ದೇ ಆದರೆ ಹೆದರಿ ಸರಿಯುವನು :

"ಕಾಮನೆಂಬ ಬಿಲ್ಲಾಳುವುಂಟೆಂಬುದ ನಾವು ಕೇಳಿ ಬಲ್ಲೆವೈಸೆ !
ಅವನೆಲ್ಲರನೆಸೆವ. ಅವ ನಮ್ಮ ಕಂಡಡೆ
ಬಿಟ್ಟೆಮ್ಮ ನಿಟ್ಟಿಸದೆ ಸರಿವ.
ಸಕಳೇಶ್ವರದೇವರನರಿಯದ ನಿರ್ಭಾಗ್ಯರನೆಸೆವಾ." (ವ. ೪೧)

ಅವನಿಗೆ ಕರ್ತನೊಬ್ಬನೇ ದೇವ, ಸತ್ಯವೆ ಸುಭಾಷೆ, ಭೃತ್ಯಾಚಾರವೆ ಆಚಾರ. ಇದನ್ನು ಎರಡಿಲ್ಲದೆ ನಂಬಿರುವನು. ಏಕೆಂದರೆ, ಇದು 'ಮಹಂತ ಸಕಳೇಶ್ವರದೇವರ ನೊಲಿಸಿದ ಪುರಾತರ ಪಥ.' (ವ. ೩೭)

ಸಕಳೇಶ ಮಾದರಸನು ಇರುವುದರಲ್ಲಿಯೇ ಸುಖಿಸುವ ನೆಮ್ಮದಿಯ ಬದುಕು. ಧನವನ್ನು ಗಳಿಸಬೇಕೆಂದು ಬೇರೆಯವರ ಮನೆಯ ಬಾಗಿಲಿಗೆ ಹೋಗಿ ಅವರು ನುಡಿದಂತೆ ಅನ್ನಿಸಿಕೊಂಡು ಹಂಗಿನ ಬಾಳುವೆ ನಡೆಸುವುದು ಅವನಿಗೆ ಇಷ್ಟವಿಲ್ಲ (ವ. ೬೦).

ಸಾಮಾಜಿಕ ವಿಡಂಬನೆ ಸಕಳೇಶ ಮಾದರಸನಲ್ಲಿ ಪ್ರಧಾನವಾಗಿ ಕಂಡುಬರದಿದ್ದರೂ ಸಮಾಜದಲ್ಲಿನ ಲೋಪದೋಷಗಳನ್ನು ಟೀಕಿಸುವಲ್ಲಿ ಅವನು ಹಿಂದುಮುಂದು ನೋಡುವವನಲ್ಲ. ನಾನಾ ಬಗೆಯ ಜನರು ಅವನ ಗಮನಕ್ಕೆ ಬಂದಿರುವರು :

"ಅಟಮಟವೆ ಆಧಾರ, ಕಪಟವೆ ಸದಾಚಾರ,
ಕುಟಿಲವೆ ಮಹಾಘನವಾಯಿತ್ತು ಕೆಲಬರಿಗೆ.
ಯಂತ್ರ ತಂತ್ರ ದ್ರವ್ಯ ಬೆವಹಾರವಾಯಿತ್ತು ಕೆಲಬರಿಗೆ.
ಸಟೆಯ ಸಾಗರದೊಳಗೆ ತೇಂಕಾಡುತ್ತಿದ್ದರು ಕೆಲಬರು.
ಸಕಳೇಶ್ವರದೇವರ ನೆರೆನಂಬಲರಿಯದವರೆಲ್ಲರು." (ವ. ೬)

ಹುಸಿ ವಿರಕ್ತರನ್ನು ಕಂಡು

"ಕಾಯಕಕ್ಕಾರದೆ ಮೈ ಸೋಂಬತನದಿಂದ
ಬೇರೆ ಕೂಳ ಗಳಿಸಲಾರದೆ ಹಸಿದಿಪ್ಪರಯ್ಯಾ.
ಉಡಲು ಸೀರೆಯ ಗಳಿಸಲಾರದೆ ಕಚ್ಚುಟವ ಕಟ್ಟಿಕೊಂಡಿಪ್ಪರಯ್ಯಾ.

ಮೀಯಲೆಣ್ಣೆಯ ಗಳಿಸಲಾರದೆ, ಮಂಡೆ ಬೋಳಾಗಿಪ್ಪರಯ್ಯಾ.
ದಿಟದಿಂದ ಬಿಡಿಸದೆ,
ನಿಸ್ಸಂಸಾರದ ಸಟೆಯನವಧರಿಸಿಕೊಂಡಿಪ್ಪವರಿಗೆ ಆನಂಜುವೆ,
ಸಕಳೇಶ್ವರದೇವಾ." (ವ. ೪೩)

ಎಂದು ವ್ಯಂಗ್ಯವಾಡುವನು. ಬಸವಣ್ಣನ 'ಹಾವು ತಿಂದವರ ನುಡಿಸಬಹುದು......' ಎಂದು ಪ್ರಾರಂಭವಾಗುವ ವಚನದ ಭಾವವೇ ಸ್ವಲ್ಪ ವಿಸ್ತರಣಗೊಂಡಂತೆ ಕೆಳಗಿನ ಈ ವಚನದಲ್ಲಿ ಕಾಣಬರುತ್ತದೆ :

"ಗರ ಹೊಡೆದಂತೆ ಬೆರತುಕೊಂಡಿಪ್ಪರು.
ಮರನೇರಿ ಬಿದ್ದಂತೆ ಹಮ್ಮುದಂಬೋದರು.
ಉರಗನ ವಿಷವಾವರಿಸಿದಂತೆ, ನಾಲಗೆ ಹೊರಳದು, ಕಣ್ಕಾಣರು.
ನಿಮ್ಮ ಕರುಣವೆ ಕರ ಚೆಲುವು, ಸಕಳೇಶ್ವರಯ್ಯಾ.
ಸಿರಿ ಸೋಂಕಿದವನ ಪರಿ ಬೇರೆ ತಂದೆ." (ವ. ೫೦)

ಸಕಳೇಶ ಮಾದರಸನೂ ತನ್ನ ಕಾಲದಲ್ಲಿದ್ದ ೬೪ ಶೀಲಗಳಲ್ಲಿ ಕೆಲವನ್ನು ಉಲ್ಲೇಖಿಸಿ, ಶೀಲವಂತರ ವಿಚಿತ್ರ ಆಚರಣೆಗಳನ್ನು ಪ್ರಸ್ತಾಪಿಸಿರುವನು.* ೬೪ ಶೀಲಗಳು ಆಚರಣೆಗೆ ಬರುವಾಗ ಅಂತಃಕರಣ ಶುದ್ಧವಿಲ್ಲದೆ ಹೇಗೆ ಅರ್ಥ ಕಳೆದುಕೊಳ್ಳುತ್ತವೆ ಎಂಬುದನ್ನು ಸಕಳೇಶ ಮಾದರಸ ಈ ವಚನದಲ್ಲಿ ಪ್ರಸ್ತಾಪಿಸುತ್ತಿರುದಂತಿದೆ :

"ಶೀಲ ಶೀಲವೆಂದು ಗರ್ವೀಕೃತದಲ್ಲಿ ನುಡಿವ
ಉದ್ದೇಶ ಪ್ರಾಣಿಗಳೆಲ್ಲರೂ ಅನಂತಶೀಲರೆ ?
ಹೂ ಬಾವಿ ಮಠಕ್ಕೆ ಸೀಮೆಯ ಮಾಡೂದು ಶೀಲವೆ ?
ಮನಕ್ಕೆ ಸೀಮೆಯ ಮಾಡೂದು ಶೀಲವಲ್ಲದೆ,
ಪುಸಿಯ ಕಳೆವುದು ಶೀಲವಲ್ಲದೆ, ಭಕ್ತರ ಕಳೆವುದು ಶೀಲವೆ ?
ಲಿಂಗಪ್ರಾಣವ ಮಾಡೂದು ಶೀಲವಲ್ಲದೆ,
ಪ್ರಾಣಲಿಂಗವ ಮಾಡೂದು ಶೀಲವೆ ?
ಇಂತೆಲ್ಲ ಶೀಲರು ದುಶ್ಶೀಲರು.
ಸಕಳೇಶ್ವರದೇವಾ, ನಾನೇನೆಂದರಿಯೆ, ನೀನಿರಿಸಿದಂತಿರ್ಪೆ." (ವ. ೧೧೨)

---

* ಬಸವ ಪೂರ್ವದ ಶರಣ ಕೊಂಡಗುಳಿ ಕೇಶಿರಾಜನು ತನ್ನ 'ಶೀಲಮಹತ್ವದ ಕಂದ'ದಲ್ಲಿ ತನ್ನ ಕಾಲದ 64 ಶೀಲಗಳನ್ನು ಪ್ರಸ್ತಾಪಿಸಿದ್ದು, ಬಸವಾದಿ ಶಿವಶರಣರು ಅರ್ಥಹೀನವಾಗಿದ್ದ ಇವುಗಳನ್ನು ಖಂಡಿಸಿರುವರು.

ಆಚಾರ, ಶೀಲ, ವ್ರತ—ಇವು ಒಂದೇ ನಾಣ್ಯದ ಬೇರೆ ಬೇರೆ ಮುಖಗಳು. ವೀರಶೈವ ಸಾಮಾಜಿಕ ಬದುಕಿನಲ್ಲಿ ಒಂದು ರೀತಿಯಲ್ಲಿ ಬದ್ಧ ವ್ಯವಸ್ಥೆಗೆ—ಆರೋಗ್ಯವಂತ ಸಾಮಾಜಿಕ ವ್ಯವಹರಣೆಗೆ—ಇವು ನೆರವಾಗಬಹುದೇನೋ. ತತ್ವದಷ್ಟೇ ಅಂತಃಕರಣ ಶುದ್ಧ ಆಚರಣೆಯೂ ಮುಖ್ಯವಾಗುತ್ತದೆ. ತತ್ವ ಹಾಗೂ ಆಚರಣೆಗಳಲ್ಲಿ ಬಿರುಕು ಕಾಣಿಸಿಕೊಳ್ಳಬಾರದು. ಬಹುಶಃ ಈ ಅರ್ಥದಲ್ಲಿ ಶೀಲಗಳನ್ನು ಪರಿಭಾವಿಸಿದಂತಿದೆ. ಸಕಳೇಶ ಮಾದರಸ ನಂಬಿರುವಂತೆ 'ಸಂಸಾರವ ಬಿಟ್ಟುದೇ ಆಚಾರ', 'ಕಾಯದಿಚ್ಛೆಗೆ ಕಂಡವರಿಗೆ ಕಾರ್ಪಣ್ಯಬಡದಿಪ್ಪುದೇ ಶೀಲ', 'ಲಿಂಗಾಣತಿಯಿಂದ ಬಂದುದ ಕೈಕೊಂಬುದೇ ವ್ರತ', 'ಮನ ಘನವನಗಲದಿಪ್ಪುದೇ ಭಕ್ತಿ' (ವ. ೧೧೬)

ಸಕಳೇಶ ಮಾದರಸ ತನ್ನ ಕಾಲದ ಏಕಾಂತದ ಪೂಜೆಯ ಬಗೆಗೆ ಪ್ರಸ್ತಾಪಿಸಿರುವನು. ಲಿಂಗಾರ್ಚನೆಯನ್ನು ಮಾಡುವಾಗ ತೆರೆಯನ್ನು ಕಟ್ಟಿ ಗುಪ್ತವಾಗಿ ಮಾಡಬೇಕೆಂದು ಹೇಳಿರುವುದು ಗಮನಾರ್ಹವಾಗಿದೆ :

"ಸದ್ಭಕ್ತರು ಲಿಂಗಾರ್ಚನೆಯ ಮಾಡುವ ಕಾಲದಲ್ಲಿ,
ಕದವಂ ಮುಚ್ಚಿ, ಸಮಾಧಾನದಲ್ಲಿ ಲಿಂಗಾರ್ಚನೆಯ ಮಾಡುವದು.
ಶಿವಪೂಜೆಯ ಗುಪ್ತದಲ್ಲಿ ಮಾಡಬೇಕಾಗಿ ತೆರೆಯ ಕಟ್ಟುವದು.
ಪಾಪಿಯು ಕೋಪಿಯು, ಶಿವಾಚಾರ ಭ್ರಷ್ಟನು,
ಆಳಿಗೊಂಬವನು, ವೈದಿಕ ವಿಪ್ರನು, ಹೊಲ್ಲಹ ದೃಷ್ಟಿಯವನು,
ಅನಾಚಾರಿಯು, ಮೂರ್ಖನು, ತನ್ನ ಗುರುವನು ನಿಂದಿಸುವಾತನು,
ಇಂತಪ್ಪವರುಗಳ ಪ್ರಮಾದದಿಂದಾದಡೆಯೂ ಕಂಡಡೆ,
ತಾ ಮಾಡಿದ ಲಿಂಗಾರ್ಚನೆ ನಿಷ್ಫಲವಹುದು.
ಇದನರಿದು, ಸಕಳೇಶ್ವರಲಿಂಗವ ಏಕಾಂತದಲ್ಲಿ ಭಜಿಸುವ ಭಕ್ತಂಗೆ
ನಮೋ ನಮೋ ಎಂದು ಬದುಕಿದೆನಯ್ಯಾ" (ವ. ೧೨೦)

'ವಿಚಾರದಿಂದ ಬಿಟ್ಟು ಸಹಾಯಿಗಳಿಲ್ಲ' (ವ. ೧೭) ; 'ವಿಚಾರದಿಂದತ್ತ ಸಹಾಯವಿಲ್ಲ' (ವ. ೨೨) ಎಂಬ ಅವನ ಈ ಹೇಳಿಕೆಗಳೇ ಅವನ ವೈಚಾರಿಕ ಮನೋಭಾವಕ್ಕೆ ಸಾಕ್ಷಿಯಂತಿವೆ. 'ಊರಿಗೊಕ್ಕಲಹ, ಹೆಂಡತಿಗೆ ಗಂಡನಹ, ಮಕ್ಕಳಿಗೆ ತಂದೆಯಹ, ಮಸಣಕ್ಕೆ ಹೆಣನಹ' ಶರಣನ ರೀತಿ (ವ. ೨೫) ಸರ್ವದೇಶಕ್ಕೂ ಆದರ್ಶವಾಗಿದೆ. 'ಕಂಡುದ ನುಡಿದರೆ ಕಡುಪಾಪಿಯೆಂಬರು. ಸುಮ್ಮನಿದ್ದಡೆ ಮುಸುಕಮರ್ಮಿಯೆಂಬರು. ಎನಲು ಬಾರದು, ಎನದಿರಲು ಬಾರದು....' (ವ. ೨೫) ಎನ್ನುವಲ್ಲಿ ಲೋಕನೀತಿಯ ಬಗೆಗೆ ಸರಿಯಾಗಿಯೇ ತೀರ್ಮಾನ ಹೇಳಿರುವನು. ಲೋಕದ ವ್ಯವಹರಣೆಯನ್ನು ಎಷ್ಟು ಸೂಕ್ಷ್ಮವಾಗಿ ಗಮನಿಸಿ ತೀರ್ಮಾನಕ್ಕೆ ಬಂದಿರುವನೆಂಬುದು ಇಲ್ಲಿ ಮುಖ್ಯ. ಬಸವಣ್ಣನ

'ಎಲವದ ಮರ ಹೂತು ಫಲವಾದ ತೆಱನಂತೆ' ಎಂಬ ವಚನದಲ್ಲಿ (ವ. ೧೨೧) ಅವಗುಣಿಗಳು ಹಿರಿಯರಾದರೂ ಅವರ ಪ್ರವೃತ್ತಿಯಲ್ಲಿ ಬದಲಾವಣೆ ತೋರದೆನ್ನುವುದನ್ನು ದೃಷ್ಟಾಂತಗಳ ಮೂಲಕ ವಿವರಿಸಿರುವನು. ಬಸವಣ್ಣನ ಪ್ರಭಾವಕ್ಕೆ ಒಳಗಾಗಿರುವ ಸಕಳೇಶ ಮಾದರಸನ ಬಸವಣ್ಣನ ವಚನದ ಭಾವವನ್ನೇ ಇನ್ನಷ್ಟು ವಿಸ್ತರಿಸಿರುವನು. ಪ್ರಭಾವದ ದೃಷ್ಟಿಯಿಂದ ಇಬ್ಬರ ವಚನಗಳನ್ನೂ ತುಲನೆ ಮಾಡಬಹುದು :

"ಎಲವದ ಮರ ಹೂತು ಫಲವಾದ ತೆಱನಂತೆ :
ಸಿರಿಯಾದಡೇನು, ಶಿವಭಕ್ತಿಯಿಲ್ಲದನ್ನಕ್ಕ ?
ಫಲವಾದಡೇನು ಹೇಳಾ, ಹಾವುಮೆಕ್ಕೆಯ ಕಾಯಿ ?
ಕುಲವಿಲ್ಲದ ರೂಹು ಎಲ್ಲಿದ್ದಡೇನು ?
ಬಚ್ಚಲನೀರು ತಿಳಿದಲ್ಲಿ ಫಲವೇನು ?
ಅವಗುಣಿಗಳ ಮೆಚ್ಚ ಕೂಡಲಸಂಗಮದೇವ !"

–ಬಸವಣ್ಣ

"ಮೆಕ್ಕೆ ಮಿನಿಕೆ ಮೊದಲಾಗಿ ಅವು ಪಕ್ವಕ್ಕೆ ಬಂದಡೆ, ವಿಷ ಬಿಡುವುದೆ ?
ಸೋರೆ ವಾರುಧಿ ಫಣಿ ಅವು ಹರೆಯ ಹಿರಿದಾದಡೆ, ಮನದ ವಿಷ ಬಿಡದು.
ಸಕಳೇಶ್ವರದೇವಾ, ನಿಮ್ಮ ನಿಜವನರಿಯದ ಮನುಜರಿಗೆ,
ನರೆ ಹಿರಿದಾದಡೇನು, ಮನದ ಅವಗುಣ ಬಿಡದು."

– ಸಕಳೇಶ ಮಾದರಸ (ವ. ೯೬)

'ಅದು ಬೇಕು ಇದು ಬೇಕು ಎಂಬ ಎದೆಗುದಿಹ ಬೇಡ. ಸದೈವನಾದಡೆ ಸಾಕು ಪಡಿಪದಾರ್ಥ ಇದ್ದೆಡೆಗೆ ಬಹುದು. ನಿಧಿ ನಿಕ್ಷೇಪಂಗಳಿದ್ದೆಡೆಗೆ ಬಹವಯ್ಯಾ' ; 'ಮೇವನಿಕ್ಕಿ ಮಯ್ಯಸೊರಸಿದಡೆ ಪಶುಗಳು ಮೆಚ್ಚುವವು. ಅನ್ನವನಿಕ್ಕಿ ಹಿರಣ್ಯವ ಕೊಟ್ಟಡೆ ಜಗವು ಹೊಗಳುವುದು' - ಇಂತಹ ಅನುಭವೋಕ್ತಿಗಳು ಅರ್ಥಪೂರ್ಣವಾಗಿ ಸಕಳೇಶ ಮಾದರಸನಲ್ಲಿ ಬಂದಿವೆ. 'ಓದು ಒಕ್ಕಾಲು ಬುದ್ಧಿ ಮುಕ್ಕಾಲು' ಎಂಬ ಗಾದೆ ಮಾತನ್ನು ಸಮರ್ಥವಾಗಿ ವಚನವೊಂದರಲ್ಲಿ ಅವನು ಬಳಸಿಕೊಂಡಿರುವನು. ಅವನು ತನ್ನ ವಚನಗಳಲ್ಲಿ ಸೊಗಸಾದ ಉಪಮೆಗಳನ್ನು ಬಳಸಿರುವನು, ರೂಪಕಗಳನ್ನು ಅವೆಲ್ಲವೂ ಆಯಾ ಸಂದರ್ಭಕ್ಕೆ ವಿಶೇಷ ಕಳೆಕಟ್ಟಿವೆ.

---

* ಇಲ್ಲಿ ಬಳಸಲಾಗಿರುವ ವಚನಗಳು ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿಯ ಸಂಪುಟ–೯ರದು.



# ಸಮೂಹ ಮಾಧ್ಯಮ–ಜನಪದ ಸಾಹಿತ್ಯ

ಡಾ|| ಬಿ. ಎಸ್. ಸ್ವಾಮಿ

ಜನಪದರು ಪಂಡಿತರಂತೆ ಸಾಹಿತ್ಯ ಸೃಷ್ಟಿಸಿ ಖ್ಯಾತಿ ಪಡೆಯಬೇಕೆಂದು ಆಶಿಸಿದವರಲ್ಲ ರಾಜಾಶ್ರಯ ಬೇಡಿದವರಲ್ಲ. ಸಾಮಾನ್ಯ ಜನರ ಒಳಗಿದ್ದು ಅವರಿಂದ ಭೇಷ್‌ಗಿರಿ ಪಡೆದು ಹೊಟ್ಟೆಪಾಡು ಮಾಡಿಕೊಂಡು ಬರುವ ವೃತ್ತಿಕಲಾವಿದರು. ಸಂಗೀತ ಜ್ಞಾನವಿಲ್ಲದಿದ್ದರೂ ಸಂಗೀತ ಅವರಿಂದ ಹೊರಹೊಮ್ಮಿತು. ಒಂದೊಂದು ಸಂದರ್ಭದಲ್ಲಿ ಮದುವೆ, ಕಳೆ ಕೀಳುವುದು, ನಾಟಿ ಹಾಕುವುದು, ರಾಗಿ ಬೀಸುವುದು, ದೇವರ ಪೂಜಿಸುವುದು ಮುಂತಾದ ಸಂದರ್ಭಗಳಲ್ಲಿ ಹಾಡಿ ಕುಣಿದು ನಲಿದು ನರ್ತಿಸಿ ಜನಪದ ಬೆಳೆಯನ್ನು ಬೆಳಸಿದರು. ಸಮೃದ್ಧಿಗೊಳಿಸಿ ಜನರ ಮನವನ್ನು ಗೆದ್ದರು.

ಜನಪದವು ಸಮೂಹ ಮಾಧ್ಯಮಗಳಾದ ಬಾನುಲಿ, ದೂರದರ್ಶನ, ಕ್ಷೇತ್ರ ಪ್ರಚಾರ, ಪತ್ರಿಕೆ, ಚಲನಚಿತ್ರ ಮುಂತಾದವುಗಳಲ್ಲಿ ತನ್ನ ಸ್ಥಾನವನ್ನು ಕಾಯ್ದಿರಿಸಿ ಕೊಂಡಿದೆ. ಇದು ಜನರನ್ನು ತಲುಪಲು ಬಹಳ ಪರಿಣಾಮಕಾರಿ. ಜನಪದ ಹಿಂದಿನ ಸಂಸ್ಕೃತಿ, ಸಾಹಿತ್ಯ, ಸಂಗೀತಗಳ ಪರಿಚಯ ಮಾಡಿಕೊಳ್ಳುವುದರಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಇದು ಕಾಲಕಾಲಕ್ಕೆ ಬದಲಾಗುತ್ತಾ ಬಂದಿದೆ. ಶುದ್ಧವನ್ನು ಉಳಿಸಿಕೊಳ್ಳುವ ಪ್ರಯತ್ನವನ್ನು ಮಾಡಲಾಗುತ್ತಿದೆ.

ಜನಪದವನ್ನು ಜನಪ್ರಿಯಗೊಳಿಸಲು ಹೊಸ ಧಾಟಿಗಳನ್ನು, ಹಳೆಯ ಧಾಟಿಯನ್ನೂ ಇಟ್ಟುಕೊಂಡು ಕೆಲವು ವಾದ್ಯಗಳನ್ನು ಬಳಸಿ ಹಾಡಿದರೆ ಏಕತಾನತೆಯ ಬೇಸರ ನೀಗಿ ಆಕರ್ಷಕ ಮಾಡಬಹುದು. ಹಳ್ಳಿಗರು ಯಾವ ವಾದ್ಯ ಸಹಕಾರವಿಲ್ಲದೆ ಹಾಡು ಹಾಡುತ್ತಿದ್ದರು. ಅವರ ಒನಕೆ ಶಬ್ದವೇ ತಾಳ, ರಾಗೀಕಲ್ಲೇ ಅವರಿಗೆ ಶ್ರುತಿ, ಉಸಿರ್ದಾನಗಳೇ ಏರಿಳಿತಗಳು, ಸೊಲ್ಲೇ ಸಾಹಿತ್ಯವಾಯಿತು. ಆಗ ಕೇಳುವವರಿದ್ದರು. ಇಂದು ಅದು ಹೆಚ್ಚು ರಂಜಿಸಬೇಕು. ಇಲ್ಲದಿದ್ದರೆ ಯಾರಿಗೂ ಕೇಳಲು ಮನಸ್ಸು ಬರುವುದಿಲ್ಲ. ಕೇಳಿದರೂ ಸ್ವಲ್ಪ ಕೇಳಿ ಬಿಡುದು. ಆದ್ದರಿಂದ ವಾದ್ಯ ಉಪಯೋಗಿಸಿ

ಹಾಡಿದರೆ ಜನರ ರಂಜಿಸುವುದು. ಒಳ್ಳೆಯ ಕಂಠ, ಸುಶ್ರಾವ್ಯವಾಗಿ ಹಾಡಿದರೆ ವಾದ್ಯ ಸಹಕಾರವಿಲ್ಲದೆಯೂ ರಂಜಿಸಬಹುದು. ಉತ್ತಮ ಕಂಠ ರಾಗದ ಮೇಲೆ ಹೋಗುತ್ತದೆ. ವಾದ್ಯ ಮತ್ತು ವಾದ್ಯವಿಲ್ಲದೆ ಹಾಡುವ ಎರಡು ರೀತಿಯ ಕಲಾವಿದರನ್ನೂ ಕಾಣಬಹುದು.

ಜನಪದವನ್ನು ಪ್ರೋತ್ಸಾಹಿಸಲು, ಸರಕಾರ, ಅಕಾಡೆಮಿ, ಸಾಹಿತ್ಯ ಪರಿಷತ್ತು, ಹಾಗೆ ಕೆಲವು ಸಾರ್ವಜನಿಕ ಸಂಸ್ಥೆಗಳು ಹತ್ತು ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಂಡು ಧನಸಹಾಯ ನೀಡುವವು. ಹಣ ಏರ್ಪಾಡು ಮಾಡುವುದು ಎಂಬುದಕ್ಕೆ ಇದೊಂದು ಉದಾಹರಣೆ. ಆದಿಚುಂಚನಗಿರಿಯಲ್ಲೂ ಸಹ ಇಂತಹದೊಂದು ಸಂಪ್ರದಾಯ ಜನಪದ ಕಲಾಮೇಳ ವರ್ಷಕ್ಕೊಮ್ಮೆ ಆಗುವುದು.

ಆಕಾಶವಾಣಿಯಲ್ಲಿ ಸಮಯಕ್ಕೆ ಬಹಳ ಮಹತ್ವ 10, 15, 30, 60 ನಿಮಿಷಗಳ ಕಾರ್ಯಕ್ರಮಗಳಿವೆ. ಅಷ್ಟನ್ನೇ ಹಾಡಬೇಕು. ಕೆಲವರು ಅಷ್ಟೇ ನಿಮಿಷ ಗಳಿಗೆ ಬೇಕಾಗುವ ಹಾಡುಗಳನ್ನು ಹಾಡುತ್ತಾರೆ. ಕೆಲವರಿಗೆ ನಿರ್ದೇಶನ ಬೇಕಾಗುತ್ತದೆ. ಒಂಬತ್ತು ನಿಮಿಷಕ್ಕೆ ಕಥನಕವನ ಹಾಡುವುದು ಕಷ್ಟ. ಮುಗಿಯದ ಯಾವುದೋ ಭಾಗಕ್ಕೆ ನಿಲ್ಲುವುದರಿಂದ ಅವರ ಕಥೆ ಸಂಪೂರ್ಣ ಹಾಡಲಾಗುವುದಿಲ್ಲ. ಅಂಥ ಸಂದರ್ಭ ಗಳಲ್ಲಿ ಬಿಡಿಬಿಡಿ ಹಾಡುಗಳನ್ನು ಹಾಡಬೇಕಾಗುತ್ತದೆ. ಹೆಚ್ಚಿನ ವೇಳೆ ಕೊಟ್ಟಾಗ ಸಂಪೂರ್ಣ ಕಥೆಯೆಲ್ಲಾ ಮಾತನಾಡಬೇಕಾಗುತ್ತದೆ. ಇಡೀ ರಾತ್ರಿ ಒಂದೇ ಕಥೆ ಮಾಡುವವರೂ ಇದ್ದಾರೆ. ಇಂಥವರಿಗೆ ಕೊಟ್ಟ ಸಮಯದಲ್ಲಿ ಕಥೆಯನ್ನು ಮುಗಿಸುವ ಕಲೆಗಾರಿಕೆಯು ಕರಗತವಾಗಬೇಕಾಗುತ್ತದೆ. ಅದಕ್ಕೆ ನಿರ್ದೇಶಕ ಬೇಕಾಗುತ್ತದೆ. ಆ ಕೆಲಸವನ್ನು ನಾವು ಮಾಡಬೇಕಾಗುತ್ತದೆ. ಕೆಟ್ಟ ಪದಗಳು, ಬೈಗಳುಗಳನ್ನು ಉಪಯೋಗಿಸಬೇಡಿ. ಮಧ್ಯೆ ಮಧ್ಯೆ ಕೆಮ್ಮುವುದು, ಕ್ಯಾಕರಿಸುವುದು ಮಾಡಬಾರದು. ಆರಂಭ ಮಾಡಿದರೆ ಕೈ ಸನ್ನೆ ಕೊಡುವವರೆಗೂ ಹಾಡಬೇಕು. ನಿಲ್ಲಿಸುವ ಸಂಜ್ಞೆ ಮಾಡಿದಾಗ ನಿಧಾನವಾಗಿ ಪಲ್ಲವಿ ಹಾಡಿ ಮುಗಿಸಬೇಕು ಎಂದು ಹೇಳಿದರೂ ಕೆಲವೊಮ್ಮೆ ನಿಲ್ಲಿಸಿ. ಕೈ ತೋರಿಸಿದಾಗ ಹೆದರಿ ಅಲ್ಲಿಗೇ ನಿಲ್ಲಿಸುವರು. ಆಗ ಮತ್ತೆ ಹೇಳಿ ಮುಗಿಸಬೇಕಾಗುತ್ತದೆ. ಆಕಾಶವಾಣಿಯಲ್ಲಿಯೇ ಆಗಲೀ ಸಭೆ ಸಮಾರಂಭಗಳಲ್ಲೇ ಆಗಲೀ ನಿಗದಿತ ಸಮಯದಲ್ಲಿ ಮುಗಿಸುವ ಚಾಕಚಕ್ಯತೆಯನ್ನು ಕಲಾವಿದರೂ ರೂಢಿಸಿಕೊಳ್ಳಬೇಕು. ಹಬ್ಬ, ಜಾತ್ರೆ, ಶಿವರಾತ್ರಿಗಳಲ್ಲಿ ರಾತ್ರೋರಾತ್ರಿ ಹಾಡಿದರೂ ಕೇಳುವವರಿದ್ದಾರೆ. ಈಗಂತೂ ವೇಳೆಗೆ ಬಹಳ ಮಹತ್ವ. ಹೇಳುವುದನ್ನು ಚಿಕ್ಕ ಚಿಕ್ಕದಾಗಿ ಮಾಡಿದರೆ ತುಂಬಾ ಒಳಿತು.

# ಜೇಡರ ದಾಸಿಮಯ್ಯನ ಸಾಮಾಜಿಕ ಕಳಕಳಿ

ಡಿ. ಲಿಂಗಯ್ಯ

ಕನ್ನಡ ಸಾಹಿತ್ಯದಲ್ಲಿ ಪ್ರಸಿದ್ಧನಾಗಿರುವ ಜೇಡರ ದಾಸಿಮಯ್ಯ ದಾರ್ಶನಿಕ, ಸಮಾಜ ಸುಧಾರಕ, ಶುಚಿ ಬದುಕಿನ ಹಿತಚಿಂತಕ, ಸದಾಚಾರ ಪ್ರೇರಕ, ವಚನ ರಚನೆಯ ಆದ್ಯ ಪ್ರವರ್ತಕ, ಮಿಗಿಲಾಗಿ ಮಾನವ ಪ್ರೇಮಿ, ಉದಾತ್ತ ಜೀವಿ. ಹೀಗಾಗಿ ಇವನ ಬದುಕು ಬರಹ ಹಿಂದಿನಂತೆ ಈಗಲೂ ಪ್ರಸ್ತುತ. ಈ ಮಹನೀಯನ ಬಗೆಗೆ ಚಿಂತನೆ, ಮರು ಚಿಂತನೆಗಳಿಗೆ ಸದಾ ಅವಕಾಶ ಇದ್ದೇ ಇದೆ. ದಾಸಿಮಯ್ಯನನ್ನು ಕುರಿತಂತೆ ಸಂಶೋಧಕರ, ಸಹೃದಯರ ಆಲೋಚನೆಗೆ ಅಂತ್ಯ ಕಾಣುತ್ತಿಲ್ಲ. ದಾಸಿಮಯ್ಯನ ಕಾಲ, ಹೆಸರು, ಉಲ್ಲೇಖಿತ ಪವಾಡ, ಪ್ರೇರಣೆ ಮೊದಲಾದವುಗಳ ಬಗೆಗೆ ಇನ್ನೂ ಅಗೆತ ನಿಂತಿಲ್ಲ. ವ್ಯಕ್ತಿಯ ಬದುಕು ದೊಡ್ಡದಾದಾಗ ಅವನ ಸರ್ವಸ್ವವೂ ಮಹತ್ವದ ಅಂಶಗಳಾಗುತ್ತವೆ. ಇದಕ್ಕೆ ಜೇಡರ ದಾಸಿಮಯ್ಯ ಹೊರತಾಗಿಲ್ಲ.

ದಾಸಿಮಯ್ಯನ ಬದುಕು, ಬದುಕಿನ ರೀತಿ ದೊಡ್ಡದು. ಹಾಗೆಯೇ ರಚನೆಯಲ್ಲಿ ಇವನು ಮಾಡಿರುವ ಪ್ರಯೋಗಗಳು ಆಶ್ಚರ್ಯ ಹುಟ್ಟಿಸುತ್ತವೆ. ತಾನು ಹುಟ್ಟಿ ಬೆಳೆದ ಸಾಮಾಜಿಕ ಪರಿಸರ, ಕಂಡುಂಡ ಜೀವನಾನುಭವದ ಹಿನ್ನೆಲೆಯಲ್ಲಿ ದಾರ್ಶನಿಕ ದಾಸಿಮಯ್ಯ ಸದಾಚಾರಕ್ಕೆ ಪ್ರಥಮ ಪ್ರಾಶಸ್ತ್ಯ ನೀಡಿದ್ದಾನೆ. ಈ ಸದುದ್ದೇಶದ ವಚನಗಳು ವಿಪುಲವಾಗಿವೆ.

ಇಹದಲ್ಲಾಗಲಿ ಪರದಲ್ಲಾಗಲಿ ಮನುಷ್ಯ ಮಹಾತ್ಮನಾಗುವುದು ಹೇಗೆ ? ಎಲ್ಲ ಕಾಲಕ್ಕೂ ಎಲ್ಲ ಜನಾಂಗಕ್ಕೂ ಪ್ರಸ್ತುತವಾಗುವಂತೆ ಬದುಕುವುದು ಹೇಗೆ ? ದಾಸಿಮಯ್ಯ ಸೂಚಿಸಿರುವ ದಾರಿ ಹೀಗಿದೆ :

ಪರವಧುವ ನೆರೆಯದೆ, ಪರಧನವ ತುಡುಕದೆ,
ಪರದೈವಮಚ್ಚೆ ಪಡೆಯದೆ

ಗುರುಲಿಂಗ ಜಂಗಮಕ್ಕೆ ವರದಾಸನಾದಾತನೇ
ಧರೆ ಮೂರಕ್ಕೆ ಗುರುವಾಗಿಪ್ಪನೈ ರಾಮನಾಥ*        ೫೨

ಬದುಕಿನ ಸಂದರ್ಭದಲ್ಲಿ ಮನುಷ್ಯ ಎಂಥದ್ದಕ್ಕೋ ಎಂಥವರಿಗೋ ದಾಸನಾಗಲು ಹವಣಿಸುತ್ತಾನೆ. ಅದು ಅಪಮಾನ ಎಂದು ಪರಿಗಣಿಸುವುದಿಲ್ಲ. ಆದರೆ ಗುರು ಲಿಂಗ ಜಂಗಮಕ್ಕೆ ದಾಸನಾಗುವುದು ಕೀಳರಿಮೆಯಲ್ಲ ; ವಿಭೂತಿ ಸಾಕ್ಷಾತ್ಕಾರಕ್ಕೆ ಬೆಳಕಿಂಡಿ. ಸಮಾಜದಲ್ಲಿ ಸಂಸಾರದಲ್ಲಿ ಶುಚಿ ರುಚಿ ಪಾವಿತ್ರ್ಯ ಉಳಿಯಬೇಕಾದರೆ ಪರವಧುವಿನ ದುರುಪಯೋಗ ಕೂಡದು ; ಪರಧನವನ್ನು ಕದಿಯಬಾರದು. ಹಾಗೆಯೇ ತನ್ನ ದೈವ ಮರೆತು ಅನ್ಯದೈವಕ್ಕೆ ಎಳಸಬಾರದು. ಇಂತಹ ಗುಟ್ಟನ್ನು ಅರಿತವನು ಮಾತ್ರ ಮೂರು ಲೋಕದಲ್ಲೂ ದೊಡ್ಡವನಾಗಬಲ್ಲ.

ದಾಸಿಮಯ್ಯನಿಗೆ ಸ್ತ್ರೀಯರ ಬಗೆಗೆ ಇನ್ನಿಲ್ಲದ ಕಾಳಜಿ. ಸ್ತ್ರೀಗೆ ಅತ್ಯುನ್ನತ ಸ್ಥಾನ ಮಾನ ಬೇಕೆಂದು ಬಯಸಿದ ಮಹಾನುಭಾವ ಆತ. ಗಂಡನನ್ನುಳ್ಳ ಗರತಿ ಕೇವಲ ಹೆಣ್ಣಲ್ಲ ; ಸಾಕ್ಷಾತ್ ಪಾರ್ವತಿ. ಅಂಥವಳನ್ನು ದಾರಿ ತಪ್ಪಿಸುವುದು ಮಹಾಪಾಪ.

ಗಂಡನುಳ್ಳವ್ವೆಯ ಗೌರಿಯೆಂದು ಕಂಡಡೆ ಭೂ-
ಮಂಡಲಕ್ಕೆ ಅರಸಾಗಿ ಹುಟ್ಟುವನಾತನು.
ಗಂಡನುಳ್ಳವ್ವೆಯ ಕಂಡು ಒಡವೆರೆದಾತ ನರಕದಲ್ಲಿ
ದಿಂಡುಗೆಡೆದಿಪ್ಪನೈ ರಾಮನಾಥ        ೪೮

ಯಾವ ಸಮಾಜ ಗರತಿಗೆ ಗೌರವ ನೀಡುವುದಿಲ್ಲವೋ ಅಂಥ ಸಮಾಜ ಮಾನವಂತ ಸಮಾಜವಾಗಲಾರದು ; ಅಂಥ ಸಮಾಜದ ಸಾಮಾಜಿಕರು ಮನುಷ್ಯರಾಗಲಾರರು.

ಗಂಡುಳ್ಳ ಗರತಿಯ ಬಗೆಗೆ ಹೇಗೆ ಗೌರವವೋ ಹಾಗೆಯೇ ಗಂಡನನ್ನು ಕಳೆದು ಕೊಂಡ ವಿಧವೆಯ ಬಗೆಗೂ ದಾಸಿಮಯ್ಯನಿಗೆ ಮಿಗಿಲಾದ ಗೌರವವುಂಟು. ವಿಧವೆ ಯಂತಹ ಅಸಹಾಯಕರನ್ನು ಸ್ವಾರ್ಥ ಸುಖಕ್ಕೆ ಬಳಸಿಕೊಳ್ಳಬಾರದು.

"ಶಿವಭಕ್ತರು ತಮ್ಮ ನಿಜ ಕೈಲಾಸಕ್ಕೆ ಹೋದರೆ
ಅವರರಸಿಯು ಪಾರ್ವತಿಯ ಸರಿಯೆಂದು ಕಾಣಬೇಕು.

---

* ಈ ಲೇಖನದಲ್ಲಿ ಬಳಸಿರುವ ಪದ್ಯಗಳನ್ನು ಡಾ. ಎಲ್. ಬಸವರಾಜು ಅವರು ಸಂಪಾದಿಸಿರುವ "ದೇವರ ದಾಸಿಮಯ್ಯನ ವಚನಗಳು" ಗ್ರಂಥದಿಂದ ಆರಿಸಿದೆ. ಚತುರ್ಥ ಸಂಸ್ಕರಣ, ೧೯೮೫.

ಅಲ್ಲಿ ಅನುಸರಣೆಯು ಕೊಟ್ಟು
ಬೆರಸಿ ಮಾತನಾಡುವ
ನರಕಿಗಳನೇನೆಂಬೆ ರಾಮನಾಥ (೪೯)

ಉತ್ತಮ ದಾಂಪತ್ಯ ಜೀವನ, ಉತ್ತಮ ಬದುಕಿನ ಜೀವಾಳ. ಸ್ವಾಸ್ಥ್ಯ ಸಮಾಜದ ಹೆಗ್ಗುರುತು ಸ್ವಾಸ್ಥ್ಯ ಸಂಸಾರ. ಹಾಗೆಯೇ ದಂಪತಿಗಳಿಬ್ಬರೂ ಭಕ್ತರಾದರೆ ಅಂಥ ಸಂಸಾರದ ಹಿರಿಮೆ ಇನ್ನೂ ಅಧಿಕ.

ಸತಿಪತಿಗಳೊಂದಾದ ಭಕ್ತಿ
ಹಿತವಾಗಿಪ್ಪುದು ಶಿವಂಗೆ
ಸತಿಪತಿಗಳೊಂದಾಗದವನ ಭಕ್ತಿ
ಅಮೃತದೊಳು ವಿಷ ಬೆರಸಿದಂತೆ ಕಾಣಾ ರಾಮನಾಥ (೫೬)

ಭಕ್ತಿ ವೈಯಕ್ತಿಕವಾದದ್ದು. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಸಂಸಾರಕ್ಕನುಸಾರವಾಗಿ ಒಂದಲ್ಲ ಒಂದು ನೆಲೆಯಲ್ಲಿ ಭಕ್ತಿ ಮನೋಧರ್ಮವುಳ್ಳವನಾಗಿರುತ್ತಾನೆ. ಅವ್ಯಕ್ತ ಶಕ್ತಿಯಾದ ದೇವರನ್ನು ನಂಬಲಿ ನಂಬದೇ ಇರಲಿ ಭಕ್ತಿ ಭಾವ ತನ್ನ ಪ್ರಭಾವವನ್ನು ಬೀರದೆ ಇರುವುದಿಲ್ಲ. ಭಕ್ತಿಗೂ ನಿಷ್ಠೆಗೂ ಅವಿನಾ ಸಂಬಂಧ. ನಿಷ್ಠೆಯಿಲ್ಲದ ಭಕ್ತಿ ವ್ಯರ್ಥ. ಮೋಸ ತಾತ್ಕಾಲಿಕವಾಗಿ ವಿಜೃಂಭಿಸಿದರೂ ಶಾಶ್ವತ ಪರಿಣಾಮ ಬೀರಲಾರದು. ದಾಸಿಮಯ್ಯ ಅನನ್ಯ ಭಕ್ತ ; ಆದರ್ಶ ಭಕ್ತ. ಕಪಟ ಸ್ವಭಾವದ ಚಂಚಲ ಭಕ್ತಿಯನ್ನು ಸಹಿಸಲಾರದ ಋಜು ಮನೋಭಾವ ಅವನದು. ಮಠದ ಪರಿಸರ ದಾಸಿಮಯ್ಯನಿಗೆ ಪರಿಚಿತ. ದೇವರ ಹೆಸರಿನಲ್ಲಿ, ಭಕ್ತಿಯ ನೆಪದಲ್ಲಿ ಎಂತೆಂಥವರೋ ಮಠದಲ್ಲಿ ಜಮಾಯಿಸುವುದನ್ನು ಬಲ್ಲ. ಮಠದಲ್ಲಿರುವವರೆಲ್ಲ ಕಾವಿ ಧರಿಸಿದವರೆಲ್ಲ ಸನ್ಯಾಸಿಗಳಲ್ಲ ಭಕ್ತರಲ್ಲ. ಹೊಟ್ಟೆ ಪಾಡಿಗೆ ಮಠ ಸೇರುವವರೂ ಇಲ್ಲದಿಲ್ಲ. ಮಠದ ಬೆಕ್ಕು ಇಲಿಯನ್ನು ಕಂಡಾಗ ಚಂಚಲಗೊಳ್ಳದೆ ಇರುತ್ತದೆಯೆ ?

ಮನುಷ್ಯನ ಬದುಕಿನಲ್ಲಿ ಏನೆಲ್ಲ ಅಧ್ಯಾತ್ಮದ ನೆಲೆಗಳಿದ್ದರೂ ಹೊಟ್ಟೆಪಾಡಿನ ಪಾತ್ರ ಹಿರಿದಾಗಿದೆ. ಮನುಷ್ಯ ಜೀವನದ ಬಹುಭಾಗವನ್ನು ಹಸಿವು ನುಂಗಿ ಬಿಡುತ್ತದೆ. ಹಸಿವು ಹಿಂಗದೆ ಯಾವ ಸಾಧನೆಯೂ ಸಾಧ್ಯವಿಲ್ಲ. ಹಸಿವನ್ನು ತಣಿಸುವುದೇ ನಮ್ಮೆಲ್ಲ ಸಾಮಾಜಿಕ ನ್ಯಾಯದ ಮೂಲೋದ್ದೇಶವಾಗಿದೆ. ದಾಸಿಮಯ್ಯ ಶಕ್ತಿಯುತವಾದ ಸಂಕೇತದಲ್ಲಿ ಹಸಿವಿನ ಭಯಂಕರತೆಯನ್ನು ಹೀಗೆ ಕಂಡರಿಸಿದ್ದಾನೆ :

ಹಸಿವೆಂಬ ಹೆಬ್ಬಾವು ಬಸಿರ ಬಂದು ಹಿಡಿದಡೆ
ವಿಷವೇರಿತ್ತಯ್ಯ ಆಪಾದ ಮಸ್ತಕಕ್ಕೆ ;

ಹಸಿವಿಗನ್ನವನಿಕ್ಕಿ ವಿಷವನಿಳುಹ ಬಲ್ಲಡೆ
ವಸುಧೆಯೊಳಗಾತನೇ ಗಾರುಡಿಗ ಕಾಣಾ ರಾಮನಾಥ (೨೩)

ಹಸಿವನ್ನು ಹೆಬ್ಬಾವಿಗೆ ಹೋಲಿಸಿರುವುದು ಅರ್ಥಪೂರ್ಣವಾಗಿದೆ. ಅನ್ನದ ಸಮಸ್ಯೆಗೆ ಅನ್ನವೇ ಉತ್ತರ ; ಅನ್ಯವಲ್ಲ.

ದೇಹಧಾರಿಯಾದ ಮನುಷ್ಯನಿಗೆ ಹಲವು ಇತಿಮಿತಿಗಳಿವೆ. ಅವುಗಳನ್ನು ಮೀರುವುದು ಕಷ್ಟ. ದೇವರೇ ಮನುಷ್ಯನಾಗಿ ಬಂದರೂ ಅವನಿಗೂ ಕಷ್ಟ ತಪ್ಪಿದ್ದಲ್ಲ. ದೇಹಧಾರಿಯ ಬವಣೆಯನ್ನು ದಾಸಿಮಯ್ಯ ಸವಾಲಿನಂತೆ ಹೀಗೆ ನಿರೂಪಿಸಿದ್ದಾನೆ :

ಒಡಲುಗೊಂಡವ ಹಸಿವ
ಒಡಲುಗೊಂಡವ ಹುಸಿವ
ಒಡಲುಗೊಂಡವನೆಂದು ನೀನೆನ್ನ ಜಡಿದೊಮ್ಮೆ ನುಡಿಯದಿರಾ !
ನೀನೆನ್ನಂತೊಮ್ಮೆ ಒಡಲುಗೊಂಡು ನೋಡಾ ರಾಮನಾಥ. ೧೦೦

ಮನುಷ್ಯ ಮಿತಿಯನ್ನೇ ಅತಿಮಾಡಿಕೊಂಡು ಮತಿಗೆಡಬಾರದೆಂಬ ಎಚ್ಚರವೂ ದಾಸಿಮಯ್ಯನಿಗಿಲ್ಲದಿಲ್ಲ. ಆದರೆ ಅವನಿಗಿರುವ ಮಿಗಿಲಾದ ಮಾನವ ಪ್ರೇಮ, ಮಾನವ ಪಕ್ಷಪಾತಿಯಾಗಿ ವಚನಿಸುವಂತೆ ಮಾಡಿದೆ.

ವ್ಯಭಿಚಾರ ನುನುಕುಲವನ್ನು ಕಾಡುತ್ತಿರುವ ಪ್ರಾಚೀನ ಪಿಡುಗು. ದಾಸಿಮಯ್ಯ ವ್ಯಭಿಚಾರವನ್ನು ಕಟುವಾಗಿ ಟೀಕಿಸಿದ್ದಾನೆ. ಭವಿಯಾಗಲಿ ಭಕ್ತನಾಗಲಿ ಬದುಕಿನಲ್ಲಿ ಸದಾಚಾರಿಯಾಗಿರಬೇಕೆಂದು ಸಾರಿದ್ದಾನೆ. ಸಾಮಾಜಿಕ ಶುಚಿತ್ವವಿದ್ದರೆ ಸಂಸಾರ ಸುಂದರವಾಗಿರುತ್ತದೆ ಎಂಬುದು ಅವನ ನಂಬಿಕೆ. ಉದಾತ್ತ ಜೀವನದ ಕಡೆಗೆ ಸದಾ ಅವನ ಒಲವು. ಆತ್ಮವಂಚನೆಯ ಮಠಾಧೀಶರನ್ನೂ ಟೀಕಿಸುವ ದಾಸಿಮಯ್ಯ ಮಾನವೀಯತೆಗೆ ಮಿಡಿದಿದ್ದಾನೆ. ದೇವರ ಅಸ್ತಿತ್ವ, ಗುರುಕರುಣೆಯ ಮಹತ್ವಗಳಲ್ಲೂ ಸದಾಚಾರಕ್ಕೆ ಇಂಬು ಕಂಡುಕೊಂಡಿದ್ದಾನೆ. ದೇವರ ದಾಸಿಮಯ್ಯನ ಸಾಮಾಜಿಕ ನಿಲುವು ಆದರ್ಶ ಪ್ರಾಯವಾದದ್ದು, ಅನುಕರಣೀಯವಾದದ್ದು. ಸದಾಚಾರದ ಕಳಕಳಿಯೇ ದಾಸಿಮಯ್ಯನ ವಚನಗಳ ಮೂಲ ಸೆಲೆ. ದಾಸಿಮಯ್ಯನ ಬಹುತೇಕ ವಚನಗಳಲ್ಲಿ ಈ ಸ್ವಚ್ಛ ಭಾವನೆಯ ಹೊಳಹನ್ನು ನಿಚ್ಚಳವಾಗಿ ಕಾಣಬಹುದು.

# ವಚನಗಳಲ್ಲಿ ಪ್ರತಿಮೆಗಳು : ಒಂದು ಅವಲೋಕನ

ಉಷಾಕಿರಣ್

12ನೇ ಶತಮಾನದ ವಚನ ಸಾಹಿತ್ಯ ಮೂಡಿಬಂದ ಹಿನ್ನೆಲೆಯಲ್ಲಿ ಸಾಮಾಜಿಕ ಹೋರಾಟದ ಹಲವು ಕ್ರಾಂತಿಕಾರೀ ಘಟನೆಗಳು ಅಡಗಿವೆ. ಇದಕ್ಕೆ ಪೋಷಕವಾಗಿ ಬೆಳೆದ ಈ ಸಾಹಿತ್ಯದ ಭಾಷೆಯೂ ಕೂಡ ಕ್ರಾಂತಿಕಾರವಾಯಿತು. ಹೀಗೆ ಹೊಸತನಗಳನ್ನು ಮೈಗೂಡಿಸಿಕೊಂಡ ವಚನಸಾಹಿತ್ಯದ ಅಭಿವ್ಯಕ್ತಿ ವಿಧಾನಗಳಲ್ಲಿ ಪ್ರತಿಮಾ ವಿಧಾನ ಒಂದು ವಿಶಿಷ್ಟ ತಂತ್ರವಾಗಿ ಮೂಡಿಬಂದಿದೆ. ಹಿಂದಿನ ಚಂಪೂ ಕಾವ್ಯಗಳಲ್ಲಿ ಪ್ರತಿಮಾ ನಿರ್ಮಿತಿ ಇರಲಿಲ್ಲವೆಂದಲ್ಲ. ಆದರೆ ವಚನಸಾಹಿತ್ಯದಿಂದಾಗಿ ಸಂಭವಿಸಿದ ಸಾಹಿತ್ಯ ಕ್ರಾಂತಿಯಲ್ಲಿ ಇದರ ಪಾತ್ರ ವಿಶಿಷ್ಟವಾದದ್ದು. ಜನಸಾಮಾನ್ಯರಿಗಾಗಿ ಹುಟ್ಟಿದ ಈ ಸಾಹಿತ್ಯ ಅವರದೇ ಆದ ನುಡಿಗಡಣಗಳನ್ನು ಸೂತ್ರೀಕರಿಸಿ ಅವರಲ್ಲಿ ಜಾಗೃತಿಯನ್ನುಂಟುಮಾಡಲು ಪ್ರತಿಮಾ ವಿಧಾನ ವಿಶೇಷವಾಗಿ ಹೊಣೆಯಾಯಿತು. ಅಂದು ಇವುಗಳನ್ನು ಕುರಿತು ವ್ಯಾಖ್ಯಾನಿಸುವ ಹಾಗೂ ಚರ್ಚಿಸುವ ಕಾವ್ಯಮೀಮಾಂಸಕವಾದ ಮಿಮರ್ಶಾ ಕಾರ್ಯ ನಡೆಯದೇ ಹೋದರೂ ಕೂಡ ಈ ವಿಧಾನ ಉತ್ತಮ ಅಭಿವ್ಯಕ್ತಿ ತಂತ್ರವಾಗಿ ತನ್ನದೇ ಆದ ಸ್ಥಾನವನ್ನು ಗಳಿಸಿಕೊಂಡಿತು. ಇದು ಕವಿಪ್ರತಿಭೆಯ, ಕಾವ್ಯ ಕುಶಲತೆಯ ಗುರುತಾಗಿ ಬೆಳೆದು ವಚನಕಾರರು ದೇಶೀಭಾಷೆಯ ಸಂಪತ್ತನ್ನು ಸೂರೆಗೊಳ್ಳಲು ನೆರವಾಯಿತು. ಇದರಿಂದಾಗಿ ವಚನಕಾರರು ಜನಸಾಮಾನ್ಯರಲ್ಲಿ ಭಕ್ತಿ, ಜ್ಞಾನಗಳ ಹುಚ್ಚು ಹಿಡಿಸಿದವರಷ್ಟೇ ಅಲ್ಲ 'ಅಚ್ಚಗನ್ನಡದ ಬೇಸಾಯಗಾರರು' ಎಂಬ ಮನ್ನಣೆಗೆ ಪಾತ್ರರಾದರು.

ಅಂದಿನ ಸಮಾಜದಲ್ಲಿ ಕಂಡುಬಂದ ಡಂಭಾಚಾರ, ಅಂಧಶ್ರದ್ಧೆಗಳ ವಿರುದ್ಧ ದನಿಯೆತ್ತಿ ಪ್ರಗತಿಪರವಾದ ಹೊಸ ವೈಚಾರಿಕ ನಿಲುವುಗಳನ್ನು ನಿರೂಪಿಸುವುದಕ್ಕಾಗಿ ವಚನಕಾರರು ತಮ್ಮ ವಚನಗಳಲ್ಲಿ ಹಲವು ಶಕ್ತಿ ಪೂರ್ಣವಾದ ಉಪಮೆ, ರೂಪಕ, ಪ್ರತಿಮೆಗಳನ್ನು ಬಳಸಿಕೊಂಡರು. ಜನಜೀವನದ ದೈನಂದಿನ ಅನುಭವಗಳನ್ನು ಹಾಗೂ

ವಚನಕಾರರ ಲೋಕಾನುಭವಗಳನ್ನು ಈ ಪ್ರತಿಮೆಗಳು ಅತ್ಯಂತ ಸಮರ್ಥವಾಗಿ ಬಿಂಬಿಸುತ್ತವೆ. ಅನುಭವ, ಭಾಷೆ, ಅಭಿವ್ಯಕ್ತಿಗಳ ಸುಂದರ ಸಾಮರಸ್ಯವನ್ನು ಸಾಧಿಸಿರುವ ವಚನಕಾರರ ವಚನಗಳಲ್ಲಿ ಇಂದಿನ ಕಾವ್ಯದ ಪ್ರತಿಮಾವಿಧಾನಕ್ಕೆ ಸಮಾನವಾಗಿರುವ ಪ್ರತಿಮೆ ಸಂಕೇತಗಳ ನೂತನ ಬಗೆಯು ಸೃಷ್ಟಿ ಕಂಡುಬರುತ್ತದೆ. ಈ ಪ್ರತಿಮೆಗಳು ತತ್ವಗರ್ಭಿತವೂ, ಧ್ವನಿಪೂರ್ಣವೂ ಆಗಿದ್ದು ಕವಿಯ ತೀವ್ರಾನುಭವದ ಅಭಿವ್ಯಕ್ತಿಗಳಾಗಿವೆ.

## ಕಾವ್ಯಪ್ರತಿಮೆ

ಪ್ರತಿಮೆಗಳು ಅನುಭವ ವೇದ್ಯವಾದವು. ಇವುಗಳ ಲಕ್ಷಣಗಳನ್ನು ನಿರ್ದಿಷ್ಟ ವ್ಯಾಖ್ಯಾನಕ್ಕೆ ಒಳಪಡಿಸುವುದು ಸಾಧ್ಯವಿಲ್ಲ. ಸರಳವಾದ ಅರ್ಥದಲ್ಲಿ ಪ್ರತಿಮೆಯನ್ನು ಶಬ್ದಗಳಿಂದಾದ ಒಂದು ಚಿತ್ರ ಎಂದು ಲೆವಿಸ್ ಹೇಳಿದ್ದಾನೆ. ಕವಿ ತನ್ನ ಅನುಭವವನ್ನು ಅಭಿವ್ಯಕ್ತಿಗೊಳಿಸಲು ಸಂವಹನ ಸಾಧನವಾಗಿ ಸಾಮ್ಯತೆಯುಳ್ಳ ಒಂದು ಪ್ರತೀಕವನ್ನು ಹುಡುಕುತ್ತಾನೆ. ಒಂದು ಪ್ರತೀಕ ಧ್ವನ್ಯಾರ್ಥವನ್ನು ಪಡೆದಾಗ ಪ್ರತಿಮೆಯಾಗುತ್ತದೆ. ರಿಚರ್ಡ್ಸ್ 'ಪ್ರತಿಮೆ ಅಪೂರ್ವವಾದ ಇಂದ್ರಿಯ ಸಂಬಂಧ ಹೊಂದಿದ ಒಂದು ಮಾನಸಿಕ ಘಟನೆ' ಎನ್ನುತ್ತಾನೆ. ಭಾರತೀಯ ಕಾವ್ಯಮೀಮಾಂಸೆಯಲ್ಲಿ ಚಿಹ್ನೆ, ಸಂಕೇತ, ಪ್ರತೀಕ, ಪ್ರತಿಮೆ ಇವು ಕಾವ್ಯದ ಅಭಿವ್ಯಕ್ತಿ ವಿಧಾನವನ್ನು ಸೂಚಿಸುವ ಪದಗಳು. ಇವುಗಳೆಲ್ಲ ಬಹುಶಃ ಆಂಗ್ಲಸಾಹಿತ್ಯ ವಿಮರ್ಶೆಯಲ್ಲಿ ಈಚೆಗೆ ಹೆಚ್ಚಿನ ಬಳಕೆಯಲ್ಲಿ ಕಂಡುಬರುತ್ತಿರುವ ಇಮೇಜ್ ಪದಕ್ಕೆ ಸಂವಾದಿಗಳೆಂದು ಪರಿಗಣಿಸಲಾಗಿದೆ. ಪ್ರಕೃತಿಯನ್ನು ನಾವು ಚಿಹ್ನೆಗಳ ಮೂಲಕ ಗುರುತಿಸುತ್ತೇವೆ. ಮನಸ್ಸಿನ ಅಭಿಪ್ರಾಯವನ್ನು ಸಂವಹಿಸುವಾಗ ಇಂದ್ರಿಯ ಗೋಚರವಾದ ಕೆಲವು ಚಿಹ್ನೆಗಳನ್ನು ದೈನಂದಿನ ವ್ಯವಹಾರದಲ್ಲಿ ಉಪಯೋಗಿಸುತ್ತೇವೆ. ಚಿಹ್ನೆ, ಮನುಷ್ಯನ ಬುದ್ಧಿಮತ್ತೆಯ ಪ್ರಾರಂಭದ ಕ್ರಿಯೆ ಎನ್ನಲಾಗಿದೆ. ಚಿಹ್ನೆಗಳಲ್ಲಿ ಸಹಜ ಮತ್ತು ಕೃತಕ ಎಂಬ ಎರಡು ಬಗೆಗಳನ್ನು ಕಾಣಬಹುದಾಗಿದೆ. ಉದಾಹರಣೆಗೆ ರಸ್ತೆ ಒದ್ದೆಯಾಗಿರುವಿಕೆ ಮಳೆ ಬಂದಿರುವುದರ ಸಹಜ ಚಿಹ್ನೆಯಾಗಿದ್ದರೆ ರೈಲ್ವೆ ನಿಲ್ದಾಣದಲ್ಲಿ ಗಂಟೆಯಾಗುವುದು ರೈಲು ಬರುವುದರ ಕೃತಕ ಚಿಹ್ನೆಯಾಗಿದೆ. ಕುಂಕುಮ ಮಾಂಗಲ್ಯ ಮುತ್ತೈದೆತನದ ಕೃತಕ ಚಿಹ್ನೆಗಳು ಪರಂಪರೆ ಮತ್ತು ಸಂಪ್ರದಾಯಗಳಲ್ಲಿ ಅರ್ಥ ತುಂಬಿಕೊಂಡು ಬೆಳೆಯುತ್ತವೆ. ಚಿಹ್ನೆ ಅಥವಾ ಸಂಕೇತ ಒಂದು ಘಟನೆಯ ಅಥವಾ ಅಸ್ತಿತ್ವದ ಸೂಚನೆಯನ್ನು ಮಾತ್ರ ಕೊಡುತ್ತದೆ. ಆದರೆ ಪ್ರತೀಕ ಮುಂದುವರಿದು ಆ ಘಟನೆ ಅಥವಾ ವಸ್ತುವಿನ ಸ್ವರೂಪವನ್ನು ಸಾಕ್ಷಾತ್ಕರಿಸುತ್ತದೆ. ಕಪ್ಪು ಬಣ್ಣ ದುಃಖದ ಸಂಕೇತವಿದ್ದ ಹಾಗೆ ಕಾವಿ ಬಣ್ಣ ತ್ಯಾಗದ ಪ್ರತೀಕ. ಇದರಲ್ಲಿ ಇಂದ್ರಿಯ ಗೋಚರ ಸತ್ಯಕ್ಕಿಂತ ಬೇರೆಯಾದ ಭಾವಸತ್ಯ ಅಡಗಿದೆ. ಆದ್ದರಿಂದ ಪ್ರತೀಕ ಒಂದು ಮುಂದುವರಿದ ಚಿಹ್ನೆ. ನಮ್ಮ ಭಾವವಲಯಕ್ಕೆ ಪ್ರವೇಶಿಸಿದ ಚಿಹ್ನೆ ಶಿಲುಬೆ ಕ್ರೈಸ್ತ

ರಲ್ಲದವರಿಗೆ ಒಂದು ಚಿಹ್ನೆ ಮಾತ್ರ. ಆದರೆ ಕ್ರೈಸ್ತರಿಗೆ ಅದು ಒಂದು ಪ್ರತೀಕ. ಸಾಂಕೇತಗಳು ನಿರ್ಭಾವಗಳು ಪ್ರತೀಕ. ಭಾವ ಪ್ರಧಾನವಾದದ್ದು. ಪ್ರತಿಮೆ ಪ್ರತೀಕದ ಮುಂದುವರಿದ ರೂಪ, ಪ್ರತೀಕದ ಮುಂದಿನ ಮೆಟ್ಟಿಲು ಶಿಲುಬೆ. ಮೊದಲು ಪ್ರತೀಕ ವಾದದ್ದು ಕ್ರಮೇಣ ಕ್ರಿಸ್ತನ ಇಡೀ ಬದುಕಿಗೆ ಒಂದು ಪ್ರತಿಮೆ ಎನ್ನುವ ಭಾವವನ್ನು ಮೈಗೂಡಿಸಿಕೊಂಡಿದೆ. ಹುಣ್ಣಿಮೆ ಎಷ್ಟೋ ಇರಬಹುದು, ಆದರೆ ಬುದ್ಧ ಹುಟ್ಟಿದ ಹುಣ್ಣಿಮೆ ಬುದ್ಧಪೂರ್ಣಿಮೆ ಎಂಬ ಭಾವಮುದ್ರೆ ಪಡೆಯಿತು. ಧ್ವನಿ ಪ್ರಚುರತೆ ಯುಂಟಾದಾಗ ಒಂದು ಅಭಿವ್ಯಕ್ತಿ ಪ್ರತಿಮೆಯಾಗುತ್ತದೆ. ಆದ್ದರಿಂದ ಪ್ರತಿಮೆ ಧ್ವನಿ ಪೂರ್ಣವಾದ ಅಭಿವ್ಯಕ್ತಿ. ಸಾಹಿತ್ಯದಲ್ಲಿ ಪ್ರತೀಕಗಳು ಧ್ವನಿಪರಂಪರೆಗೆ ಕಾರಣವಾಗುತ್ತವೆ ಎಂದು ಹೇಳಬಹುದು.

16, 17ನೇ ಶತಮಾನಗಳಲ್ಲಿ ಮೊಟ್ಟಮೊದಲಿಗೆ ಪ್ರತಿಮೆ ಪದದ ಬಳಕೆ ಯಾಯಿತು. ಆಗ ಇದನ್ನು ಉಪಮಾದಿಗಳಂತೆ ಒಂದು ಅಲಂಕಾರ ಎಂದು ತಿಳಿದಿದ್ದರು. ಪ್ರತಿಮಾ ನಿರ್ಮಿತಿ ಕೃತಿಯ ನೆಲೆಗಟ್ಟು ಎಂದು ವಿದಿತವಾಗಿರಲಿಲ್ಲ. ಕಾಲರಿಡ್ಜ್ ಹೇಳುವಂತೆ, ಪ್ರತಿಮಾ ನಿರ್ಮಿತಿ ಕವಿಯ ಪ್ರಜ್ಞೆಯ ತಳಾತಳದಿಂದ ಬಂದುದೇ ಹೊರತು ಬುದ್ಧಿಪೂರ್ವಕವಾಗಿ ನಡೆದುದಲ್ಲ. ಅಂದರೆ ಇದು ಅಪ್ರಜ್ಞಾಪೂರ್ವಕ ವಾದುದು. ಪ್ರತಿಮೆಯಲ್ಲಿ ವಸ್ತುಸಾಗರ ಪರಿವರ್ತನೆಗೆ ಒಳಗೊಂಡಿರಬೇಕು. ಕಾವ್ಯ ರಚಿಸುವಾಗ ಒಂದು ಕಡೆ ಎದ್ದುಬರುವ ಪ್ರತಿಮೆಗಳ ಪ್ರವಾಹದ ಪ್ರಜ್ಞೆ ಮತ್ತು ಹೀಗೆ ಬರುವ ಪ್ರತಿಮೆಗಳನ್ನು ಒಂದು ತಂತ್ರದಲ್ಲಿ ಜೋಡಿಸುವ ಪ್ರಜ್ಞೆ ಎರಡೂ ಇರಬೇಕು. ವಿವಿಧ ಕೋನಗಳಲ್ಲಿರಿಸಿದ ಕನ್ನಡಿಗಳ ಸಾಲಿನಂತೆ ಪ್ರತಿಮೆಗೆ ಅನೇಕಾರ್ಥ ಸ್ಪಂದನ ಸಾಮರ್ಥ್ಯವಿರಬೇಕು. ಹಾಗೆಯೇ ಸಂಕ್ಷಿಪ್ತತೆ ಕೂಡ ಇದರ ಒಂದು ವಿಶಿಷ್ಟ ಲಕ್ಷಣ. ಉದಾಹರಣೆಗೆ : "ಲೋಕದ ಡೊಂಕ ನೀವೇಕೆ ತಿದ್ದುವಿರಿ ?" ಎಂಬಲ್ಲಿ 'ಲೋಕದ ಡೊಂಕು' ಎಂಬ ಪದ ತಿದ್ದುವುದಕ್ಕೆ ಸಾಧ್ಯವೇ ಇಲ್ಲದ ನಾಯಿಯ ಬಾಲದ ಡೊಂಕನ್ನು ಹೇಗೆ ಸ್ಪಷ್ಟವಾಗಿ ಹೋಲುತ್ತದೆಂಬುದು ಬಹಳ ಸಂಕ್ಷಿಪ್ತ ಪದದಲ್ಲಿಯಾದರೂ ಅಷ್ಟೇ ಅರ್ಥವತ್ತಾಗಿ ನಿರೂಪಿತವಾಗಿದೆ.

ಒಂದು ಉಪಮೆ, ಒಂದು ರೂಪಕ ಕೂಡ ಒಂದು ಪ್ರತಿಮೆಯಾಗಬಹುದು. ಎಲ್ಲ ಅಲಂಕಾರ ತತ್ವಗಳನ್ನೂ ಒಳಗೊಳ್ಳುವ ಒಂದು ಅಲಂಕಾರ ತತ್ವವಿದು. ಧ್ವನಿ ಪ್ರಚುರತೆ ದೊರೆತಾಗ ಒಂದು ಪ್ರತೀಕ. ಉಪಮೆ ಅಥವಾ ರೂಪಕ ಪ್ರತಿಮೆಯಾಗು ತ್ತದೆ. ಒಂದು ಸ್ವಭಾವೋಕ್ತಿ ಕೂಡ ಪ್ರತಿಮೆಯ ಕೆಲಸ ಮಾಡಬಹುದು. ಇಡೀ ಪದ್ಯವೇ ಒಂದು ಪ್ರತಿಮೆಯಾಗುವ ಸಾಧ್ಯತೆಯೂ ಉಂಟು. ಉದಾಹರಣೆಗೆ ಬೇಂದ್ರೆ ಯವರ ಕುರುಡು ಕಾಂಚಾಣ ಪದ್ಯ. ಇದು ಒಂದು ಶಕ್ತಿಪೂರ್ಣ ಪ್ರತಿಮೆಯಾಗಿದೆ. ಇಲ್ಲಿ ಪ್ರತಿಮೆ ಸಂಕೀರ್ಣತೆಯನ್ನು ಪರಿಸರ ಸಮೇತವಾಗಿ ಹಿಡಿದಿಡುವ ಒಂದು ಸಾಧನ

ವಾಗಿದೆ. ಇಡೀ ಪದ್ಯ ಅರ್ಥ ವ್ಯವಸ್ಥೆಯ ಅವ್ಯವಸ್ಥೆಗೆ ಒಡ್ಡಿದ ಪ್ರತಿಮೆಯಾಗಿದೆ. ಒಂದು ಮಹಾಕಾವ್ಯವೂ ಕೂಡ ಇಡಿಯಾಗಿ ಒಂದು ಪ್ರತಿಮೆಯಾಗಬಹುದು ಎನ್ನಲಾಗಿದೆ. ಉದಾ : ಡಿವೈನ್ ಕಾಮೆಡಿ ಅಲಂಕಾರವೇ ಇಲ್ಲದ ಸಂಗತಿಗಳು, ವಸ್ತುಗಳು ಪ್ರತಿಮೆಯಾಗಬಹುದು. ಶಾಕುಂತಲ ನಾಟಕದಲ್ಲಿ ಉಂಗುರವೇ ಒಂದು ಪ್ರತಿಮೆಯಾಗಿದೆ. ಮಹಾಭಾರತದಲ್ಲಿ ವೈಶಂಪಾಯನ ಸರೋವರ ಸುಯೋಧನನ ಸ್ಥಿತಿಗೆ ಪ್ರತಿಮೆಯಾಗಿದೆ. ಉಪಮೆಯಲ್ಲಿ ಸಾದೃಶ್ಯ ಸಂಬಂಧ ವಾಚ್ಯವಾಗಿರುತ್ತದೆ. ಆದರೆ ರೂಪಕದಲ್ಲಿ ಎರಡೂ ಒಂದೇ ಆಗಿರುತ್ತವೆ. ರೂಪಕ ಒಂದು ಅಭಿವ್ಯಕ್ತಿ ಪ್ರಕಾರ ಎನ್ನಲಾಗಿದೆ. ಇದು ಕವಿಯ ಬುದ್ಧಿಶಕ್ತಿಯ ಮಾಪನ. ರೂಪಕವನ್ನು ಒಂದು ಸಂಕ್ಷಿಪ್ತ ವಿಶೇಷಣ ಎಂದೂ ಸಹ ಹೇಳಲಾಗಿದೆ. ಅನುಭವಗಳ ಘನೀಭವಿಸುವಿಕೆ, ಹರಳಾಗುವಿಕೆ ಪ್ರವೃತ್ತಿ ರೂಪಕಗಳಲ್ಲಿ ನಿರ್ದಿಷ್ಟವಾಗಿ ತೋರುತ್ತದೆ. ಇದು ಸುಂದರವಾದ ಒಂದು ಅನುಭವಕ್ಕೆ ಒಂದು ಅಸಾಮಾನ್ಯವಾದ ಮಾಪನವಾಗುತ್ತದೆ. ಒಂದು ಅನುಭವದೊಂದಿಗೆ ಸಮೀಕರಿಸುವ ಸುಂದರ ಸಂವೇದನೆಗಳ ಮೇಳವಿಸುವಿಕೆಯ ಮೇಲೆ ಇದು ನಿರ್ಭರವಾಗಿರುತ್ತದೆ. ಸಾಂಕೇತಿಕತೆಯನ್ನು ಕಂಡುಕೊಳ್ಳದ ಭಾವನೆಗಳಲ್ಲಿ ಇಂತಹ ಸಂಕ್ಷಿಪ್ತತೆಯನ್ನು ಸಾಧಿಸಿಕೊಳ್ಳುವ ಒಂದು ಸಾಧನವಾಗಿದೆ. ಹಾಗಾಗದಾಗ ಭಾವನೆಗಳು ಸಾಂದ್ರವಾಗದೆ ಪರಿಣಾಮ ಅಸ್ತವ್ಯಸ್ತವಾಗುತ್ತದೆ. ಉಪಮೆ, ರೂಪಕಗಳು ಧ್ವನಿ ಶಕ್ತಿ ಪಡೆದಾಗ ಪ್ರತಿಮೆಗಳಾಗುತ್ತವೆ. ಪ್ರತಿಮೆಯಲ್ಲಿ ಸೌಂದರ್ಯ, ಧ್ವನಿ ಎರಡೂ ಇರಬೇಕು. ಸೌಂದರ್ಯದ ಉಕ್ತಿ ವಿಶೇಷಕ್ಕಿಂತ ಧ್ವನಿಯ ಶಕ್ತಿವಿಶೇಷಗಳೇ ಪ್ರತಿಮೆಗಳೆನ್ನಬಹುದು. ಇದನ್ನು ಪ್ರತಿಮಾಧ್ವನಿ ಎಂದೂ ಹೇಳಬಹುದಾಗಿದೆ. ಉದಾ : ಪಾತಾಳ ಬಿಲಕ್ಕೆ ಬಾಗಿಲು, ರುಧಿರದ ತಿಲಕನಾದನ್ನೆ ಧರಾಂಗನೆಗೆ ಮುಂತಾದ ಪ್ರಯೋಗಗಳಲ್ಲಿ ಇದನ್ನು ಕಾಣಬಹುದಾಗಿದೆ. ಕಗ್ಗಲ್ಲಿನೆದೆಗೆ ಬಡಿದಿತ್ತು ಹೂವಿನ ಫಿರಂಗಿ—ಇದು ಗಾಂಧೀಜಿಯ ವ್ಯಕ್ತಿತ್ವಕ್ಕೆ ಪ್ರತಿಮೆಯಾಗಿದೆ. 'ದಾರಿಯುದ್ದಕ್ಕೂ ಮುರಿದ ಮನೆ, ಉರಿದ ಸೇತುವೆ, ಬುಸುಗುಡುವ ಹಳ್ಳಕೊಳ್ಳ' ಇದು ವಿನಾಶವನ್ನು ಹೇಳುವ ಶಕ್ತಿಯುತ ಪ್ರತಿಮೆಯಾಗಿದೆ. 'ತಲೆಯೊಳಗೆ ಠಳಾಯಿಸಿತ್ತೊಂದು ತೋಳ' ಇದು ಕುಹುಕ ಬುದ್ಧಿಗೆ ಪ್ರತಿಮೆಯಾಗಿದೆ. 'ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೋ' ಎಂಬುದು ರಿಕ್ತಸ್ಥಿತಿಗೆ ಪ್ರತಿಮೆಯಾಗಿದೆ. 'ಹಬ್ಬಕ್ಕೆ ತಂದ ಹರಕೆಯ ಕುರಿ, ತೋರಣಕ್ಕೆ ತಂದ ತಳಿರ ಮೇಯಿತ್ತು'—ಇದು ಧ್ವನಿಶಕ್ತಿಗೆ ಶ್ರೇಷ್ಠವಾದ ಪ್ರತಿಮೆ. ಇದು ಒಂದು ರೂಪಕ ಅಥವಾ ಉಪಮೆಗಿಂತ ಹೆಚ್ಚಿನ ಹಲವು ಸಂಗತಿಗಳನ್ನು ಪ್ರತಿಮಿಸುತ್ತದೆ. ಲೆವಿಸ್ ಹೇಳುವಂತೆ ಪ್ರತಿಮೆಗಳು ಕೇವಲ ಪದಜೋಡಣೆಯ ಪ್ರವೃತ್ತಿಗಿಂತ ಆಂತರಿಕ ಅವಶ್ಯಕತೆಯೊಂದಿಗೆ ಸಂಬಂಧಿಸಲು ಬೆಸಗೊಳ್ಳುತ್ತವೆ. ವಸ್ತುಗಳ ಸಂಬಂಧ ಮತ್ತು ವಸ್ತು ಹಾಗೂ ಭಾವನೆಗಳ ಸಂಬಂಧದ ಅಭಿವ್ಯಕ್ತಿಯ ಅವಶ್ಯಕತೆಯೇ ಕವಿಯನ್ನು ಪ್ರತಿಮಾ ನಿರ್ಮಿತಿಗೆ ಅನಿವಾರ್ಯವಾಗಿಸುತ್ತದೆ. ಎಜ್ರಾಪೌಂಡ್ ಪ್ರಕಾರ, ಜೀವಘಾನ

ದಲ್ಲಿ ಬೃಹದಾಕೃತಿಯ ಗ್ರಂಥಗಳನ್ನು ರಚಿಸುವುದಕ್ಕಿಂತ ಒಂದು ಪ್ರತಿಮೆಯನ್ನು ರಚಿಸುವುದೇ ಶ್ರೇಷ್ಠ.

ಸಂಕ್ಷಿಪ್ತತೆ, ನವೀನತೆ, ಅಂತರದರ್ಶನ, ತೀವ್ರತೆ ಮತ್ತು ಜಾಗೃತಿ ಶಕ್ತಿಗಳು ಪ್ರತಿಮೆಯ ಲಕ್ಷಣಗಳು ಎನ್ನಬಹುದು. ಇವುಗಳಿಂದಾಗಿ ಕಾವ್ಯಪ್ರತಿಮೆ ಪರಿಣಾಮಕಾರಿತೆಯನ್ನು ಪಡೆದು ಒಂದು ಶಬ್ದಚಿತ್ರವನ್ನು ಅಂತರಂಗದ ಕಣ್ಣಿನ ಮುಂದೆ ವಿನ್ಯಾಸಗೊಳಿಸುತ್ತದೆ. ಇಲ್ಲಿ ಶಬ್ದಗಳು ಸಂಕ್ಷಿಪ್ತವಾಗಿದ್ದು ಅರ್ಥ ಅಪಾರವಾಗಿರುತ್ತದೆ. ಅಂತರ ದರ್ಶನಕ್ಕೆ ಕಾರಣೀಭೂತವಾಗಿರುತ್ತದೆ. ಮನಸ್ಸನ್ನೂ ಜಾಗೃತಗೊಳಿಸಿ ಚಿಂತನೆಗೊಳಪಡಿಸುತ್ತದೆ. ಪ್ರತಿಮೆಯ ವಿಶಿಷ್ಟತೆಯೆಂದರೆ ಅದರ ಅರ್ಥವ್ಯಾಪ್ತಿಯು ಓದುಗನ ಅನುಭವದೊಂದಿಗೆ ಬೆಳೆಯುತ್ತಾ ಹೋಗುತ್ತದೆ. ಚಿಂತಿಸಿದಷ್ಟೂ ತೆರೆಯುತ್ತಾ ಹೋಗುತ್ತದೆ. ಪ್ರತಿಮೆಯ ಕೀಲಿ ಕೈಯಿಂದ ಹಳೆಯ ಕಾವ್ಯಗಳ ಪ್ರಸಂಗಗಳನ್ನು ಕೂಡ ಪುನರ್ ಚಿಂತಿಸಬಹುದಾಗಿದೆ. ಪಂಪನ ಭರತನ ದಿಗ್ವಿಜಯ ಪ್ರಸಂಗದಲ್ಲಿ ಹೇಳಿರುವ 'ಸೋರ್ದುದು ಕೊಳಗೊಂಡ ಗರ್ವರಸಂ'—ಇದು ಭರತನ ಮಹತ್ವಾಕಾಂಕ್ಷೆಯ ಪಿತ್ತವಿಕಾರಕ್ಕೆ ಪ್ರತಿಮೆಯಾಗಿದೆ. ಇಲ್ಲಿ ಒಂದು ಸನ್ನಿವೇಶವೇ ಒಂದು ಪ್ರತಿಮೆಯಾಗಿರುವುದನ್ನು ಕಾಣಬಹುದು. ಕೆಲವೊಮ್ಮೆ ಮಾತ್ರ ಒಂದು ಪಾತ್ರ ಪ್ರತಿಮೆಯಾಗಬಹುದು. ಉದಾ : ಶ್ರೀರಾಮ ಧರ್ಮದ ಪ್ರತೀಕ, ಇಂತಹವು ಬಹಳ ಪರಿಮಿತ. ಅಮೃತ ಮಂಥನ ಪ್ರಸಂಗ ಲೋಕದಲ್ಲಿ ಎಂದಿಗೂ ನಡೆಯುತ್ತಿರುವ ದುರ್ಜನ ಸಜ್ಜನ ಸಂಗ್ರಾಮದ ಪ್ರತೀಕವಾಗಿದೆ. ತೀರ್ಥರೂಪು, ಪಾದಪದ್ಮ, ಚಿರಜೀವಿ ಮುಂತಾದವು ಮೃತ ರೂಪಕಗಳು. ಮೋಹಿನಿ ಭಸ್ಮಾಸುರ ಒಂದು ಪೌರಾಣಿಕ ಪ್ರತಿಮೆ.

ಪ್ರತಿಮಾನಿರ್ಮಿತಿ ಅಪ್ರಯತ್ನಪೂರ್ವಕ, ಅಪ್ರಧಾನ ಹಾಗೂ ರಸೋಚಿತವಾಗಿರಬೇಕು. ಲೆವಿಸ್ ಹೇಳುವಂತೆ ಪ್ರತಿಮೆ ಎಷ್ಟೇ ಸುಂದರವಾಗಿದ್ದರೂ ಅದೇ ಕವಿ ಪ್ರತಿಭೆಯ ಗುರುತಲ್ಲ. ಅದು ಧ್ವನಿ ಪೂರ್ಣವಾದಾಗ ಮಾತ್ರ ಪ್ರತಿಭೆಯ ವಿಶಿಷ್ಟತೆಯನ್ನು ತೋರುತ್ತದೆ. ಅನೇಕಾರ್ಥ ಸ್ಪಂದನ ಸಾಮರ್ಥ್ಯವಿರುವ ಪ್ರತಿಮೆ ಕನ್ನಡಿಯೊಳಗಿನ ಬಿಂಬದಂತೆ ಕೇವಲ ಸತ್ಯವನ್ನಷ್ಟೇ ದರ್ಶಿಸುತ್ತದೆ. ಆ ಬಿಂಬದಲ್ಲಿ ಜೀವಕಳೆಯನ್ನು ತುಂಬಿ ರೂಪ ನೀಡುತ್ತದೆ. ಕೆಲವೊಮ್ಮೆ ಬಳಕೆಯಾಗುವ ವೈಯಕ್ತಿಕ ಪ್ರತಿಮೆಗಳು ತೀರಾ ವ್ಯಕ್ತಿಗತವಾಗಿದ್ದು ಅರ್ಥಕೊಡಲಾರವು. ಹಸಿರು ಬಣ್ಣದ ಹಕ್ಕಿ ರೆಕ್ಕೆ ಬಡಿಯುವ ಸಿಂಹ ಸ್ಫಿಂಕ್ಸ್ ಇಂತಹವುಗಳಲ್ಲಿ ಕವಿಯ ಭಾವನೆ ತಕ್ಷಣ ತಿಳಿಯುವುದಿಲ್ಲ. ಇವು ಕಾವ್ಯದಲ್ಲಿ ಹೊರೆಯಾಗಿ ಬಿಡುತ್ತವೆ. ಪ್ರತಿಯೊಂದು ಪದ್ಯವೂ ಕತ್ತಲಿನಿಂದ ಬೆಳಕಿನೆಡೆಗೆ ಚಲಿಸುವಂತೆ ಇರಬೇಕು. ಸ್ಫಟಿಕ ವಿಗ್ರಹದಂತೆ ಸ್ಪಷ್ಟತೆ ಇರುವುದು ಆವಶ್ಯಕ. ದೃಶ್ಯ ಹಾಗೂ ಶ್ರವ್ಯ ಪ್ರತಿಮೆಗಳಲ್ಲಿ ಭಾವತೀವ್ರತೆ ಸಾಂದ್ರವಾಗಿರುತ್ತದೆ. 'ಆನೆಯ ಮೇಲೆ ಹೋಹವನ ಶ್ವಾನ ಕಚ್ಚಬಲ್ಲದೆ ?' ಇಲ್ಲಿ ಆನೆ ಮತ್ತು ಶ್ವಾನಗಳ ಗಾತ್ರದ ಅಂತರ ಮೊದಲ ನೋಟಕ್ಕೇ ಗೋಚರಿಸುವ ಚಿತ್ರ. ಆನೆ ಹಿರಿಮೆಗೂ ಶ್ವಾನ ಹೀನ

ತನಕ್ಕೂ ಪ್ರತೀಕವಾಗಿವೆ. 'ಸಂಸಾರವೆಂಬ ಹೆಣ ಬಿದ್ದಿರೆ ತಿನಬಂದ ನಾಯಿ ಜಗಳವ ನೋಡಿರೇ'—ಎಂಬಲ್ಲಿ ಸಂಸಾರದ ಹೇಯಗುಣವನ್ನು ಚಿತ್ರಿಸುವ ದೃಶ್ಯವಿದೆ. ವಿಷಯಾಸಕ್ತವಾದ ಮನುಷ್ಯನ ಮನಸ್ಸಿಗೆ ನಾಯಿತನ ಪ್ರತೀಕವಾಗಿದೆ. ನಾಯಿ ಜಗಳ ಎಂತಹ ಮಟ್ಟದಲ್ಲೂ ಜಗಳವಾಡಬಹುದಾದ ಮನುಷ್ಯರ ಸಂಬಂಧಗಳನ್ನು ಪ್ರತಿಮಿಸುತ್ತದೆ. ಆಸ್ತಿ, ಅಧಿಕಾರ, ಕೀರ್ತಿ ಹಾಗೂ ಹಣ ಮುಂತಾದ ವಿಶ್ವದ ಸಮಸ್ತ ಜಗಳದ ಕಾರಣಗಳೂ ಇಲ್ಲಿ ರೂಪುದೋರುತ್ತವೆ. ಇಂತಹ ಜಗಳಕ್ಕೆ ಕಾರಣವಾಗುವ ಸಂಸಾರ ವಿಷಯದ ಹೇಯತನಕ್ಕೆ ಹೆಣ ಎಂಬುದು ಸತ್ವಪೂರ್ಣ ಹೋಲಿಕೆಯಾಗಿದೆ. ಹೆಣದ ಅಸಹನೀಯತೆ, ಅದನ್ನು ಬಯಸುವ ನಾಯಿತನ ಈ ಎಲ್ಲ ಭಾವನೆಗಳನ್ನು ಈ ಚಿತ್ರ ಸಮರ್ಥವಾಗಿ ಬಿಂಬಿಸಿದೆ.

ಕಾವ್ಯದ ಬೆಳವಣಿಗೆಯಲ್ಲಿ ಒಂದು ಪ್ರತಿಮೆಗೂ ಇನ್ನೊಂದಕ್ಕೂ ಒಂದು ಸುಸಂಗತಿಯ ಸೂತ್ರ ಕಂಡುಬರುವಂತಿರಬೇಕು. ಅಂತಹ ಪ್ರತಿಮೆಗಳು ಹಂತ ಹಂತವಾಗಿ ಓದುಗನ ಅನುಭವವನ್ನು ಮೇಲು ಮೇಲಕ್ಕೆ ಕೊಂಡೊಯ್ಯುತ್ತವೆ. ಬಿಡಿ ಪ್ರತಿಮೆಗಳ ಮೂಲಕ ಒಟ್ಟು ಧ್ವನಿ ಕೊಡುವಂತಿರಬೇಕು. ವಚನಕಾರರ ಕೆಲವು ವಚನಗಳಲ್ಲಿ ಇಂತಹ ಪ್ರತಿಮೆಗಳ ಪರಂಪರೆಯೇ ಅಡಗಿರುವುದನ್ನು ಕಾಣಬಹುದು ಉದಾ :

ಬೆಟ್ಟದ ಮೇಲೊಂದು ಮನೆಯ ಮಾಡಿ
ಮೃಗಗಳಿಗಂಜಿದಡೆಂತಯ್ಯಾ ?
ಸಮುದ್ರದ ತಡಿಯಲೊಂದು ಮನೆಯ ಮಾಡಿ
ನೊರೆತೆರೆಗಳಿಗಂಜಿದಡೆಂತಯ್ಯಾ ?
ಸಂತೆಯೊಳಗೊಂದು ಮನೆಯ ಮಾಡಿ
ಶಬ್ದಕ್ಕೆ ನಾಚಿದಡೆಂತಯ್ಯಾ ?
ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯಾ
ಲೋಕದೊಳಗೆ ಹುಟ್ಟಿದ್ದ ಬಳಿಕ ಸ್ತುತಿನಿಂದೆಗಳು ಬಂದಡೆ,
ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.

ಎರೆಯಂತೆ ಕರಕರಗಿ, ಮಳಲಂತೆ ಜರಿಜರಿದು,
ಕನಸಿನಲ್ಲಿ ಕಳವಳಿಸಿ, ಆನು ಬೆರಗಾದೆ.
ಆವಿಗೆಯ ಕಿಚ್ಚಿನಂತೆ ಸುಳಿಸುಳಿದು ಬೆಂದೆ ;
ಆಪತ್ತಿಗೆ ಸಖಿಯರನಾರನೂ ಕಾಣೆ.
ಅರಸಿ ಕಾಣದ ತನುವ, ಬೆರಸಿ ಕೂಡದ ಸುಖವ,
ಎನಗೆ ನೀ ಕರುಣಿಸಾ, ಚೆನ್ನಮಲ್ಲಿಕಾರ್ಜುನಾ.

ಇದರಲ್ಲಿ ಕೊನೆಯ ಸಾಲುಗಳಲ್ಲಿ ಹೇಳಿರುವ ಸತ್ಯವನ್ನು ಬಲಪಡಿಸುವ ಸಲುವಾಗಿ ಮೊದಲಿನ ಪ್ರತಿಮೆಗಳು ಮೂಡಿ ಬಂದಿವೆ. ಅವು ಒಂದೊಂದೂ ಬೇರೆ ಬೇರೆ ಚಿತ್ರಗಳನ್ನೇ ಇರಿಸುತ್ತಾ ಹೋದರೂ ಕೂಡ ಒಂದೇ ಮೂಲಭೂತವಾದ ಅನುಭವವನ್ನು ತೀವ್ರಗೊಳಿಸುವಲ್ಲಿ ಸಾರ್ಥಕವಾಗುತ್ತವೆ. ವಚನಗಳಲ್ಲಿ ಈ ಏಕಮುಖ ಪರಿಣಾಮಕಾರಿತ್ವ ವಿಶಿಷ್ಟ ಗುಣವಾಗಿ ಕಂಡುಬಂದಿದೆ. ಕೆಲವೊಮ್ಮೆ ಒಂದು ನುಡಿಗಟ್ಟು ಅಥವಾ ಲೋಕೋಕ್ತಿ ಅಥವಾ ಒಂದು ವಾಕ್ಯದಲ್ಲೂ ಕೂಡ ಪೂರ್ಣ ವಿವರಣಾತ್ಮಕ ರೂಪದಲ್ಲಿ ಪ್ರತಿಮೆ ತೋರಬಹುದು. 'ಅವಕಾಶ ಮೀರುವ ತರು ಗಿರಿಗಳುಂಟೆ ? 'ಹುಣಿಸೆಯ ಹೂವೆಲ್ಲ ಕಾಯಾಗಬಲ್ಲುವೆ ?' 'ಮನಕ್ಕೆ ಬಡತನವುಂಟೆ ?' ಇವು ನಮ್ಮ ಕಲ್ಪನೆಗೆ ಬಾಹ್ಯ ವಾಸ್ತವತೆಗಿಂತ ಕೊಂಚ ಹೆಚ್ಚಿನದೇನನ್ನೋ ಹೇಳುವಂತಿವೆ. ದರ್ಪಣದರ್ಶಿಯಂತೆ ಇದು ಬದುಕಿನ ಸತ್ಯತೆಯನ್ನು ಅವಲೋಕಿಸುತ್ತದೆ. ಮಾನವ ಸ್ವಭಾವವನ್ನು ಸೂಕ್ಷ್ಮವಾಗಿ ಬಿಂಬಿಸುವ ವಿಶೇಷವಾದ ಕಾವ್ಯಾತ್ಮಕ ಭಾವವನ್ನು ಹೊಂದಿರುವ ಕಾವ್ಯ ಪ್ರತಿಮೆ ಹೀಗೆ ಸುಂದರವಾದ, ಭಾವನಾತ್ಮಕವಾದ ಒಂದು ಶಬ್ದಚಿತ್ರವಾಗಿರುತ್ತದೆ. ವಚನಕಾರರ ವಚನಗಳಲ್ಲಿ ಮೂಡಿಬಂದಿರುವ ಈ ಶಬ್ದಚಿತ್ರಗಳು ಕಾವ್ಯಪ್ರಪಂಚದ ಅವಿಸ್ಮರಣೀಯ ಸೃಷ್ಟಿಗಳಾಗಿವೆ.

## ವಚನಗಳಲ್ಲಿ ಪ್ರತಿಮೆಗಳ ವೈವಿಧ್ಯತೆ

ವಚನಗಳಲ್ಲಿನ ಪ್ರತಿಮೆಗಳನ್ನು ಸ್ಥೂಲವಾಗಿ ಸಸ್ಯಪ್ರತಿಮೆಗಳು, ಪ್ರಾಣಿ ಪ್ರತಿಮೆಗಳು, ಸಾಮಾಜಿಕ ಪ್ರತಿಮೆಗಳು ಹಾಗೂ ಧಾರ್ಮಿಕ ಪ್ರತಿಮೆಗಳು ಎಂದು ನಾಲ್ಕು ಮುಖ್ಯ ಬಗೆಯಾಗಿ ಗುರುತಿಸಬಹುದಾಗಿದೆ. ಈ ಪ್ರತಿಮೆಗಳು ಪ್ರಮುಖವಾಗಿ ಮಾನವ ಸ್ವಭಾವಗಳ ವಿಶ್ಲೇಷಣೆ ಮಾಡುವುದೇ ಅಲ್ಲದೆ, ಭಕ್ತಿ ಜ್ಞಾನ ಆಚರಣೆಗಳ ಬಗ್ಗೆ ವಚನಕಾರರ ನಿಲುವುಗಳನ್ನು ನಿರೂಪಿಸುತ್ತವೆ. ವಚನಕಾರರು ವೈವಿಧ್ಯಮಯವಾದ ಪ್ರತಿಮೆಗಳ ಮೂಲಕ ತಮ್ಮ ಅಂತರಂಗದ ಹೋರಾಟವನ್ನು ತೋಡಿಕೊಂಡಿರುವುದೇ ಅಲ್ಲದೆ ಸಾಮಾನ್ಯ ಜನರಿಗೆ ಮುಟ್ಟುವಂತೆ ಸರಳವಾದ ಭಾಷೆಯಲ್ಲಿ ಉದಾತ್ತವಾದ ಭಾವಗಳನ್ನು ತುಂಬಿದ್ದಾರೆ.

ಸಸ್ಯಗಳನ್ನು ಕುರಿತ ಪ್ರತಿಮೆಗಳಲ್ಲಿ ಬೇರು, ಬೀಜ, ಸಸಿ, ಬಳ್ಳಿ ಮುಂತಾದ ಹಲವಾರು ಸಂಗತಿಗಳು ವಿಭಿನ್ನ ಸಂದರ್ಭಗಳಲ್ಲಿ ತಮ್ಮ ಹಲವು ಸ್ವಭಾವಗಳನ್ನು ತೋರ್ಪಡಿಸುತ್ತವೆ. ಒಂದೇ ವಸ್ತುವನ್ನು ಹಲವು ಬಗೆಯ ಭಾವಾಭಿವ್ಯಕ್ತಿಗೆ ಒಳಪಡಿಸುವುದು ವಚನಕಾರರ ಸೃಜನಶೀಲತೆಯ ಕುರುಹಾಗಿದೆ. ಕೆಳಗಿನ ಎರಡು ಪ್ರತಿಮೆಗಳಲ್ಲಿ ಬೇರು ಸಂಕೇತಿಸುವ ಅರ್ಥವ್ಯಾಪ್ತಿಯನ್ನು ಗಮನಿಸಬಹುದು.

ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರನೆರೆದಡೆ
ಮೇಲೆ ಪಲ್ಲವಿಸಿತ್ತು ನೋಡಾ (ಬ.ವ. 420) (ವ. ಪ್ರ. 5)

ಆವ ಬೀಜ ಬಿತ್ತಿದಡೂ
ಪೃಥ್ವಿಗೆ ಬೇರು ಬಯಲಿಂಗೆ ಶಾಖೆ ತಲೆದೋರಿ ಬೆಳೆದಂತೆ
ಐಕ್ಯಕ್ಕೆ ಮರೆ ಕ್ರಿಗೆ ಬಾಹ್ಯ (ಶಿ.ಶ.ವ. 33 ಪು. 309) (ವ.ಪ್ರ 2)

ಮೊದಲನೆಯ ವಚನದಲ್ಲಿ ಬೇರು-ನೀರಿನ ಆಧಾರ ಭಾವವು ಭಕ್ತ ಭಗವಂತರ ಸಂಬಂಧಕ್ಕೆ ಕುರುಹಾಗಿದೆ. ಹಾಗೆಯೇ ಬೇರು ಗರಿಪೂರ್ಣತೆಯ ಸಂಕೇತವಾಗಿದ್ದು ತಳಕ್ಕೆ ನೀರೆರೆದಡೆ ಮೇಲೆ ಪಲ್ಲವಿಸುವ ಕ್ರಿಯೆ ಅರಿವಿನ ಪರಿಪೂರ್ಣತೆಯಿಂದ ಉಂಟಾಗುವ ನಡೆನುಡಿಗಳ ಶುದ್ಧತೆಯನ್ನು ಸಂಕೇತಿಸುತ್ತದೆ. ಎರಡನೆಯ ವಚನದಲ್ಲಿ ಬೀಜದ ಮೊಳಕೆಗೆ ಬೇರಿನ ಅವಶ್ಯಕತೆಯೂ, ಕ್ರಿಯೆ ಫಲಗೊಡುವಿಕೆಗೆ ಚಿತ್ತವು ವಸ್ತುವಿನಲ್ಲಿ ದೃಢವಾಗಿ ನಿಲ್ಲುವುದರ ಅಗತ್ಯತೆಯನ್ನು ಹಾಗೂ ಅರಿವಿನ ಮಹತ್ತನ್ನು ಹೇಳುತ್ತದೆ. ಭೂಮಿಯೊಳಗಿನ ಬೇರು ಅಂತರಂಗದ ಐಕ್ಯಸ್ಥಿತಿಗೆ ಸಂಕೇತವಾಗದಂತೆ ಗಿಡದ ಬೆಳೆಯುವಿಕೆ ಅರಿವುಳ್ಳ ಕ್ರಿಯೆಯ ಪ್ರಗತಿಪರ ಸ್ಥಿತಿಯನ್ನು ಸಂಕೇತಿಸುತ್ತದೆ.

ಹಾಗೆಯೇ, ಕ್ರಿಯೆಯಿಲ್ಲದ ಅರಿವಿಲ್ಲ ಎಂಬ ಸೂಚ್ಯಾರ್ಥವನ್ನು 'ಬೇರು ಒಣಗಿದಲ್ಲಿ ಅರಿವುಂಟೆ ?' ಎನ್ನುವುದರ ಮೂಲಕ ಹೇಳಲಾಗಿದೆ.

'ಕುಸುಮ ಬಲಿದು ದೆಸೆದೆಸೆಗೆ ವಾಸನೆ ಪಸರಿಸುವಂತೆ' ಎನ್ನುವಲ್ಲಿ 'ಕುಸುಮ ಬಲಿದು' ಎಂಬ ಪದದ ಪ್ರಯೋಗದ ವಿಶಿಷ್ಟತೆ ಮಹತ್ವಪೂರ್ಣವಾಗಿದೆ. ಅರಿವು ಬಲಿದು ಪಕ್ವಸ್ಥಿತಿಯನ್ನು ಮುಟ್ಟುವ ಸಾಂಕೇತಿಕತೆಯೊಂದಿಗೆ ಇದು ಮುಂದುವರಿದು ದೆಸೆದೆಸೆಗೆ ಪಸರಿಸುವಿಕೆಯು ಅರಿವುಳ್ಳ ಕ್ರಿಯೆಯ ಆಚರಣೆಗಳನ್ನು ಪ್ರತಿಫಲಿಸುತ್ತದೆ.

ಬಸವಣ್ಣನವರ ಈ ಕೆಳಗಿನ ವಚನದಲ್ಲಿ ದೇವರ ನಿಲವನ್ನು ಪ್ರತಿಮಿಸುವ ಅಮೂರ್ತ ಭಾವಗಳು ಸಂದಣಿಸಿವೆ.

ಉದಕದೊಳಗೆ ಬಯ್ಚಿಟ್ಟ ಬಯ್ಕೆಯ ಕಿಚ್ಚಿನಂತಿದ್ದಿತ್ತು
ಸಸಿಯೊಳಗಣ ರಸದ ರುಚಿಯಂತಿದ್ದಿತ್ತು
ನನೆಯೊಳಗಣ ಪರಿಮಳದಂತಿದ್ದಿತ್ತು
ಕೂಡಲ ಸಂಗಮ ದೇವರ ನಿಲುವು
ಕನ್ನೆಯ ಸ್ನೇಹದಂತಿದ್ದಿತ್ತು (ಬ.ವ.1) (ವ.ಪ್ರ.10)

ಇಲ್ಲಿ ಉದಕದೊಳಗಣ ಕಿಚ್ಚು, ಸಸಿಯೊಳಗಣ ರಸದ ರುಚಿ, ನನೆಯೊಳಗಣ ಪರಿಮಳ, ಕನ್ನೆಯ ಸ್ನೇಹ ಇವುಗಳೆಲ್ಲ ಒಂದಕ್ಕೊಂದು ಪೂರಕವಾಗಿ ದೇವರ ನಿಲುವನ್ನು ಸಾಕ್ಷಾತ್ಕರಿಸುತ್ತವೆ.

'ಬೀಜದಲ್ಲಿ ಅಂಕುರವಿದ್ದಂತೆ' ಎಂಬುದು ಪರಮಾತ್ಮನ ನಿಲುವಿಗೆ ದೈವದ ನಿರಂಗ ತನಕ್ಕೆ ಪ್ರತೀಕವಾಗಿದೆ. 'ಬೀಜವ ಕಳೆದು ತರು ಬೆಳೆದಂತೆ' ಎನ್ನುವಲ್ಲಿ ಬೀಜದ ಶೂನ್ಯ ವಾಗುವಿಕೆಯಲ್ಲಿ ಕ್ರಿಯೆ ಕೈಗೂಡಿ ಅರಿವಿನ ಮಜಲನ್ನು ಏರಿದ ಸೂಚನೆ ಕಂಡುಬರುತ್ತದೆ. ಮೊಳೆಮೊಳೆತು ಪುನರಪಿ ಬೀಜವಾಗುವಿಕೆಯು ಕ್ರೀಯಿಂದ ಅರಿವುಂಟಾಗಿ ಅರಿವು ತಾನೇ ತಾನಾಗುವುದರ ಸೂಚನೆಯಾಗಿದೆ. ಭವದ ಬಳ್ಳಿಯ ಬೇರು ಎನ್ನುವಲ್ಲಿ ಬಳ್ಳಿಯ ದೀರ್ಘತೆಯನ್ನು ಭವದ ದೀರ್ಘತೆಗೆ ಹೋಲಿಸಲಾಗಿದೆ. ಮತ್ತೊಂದೆಡೆ ಬಳ್ಳಿಯ ಹಬ್ಬುವಿಕೆಯನ್ನು ಭಕ್ತಿಯ ಅಗಾಧತೆಗೆ ಹೋಲಿಸಲಾಗಿದೆ. ಒಂದು ಮರವನ್ನು ಸುತ್ತಿ ಅದು ಸಾಲದೆಂಬಂತೆ ಇನ್ನೊಂದಕ್ಕೆ ಅಲ್ಲಾಡುವ ಬಳ್ಳಿಯನ್ನು ದೃಢತೆಯಿಲ್ಲದ ಚಪಲ ಚಿತ್ತಕ್ಕೆ ಸಂಕೇತಿಸಲಾಗಿದೆ. ಬಿಲ್ವ – ಬೆಳವಲಕಾಯಿ ಪಾರಮಾರ್ಥ – ಲೌಕಿಕತೆಗಳಿಗೆ ಸಂಕೇತಗಳಾಗಿವೆ. 'ಪುಷ್ಪ ನುಂಗಿದ ಪರಿಮಳ'ವು ದೇವರ ನಿರಂಗತನಕ್ಕೆ ಪ್ರತೀಕವಾಗಿದೆ. ಪುಷ್ಪ–ತುಂಬಿ–ಗಂಧ ಸಂಬಂಧಗಳು ಭಕ್ತಭಗವಂತರ ಸಂಬಂಧಕ್ಕೆ, ತುಂಬಿ–ನೊಣ ಇವು ಯೋಗ್ಯತೆಯ ಅಂತರಕ್ಕೆ ಕುರುಹಾಗಿವೆ. ಮುತ್ತುಗ ಹೂತಂತೆ ಎನ್ನುವುದು ನಿಷ್ಪ್ರಯೋಜಕತೆಗೆ, 'ಹುಣಸೆಯ ಹೂವೆಲ್ಲ ಕಾಯಾಗಬಲ್ಲುದೆ ?' ಎಂಬುದು ದೃಢಚಿತ್ತ ದವರ ಗೆಲುವಿಗೆ ಸಂಕೇತಗಳಾಗಿದ್ದು 'ಹೂವಿನೊಳಗಣ ಕಂಪ ಹೊರಸೂಸಿ ಸುಳಿವ ಅನಿಲನಂತೆ' ಎನ್ನುವಲ್ಲಿ ಅರಿವಿಲ್ಲದ ಕ್ರಿಯೆಯ ಸಂಕೇತಾರ್ಥ ಕಂಡುಬರುತ್ತದೆ. 'ಹೂವು ಕಂದಿದಲ್ಲಿ ಪರಿಮಳವನರಸುವರೆ' ಎಂದಾಗ ಕ್ರೀ ಇದ್ದಾಗಲೇ ಅರಿವಿನ ಸಾರ್ಥಕತೆ ಎಂಬ ಭಾವನೆ ಕಂಡುಬರುತ್ತದೆ. ಅರಿವನ್ನು ಹಿಡಿದು ನಿಲ್ಲಿಸುವುದು ಕ್ರಿಯೆ, ಅಂದರೆ ಸಂಪಿಗೆಯ ಪುಷ್ಪಕ್ಕೆರಗಿದ 'ಭ್ರಮರನಂತೆ' ಏಕಧ್ಯಾನ್ಯದಲ್ಲಿರಿಸುವುದು ಕ್ರಿಯೆಯೊಡಗೂಡಿದ ಅರಿವು.

ಎನ್ನ ಚಿತ್ತವು ಹತ್ತಿಯ ಹಣ್ಣು, ನೋಡಯ್ಯಾ, ಎನ್ನುವಲ್ಲಿ ಅತ್ತಿಯ ಹಣ್ಣು ಮಾನಸಿಕ ಕ್ಷುದ್ರತನಕ್ಕೆ ಸಂಕೇತವಾಗಿದೆ. ಭಕ್ತನಾದಡೆ ಬಾಳೆಯ ಹಣ್ಣಿನಂತಿರಬೇಕು. ಅಂದರೆ, ಭಕ್ತನು ಬೀಜವಿಲ್ಲದ ಬಾಳೆಯ ಹಣ್ಣಿನಂತೆ ಸದ್ಗುಣಿಯಾಗಿರಬೇಕೆಂದು ಸೂಚಿಸಲಾಗಿದೆ. ಎಲವದ ಕಾಯಫಲ ನಿಷ್ಪ್ರಯೋಜಕತೆಗೆ, ಅಂದರೆ ಅರಿವಿಲ್ಲದ ಭಕ್ತಿಗೆ ಸಂಕೇತವಾಗಿದೆ. ಕಟಿಹಾದ ಬಿದಿರು, ತೊಟ್ಟು ಬಿಟ್ಟ ಹಣ್ಣು, ದ್ರವತಟ್ಟಾರಿದ ಫಲ ದೃಢ ಚಿತ್ತದ ಸಂಕೇತಗಳಾಗಿವೆ.

ಪ್ರಾಣಿಗಳನ್ನು ಕುರಿತ ಪ್ರತಿಮೆಗಳಲ್ಲಿ ಕಂಡುಬರುವ ಮನುಷ್ಯ ವರ್ತನೆಗಳ ನಿದರ್ಶನಗಳು ಪ್ರಾಣಿಗೂ ಮನುಷ್ಯನಿಗೂ ಇರುವ ತರತಮ ಭಾವಗಳನ್ನು ಹಾಗೂ ಮನುಷ್ಯರ ಪ್ರಾಣಿತನಗಳನ್ನು ಪ್ರತಿಬಿಂಬಿಸುತ್ತವೆ. ಬಸವಣ್ಣನವರು ಈ ಕೆಳಗಿನ ವಚನ ಸೊಣಗನ ಸ್ವಭಾವವನ್ನು ಹೇಳುತ್ತದೆ :

ಅಂದಣವನೇರಿದ ಸೊಣಗನಂತೆ
ಕಂಡಡೆ ಜಿಡದು ತನ್ನ ಮುನ್ನಿನ ಸ್ವಭಾವವನು

ಸುಡು ! ಸುಡು ! ಮನವಿದು ವಿಷಯಕ್ಕೆ ಹರಿವುದು.

(ಬ.ವ. 34) (ವ.ಪ್ರ. 233)

ಇಲ್ಲಿ 'ಅಂದಣವನೇರಿದ ಸೊಣಗ' ಮನುಷ್ಯರ ಚಪಲ ಚಿತ್ತಕ್ಕೆ, ಅಜ್ಞಾನದ ಸಂಕೇತವಾಗಿ ಬಂದಿದೆ. ಹಾಗೆಯೇ 'ಆನೆಯನೇರಿಕೊಂಡು ಹೋದಿರಿ ನೀವು' ಎನ್ನುವ ಮೂಲಕ ಆನೆಯನ್ನು ಅಂತಸ್ತಿಗೆ ಸಂಕೇತಿಸಿ ಮನುಷ್ಯರ ದುರಭಿಮಾನವನ್ನು ವಿಡಂಬನೆ ಮಾಡಲಾಗಿದೆ. ಅಲ್ಲಮ ಪ್ರಭುವಿನ ಒಂದು ವಚನ ಹೀಗಿದೆ,

ಕೊಟ್ಟ ಕುದುರೆಯನೇರಲರಿಯದೆ
ಮತ್ತೊಂದು ಕುದುರೆಯ ಬಯಸುವರು
ವೀರರೂ ಅಲ್ಲ ! ಧೀರರೂ ಅಲ್ಲ !!
ಇದು ಕಾರಣ
ನೆರೆ ಮೂರು ಲೋಕವೆಲ್ಲವೂ
ಹಲ್ಲಣವ ಹೊತ್ತುಕೊಂಡು ಬಳಲುತ್ತೈದಾರೆ

(ಅ.ವ. 82) (ವ.ಪ್ರ. 231)

ಇಲ್ಲಿ ಕುದುರೆಯನ್ನು ಏರುವಿಕೆಯು ಭಕ್ತನ ಸಾಧನಮಾರ್ಗದ ಕಠಿಣತೆಯಲ್ಲಿ ಅವಶ್ಯಕವಾದ ದೃಢ ಚಿತ್ತದ ಗೆಲುವಿಗೆ ಪ್ರತೀಕವಾಗಿ ಬಂದಿದೆ. ಇದು ಮುಂದುವರಿದು ಕುದುರೆಯನೇರಲಾಗಿದೆ, ಅರಿವನ್ನು ಸಾಧಿಸಲಾಗದವರ ಸ್ಥಿತಿಗೆ, 'ಹಲ್ಲಣವ ಹೊತ್ತುಕೊಂಡು ಬಳಲುತ್ತೈದಾರೆ' ಎನ್ನುವ ನುಡಿಯು ಪೂರ್ವಿಕ ವಿಡಂಬನೆ ಭಾವವನ್ನು ತುಂಬುತ್ತದೆ. ಇಲ್ಲಿ 'ಹಲ್ಲಣವ ಹೊತ್ತುಕೊಳ್ಳುವ' ಪದದ ಪ್ರಯೋಗ ಅತ್ಯಂತ ವಿಶಿಷ್ಟವಾಗಿ ವಿಜ್ಞಾನದ ಆಳದ ಅರಿಯನ್ನು ಹೇಳುತ್ತದೆ. ಅಜ್ಞಾನಿಗಳ ಜಗ್ಗೆ 'ಬಳಲುತ್ತೈದಾರೆ' ಎನ್ನುವ ಸಂತಾಪಸೂಚಕ ಪದ ಮತ್ತಷ್ಟು ಈ ಭಾವವನ್ನು ಬಲಪಡಿಸುತ್ತದೆ. ಸಾಧಾರಣ ಜನರು ಅರಿವಿನ ಮಾರ್ಗದಲ್ಲಿ ಬಳಲುವುದನ್ನು ಕಂಡು ಮರುಗುವ, ಉತ್ತಮ ಸಾಧಕರಾಗಲು ಅವರನ್ನು ಛೇಡಿಸಿ, ಹುರಿದುಂಬಿಸುವ, ಜಾಗೃತಿಗೊಳಿಸುವ ವಚನಕಾರರ ಆದರ್ಶ ನುಡಿಗಳಿಗೆ ಈ ವಚನದಲ್ಲಿ ಮೂಡಿಬಂದಿರುವ ಪ್ರತಿಮೆ ಸಾರ್ಥಕತೆಯನ್ನು ತುಂಬಿದೆ.

ಕತ್ತೆ ಬತ್ತಲೆ ಇದ್ದಡೆ ನೆಟ್ಟನೆ ನಿರ್ವಾಣಿಯೇ ?

(ಸ.ಪು.ವ. 2186) (ವ.ಪ್ರ. 397)

ಹಾಗೆಯೇ, ಕುರಿಯನ್ನು ಕುರಿತು ಬಸವಣ್ಣನವರ ವಚನ ಹೀಗಿದೆ :

ಕುರಿವಿಂಡು ಕಬ್ಬಿನ ಉಲಿವ ತೋಂಟವ ಹೊಕ್ಕು
ತೆರನನರಿಯದೆ ತನಿರಸದ
ಹೊರಗಣೆಲೆಯನೆ ಮೇದುವು !
ನಿಮ್ಮನರಿವ ಮದಕರಿಯಲ್ಲದೆ
ಕುರಿ ಬಲ್ಲುದೆ (ಬ.ವ. 596) (ವ.ಪ್ರ. 389)

ಮೇಲಿನ ಎರಡು ವಚನಭಾಗಗಳಲ್ಲಿಯೂ ಸಹ ಅಜ್ಞಾನಿಗಳನ್ನು ಅರಿವಿನ ಬೆಳಕಿನತ್ತ ಕೊಂಡೊಯ್ಯುವ ಸಲುವಾಗಿ ಅವರನ್ನು ಬಡಿದೆಬ್ಬಿಸುವಂತೆ ಕತ್ತೆ ಮತ್ತು ಕುರಿಯ ಸ್ವಾಭಾವಿಕ ಪ್ರತಿಮೆಗಳನ್ನು ಬಳಸಲಾಗಿದೆ. ಅರಿವಿಲ್ಲದ ಆಚರಣೆ ಕತ್ತೆ ನಿರ್ವಾಣಿಯಾದಷ್ಟು ನಿಷ್ಪ್ರಯೋಜಕ ; ಕಬ್ಬಿನ ರಸದ ಸವಿಯನ್ನು ತಿಳಿಯದೆ ಕೇವಲ ಎಲೆಯನ್ನು ಮೇದಷ್ಟು ಅರ್ಥಹೀನ ಎಂಬ ತೀವ್ರಾನುಭವಗಳನ್ನು ಮೇಲಿನ ಪ್ರತಿಮೆಗಳು ಉದ್ದೀಪಿಸುತ್ತವೆ. ಅರಿವು ಪಡೆದವರು ಮದಕರಿಯಂತೆ ಹೆಮ್ಮೆಯಿಂದ ರಸವನ್ನು ಗ್ರಹಿಸಲು ಯೋಗ್ಯರಾಗುತ್ತಾರೆಂದು ಹೇಳುವಲ್ಲಿ ಮದಕರಿ ಎಂಬ ಪದ ಶಕ್ತಿಪೂರ್ಣವಾಗಿದೆ. 'ಮದಕರಿಯಲ್ಲದೆ ಕುರಿ ಬಲ್ಲುದೆ' ಎಂದಾಗ ಅವುಗಳ ತರತಮಭಾವ ಪರಿಣಾಮಕಾರಿಯಾಗಿ ಮೂಡಿಬಂದಿದೆ.

'ಹಬ್ಬಕ್ಕೆ ತಂದ ಹರಕೆಯ ಕುರಿ' ಇಲ್ಲಿ ಕುರಿ ಅಂಧಶ್ರದ್ಧೆಗೆ ಬಲಿಯಾಗುವ ಅಸಾಹಾಯಕತೆಗೆ ಸಂಕೇತವಾಗಿದ್ದು ಪ್ರಾಣಿದಯೆ ಹಾಗೂ ಧರ್ಮದ ಟೀಕೆ ಎರಡನ್ನೂ ಈ ವಚನದಲ್ಲಿ ಕಾಣಬಹುದಾಗಿದೆ. 'ಮಠದೊಳಗಣ ಬೆಕ್ಕು ಇಲಿಯ ಕಂಡು ಪುಟನೆಗೆದಂತಾಯಿತ್ತು' ಎಂಬುದು ಚಪಲ ಚಿತ್ತವನ್ನು ವಿಡಂಬನೆ ಮಾಡುವ ಸಂಕೇತವಾಗಿದೆ. 'ಹಾವಿನ ಬಾಯ ಕಪ್ಪೆ ಹಸಿದು ಹಾರುವ ನೊಣಕ್ಕೆ ಆಸೆ ಮಾಡುವಂತೆ' ಎನ್ನುವಲ್ಲಿ ಹಾವು ಶಾಶ್ವತ ದುಷ್ಟತನಕ್ಕೆ ಪ್ರತೀಕವಾಗಿದ್ದರೆ ಕಪ್ಪೆ ವಿಷಯಾಸಕ್ತ ಮನಸ್ಸಿಗೆ ಪ್ರತೀಕವಾಗಿ ಬಂದಿದೆ. ಗಿಣಿಯೋದಿ ಫಲವೇನು ? ಎಂಬಲ್ಲಿ ಗಿಣಿಯೋದು ನಿಷ್ಪ್ರಯೋಜಕತೆಗೆ, ಅರಿವು ಹೀನತೆಗೆ ಸಂಕೇತವಾಗಿದೆ.

ಅಡವಿಯೊಳಗೆ ಹೊಲಬುಗೆಟ್ಟ ಪಶುವಿನಂತೆ ಅಂಬೇ ಅಂಬೇ ಎಂದು
ಕರೆವುತ್ತಲಿದ್ದೇನೆ (ಬ.ವ. 54) (ವ.ಪ್ರ. 355)

ಇಲ್ಲಿ ಅಡವಿ ಎಂಬ ಶಬ್ದ ಸೂಚಿಸುವ ಬಗೆಹರಿಸಲಾಗದ ಪ್ರಾಪಂಚಿಕ ಕಷ್ಟಕೋಟಲೆಗಳು, ಹೊಲಬುಗೆಟ್ಟ ಪಶುವಿನಂತೆ ಮೂಗಾಣದ ಜೀವಾತ್ಮನ ಅಸಹಾಯಕತೆ, ಅಂಬೇ

ಎಂಬ ಧ್ವನಿಯು ಆರ್ತತೆ ಎಲ್ಲವೂ ಸೇರಿ ನಾವು ಪ್ರಾಪಂಚಿಕ ಜೀವನಕ್ಕೆ ಸಿಕ್ಕಿಬಿದ್ದು ತಲುಪಬಹುದಾದ ಆರ್ತಸ್ಥಿತಿಯ ಚಿತ್ರಣವನ್ನು ಅತ್ಯಂತ ಮಾರ್ಮಿಕವಾಗಿ ನಿರೂಪಿಸುತ್ತದೆ. ಕೆಳಗಿನ ದೃಶ್ಯ ಪ್ರತಿಮೆಯು ಮತ್ತೊಂದು ಚಿತ್ರವನ್ನು ನೋಡಿ :

ಕೋಣನ ಹೇರಿಂಗೆ ಕುನ್ನಿ ಬುಸುಕುತ್ತ ಬಡುವಂತೆ......
ಮಾಡುವ ಭಕ್ತರ ಕಂಡು ಸೈರಿಸಲಾರದವರ ನರಕದಲ್ಲಿಕ್ಕುವ
(ಬ.ವ. 663) (ವ.ಪ್ರ. 392).

ವಿನಾಕಾರಣ ಮತ್ಸರಪಟ್ಟು ಹೊಟ್ಟೆ ಉರಿದುಕೊಳ್ಳುವ ಕೆಟ್ಟಗುಣವನ್ನು ನಿಷ್ಠುರವಾಗಿ ಖಂಡಿಸುವುದು ವಚನಕಾರರ ವೈಶಿಷ್ಟ್ಯ. ಹೊರೆಹೊತ್ತ ಕೋಣ ಸದ್ದುಗದ್ದಲವಿಲ್ಲದೆ ಹೋಗುತ್ತಿದ್ದರೆ ಪಕ್ಕದಲ್ಲಿ ಕೆಲಸಕ್ಕೆ ಬಾರದ ಕುನ್ನಿ ಯಾವ ಹೊರೆಯೂ ಇಲ್ಲದೆ ಬೊಗಳುತ್ತ ಓಡುವ ಈ ದೃಶ್ಯ ಪ್ರತಿಮೆ ಎಷ್ಟೋ ಶಬ್ದಗಳು ಹೇಳಲಾಗದ ಭಾವನೆಗಳನ್ನು ಹೇಳುತ್ತದೆ. ಇದೇ ರೀತಿ ನರಿ ಕುಯುಕ್ತಿಗೆ, ಭ್ರಮರ ಕೀಟ ನ್ಯಾಯ ಅರಿವಿನ ಪಕ್ವ ಅವಸ್ಥೆಗೆ, ಊಸರವಳ್ಳಿ ಮತ್ತು ಓತಿ ವೇಷಗಳು ಹೊರವೇಷದ ಡಾಂಭಿಕತೆಗಳಿಗೆ, ಭ್ರಮರ ಏಕಾಗ್ರತೆಗೆ, ತೇಣಿಯ ಹುಳುವಿನ ಸ್ನೇಹ ಪ್ರಾಪಂಚಿಕ ಮಾಯಾ ಬಂಧನಕ್ಕೆ ಹೋತಿನ ಗಡ್ಡ ವೇಷಧಾರಿತನಕ್ಕೆ ಪ್ರತೀಕಗಳಾಗಿವೆ.

ಸಾಮಾಜಿಕ ಪ್ರತಿಮೆಗಳಲ್ಲಿ ಸಿರಿತನ-ಬಡತನ, ಅರಸ-ತೊತ್ತು, ಕಳ್ಳ-ವೇಶ್ಯಾವೃತ್ತಿ, ಸ್ನೇಹ-ಸಂಗ ದರ್ಪಣ, ಸತಿಪತಿ ಭಾವ-ಗೃಹಕೃತ್ಯ, ತುಪ್ಪ-ಎಳ್ಳು, ಕಲ್ಲು-ನೀರು, ಯುದ್ಧ-ಲೋಹ, ಬೆಂಕಿ-ಕರ್ಪೂರ ಮುಂತಾದ ಸಂಗತಿಗಳ ಮೂಲಕ ವಚನಕಾರರು ತಮ್ಮ ಲೋಕಾನುಭವವನ್ನು ತುಂಬಿ ಪ್ರತಿಮಾ ನಿರ್ಮಿತಿಯ ಕೌಶಲವನ್ನು ಮೆರೆದಿದ್ದಾರೆ. ಕಲ್ಲಿನ ಗುಣವನ್ನು ಹೇಳುವ ಎರಡು ಪ್ರತಿಮೆಗಳು ಕೆಳಗಿನಂತಿವೆ. ಮಹಾದೇವಿಯಕ್ಕನವರ ವಚನ :

ಅರಿಯದವರೊಡನೆ ಸಂಗವ ಮಾಡಿದಡೆ
ಕಲ್ಲಹೊಯ್ದು ಕಿಡಿಯ ತೆಗೆದುಕೊಂಬಂತೆ
(ಶಿ.ಶ.ವ.87.ಪು. 32) (ವ.ಪ್ರ. 724)

ಬಸವಣ್ಣನವರ ವಚನ ಹೀಗಿದೆ,

ಎನಿಸುಕಾಲ ಕಲ್ಲು ನೀರೊಳಗಿದ್ದಡೇನು,
ನೆನೆದು ಮೃದುವಾಗಬಲ್ಲುದೆ ? (ಬ.ವ. 99) (ವ.ಪ್ರ. 725)

ಮೊದಲ ಪ್ರತಿಮೆಯಲ್ಲಿ ಅರಿಯದವರ ಸಂಗದಿಂದ ಉಂಟಾಗಬಹುದಾದ ಆಪತ್ತಿಗೆ ಕಲ್ಲಿನ ಗುಣವನ್ನು ಹೋಲಿಸಿ ದುಸ್ಸಂಗದಿಂದಾಗಬಹುದಾದ ನಷ್ಟದ ಬಗ್ಗೆ ಎಚ್ಚರಿಕೆ ನೀಡಲಾಗಿದೆ. ಎರಡನೆಯದರಲ್ಲಿ ಕಲ್ಲಿನ ಶಾಶ್ವತ ಗಡಸುತನವು ನೀರಿನಿಂದ ಸ್ವಲ್ಪವೂ ಬದಲಾಗದಿರುವಿಕೆಯು ಮನುಷ್ಯರ ಅರಿವು ಪರಿಪೂರ್ಣವಾಗದಿರುವಿಕೆಯ ನಿಷ್ಫಲತೆಯನ್ನು ಹೇಳುತ್ತದೆ. ಬಸವಣ್ಣನವರ ಈ ಕೆಳಗಿನ ವಚನ ಇಹಲೋಕದ ಆಚರಣೆಗಳ ಪ್ರಾಮುಖ್ಯತೆಯನ್ನು ಹೇಳುತ್ತದೆ.

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ .......
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ (ಬ.ವ. 155) (ವ.ಪ್ರ. 856)

ಇಲ್ಲಿ ಈ ಲೋಕದ ಸಾಮಾಜಿಕ ಬದುಕಿನಲ್ಲಿ ಅರಿತು ನಡೆವವರು ಮಾತ್ರ ಪರಲೋಕಕ್ಕೆ ಸಲ್ಲುತ್ತಾರೆಯೇ ಹೊರತು ಇದನ್ನು ಕಡೆಗಣಿಸಿ ಪರಲೋಕದ ಚಿಂತೆಯಲ್ಲಿ ಮುಳುಗಿದವರು ಅಲ್ಲಿ ಪರಿಗಣಿತವಾಗುವುದು ಅಸಾಧ್ಯವೆಂದೂ ಅದಕ್ಕಾಗಿ ಮರ್ತ್ಯಲೋಕವು ನಮ್ಮನ್ನು ಎಲ್ಲ ಕಡೆಗೆ ಸಲ್ಲುವಂತೆ ಸಿದ್ಧಗೊಳಿಸುವ ಕರ್ತಾರನ ಕಮ್ಮಟವಾಗಿದೆಯೆಂದು ಹೇಳಲಾಗಿದೆ. ಕಮ್ಮಟ ಎಂಬ ಪದದ ಪ್ರಯೋಗವು ಅಂತಿಮ ಸಿದ್ಧರೂಪ ಪಡೆಯುವ ಆಯುಧಗಳ ಉಪಯುಕ್ತತೆಯನ್ನು ತಯಾರಿಸುವ ಕ್ರಿಯೆಗೆ, ಮನುಷ್ಯ ಅರಿವಿನ ಒರೆಗೆ ಸಿಕ್ಕಿ ಕರಿಗೊಂಡ ಕ್ರಿಯೆಯನ್ನು ಹೋಲಿಸುವಲ್ಲಿ ಪರಿಪೂರ್ಣತೆಯನ್ನು ಪಡೆದಿದೆ. ಮತ್ತೊಂದು ಪ್ರತಿಮೆ ಹೀಗಿದೆ.

ಊರೊಳಗಾದಲ್ಲಿ ಅರಸು ಆಳಿನೊಳಗಾದಂತೆ ಆದೆಯಲ್ಲಾ
ಕ್ರೀಗೆ ತುತ್ತಾಗಿ ಸಿಕ್ಕಿದೆಯಲ್ಲಾ (ಸ.ಪು.ವ. 1923) (ವ.ಪ್ರ. 508)

ಇಲ್ಲಿ ಕ್ರಿಯೆಯ ಬಾಹ್ಯಾಚರಣೆಯಲ್ಲಿ ತೊಡಗಿ ಅರಿವನ್ನು ಮರೆತು ಸಾರ್ಥಕತೆಯನ್ನು ಕಳೆದುಕೊಳ್ಳುವ ಸ್ಥಿತಿಯನ್ನು ಊರೊಳಗಾದಲ್ಲಿ ಅರಸು ಆಳಿನೊಳಗಾದಂತೆ ಸ್ಥಿತಿಯು ಪ್ರತಿಬಿಂಬಿಸುತ್ತದೆ. 'ಓದೆತ್ತ ಬಲ್ಲದು ಅಪಲಕ್ಕಿಯ ಸವಿಯ ?' ಎನ್ನುವಲ್ಲಿ ದೈನಂದಿನ ಬದುಕಿನ ಸಂಗತಿಗಳ ಮೂಲಕ ಬಾಹ್ಯಾಚರಣೆಗಳನ್ನು ಚುರುಕಾದ ನುಡಿಗಳಿಂದ ಖಂಡಿಸಿ ಜನತೆ ಅಜ್ಞಾನದಿಂದ ಹೊರಬರಲು ನೆರವಾಗಿದ್ದಾರೆ.

ಸಾಮಾಜಿಕ ಸ್ಥಿತಿಯನ್ನು ಬಿಂಬಿಸುವ ಕೆಳಗಿನ ಪ್ರತಿಮೆಗಳಲ್ಲಿ ಅಲ್ಲಮಪ್ರಭುದೇವರ ವಚನ ಹೀಗಿದೆ.

ಉಳ್ಳವರು ಹಗೆಯುವ ತೆಗೆವನ್ನಕ್ಕರ
ಇಲ್ಲದವರ ಹರಣ ಹೋಯಿತ್ತೆಂಬ ಗಾದೆ ಎನಗಾಯಿತಯ್ಯಾ
(ಅ.ವ. 451) (ವ.ಪ್ರ 495)

ಬಸವಣ್ಣನವರ ವಚನ :

ಹಾವು ತಿಂದವರ ನುಡಿಸಬಹುದು
ಗರ ಹೊಡೆದವರ ನುಡಿಸಬಹುದು
ಸಿರಗರ ಹೊಡೆದವರ ನುಡಿಸಲು ಬಾರದು ನೋಡಯ್ಯಾ !
ಬಡತನವೆಂಬ ಮಂತ್ರವಾದಿ ಹೊಗಲೊಡನೆ ನುಡಿವರಯ್ಯಾ !

(ಬ.ವ. 132) (ವ.ಪ್ರ. 505)

ಇವುಗಳಲ್ಲಿ ಕಂಡುಬರುವ ಸಮಾಜದ ಹಿತಕ್ಕಾಗಿ ಚಿಂತಿಸುವ ವಚನಕಾರರ ನುಡಿಗಳಲ್ಲಿ ಉಳ್ಳವರ ನೀತಿಯ ಬಗ್ಗೆ ವಿಚಾರಣೆ, ಸಿರಿಯ ಗರ ಹೊಡೆದವರ ಅಹಂಕಾರವನ್ನು ಕಂಡು ರೋಸಿ ಅವರನ್ನು ಸರಿಪಡಿಸಲು ಬಡತನವೆಂಬ ಮಂತ್ರವಾದಿಯು ಹೋಗಬೇಕೆಂದು ನಿಷ್ಠುರವಾಗಿ ಹೇಳಲಾಗಿದ್ದು ಇವುಗಳಲ್ಲಿ ಸಿರಿಗರ, ಬಡತನವೆಂಬ ಮಂತ್ರವಾದಿ ಪದಗಳು ನೀಡುವ ಅರ್ಥವ್ಯಾಪ್ತಿ ತೀವ್ರ ಪರಿಣಾಮಕಾರಿಯಾಗಿದೆ.

'ಎತ್ತಣ ಮಾಮರ ಎತ್ತಣ ಕೋಗಿಲೆ' ಎಂಬ ನುಡಿಯಲ್ಲಿ ಮಾಮರ ಕೋಗಿಲೆಗಳ ಸಂಬಂಧ ಭಕ್ತ ಭಗವಂತರ ಸಂಬಂಧ ಭಾವವನ್ನು ಪರಿಣಾಮಕಾರಿಯಾಗಿ ನಿರೂಪಿಸಿದೆ.

ಧಾರ್ಮಿಕ ಪ್ರತಿಮೆಗಳಲ್ಲಿ ಶರಣ, ಸಂಸಾರ, ದೈವ, ಬಯಲು, ಗುರು, ಆಚರಣೆಗಳು, ಆತ್ಮನಿವೇದನೆ, ವಿಡಂಬನೆ ಮುಂತಾದ ಚಿಂತನೆಗಳ ಮೂಲಕ ವಚನಕಾರರು ಮಾನವ ಜಾತಿಗೆ ಸರ್ವಕಾಲಕ್ಕೂ ಮಾರ್ಗದರ್ಶಿಯಾಗಬಲ್ಲಂತಹ ಅನುಭವದ ಬೆಳಕನ್ನು ತೋರಿದ್ದಾರೆ. ಶರಣನ ನಿಲವನ್ನು ಶ್ರುತಪಡಿಸುವ ಈ ಕೆಳಗಿನ ವಚನ ಅಂದಿನ ಶರಣ-ಶರಣೆಯರ ಸಾಧಿಸಿಕೊಂಡ ಜ್ಞಾನದ ಉತ್ತುಂಗ ಸ್ಥಿತಿಯನ್ನು ಹೇಳುತ್ತದೆ.

ಮಹಾದೇವಿಯಕ್ಕನ ವಚನ,

ಕೆಂಡದ ಶ್ರವದಂತೆ, ಸೂತ್ರ ತಪ್ಪಿದ ಬೊಂಬೆಯಂತೆ
ಜಲವರತ ತಟಾಕದಂತೆ, ಬೆಂದ ನುಲಿಯಂತೆ
ಮತ್ತೆ ಹಿಂದಣಂಗವುಂಟೆ ಅಣ್ಣಾ
ಚನ್ನಮಲ್ಲಿಕಾರ್ಜುನನಂಗವೆ ಆಶ್ರಯವಾದವಳಿಗೆ

(ಶಿ.ಶ.ವ. 152) (ವ.ಪ್ರ. 1058)

ಕೆಂಡದ ಶ್ರವ, ಸೂತ್ರ ತಪ್ಪಿದ ಬೊಂಬೆ, ಜಲವರತ ತಟಾಕ, ಬೆಂದ ನುಲಿ ಈ ಅಂಶಗಳೆಲ್ಲ ಒಂದಕ್ಕೊಂದು ಪೂರಕವಾಗಿ ಅಂಗವಳಿದು ಐಕ್ಯಸ್ಥಿತಿಗೆ ಏರಿದ ಅರಿವಿನ ಅತ್ಯುನ್ನತ ಮಜಲನ್ನು ಪ್ರತಿಬಿಂಬಿಸುತ್ತವೆ. ಕೆಂಡದ ಶ್ರವ ಸುಟ್ಟು ಬೂದಿಯಾಗುವ ಕ್ರಿಯೆಯಲ್ಲಿ ನಾನು ಎಂಬ ಭಾವ ಬೂದಿಯಾಗುವಿಕೆ, ಸೂತ್ರ ತಪ್ಪಿದ ಬೊಂಬೆ ತನ್ನ

ಪಾತ್ರ ಕಳಚಿಕೊಂಡ ರೀತಿ, ಜಲವರತ ತಟಾಕ ಮತ್ತೇನೂ ಅದರಲ್ಲಿ ಹುಟ್ಟಿ ಬಾರದ ಸ್ಥಿತಿ, ಬೆಂದನುಲಿಗೆ ತನ್ನ ರೂಪ ತಿರುಗಿ ಬಾರದಂತೆ ಅಳಿದುಹೋಗುವ ಭಾವಗಳು ವಚನಕಾರರ ಚಿಂತನಾ ಶಕ್ತಿಯನ್ನು ಅತ್ಯುತ್ತಮವಾಗಿ ಅರ್ಥೈಸುತ್ತವೆ.

ದೇವದಾಸಿಮಯ್ಯನವರ ಒಂದು ಪ್ರತಿಮೆ ಹೀಗಿದೆ :

ಕಡುದರ್ಪವೇರಿದ ಒಡಲೆಂಬ ಬಂಡಿಗೆ
ಮೃಡ ಭಕ್ತರ ನುಡಿಗಣವೇ ಕಡೆಗೀಲು
(ದೇ.ದಾ.ವ. 2) (ವ.ಪ್ರ. 1042)

ಕಡೆಗೀಲಿಲ್ಲದ ಬಂಡಿ ನಡೆಸಲು ಅಸಾಧ್ಯವಾದ ಸ್ಥಿತಿಯಂತೆ ಒಡಲೆಂಬ ಬಂಡಿಗೆ ಶರಣರ ನುಡಿಗಳೇ ಕಡೆಗೀಲು ಪದದ ಮಹತ್ವ ಅಸದಳವಾಗಿದೆ.

ಅಳಿಮನದವರ ಭಕ್ತಿಯನ್ನು ವಿಡಂಬಿಸುವ ಈ ಕೆಳಗಿನ ಚಿತ್ರಣ ವಚನಕಾರರ ನವಿರಾದ ಹಾಸ್ಯಪ್ರಜ್ಞೆಗೆ, ಜನತೆಯನ್ನು ಏಡಿಸಿ ಎಚ್ಚರಿಸುವ ನುಡಿಗಳಿಗೆ ಉತ್ತಮ ಉದಾಹರಣೆಯಾಗಿದೆ.

ದೇವದಾಸಿಮಯ್ಯನವರ ವಚನ,

ಹರಿದ ಗೋಣಿಯುಲೊಬ್ಬ ಕಳವೆಯ ತುಂಬಿದ
ಇರುಳೆಲ್ಲಾ ನಡೆದನಾ ಸುಂಕಕಂಜಿ
ಕಳವೆಯೆಲ್ಲಾ ಹೋಗಿ ಬರಿಗೋಣಿ ಉಳಿಯಿತ್ತು
ಅಳಿಮನದವನ ಭಕ್ತಿ ಇಂತಾಯಿತ್ತು
(ದೇ.ದಾ.ವ. 36) (ವ.ಪ್ರ. 2413)

ಹಾಗೆಯೇ, ಭಕ್ತಭಪಿಯಾಗುವ ಅಸೂಪ್ಯ ಸ್ಥಿತಿಯ ಚಿತ್ರಣ 'ಬೆಟ್ಟಕ್ಕೆ ಚಳಿಯಾದಡೆ ಏನ ಹೊದಿಸುವಿರಯ್ಯಾ. ಎಂಬಲ್ಲಿ ಮೂಡಿಬಂದು ಬೆಟ್ಟಕ್ಕೆ ಚಳಿಯಾದಡೆ ಎಂಬ ಅಮೂರ್ತ ಭಾವವನ್ನು ಶರಣನ ದೃಢಭಾವಕ್ಕೆ ಮೂರ್ತೀಭವಿಸಲಾಗಿದೆ. ದೇವರ ನಿಲುವನ್ನು ಸೂಚಿಸುವ ದೇವರದಾಸಿಮಯ್ಯನವರ ಒಂದು ಪ್ರತಿಮೆ ಹೀಗಿದೆ,

ಮಣಿಗಣ ಸೂತ್ರದಂತೆ ತ್ರಿಣಯನ ನೀನಿಪ್ಪೆಯಯ್ಯ
(ದೇ. ದಾ. ವ. 3) (ವ. ಪ್ರ 1367)

ಇಲ್ಲಿ 'ಮಣಿಗಣ ಸೂತ್ರ'ದ ಪ್ರತಿಮೆ ದೈವದ ಕಾರಣಕರ್ತೃತ್ವಕ್ಕೆ ಹೊಣೆಯಾಗಿದೆ. 'ತ್ರಿಣಯನ'ನ ದೃಷ್ಟಿ ತಪ್ಪಿ ಲೋಕ ನಡೆಯಬಲ್ಲುದೇ ಎಂದು ಹೇಳುವಲ್ಲಿ 'ತ್ರಿಣಯನ' ಪದದ ಬಳಕೆ ಯಥೋಚಿತವಾಗಿದ್ದು ದೈವದ ಸೂತ್ರವನ್ನು ಕಂಡುಕೊಂಡ ಶರಣರ ಅರಿವಿನ ನುಡಿಗಳ ಸೂತ್ರದ ಹಿರಿಮೆಯನ್ನೂ ಹೇಳುತ್ತದೆ. ಹಾಗೆಯೇ ಬಸವಣ್ಣನವರ ವಚನದ ಒಂದು ಪ್ರತಿಮೆ ಹೀಗಿದೆ :

ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ
ಹರದ ಕುಳ್ಳಿರ್ದ ನಮ್ಮ ಮಹಾದೇವ ಸೆಟ್ಟಿ
ಒಮ್ಮನವಾದಡೆ ಒಡನೆ ನುಡಿವನು
ಇಮ್ಮನವಾದಡೆ ನುಡಿಯನು
ಕಾಣೆಯ ಸೋಲ ಅರ್ಧಕಾಣೆಯ ಗೆಲ್ಲ
ಜಾಣ ನೋಡವ್ವಾ ! (ಬ. ವ. 115) (ವ. ಪ್ರ. 1332)

ಸೆಟ್ಟಿಯ ರೂಪದಲ್ಲಿ ದೇವರು ವರ ಕೊಡುವುದರಲ್ಲಿ ತೋರುವ ಚೌಕಾಶಿತನ ಹಾಗೂ ತಾನು ಅಪೇಕ್ಷಿಸುವ ಭಕ್ತಿಯಲ್ಲಿ, ನೋಟು ಎಲ್ಲಿಯೂ ಹರಿಯದೆ, ಒಮ್ಮನವಾದ ಭಕ್ತಿಯಲ್ಲಿ ಎಳ್ಳಷ್ಟೂ ಕುಂದಿಲ್ಲದಿರುವಿಕೆಗಳನ್ನು ಮೇಲಿನ ವ್ಯಾಪಾರದ ಚಿತ್ರ ಸೊಗಸಾಗಿ ಬಿಡಿಸುತ್ತದೆ. ಈ ಮೂಲಕ ಆಚರಣೆಗಳನ್ನು ದೈವಕ್ಕೆ ತೀರ ಹತ್ತಿರಗೊಳಿಸಿ ಅಂತರಂಗ ಶುದ್ಧಿಯ ಅವಶ್ಯಕತೆ ಹಾಗೂ ಬಾಹ್ಯಾಚರಣೆಗಳ ನಿಷ್ಪ್ರಯೋಜಕತೆಗಳನ್ನು ಸರಳವಾಗಿ ವಿಶದಪಡಿಸಿದ್ದಾರೆ. ಹಾಸ್ಯಭರಿತ ವಿಡಂಬನೆಯನ್ನು ಈ ಕೆಳಗಿನ ವಾಕ್ಯದಲ್ಲಿ ನೋಡಬಹುದು :

ಆಲ ಬೀಳಲು ಬಿಟ್ಟು ಜಡೆಗಟ್ಟಿಕೊಂಡಿರ್ದರೇನು ?
(ಸ. ಮಾ. ವ 12) (ವ. ಪ್ರ. 143)

ಹೊರವೇಷದ ಸಂಕೇತವಾಗಿ, ಕಪಟ ಸಂನ್ಯಾಸಿ ಜಡೆ ಬಿಡುವಿಕೆಯನ್ನು ಆಲ ಬೀಳಲು ಬಿಡುವಿಕೆಗೆ ಹೋಲಿಸಿ ಹಾಸ್ಯಪೂರ್ಣ ವಿಡಂಬನೆಯ ಮತ್ತೊಂದು ಪ್ರತಿಮೆ ಬಸವಣ್ಣನವರ ವಚನಗಳಲ್ಲಿ ಹೀಗಿದೆ,

ಬರಬರ ಭಕ್ತಿ ಅರೆಯಾಯಿತ್ತು ಕಾಣಿರಣ್ಣಾ
ಮೊದಲ ದಿನ ಹಣೆಮುಟ್ಟಿ ಮರುದಿನ ಕೈಮುಟ್ಟಿ
ಮೂರೆಂಬ ದಿನಕ್ಕೆ ತೂಕಡಿಕೆ ಕಾಣಿರಣ್ಣಾ !
(ಬ. ವ. 220) (ವ. ಪ್ರ. 2274)

ಆರಂಭದಲ್ಲಿನ ಶ್ರದ್ಧೆ ಮಾಯವಾಗಿ ಕೇವಲ ಆಚರಣೆಯಾಗಿ ಉಳಿಯುವ ಆಡಂಬರದ ಭಕ್ತಿ ಬರಬರುತ್ತಾ ತಳೆಯುವ ರೂಪವನ್ನು ಮೊದಲ ದಿನ ಹಣೆಮುಟ್ಟಿ, ಮರುದಿನ ಕೈಮುಟ್ಟಿ ಮೂರೆಂಬ ದಿನಕ್ಕೆ ತೂಕಡಿಕೆ ಎಂಬ ಚಿತ್ರಗಳು ಸೊಗಸಾಗಿ ಕಟ್ಟಿ

ಕೊಡುತ್ತವೆ. ಹಿತವಾಗಿ ಛೇಡಿಸಿ ಹೆಜ್ಜೆ ಹೆಜ್ಜೆಗೆ ಬುದ್ಧಿ ಹೇಳುವ ತಾಯಿಯ ನುಡಿಗಳಂತೆ ಇವು ಕತ್ತಲೆಯಿಂದ ಬೆಳಕಿನೆಡೆಗೆ ನಡೆಯುವ ಅರಿವನ್ನು ನೀಡಲು ಸಮರ್ಥವಾಗಿವೆ.

ಕೆಳಗಿನ ವಚನಗಳ ಪ್ರತಿಮೆಗಳು ಸಂಸಾರ ಮತ್ತು ಮಾಯೆಯನ್ನು ಕುರಿತಾಗಿವೆ:

ಸಾಸವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ !

(ಅ. ವ 80) (ವ. ಪ್ರ. 2397)

ಬಸವಣ್ಣನವರ ವಚನ ಹೀಗಿದೆ :

ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯಾ
ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯಾ
ಜಗಕೆ ಬಲ್ಲಿದ ನೀನು
ನಿನಗೆ ಬಲ್ಲಿದ ನಾನು ಕಂಡಯ್ಯಾ
ಕರಿಯು ಕನ್ನಡಿಯೊಳಗಡಗಿದಂತಯ್ಯಾ
ಎನ್ನೊಳಗೆ ನೀನಡಗಿದೆ ಕೂಡಲ ಸಂಗಮದೇವ

(ಬ. ವ. 903) ವ. ಪ್ರ. 218)

ಪ್ರಾಪಂಚಿಕ ಮಾಯಾ ಬಂಧನದ ಕ್ಷಣಿಕತೆಯನ್ನು ಅರಿತು ದೈವದ ಮಟ್ಟಕ್ಕೇರಿ ಉನ್ನತವಾದ ಐಕ್ಯಸ್ಥಿತಿಯನ್ನು ಸಾಧಿಸುವ ಹಂಬಲ ಹೊಂದಿದ ವಚನಕಾರರು ದೈವವನ್ನೇ ತಮ್ಮೊಳಗೆ ಅಡಗಿಸಿಕೊಂಡು ಕರಿಯು ಕನ್ನಡಿಯೊಳಗಡಗಿದಂತೆ ಎನ್ನೊಳಗೆ ನೀನಡಗಿದೆ ಎಂದು ಹೇಳಬಲ್ಲ ಮಟ್ಟವನ್ನು ತಲುಪಿದರು. ಇಲ್ಲಿ ಜಗವ ಸುತ್ತಿದ ಮಾಯೆ ಎಂದಾಗ ಪಾಶದ ಭಾವವನ್ನೂ ನಿನ್ನ ಸುತ್ತಿಪ್ಪುದು ಪದಗಳು ತರುತ್ತವೆ ಜಗವನ್ನು ಸುತ್ತಿದ ಮಾಯೆ ಭ್ರಮೆಗಳನ್ನು ಅರಿವು ಬಲ್ಲಿದರಾಗಿ ಗೆದ್ದುಕೊಂಡವರು ವಚನಕಾರರು. ಅರಿವು ಆಚಾರ ಹೊರಗಾಗದೆ ನಡೆದವರು. ಸಾಹಿತ್ಯದಲ್ಲಿ ಅಪೂರ್ವವಾಗಿರುವ ಇಂತಹ ತತ್ವಗರ್ಭಿತ ಪ್ರತಿಮೆಗಳು ಬಹುಶಃ ಬೇರೆ ಯಾವ ಸಾಹಿತ್ಯದಲ್ಲೂ ಕಾಣಲಾಗದ ಲೋಕಾನುಭವ, ಸಾಮಾಜಿಕ ಕಳಕಳಿ, ದೈವತ್ವ ಸಾಧನೆಯ ಹಂತ ಹಂತವಾದ ಮಜಲುಗಳು ಏರುವಿಕೆಗಳನ್ನು ಪ್ರಕಟಪಡಿಸುವ ಜ್ಯೋತಿರ್ಗಮಯ ನಿಲುವುಗಳನ್ನು ಅಭಿವ್ಯಕ್ತಿಗೊಳಿಸುವ ವಚನ ಸಾಹಿತ್ಯದ ಈ ಪ್ರತಿಮೆಗಳು ಕಾವ್ಯ ಪ್ರಪಂಚದ ಅವಿಸ್ಮರಣೀಯ ಸೃಷ್ಟಿಗಳಾಗಿವೆ. ಇವು ಜೀವನದ ಹಲವು ಹಂತಗಳನ್ನು ವ್ಯಾಪಿಸಿವೆ. ದೃಶ್ಯಗುಣವನ್ನು ಹೊಂದಿರುವ ಅಸಂಖ್ಯಾತ ಮನಸ್ಸನ್ನು ಚಿಂತನೆಗೆ ಹಚ್ಚುತ್ತವೆ. ಅಂತರಂಗವನ್ನು ಭೇದಿಸಿ ಟೀಕಿಸಿ ಬಯಲು ಮಾಡುತ್ತವೆ. ಇದು ವಚನಗಳಲ್ಲಿನ ಪ್ರತಿಮೆಗಳಲ್ಲಿನ ಪ್ರತಿಮೆಗಳ ವಿಶೇಷ ಗುಣ.

ಆಧಾರ : ವಚನಗಳಲ್ಲಿ ಪ್ರತಿಮೆಗಳು 1989.

# ಪ್ರದರ್ಶನಾತ್ಮಕ ಜನಪದ ಕಲೆಗಳ ಸಾಂಸ್ಕೃತಿಕ ಮತ್ತು ವೈಚಾರಿಕ ಹಿನ್ನೆಲೆ

ಡಾ. ಡಿ. ಕೆ. ರಾಜೇಂದ್ರ

ಕಲೆ ಮತ್ತು ಮಾನವನ ಸಂಬಂಧ ವಿಶಿಷ್ಟ ಬಗೆಯದು. ಅದು ಅವನ ಪ್ರತಿಭೆಯ ವಿಶಿಷ್ಟ ಕೊಡುಗೆಯಾಗಿರುವಂತೆಯೇ ಅವನ ಸಾಂಸ್ಕೃತಿಕ ಹಾಗೂ ವೈಚಾರಿಕ ಬದುಕಿನ ಅಪೂರ್ವ ಫಲವೂ ಆಗಿದೆ. ನಮ್ಮ ಅನೇಕ ಜನಪದ ಕಲೆಗಳು ತಮ್ಮ ಕುಣಿತ–ಮೆರೆತ ಗಳಿಂದ, ವೇಷಭೂಷಣಗಳಿಂದ ಕಣ್ಮನಗಳನ್ನು ತಣಿಸುವಂತೆಯೇ ; ಅವುಗಳನ್ನು ಕೆದಕಿ ಅವುಗಳ ಅಂತರಂಗವನ್ನು ಹೊಕ್ಕು ನೋಡುವಾಗ ಅವು ಹುಟ್ಟಿ ವಿಕಾಸಗೊಂಡು ಬಂದ ವಿಶಿಷ್ಟ ಹಿನ್ನೆಲೆಯೂ ಗೋಚರವಾಗುತ್ತದೆ. ನಮ್ಮ ಮತ ಧರ್ಮಗಳೊಡನೆ ವೈಚಾರಿಕ ಹಾಗೂ ಬೌದ್ಧಿಕತೆಗಳೊಂದಿಗೆ ಸಂಬಂಧವನ್ನು ಹೊಂದಿ ಅವುಗಳಲ್ಲಿ ತಮ್ಮ ಆಳವಾದ ಬೇರನ್ನು ಇಳಿಸಿಕೊಂಡು ಪ್ರಾಚೀನ ಸಂಸ್ಕೃತಿಯ ಅಪೂರ್ವ ದಾಖಲೆಗಳಾಗಿ ಉಳಿದು ಬಂದಿವೆ.

ಮಾನವ ಸಂಸ್ಕೃತಿಯ ಮುಖ್ಯ ಅಂಗ 'ಜಾನಪದ'. ಅದೇ ನಮ್ಮ ಸಂಸ್ಕೃತಿಯ ಮೂಲ. ಇಂದಿಗೂ ಉಳಿದು ಬಂದಿರುವ ನಮ್ಮ ಜನಪದ ಸಾಹಿತ್ಯ, ಕಲೆ, ಸಂಪ್ರದಾಯ ಆಚಾರ–ವಿಚಾರ, ನಂಬಿಕೆ–ನಡಾವಳಿಕೆಗಳನ್ನು ಪರಿಶೀಲಿಸುವಾಗ, ಆದಿ ಮಾನವ ಬೆಳೆದು ಬಂದಿರುವ ಬಗೆ, ತಾಳಿರುವ ಭಾವನೆ, ಹೊಂದಿರುವ ವಿಚಾರ ಎಂತಹುದೆಂಬುದು ವೇದ್ಯ ವಾಗುತ್ತದೆ. ಬೆಂಕಿ ಇಲ್ಲದೆ ಹೊಗೆ ಹೊರಹೊಮ್ಮಲು ಹೇಗೆ ಸಾಧ್ಯವಿಲ್ಲವೋ ಹಾಗೆಯೆ ಕಾರಣವಿಲ್ಲದೆ ಕ್ರಿಯೆಯೊಂದು ಸಂಭವಿಸಲು ಸಾಧ್ಯವಿಲ್ಲ. ಅಂತಹವುಗಳಲ್ಲಿ ಅನೇಕವುಗಳಿಗೆ ನಿಜವಾದ ಅರ್ಥಪೂರ್ಣವಾದ ಕಾರಣವಿರಬಹುದು. ಮತ್ತೆ ಕೆಲವಕ್ಕೆ ಇಲ್ಲದಿರಬಹುದು. ಇಲ್ಲವೆ ಆ ಕಾರಣವನ್ನು ಹುಡುಕುವಲ್ಲಿ ನಾವು ಇಂದು ವಿಫಲ ಗೊಂಡಿರಬಹುದು. ಅಥವಾ ಅವರ ಭಾವನೆಗಳೇ ಕಲ್ಪನೆಗಳೇ ನಮಗಿಂದು ಗೊಂದಲ ವನ್ನುಂಟು ಮಾಡಿರಲೂ ಸಾಧ್ಯ. ಅಂತೂ ಎಂದೋ ಯಾರಿಂದಲೋ, ಯಾವುದೋ ಒಂದು ಕಾರಣದಿಂದ ರೂಢಿಗೆ ಬಂದಿರಬಹುದಾದ–ಸಂಪ್ರದಾಯವನ್ನೊ, ಆಚಾರ–

ವಿಚಾರವನ್ನೊ, ನಂಬಿಕೆ ನಡವಳಿಕೆಗಳನ್ನೋ ಇಂದು ಪರಿಶೀಲಿಸುವಾಗ ಆ ಒಂದು ಎಚ್ಚರ ಬೇಕಾಗುತ್ತದೆ. ಸಂಯಮ ಬೇಕಾಗುತ್ತದೆ. ಏಕೆಂದರೆ, ಅವೆಲ್ಲಾ ಅನಕ್ಷರಸ್ಥ ಸಮಾಜದ, ನಿರೀಕ್ಷಿತ ಇಲ್ಲವೇ ಅನಿರೀಕ್ಷಿತ ಘಟನೆಗಳ ಹಿನ್ನೆಲೆಯಲ್ಲಿ ಹುಟ್ಟಿಕೊಂಡವುಗಳು. ಅವರ ಬದುಕಿಗೆ ಆ ಮೂಲಕವೇ ಒಂದು ಚೌಕಟ್ಟನ್ನೂ ಅಚ್ಚುಕಟ್ಟುತನವನ್ನು ತಂದು ಕೊಟ್ಟಿದೆ.

ಈ ಹಿನ್ನೆಲೆಯಲ್ಲಿ ಪ್ರದರ್ಶನಾತ್ಮಕ ಜನಪದ ಕಲೆಗಳ ಸಾಂಸ್ಕೃತಿಕ ಹಾಗೂ ವೈಚಾರಿಕ ಹಿನ್ನೆಲೆಯನ್ನು ಗಮನಿಸುವುದು ಇಲ್ಲಿಯ ಉದ್ದೇಶ. ಕಲೆ ಸರ್ವವ್ಯಾಪಿಯಾದುದು ಕಲೆಯಿಲ್ಲದ ಬಾಳಿಲ್ಲ, ಸಮಾಜವಿಲ್ಲ. ಧರ್ಮ ಹೇಗೆ ಇಡೀ ವಿಶ್ವವನ್ನು ವ್ಯಾಪಿಸಿದೆಯೋ ಕಲೆಯೂ ಹಾಗೆಯೇ ವ್ಯಾಪಿಸಿದೆ. ಧರ್ಮಕ್ಕೂ ಕಲೆಗೂ ಇರುವ ಸಂಬಂಧ ಬಿಡಿಸಲಾಗದ್ದು. ಹಾಗೆ ನೋಡಿದರೆ ಎಲ್ಲ ಕಲೆಯ ಹುಟ್ಟಿನ ಹಿಂದೆಯೂ ಧರ್ಮದ ಪಾತ್ರವಿದೆ. ಕಲೆಯ ಹುಟ್ಟಿಗೆ ಧರ್ಮವೇ ಪ್ರೇರಕ, ಪೋಷಕ, ಧರ್ಮವೇ ಅದರ ಸೆಲೆ, ನೆಲೆ, ಬೆಲೆ ಎಲ್ಲವೂ ಅದರ ಹೊರತು ಅನೇಕ ಕಲೆಗಳು ಇಂದು ಅರ್ಥಹೀನವಾಗಿ ತೋರಬಹುದು.

ನಮ್ಮ ಜನಪದ ಕಲೆಗಳನ್ನು ವ್ಯಾಪಕವಾಗಿ ಪ್ರದರ್ಶನಾತ್ಮಕ ಕಲೆಗಳು (Performing Arts) ಮತ್ತು ಪ್ರದರ್ಶನಾತ್ಮಕವಲ್ಲದ ಕಲೆಗಳು (Non Perf-oming Arts) ಎಂದು ಎರಡು ಭಾಗವಾಗಿ ವಿಂಗಡಿಸಬಹುದು. ಜನಪದ ನೃತ್ಯಗಳು ಬಯಲಾಟಗಳು, ವೃತ್ತಿಗಾಯಕ ಮೇಳಗಳು, ಸೋಮನ ಕುಣಿತ, ಗೊಂಬೆಯಾಟಗಳು ಮುಂತಾದುವು ಪ್ರದರ್ಶನಾತ್ಮಕ ವರ್ಗದಲ್ಲಿ ಬಂದರೆ ; ಎರಡನೆಯದರಲ್ಲಿ ದೇವಸ್ಥಾನದ ಗೋಡೆಗಳ ಮೇಲೆ, ತೇರುಗಳ ಮೇಲೆ ಬಿಡಿಸಿದ ಚಿತ್ರಗಳು, ಮನೆ ಹಾಗೂ ಗುಡಿಯ ಮುಂದೆ ಪ್ರತಿದಿನ ಬಿಡುವ ರಂಗದಲ್ಲಿ, ಕೈ ಮೈ ಮೇಲೆ ಹಾಕಿಸಿಕೊಳ್ಳುವ ಹಚ್ಚೆ, ಮಡಿಕೆ ಕುಡಿಕೆಗಳ ಮೇಲಿನ ವಿವಿಧ ಬಗೆಯ ಚಿತ್ರ. ಬಾಗಿಲು ನೇಗಿಲುಗಳ ಮೇಲಿನ ಕೆತ್ತನೆಯ ಕೆಲಸ ಮುಂತಾದುವೂ ಅಷ್ಟೇ ಆಕರ್ಷಕವಾಗಿ ತೋರುವ ಕಲೆಗಳಾಗಿವೆ. ಇವುಗಳಲ್ಲಿ ಯಾವುದು ಹೆಚ್ಚು ಯಾವುದು ಕಡಿಮೆ ಎಂಬುದಿಲ್ಲ. ಅವು ಎರಡೂ ಕಲೆಯ ಎರಡು ಪ್ರಕಾರಗಳು ಅಷ್ಟೇ. ಎರಡೂ ದೈವೀ ಆರಾಧನೆಯ, ನಂಬಿಕೆಯ, ಸಂಪ್ರದಾಯದ ಹಿನ್ನೆಲೆಯಲ್ಲಿಯೇ ಹುಟ್ಟಿ ಬೆಳೆದು ವಿಕಾಸಗೊಂಡುವುಗಳು.

ಬಹುತೇಕ ಎಲ್ಲಾ ಜನಪದ ಕಲೆಗಳಲ್ಲಿಯ – ಅದರ ಕಲೆಯ ಭಾಗ ಒಂದಾದರೆ, ಅದರ ಸಾಂಸ್ಕೃತಿಕ, ಧಾರ್ಮಿಕ ಹಾಗೂ ವೈಚಾರಿಕ ಭಾಗ ಒಂದಾಗಿ ಬೆಸೆದಿರುವುದನ್ನು ಕಾಣಬಹುದು. ಆದರೆ ಅವೆರಡನ್ನೂ ಪ್ರತ್ಯೇಕವಾಗಿ ಪರಿಗಣಿಸಿ ನೋಡಲಾಗದಷ್ಟು ಒಂದಾಗಿರುವುದು ಅವುಗಳ ವೈಶಿಷ್ಟ್ಯ. ದೇವರು ಧರ್ಮದ ಬಗೆಗೆ ನಮ್ಮ ಜನಪದರು ತಾಳಿರುವ ವಿಶಿಷ್ಟ ಕಲ್ಪನೆಯೋ ನಂಬಿಕೆಯೋ ಇವೆಲ್ಲವೂ ಆಗಿದೆ. ಅವುಗಳೆಲ್ಲ ಅವರ ಬದುಕಿನ ಮಾರ್ಗದರ್ಶಿಯಾಗಿ ಜೀವನ ಶ್ರದ್ಧೆಯನ್ನು ಉಂಟು ಮಾಡಿವೆ. ಅವುಗಳ

ಹೊರತು ಅವರ ಬದುಕಿಲ್ಲ. ಬದುಕಿನಲ್ಲಿ ಸಮೃದ್ಧಿಯಿಲ್ಲ. 'ಧಾರ್ಮಿಕ ವೃತ್ತಿಗಾಯಕ ಮೇಳ'ವನ್ನೇ ತೆಗೆದುಕೊಂಡರೂ, ಅಲ್ಲಿ ಬರುವ ಕಂಸಾಳೆಯವರಾಗಲೀ, ನೀಲಗಾರ ರಾಗಲೀ, ಚೌಡಿಕೆಯವರಾಗಲೀ, ಗೊರವ ಅಥವಾ ಜುಂಜಪ್ಪನ ಸಂಪ್ರದಾಯದವರ ನ್ನಾಗಲೀ ಗಮನಿಸಿದಾಗ, ಇವೆಲ್ಲ ಅತ್ಯುತ್ತಮ ಪ್ರದರ್ಶನಾತ್ಮಕ ಕಲೆಗಳಾಗಿರುವಂತೆಯೇ ನಮ್ಮ ಜನಪದರ ಸಾಂಸ್ಕೃತಿಕ ಹಾಗೂ ವೈಚಾರಿಕ ಬದುಕಿನ ಕೈಗನ್ನಡಿಗಳೂ ಆಗಿವೆ. ಇಂದಿನ ನಾಗರಿಕ ಸಮಾಜ ಅವುಗಳ ಪ್ರದರ್ಶನದಲ್ಲಿ ಕೇವಲ ಕಲೆಯ ಭಾಗವನ್ನು ಗುರುತಿಸಿ ಆನಂದಿಸುವಂತೆಯೇ ಅಥವಾ ಕಲೆಯೆಂದಷ್ಟೇ ಭಾವಿಸಿ ಸಂತೋಷಪಡು ವಂತೆಯೇ, ಜನಪದರು ಅದನ್ನು ಭಯ-ಭಕ್ತಿಯಿಂದ ಆರಾಧಿಸಿ ಗೌರವಿಸುವ ಸ್ಥಾನವನ್ನು ಗಳಿಸಿಕೊಂಡಿವೆ. ಏಕಕಾಲದಲ್ಲಿ ಅವು ಒಂದು ವರ್ಗದ ಜನಕ್ಕೆ ಮನ ರಂಜನೆಯನ್ನು ನೀಡುತ್ತಲೇ ಮತ್ತೊಂದು ವರ್ಗದ ಜನಕ್ಕೆ ಅದರ ಜೊತೆಗೇ ಭಕ್ತಿಯ ಆದೇಶವನ್ನೂ, ಧರ್ಮದ ಅರಿವನ್ನೂ ಉಂಟು ಮಾಡುವ ಅಪೂರ್ವ ಸ್ಥಾನವನ್ನು ಗಳಿಸಿಕೊಂಡಿವೆ.

ಮೇಲೆ ಹೇಳಿದ ಕಲೆಗಳೆಲ್ಲವೂ ಒಂದೊಂದು ದೇವರಿಗೆ ಸಂಬಂಧಿಸಿದವುಗಳು, ಧಾರ್ಮಿಕ ಕ್ಷೇತ್ರಕ್ಕೆ ಸಂಬಂಧಿಸಿದವುಗಳು. ಆ ದೇವರ ಹೆಸರಿನಲ್ಲಿ ದೀಕ್ಷೆ ಪಡೆದು ಧರ್ಮ ಪ್ರಸಾರ ಮಾಡುವ ಅಥವಾ ದೇವರ ಸಂದೇಶವನ್ನು ಸಾರುವ ಹೊಣೆಯನ್ನು ಹೊತ್ತವುಗಳು. ಅವುಗಳ ಹಿಂದಿರುವ ಆಚರಣೆಗಳೂ, ನಂಬಿಕೆಗಳೂ, ಸಂಪ್ರದಾಯಗಳು ಅವರು ಧರಿಸುವ ವೇಷಭೂಷಣಗಳೂ, ಲಾಂಛನ ಗಳೂ, ಬಳಸುವ ವಾದ್ಯವಿಶೇಷಗಳು, ಹಾಡುವ ಸಾಹಿತ್ಯ ಇವೆಲ್ಲವೂ ಇಂದು ಹಲವರಿಗೆ ಪ್ರಶ್ನಾರ್ಹವಾಗಬಹುದು. ಆದರೆ ಅವು ತಲೆತಲಾಂತರದಿಂದಲೂ ಒಂದು ವರ್ಗದ ಜನರ ಧಾರ್ಮಿಕ ಶ್ರದ್ಧೆಯನ್ನು ಕಾಯ್ದು ಬದುಕನ್ನು ನಡೆಸಲು ಕಾರಣವಾಗಿವೆ ಎಂಬುದು ಗಮನಾರ್ಹ. ಮಾದೇಶ್ವರನ ಸಂಪ್ರದಾಯದ ಕಂಸಾಳೆಯವರಾಗಲೀ, ಮಂಟೇಸ್ವಾಮಿ ಸಂಪ್ರದಾಯದ ನೀಲಗಾರರಾಗಲಿ ಅಥವಾ ಎಲ್ಲಮ್ಮನ ಸಂಪ್ರದಾಯದ ಚೌಡಿಕೆಯವರಾಗಲೀ ಇಲ್ಲವೇ ಜುಂಜಪ್ಪನ ಸಂಪ್ರದಾಯದ ಗಣೆಯವರಾಗಲಿ ಇವರೆಲ್ಲ ಜನಪದ ಧರ್ಮದ, ಸಂಸ್ಕೃತಿಯ ಪ್ರಸಾರಕರು. ಕಲೆಯ ಪ್ರದರ್ಶಕರು. ಇಲ್ಲಿ ಧರ್ಮ ಪ್ರಸಾರ ಬೇರೆ ಅಲ್ಲ, ಕಲೆಯ ಪ್ರದರ್ಶನ ಬೇರೆಯಲ್ಲ. ಒಂದಕ್ಕೊಂದು ಪೂರಕ, ಪೋಷಕ, ಮಾದೇಶ್ವರನ ಹುಟ್ಟಾಗಲಿ ಅಥವಾ ಎಲ್ಲಮ್ಮನ ಹುಟ್ಟಾಗಲಿ ಇವಕ್ಕೆಲ್ಲ ತಮ್ಮದೇ ಆದ ಹಿನ್ನೆಲೆ ಇದೆ, ಕಥೆ ಇದೆ. ಸಮಾಜದ ಒಂದೊಂದು ವರ್ಗದ ಜನರಲ್ಲಿ ಮೂಡಿಸುವ ವಿಶಿಷ್ಟ ಧಾರ್ಮಿಕ, ಸಾಂಪ್ರದಾಯಿಕ ಹಾಗೂ ವೈಚಾರಿಕ ದೃಷ್ಟಿ ಇದೆ. ಇವತ್ತು ಜಗತ್ತಿನಲ್ಲಿ ಅಥವಾ ಯಾವುದೇ ಸಮಾಜದಲ್ಲಿ ಸತ್ಯ-ಧರ್ಮ ಎಂಬುದು ಅಲ್ಪ ಸ್ವಲ್ಪ ಪ್ರಮಾಣದಲ್ಲಿಯಾದರೂ ಉಳಿದಿದ್ದರೆ ಅದು ಇಂತಹ ಆಚರಣೆಗಳು ನಂಬಿಕೆಗಳು ತಲೆತಲಾಂತರದಿಂದಲೂ ಬೀರುತ್ತ ಬಂದ ಪ್ರಭಾವದಿಂದ, ಪರಿಣಾಮದಿಂದ

ಎನ್ನಬಹುದು. ಈ ಕಲೆಗಳು ಇಂದಿಗೂ ತಮ್ಮ ಪ್ರದರ್ಶನಗಳ ಮೂಲಕ ಎತ್ತಿ ಹಿಡಿಯುವುದು ಇದನ್ನೇ. ಜನಪದ ಸಂಸ್ಕೃತಿಯ ಹಲವಂಶಗಳು ಇಂದಿಗೂ ಆ ಮೂಲಕ ದಟ್ಟವಾಗಿ ಉಳಿದು ಬಂದಿರುವುದನ್ನು ಕಾಣಬಹುದು.

ದೇವರು-ಧರ್ಮ ಇವೆಲ್ಲ ಮನುಷ್ಯ ತನ್ನ ಕಣ್ಣಿಗೆ ಕಾಣದ, ಕೈಗೆ ನಿಲುಕದ ಅಪೌರುಷೇಯವಾದ ಯಾವುದೋ ಒಂದು ಶಕ್ತಿಯ ಬಗೆಗೆ ಕಲ್ಪಿಸಿಕೊಂಡದ್ದು ಕಂಡು ಕೊಂಡದ್ದು ಅದನ್ನು ಅತಿಶಯವಾಗಿ ನಂಬಿ ನಡೆದದ್ದರ ಫಲವೇ ಈ ಆಚರಣೆಗಳೆಲ್ಲ. ಅಂತಹ ನಂಬಿಕೆಗಳ ಆಚರಣೆಗಳ ಹಿಂದಿರುವ ಹಲವು ವಿಚಾರಗಳಿಗೆ ನಾವು ಇಂದು ಸ್ಪಷ್ಟವಾದ ಉತ್ತರಗಳನ್ನು ಕಂಡುಕೊಳ್ಳಲು ಆಗದಿದ್ದರೂ ಅವರ ದೃಷ್ಟಿಯಿಂದ ಅವಾವೂ ಪೊಳ್ಳಲ್ಲ, ಸುಳ್ಳಲ್ಲ, ಮಾದೇಶ್ವರನಿಗಾಗಲೀ, ಮಂಟೇಸ್ವಾಮಿಗಾಗಲಿ ತಮಗೆ ಹುಟ್ಟಿದ ಮೊದಲ ಗಂಡು ಮಗುವನ್ನು ಗುಡ್ಡನನ್ನಾಗಿ ಬಿಡುತ್ತೇವೆಂದು ಹರಕೆ ಹೊತ್ತವರು, ಆ ದೇವರಿಂದ ಯಾವುದೋ ಪ್ರಯೋಜನ ಪಡೆದವರು. ಆ ದೇವರನ್ನು ನಂಬಿದವರು. ಬಹಳ ಕಾಲ ಮಕ್ಕಳಾಗದವರೋ ಅಥವಾ ಯಾವುದೋ ತೊಂದರೆಗೆ ಒಳಗಾದವರೋ ಹರಕೆಯನ್ನೂ ಹೊತ್ತವರು. ಅಂತಹವರು ಆ ಹರಕೆಯನ್ನು ಪೂರೈಸುವುದು ತಮ್ಮ ಆಸೆ ಕೈಗೂಡಿದ ಮೇಲೆಯೋ. ಇದರ ವಾಸ್ತವಿಕ ಕಾರಣ ಏನೇ ಇದ್ದಿರಬಹುದಾದರೂ, ಅಂತಹ ಹರಕೆಯನ್ನು ಹೊತ್ತಮೇಲೆ ತಮ್ಮ ಕಾರ್ಯ ಕೈಗೂಡಿ ದ್ದರಿಂದ ಆ ದೈವವೇ ಕಾರಣವೆಂದು ನಂಬಿ ಮಾತಿನಂತೆ ನಡೆದುಕೊಳ್ಳುತ್ತಾರೆ. ಗುರುವಿನ ಮೂಲಕ ಒಂದು ವಿಶೇಷ ಸಂದರ್ಭದಲ್ಲಿ ನಡೆಯುವ ಕೆಲವೊಂದು ಆಚರಣೆಗಳು ಗಮನಾರ್ಹವಾದುವು. ಆ ಹುಡುಗನಿಗೆ ಉಪದೇಶವನ್ನೂ ಮಾಡಿ ದೀಕ್ಷೆಯನ್ನು ಕೊಟ್ಟನಂತರ ಗುರುವು ಹುಡುಗನ ತಂದೆಯನ್ನು ಕುರಿತು ಪ್ರಶ್ನೆ ಮಾಡುತ್ತಾನೆ.

ಗುರು : ಇವನು ಯಾರ ಮಗ ?

ತಂದೆ : ಇದುವರೆಗೆ ನನ್ನ ಮಗನಾಗಿದ್ದ, ಇನ್ನೂ ಮುಂದೆ ಸ್ವಾಮಿ ಮಗ.

ಅಂದರೆ, ಅಂದಿನಿಂದ ಅವನು ಒಂದು ಪವಿತ್ರಕಾರ್ಯಕ್ಕೆ ಮೀಸಲಾದವನು. ದೇವರ ಹೆಸರಿನಲ್ಲಿ ಅವನ ಸಂದೇಶವನ್ನು ಸಾರುವ ಕಾರ್ಯವನ್ನು ಹೊತ್ತವನು. ಅವನು ದೇವರ ಗುಡ್ಡ. ಇಂತಹ ದೇವರ ಗುಡ್ಡರು ಕೂಡಿ ನಡೆಸುವ ಪ್ರದರ್ಶನವೇ ಕಂಸಾಳೆ. ನೀಲಗಾರ ರಾಗಲೀ, ಚೌಡಿಕೆಯವರಾಗಲಿ, ಗೊರವರಾಗಲಿ ಇದಕ್ಕೆ ಹೊರತಲ್ಲ. ಇವೆಲ್ಲದರ ಹಿನ್ನೆಲೆ ಬೇರೆ ಬೇರೆಯೆನಿಸಿದರೂ, ಗುರಿ ಒಂದೇ ಉದ್ದೇಶ ಒಂದೇ. ಇಲ್ಲಿ ಧರ್ಮದ ಪ್ರಚಾರ ಮತ್ತು ಪ್ರಸಾರ ಕಾರ್ಯವನ್ನ ಕೈಗೊಂಡವರು ಅದನ್ನೆಲ್ಲ ಕಲೆಯ ಮೂಲಕ ಪ್ರದರ್ಶಿ ಸಿದರು. ಕಲೆಯ ಆರಾಧನೆಯೇ ದೈವದ ಆರಾಧನೆ ಎಂಬ ನಂಬಿಕೆ ಪ್ರಾಚೀನವಾದುದು. ಕಲಾಸೇವೆಯೇ ಪವಿತ್ರಸೇವೆ ಎಂಬ ನಂಬಿಕೆಯೂ ಹೊಸತಲ್ಲ. ಬಯಲಾಟಕ್ಕೆ ಸಂಬಂಧಿಸಿದಂತೆ ಈ ಬಗೆಯ ಆಚರಣೆ ಇಂದಿಗೂ ಪ್ರಬಲವಾಗಿರುವುದನ್ನು ಮರೆಯ

ವಂತಿಲ್ಲ. ಮೊದಲು 'ದೇವರಾಟ' ವನ್ನು ಆಡಿ ಅನಂತರ ಇತರ ಪ್ರದರ್ಶನಗಳನ್ನು ಕೊಡುತ್ತಾ ಬಂದಿರುವುದು ಇದಕ್ಕೆ ನಿದರ್ಶನ. ಕರಾವಳಿಯ ಯಕ್ಷಗಾನ ಬಯಲಾಟ ಇವತ್ತಿನ ತನ್ನ ಪ್ರಸಿದ್ಧಿಯ ತುತ್ತತುದಿಯನ್ನೇರಿರುವ ಸಂದರ್ಭದಲ್ಲಿಯೂ ಪ್ರತಿಯೊಂದು ಮೇಳದವರು ಮೊದಲು 'ದೇವರಾಟ'ವನ್ನು ಆಡಿಯೇ ಅನಂತರ ಉಳಿದ ಪ್ರದರ್ಶನಗಳಿಗೆ ಮುಂದಾಗುತ್ತಾರೆ. 'ದೇವೀ ಮಹಾತ್ಮೆಯಂತಹ ಆಟಗಳನ್ನು ಆಡುವಾಗ ಅದಕ್ಕೆ ಹಣ ಪಡೆಯುವುದಿಲ್ಲ. ಹರಕೆ ಹೊತ್ತವರು ಈ ಪ್ರಸಂಗವನ್ನು ಹೆಚ್ಚಾಗಿ ಆಡಿಸುವ ರೂಢಿಯೂ ಇದೆ. ಅಷ್ಟೇ ಏಕೆ, ಯಾವುದೇ ಪ್ರಸಂಗವನ್ನು ಆರಂಭಿಸುವ ಮೊದಲು ದೇವತೆಯ ಪ್ರಾರ್ಥನೆ ಇದ್ದೇ ಇರುತ್ತದೆ. ಅದಿಲ್ಲದೆ ಯಾವುದೊಂದೂ ಜರುಗುವಂತಿಲ್ಲ ರಾಗಿ ಬೀಸುವ ಸಂದರ್ಭವಾಗಲೀ, ಬತ್ತ ಕುಟ್ಟುವ ಸಂದರ್ಭವಾಗಲೀ, ಮದುವೆ ಮಾಡುವ ಸಂದರ್ಭವಾಗಲೀ – ಅದು ಎಂತಹುದೇ ಸಂದರ್ಭವಾಗಿದ್ದರೂ ದೇವತಾ ಪ್ರಾರ್ಥನೆಯೊಂದಿಗೆ ಆರಂಭವಾಗುತ್ತದೆ.

ಇದು ಭಾರತೀಯರಲ್ಲಿ ಮಾತ್ರವಲ್ಲದೆ ಜಗತ್ತಿನ ಎಲ್ಲಾ ಸಾಮಾಜಿಕ ಸಂದರ್ಭದಲ್ಲಿಯೂ ಎಲ್ಲಾ ಆರಾಧನೆಗಳೂ, ನಂಬಿಕೆಗಳೂ ಇಂತಹ ಆಚರಣೆಯ ಮೂಲಕ ನೆರವೇರುತ್ತವೆ. ಅಪೂರ್ವ ಸಂಗತಿ ಎಂದರೆ ಆ ಎಲ್ಲಾ ಆಚರಣೆಗಳೂ ಅದ್ಭುತ ಕಲಾರೂಪವನ್ನೂ ತಾಳಿ ಪ್ರದರ್ಶನಗೊಳ್ಳುವುದು. ಮಳೆ ಹೆಚ್ಚು ಕಾಲ ಕೈಕೊಟ್ಟಾಗ ಮಳೆ ದೇವರನ್ನು ಮಾಡಿ ಊರಲ್ಲೆಲ್ಲಾ ಕುಣಿಯುತ್ತಾ ಪ್ರದರ್ಶಿಸುವುದಾಗಲೀ ಊರಿಗೆ ಯಾವುದೇ ಚಿಕ್ಕ ಅಥವಾ ದೊಡ್ಡ ರೋಗ ಬಂದಾಗ ಅದರ ಪರಿಹಾರಕ್ಕಾಗಿ ಸಂಬಂಧಪಟ್ಟ ದೇವರನ್ನು ಹೊತ್ತು ಕುಣಿಯುತ್ತಾ ಪರಿಹಾರ ಬೇಡುವುದಾಗಲಿ, ಗೂಡೇ ಮಾರಮ್ಮನೋ, ಪೆಟ್ಟಿಗೆ ಮಾರಮ್ಮನೋ ಊರಿಗೆ ಬಂದಾಗ ತಪ್ಪದೆ ಕಾಣಿಕೆ ಸಲ್ಲಿಸುವುದಾಗಲಿ, ಸುಗ್ಗಿಯ ಸಂದರ್ಭದಲ್ಲಿ ಆಚರಿಸುವ ಕೋಲಾಟ ಅಥವಾ ಹಾಲಕ್ಕಿಗೌಡರ ಕುಣಿತದಂತಹ ಸುಂದರ ಪ್ರದರ್ಶನಗಳಾಗಲಿ ಇದಕ್ಕೆ ಉದಾಹರಣೆಗಳಾಗುತ್ತವೆ.

'ತೊಗಲುಗೊಂಬೆ ಆಟ ಆಡಿಸಿದರೆ ಮಳೆ ಬರುತ್ತದೆ' ಎಂಬ ನಂಬಿಕೆಯಾಗಲಿ, 'ದನಗರ ರೋಗ ವಾಸಿಯಾಗುತ್ತದೆ' ಎಂಬ ನಂಬಿಕೆಯಾಗಲಿ ಇಂದಿಗೂ ಸಂಪೂರ್ಣವಾಗಿ ಅರ್ಥಹೀನವಾಗಿಲ್ಲ. ಜನಪದರಲ್ಲಿ ಅನೇಕರು ಇದನ್ನು ನಂಬಿಯೇ ಬಂದಿದ್ದಾರೆ. ನಂಬಿಕೆಗಳಲ್ಲಿ ಹಲವು ಮೂಢನಂಬಿಕೆಗಳು ಇರಬಹುದು. ಆದರೆ ಮೂಢನಂಬಿಕೆಗಳೆನಿಸಿಕೊಂಡವುಗಳಲ್ಲಿಯೂ ಕೆಲವು ಜನಪದರ ಭಾವನೆಗಳನ್ನೂ ಉತ್ತಮವಾಗಿ ಕಾಯ್ದುಕೊಂಡು ಬರುವಲ್ಲಿ, ಜೀವನ ಶ್ರದ್ಧೆಯನ್ನು ಜೀವಂತವಾಗಿಡುವಲ್ಲಿ ದುಡಿಯುತ್ತ ಬಂದಿವೆ ಎಂಬುದು ಗಮನಾರ್ಹ. ಬಾಯಿಬೀಗ ಚುಚ್ಚುವುದಾಗಲೀ, ಕೊಂಡ ಹಾಯುವುದಾಗಲಿ, ಗಾವು ಸಿಗಿಯುವುದಾಗಲಿ, ಕರಗ ಅಥವಾ ಸಿಡಿಯಾಗಲಿ – ಇಂತಹ ಸಂಸ್ಕೃತಿಯ ಹಿನ್ನೆಲೆಯಲ್ಲಿ ಮೂಡಿ ಬಂದ ಧಾರ್ಮಿಕ ಆಚರಣೆಗಳೇ ಆಗಿದೆ. ಇವೆಲ್ಲಾ ಬಹುತೇಕವಾಗಿ ಆಯಾ ಗ್ರಾಮದೇವತೆಗಳಿಗೆ ಸಂಬಂಧಿಸಿದಂತೆ ನಡೆಯುವ ಆಚರಣೆಗಳಾಗಿವೆ. ಈ

ಒಂದೊಂದರ ಹಿಂದಿರುವ ಕಥೆಯೂ ಅಷ್ಟೇ ಸ್ವಾರಸ್ಯವಾದುದಾಗಿರುತ್ತದೆ. ಅತ್ಯಂತ ಭಯಂಕರವಾಗಿ ಬೇರೆಯವರಿಗೆ ಕಾಣುವ ಈ ಆಚರಣೆಗಳು, ಅದನ್ನು ಆಚರಿಸುವ ಭಕ್ತರಿಗೆ ಅಷ್ಟೇ ಪ್ರಿಯವಾದುವುಗಳು. ಬಾಯಿಬೀಗ ಹಾಕಿಕೊಳ್ಳುವಾಗ ಅದು ಅವರಿಗೆ ನೋಯುವುದಿಲ್ಲ, ಕೊಂಡ ಹಾಯುವಾಗ ಅದು ಸುಡುವುದಿಲ್ಲ, ಚಾವಟಿಯಲ್ಲಿ ಹೊಡೆದುಕೊಳ್ಳುವಾಗ ಅದು ನೋಯುವುದಿಲ್ಲ-ಅವೆಲ್ಲವೂ ಭಕ್ತಿಯ ಅಮಲಿನಲ್ಲಿ ತೇಲಿ ಹೋಗುತ್ತವೆ.

'ಕರಗ'ದ ಕುಣಿತದಂತಹ ಕುಣಿತ ಇವತ್ತು ಅತ್ಯಂತ ಜನಪ್ರಿಯವಾದ ಒಂದು ಪ್ರದರ್ಶನಾತ್ಮಕ ಕಲೆಯಾಗಿದೆ. ಆದರೆ ಅದರ ಹಿಂದಿರುವ ಧಾರ್ಮಿಕ ಭಾವನೆ ಅಷ್ಟೇ ಮಹತ್ವದ್ದು. ವೀರಗಾಸೆ ಮೇಳ, ಡೊಳ್ಳು ಮೇಳಗಳು ಕರ್ನಾಟಕದ ಪ್ರದರ್ಶನಾತ್ಮಕ ಜನಪದ ಕಲೆಗಳಾಗಿವೆ. ಧರ್ಮಸಂಬಂಧವಾದ ಈ ಕಲೆಗಳು ಒಳ್ಳೆಯ ಪ್ರದರ್ಶನಾತ್ಮಕ ಕಲೆಗಳಾಗಿ ಪ್ರಸಿದ್ಧಿ ಪಡೆದಿವೆ. ವೀರಭದ್ರನ ಸಂಬಂಧವಾದ ವೀರಗಾಸೆ, ಬೀರೇದೇವರ ಸಂಬಂಧವಾದ ಡೊಳ್ಳಿನ ಮೇಳಗಳಲ್ಲಿ ಕಾಣುವ ಕಲಾತ್ಮಕತೆ ಅದ್ಭುತವಾದುದು. ಇವುಗಳಂತೆಯೇ ಗ್ರಾಮದೇವತೆಗಳ ಹಿನ್ನೆಲೆಯಲ್ಲಿ ರೂಪುಗೊಂಡಿರುವ ಸೋಮನ ಕುಣಿತ ಕಣ್ಮನ ತಣಿಸುವ ಕಲೆ. ಅವುಗಳ ಹಿನ್ನೆಲೆ, ಮುಖವರ್ಣಿಕೆ, ಕುಣಿತ ಮುಂತಾದುವು ಧಾರ್ಮಿಕ ಹಿನ್ನೆಲೆಯನ್ನು ಸೃಷ್ಟಿಸುವುದರ ಜೊತೆಗೆ ಕಲಾತ್ಮಕ ಸೌಂದರ್ಯವನ್ನು ಮೆರೆಯುತ್ತವೆ.

ದಕ್ಷಿಣ ಕನ್ನಡ ಜಿಲ್ಲೆಯ ಭೂತನೃತ್ಯವಾಗಲಿ ಕೊಡಗಿನ ಉಮ್ಮತ್ತಾಟ ಅಥವಾ ಹುತ್ತರೀ ಕುಣಿತವಾಗಲಿ, ದಕ್ಷಿಣ ಕರ್ನಾಟಕದ ಪೂಜಾ ಕುಣಿತ ನಂದಿಕೋಲು ಕುಣಿತ ಇಲ್ಲವೇ ಪಂಜಿನ ಕುಣಿತವಾಗಲಿ, ಉತ್ತರ ಕರ್ನಾಟಕದ ಲಿಂಗದ ಬೀರನ ಅಥವಾ ಪುರವಂತರ ಕುಣಿತವಾಗಲಿ – ಇವೆಲ್ಲಾ ವಿವಿಧಭಾಗದ ವಿವಿಧ ಧರ್ಮ ಹಾಗೂ ಸಂಸ್ಕೃತಿಯ ಪ್ರತೀಕಗಳಾಗಿ ನಿಲ್ಲುತ್ತವೆ. ಅವರವರ ಧಾರ್ಮಿಕ, ವೈಚಾರಿಕ ಹಿನ್ನೆಲೆಯಲ್ಲಿ ಮೂಡಿಬಂದ ಕಲಾಕುಸುಮಗಳೂ ಆಗಿವೆ. ಇವುಗಳ ಹಿನ್ನೆಲೆಯಲ್ಲಿ ವ್ಯಕ್ತವಾಗುವ ಜನಪದರ ಭಾವನೆಗಳು ವಿಶಿಷ್ಟವಾದುದು. ಇಂತಹ ಆಚರಣೆಗಳೊಂದಿಗೆ ಅವರು ತಮ್ಮ ಬದುಕನ್ನು ಕಂಡವರು. ತಮ್ಮ ಯಾವುದೇ ತೊಂದರೆಯನ್ನು, ಕಷ್ಟ ಸುಖಗಳನ್ನು ಅವರು ತಾವು ನಂಬಿದ ದೈವದೊಂದಿಗೆ ಹೇಳಿಕೊಳ್ಳುತ್ತಾರೆ. ಸಮಾಧಾನ ಪಟ್ಟುಕೊಳ್ಳುತ್ತಾರೆ. ಜನಪದ ದೈವಗಳಲ್ಲಿ ಅನೇಕವು ಬೇರೆ ಯಾರೋ ಆಗಿರದೆ, ತ್ಯಾಗ ಬಲಿದಾನಗಳಿಂದಾಗಿ ದೊಡ್ಡವರಾಗಿ ಆ ಸ್ಥಾನವನ್ನು ಪಡೆದವರಾಗಿರುತ್ತಾರೆ. ತಮ್ಮ ವಿಶಿಷ್ಟ ಶಕ್ತಿಯಿಂದ ಇತರರ ನೋವನ್ನು ಪರಿಹರಿಸಬಲ್ಲ ಶಕ್ತರು ಎಂಬ ನಂಬಿಕೆಗೂ ಅರ್ಹರಾದವರಾಗಿರುತ್ತಾರೆ. ಹಾಗಾಗಿ ಅಂತಹ ದೇವತೆಗಳ ಹೆಸರಿನಲ್ಲಿ ನಡೆಯುವ ಜಾತ್ರೆ, ಹಬ್ಬ ಮುಂತಾದ ಸಂದರ್ಭಗಳಲ್ಲಿ ನಡೆಯುವ ಇಂತಹ ಪ್ರದರ್ಶನಾರ್ತಕ ಕಲೆಗಳು ಜನರ ಇಂತಹ ಭಾವನೆಗಳನ್ನು ಹೊತ್ತವುಗಳು. ಅಂತಹವರ ನೆನಪು, ಪೂಜೆ,

ಆರಾಧನೆಗಳು ಉಳಿದವರಿಗೆ ಶ್ರೇಯಸ್ಕರ ಎಂಬುದಷ್ಟೇ ಆ ಆಚರಣೆಯ ಹಿಂದೆ ಅಡಕ ವಾಗಿರುವ ಸಂಗತಿ.

ಯಾವುದೇ ಪ್ರದರ್ಶನಾತ್ಮಕ ಜನಪದ ಕಲೆಯು ಸಾಂಸ್ಕೃತಿಕ ಹಾಗೂ ವೈಚಾರಿಕ ಹಿನ್ನೆಲೆಯನ್ನು ಗಮನಿಸುವಾಗ ಅವುಗಳು ಬೆಳೆದು ಬಂದ ಹಿನ್ನೆಲೆ, ಪರಿಸರ, ಅದಕ್ಕೆ ಕಾರಣವಾದ ಅಂಶಗಳು ಇವನ್ನೆಲ್ಲ ಎಚ್ಚರಿಕೆಯಿಂದ ಗಮನಿಸಬೇಕಾಗುತ್ತದೆ. ಇಂದಿನ ನಮ್ಮ ದೃಷ್ಟಿಯಿಂದ ಅವುಗಳನ್ನು ತೂಗಿ ನೋಡುವುದಕ್ಕಿಂತ, ಅಂದು ಅವು ಹುಟ್ಟಿ ಬೆಳೆದು ಬಂದ ಸಂದರ್ಭವನ್ನು ದೃಷ್ಟಿಯಲ್ಲಿಟ್ಟುಕೊಂಡು ಪರಿಶೀಲಿಸುವುದು ಸೂಕ್ತ. ಯಾವುದೇ ಒಂದು ಸಂಸ್ಕೃತಿಯ ಮೂಲರೂಪವಾಗಿ ಉಳಿದು ಬಂದಿರುವ ಇವುಗಳು ಕಡೆಗಣಿಸುವಂತಹವುಗಳಲ್ಲ. ಇಂದು ಅವು ಎಷ್ಟು ಪ್ರಸ್ತುತ ಎಂಬ ಪ್ರಶ್ನೆ ಬೇರೆ. ಆದರೆ ತಲೆ ತಲಾಂತರದಿಂದ ಬೆಳೆದು ಉಳಿದು, ಒಂದು ವರ್ಗದ ಜನರ ಹಿತಾಸಕ್ತಿ ಗಳನ್ನು ಕಾಯ್ದುಕೊಂಡು ಬಂದಿರುವ ಇವುಗಳು ನಮ್ಮ ಮೂಲ ಸಂಸ್ಕೃತಿಯ ಅಪೂರ್ವ ಸಂಪತ್ತು.

ಪ್ರದರ್ಶನಾತ್ಮಕ ಜನಪದ ಕಲೆಗಳ ಸಾಂಸ್ಕೃತಿಕ ಹಿನ್ನೆಲೆ, ಆಯಾ ಕ್ರಿಯೆಯ ವಿಶಿಷ್ಟ ಸಂದರ್ಭವೇ ಆಗಿರುತ್ತದೆ. ಅವರದ್ದೇ ಆದ ವಿಶಿಷ್ಟ ಸಂಗತಿಗಳು 'ಅಲ್ಲಿ ಪಾಲ್ಗೊಂಡಿರುತ್ತವೆ. ಆ ಹಿನ್ನೆಲೆಯಲ್ಲಿ ರೂಪಿತವಾದ ಅದರ ಅಪೂರ್ವತೆಯನ್ನ ಅಲ್ಲಿ ಕಾಣಬಹುದು. ಅಲ್ಲಿ ಕಂಡು ಬರುವ – ಸಾಹಿತ್ಯ, ವಾದ್ಯವಿಶೇಷ, ಕುಣಿತ, ವೇಷ ಭೂಷಣ ಇತ್ಯಾದಿ ಇತ್ಯಾದಿಗಳು ಜನಪದ ಸಂಸ್ಕೃತಿಯ ಪ್ರತೀಕಗಳಾಗಿ ಕಾಣುತ್ತವೆ. ಅದರ ವಿಶಿಷ್ಟತೆಯನ್ನು ಎತ್ತಿ ಹಿಡಿಯುತ್ತವೆ. ಆದರೆ ವಿಚಾರ ಮಾಡಿ ನೋಡುವಾಗ ಅದನ್ನು ಎಲ್ಲಿ ಬೇರೊಂದು ಅರ್ಥದಲ್ಲಿಯೇ ಗಮನಿಸಬೇಕಾಗುತ್ತದೆ. "ಕೊಲ್ಲುವ ದೈವ ಕ್ಕಿಂತಲೂ ಕಾಯುವ ದೆವ್ವವೇ ಮೇಲು" ಎಂಬಂತಹ ಆಧುನಿಕ ಕ್ರಾಂತಿಕಾರಕ ವಿಚಾರ ಧಾರೆ ಜನಪದರಲ್ಲಿ ಕಂಡು ಬಂದರೂ, ಮೇಲಿನ ಅಂಶಗಳಿಗೆ ಸಂಬಂಧಿಸಿದಂತೆ ಅವರಲ್ಲಿ ಮೂಡಿ ಬಂದಿರುವ ವೈಚಾರಿಕ ದೃಷ್ಟಿಯೇ ಬೇರೆ. ಇಲ್ಲೆಲ್ಲಾ ಒಂದು ಕಲೆಗೂ, ಒಂದು ಘಟನೆಗೂ ಸಂಬಂಧವಿರುವುದನ್ನು ಕಾಣುತ್ತೇವೆ. ಆ ಘಟನೆಯ ಹಿನ್ನೆಲೆಯಲ್ಲಿ ಕಲೆಯೊಂದು ತಲೆಯೆತ್ತಿರುವುದು ಸ್ಪಷ್ಟ. ಯಾವುದೋ ಘಟನೆಗೆ ಸಂಬಂಧಿಸಿದಂತೆ, ಯಾವುದೋ ಒಂದು ಶಕ್ತಿಯ ಸೃಷ್ಟಿ. ಅನಂತರ ಆ ಶಕ್ತಿಯ ತೃಪ್ತಿಗೆ ಅಥವಾ ಪೂಜೆಗೆ ವಿವಿಧ ಬಗೆಯ ಆಚರಣೆ. ಇದು ಅವರವರ ಬದುಕಿನ ನಂಬಿಕೆಯ ಕಾರಣ ದಿಂದ ಉಂಟಾದದ್ದು. ಶ್ರದ್ಧೆಯಿಂದ ಬೆಳೆದು ಬೇರು ಬಿಟ್ಟದ್ದು. ಅವರವರಿಗೆ ಸಮಾಧಾನವನ್ನು ತೃಪ್ತಿಯನ್ನು ಉಂಟುಮಾಡಿದ್ದು ಬಾಳಿಗೊಂದು ನಂಬಿಕೆಯಾಗಿ ಉಳಿದ್ದದ್ದು. ಮಳೆಗೂ ಮಳೆ ದೇವರಿಗೂ, ಬೆಳೆಗೂ ಬೆಳೆದೇವರಿಗೂ, ಹಲವು ಬಗೆಯ ರೋಗರುಜಿನಗಳಿಗೂ ಆ ಸಂಬಂಧವಾದ ದೇವತೆಗಳು – ಹೀಗೆ ವಿವಿಧ ರೀತಿಯಲ್ಲಿ ಅವರು ಕಲ್ಪಿಸಿಕೊಂಡ ದೇವರುಗಳು ಹಾಗೂ ಅವುಗಳನ್ನು ವಿವಿಧ ರೀತಿಯಲ್ಲಿ ಆರಾಧಿಸ

ತೊಡಗಿದ ರೀತಿ ನೀತಿಗಳಲ್ಲಿ ಇವನ್ನೆಲ್ಲಾ ಕಾಣುತ್ತೇವೆ. ಜನಪದರು ಆ ಒಂದೊಂದಕ್ಕೂ ಸಂಬಂಧ ಕಲ್ಪಿಸಿರುವ ರೀತಿಯಲ್ಲಿ ಅವರ ವೈಚಾರಿಕ ದೃಷ್ಟಿಯನ್ನು ಕಾಣುತ್ತೇವೆ. ಆ ವೈಚಾರಿಕ ದೃಷ್ಟಿ ಎಂಬುದು ಅವರದ್ದೇ ಆದ ಸೀಮಿತಾರ್ಥವನ್ನು ಒಳಗೊಂಡದ್ದು. ಅದು ಇಂದಿನವರ ದೃಷ್ಟಿಯಿಂದ ಇಲ್ಲವಾಗಬಹುದು. ಬರೀ ಬುರುಡೆ ಎನಿಸಬಹುದು. ಆದರೆ ಅವರ ದೃಷ್ಟಿಯಲ್ಲಿ ಅಲ್ಲ. ಆದರೆ ಅವರ ದೃಷ್ಟಿಯಲ್ಲಿ ಬರಿ 'ಕಲೆ' ಅಲ್ಲ. ಸಾಂಸ್ಕೃತಿಕವಾಗಿ ಬೆಳೆದುಬಂದ ಸಂಪ್ರದಾಯದ ಸೊತ್ತು. ಅವರ ಬದುಕಿಗೆ ಒಳಿತನ್ನುಂಟು ಮಾಡಬಲ್ಲ ವಿಶಿಷ್ಟ ಶಕ್ತಿ. ಹಾಗಾಗಿ ಇವತ್ತಿಗೂ ಹರಕ್ಕೆ ಹೊರುವುದು ತಪ್ಪಿಲ್ಲ, ಗುಡ್ಡರನ್ನ ಬಿಡುವುದು ಕಡಿಮೆಯಾಗಿಲ್ಲ. ದೇವರು ಆಟ ಆಡಿಸುವುದು ಸುಳ್ಳಾಗಿಲ್ಲ, ಬೆತ್ತಲೆ ಸೇವೆಯಂತಹುದೂ ನಿಂತಿಲ್ಲ, ಕರಗದ ನಂಬಿಕೆ ಪೊಳ್ಳೆನಿಸಿಲ್ಲ, ಅದರಂತೆಯೇ ಬಾಯಿಬೀಗವಾಗಲಿ, ಕೊಂಡ ಹಾಯುವುದಾಗಲಿ, ಸಿಡಿಯಾಗಲಿ ಇನ್ನೂ ನಡೆಯುತ್ತಲೇ ಇವೆ. ಇವೆಲ್ಲಾ ನಂಬಿದವರಿಗೆ ಉಂಟು. ನಂಬದಿದ್ದವರಿಗೆ ಇಲ್ಲ. ಆದರೆ ಅವೆಲ್ಲವೂ ಅವರದ್ದೇ ಆದ ವಿಚಾರದ ಹಿನ್ನೆಲೆಯಲ್ಲಿ ಹುಟ್ಟಿಕೊಂಡವುಗಳು.

ಪ್ರದರ್ಶನಾತ್ಮಕ ಜನಪದ ಕಲೆಗಳನ್ನ ಒಟ್ಟಾರೆ ಗಮನಿಸುವಾಗ – ಅವುಗಳ ವೈಚಾರಿಕ ಹಿನ್ನೆಲೆಯನ್ನು ಕುರಿತಂತೆ ಕೆಲವರು ಪ್ರಶ್ನಿಸಬಹುದಾದರೂ ಅಥವಾ ಕೆಲವೊಂದ ಅನುಮಾನಗಳು ಹುಟ್ಟಬಹುದಾದರೂ, ಅವುಗಳ ಸಾಂಸ್ಕೃತಿಕ ಹಿನ್ನೆಲೆಯನ್ನ ಕುರಿತಂತೆ ಅಲ್ಲ. ಅವೆಲ್ಲವೂ ಸಾಂಸ್ಕೃತಿಕವಾಗಿ ಘಟ್ಟಿತನವನ್ನು ಹೊಂದಿರುವ, ವಿಶಿಷ್ಟ ಸಮಾಜದ ಅಪೂರ್ವ ಸಾಂಸ್ಕೃತಿಕ ಕೊಡುಗೆಗಳು.

# ಆಂಜನೇಯನ ಅಮೃತಗಾನ !

ಪ್ರೊ|| ಕೆ. ಎಸ್. ನಾರಾಯಣಾಚಾರ್

ಸರ್ವಾನಿಷ್ಟನಿವಾರಕಂ ಶುಭಕರಂ
ಪಿಂಗಾಕ್ಷಂ ಅಕ್ಷಾಪಹಂ
ಸೀತಾನ್ವೇಷಣತತ್ಪರಂ ಕಪಿವರಂ ಕೋಟೀಂದು
ಸೂರ್ಯಪ್ರಭಂ
ಲಂಕಾದ್ವೀಪಭಯಂಕರಂ, ಸಕಲದಂ, ಸುಗ್ರೀವಸಂಮಾನಿತಂ
ದೇವೇಂದ್ರಾದಿ ಸಮಸ್ತದೂತ ವಿನುತಂ
ಕಾಕುತ್ಸ್ಥದೂತಂ ಭಜೇ ॥

“ಭಕ್ತರ ಸಕಲ ವಿಘ್ನಗಳನ್ನು, ಕಷ್ಟ ಸಂಕಟಗಳನ್ನು ನಿವಾರಿಸುವವನೂ, ಕ್ಷೇಮವನ್ನುಂಟುಮಾಡುವವನೂ, ಸೀತಾದೇವಿಯನ್ನು ಹುಡುಕುವುದರಲ್ಲಿ ನೆಟ್ಟ ಮನಸ್ಸುಳ್ಳವನಾಗಿ ಶ್ರೀರಾಮಚಂದ್ರನಿಗೆ ಸೇವೆ ಸಲ್ಲಿಸಿದವನೂ, ಕಂದು ಬಣ್ಣದ (ಹಳದಿ ಮಿಶ್ರಿತ ಕೆಂಪು ಬಣ್ಣದ) ಕಂಗಳುಳ್ಳವನೂ, ರಾವಣಪುತ್ರನಾದ ಅಕ್ಷಕುಮಾರನನ್ನು (ಏಕಾಕಿಯಾಗಿ) ಸಂಹರಿಸಿದವನೂ, ಸೂರ್ಯಕೋಟಿಯಷ್ಟು ಕಾಂತಿಯುಳ್ಳವನೂ, ಕಪಿಶ್ರೇಷ್ಠನೂ, ಇಡೀ ಲಂಕಾದ್ವೀಪಕ್ಕೇ (ಅಲ್ಲಿನ ಸಮಸ್ತ ರಾಕ್ಷಸ ಪ್ರಜೆಗಳಿಗೂ) ಭಯಂಕರನಾದವನೂ, ಶ್ರೀರಾಮನಿಗೆ ತನ್ನೆಲ್ಲವನ್ನೂ ಅರ್ಪಿಸಿದವನೂ, (ಅಥವಾ, ಭಕ್ತರ ಇಷ್ಟಾರ್ಥಗಳನ್ನೆಲ್ಲ ಕರುಣಿಸುವವನೂ), ಸುಗ್ರೀವ ಮಹಾರಾಜನಿಂದ ಗೌರವಿಸಲ್ಪಟ್ಟವನೂ, ದೇವೇಂದ್ರನಾದಿಯಾಗಿ ಸಮಸ್ತ (ಭಗವತ್) ಸೇವಕರಿಂದಲೂ ಸ್ತುತಿಸಲ್ಪಟ್ಟವನೂ, ಶ್ರೀರಾಮಪ್ರಭುವಿನ ದೂತನೂ ಆದ ಶ್ರೀಮದಾಂಜನೇಯನನ್ನು ಭಕ್ತಿಯಿಂದ ಧ್ಯಾನಿಸುತ್ತೇನೆ.”

ಬುದ್ಧಿರ್ಬಲಂ ಯಶೋ ಧೈರ್ಯಂ ನಿರ್ಭಯತ್ವಂ ಅರೋಗತಾ ।
ಅಜಾತ್ಯಂ ವಾಕ್ಪಟುತ್ವಂ ಚ ಹನುಮತ್ ಸ್ಮರಣಾತ್ ಭವೇತ್ ॥

ಶ್ರೀ ಆಂಜನೇಯಸ್ವಾಮಿಯನ್ನು ನೆನೆಯುವವರಿಗೆ ಬುದ್ಧಿಶಕ್ತಿಯೂ, ಬಲವೂ, (ಹಿಡಿದ ಕಾರ್ಯವನ್ನು ಮಾಡಿದರೆಂಬ) ಕೀರ್ತಿಯೂ, (ಯಾವುದನ್ನು ಎದುರಿಸಬಲ್ಲ) ಧೈರ್ಯವೂ, (ಶತ್ರುಗಳಿಗೂ ಕಷ್ಟಗಳಿಗೂ) ಅಂಜದೇ ಇರುವ ಎದೆಗಾರಿಕೆಯೂ, ಆರೋಗ್ಯವೂ, ಜಾಡ್ಯಭಾವವಿಲ್ಲದೆ ಸದಾ ಚಟುವಟಿಕೆ, ಲವಲವಿಕೆಗಳೂ, ಸ್ಫುಟವಾಗಿ ಸಲೀಸಾಗಿ, ಅರ್ಥರಸಭಾವ ಪುಷ್ಟವಾಗಿ ಮಾತನಾಡುವ, (ಉಪನ್ಯಾಸ ಮಾಡುವ), ವಿಷಯಗಳನ್ನು ಸ್ವಾರಸ್ಯವಾಗಿ ಮಂಡಿಸುವ, ವಾಕ್‌ಶಕ್ತಿಯೂ ಉಂಟಾಗುತ್ತವೆ."

ಭೋಜರಾಜ ಕವಿಯು ಒಮ್ಮೆ ಸೇತು ಸ್ನಾನಕ್ಕಾಗಿ ಹೋಗಿದ್ದಾಗ, ರತ್ನಾಕರ ಮಹೋದಧಿಗಳು ಸಂಗಮಿಸುವ ಆ ಧನುಷ್ಕೋಟೀ ತೀರದಲ್ಲಿ ಪರಿವಾರದವರು ಆಕಸ್ಮಿಕವಾಗಿ ಒಂದು ಶಿಲೆಯನ್ನು ತಿರುವಿ ಹಾಕಿದಾಗ, ಅಲ್ಲೊಂದು ಶ್ಲೋಕವು ಕೆತ್ತಿರುವುದನ್ನು ಕಂಡು ವಿಸ್ಮಿತರಾಗಿ, ದೊರೆಯ ಗಮನವನ್ನು ಅತ್ತ ಸೆಳೆದರಂತೆ ! ದೊರೆ ಅದನ್ನೋದಿ ಆನಂದ ಭರಿತನಾಗಿ, ಅದು ರಾಮಾಯಣದ ಕಥೆಯ ಒಂದು ಭಾಗಕ್ಕೆ ಸಂಬಂಧಪಟ್ಟುದನ್ನರಿತು, ಕುತೂಹಲದಿಂದ ಅಲ್ಲಿದ್ದ ನೂರಾರೂ ಅಂಥ ಶಿಲೆಗಳನ್ನು ತಿರುವಿ ಹಾಕಲಾಗಿ, ಅಲ್ಲೆಲ್ಲ ಗದ್ಯ-ಪದ್ಯಗಳು ಅಂಥ ದಿವ್ಯ ರಾಮಕಥೆಗೇ ಸಂಬಂಧಿಸಿದುವಾಗಿದ್ದುದು ಇದ್ದು, ಭೋಜರಾಜನು ವಿದ್ವಾಂಸರನ್ನೂ, ಅಲ್ಲಿನ ಜನರನ್ನೂ "ಇಲ್ಲೇನಾದರೂ ಐತಿಹ್ಯವುಂಟೇ ?" ಎಂದು ಕೇಳಿರಾಗಿ, ಅವರು ಹೇಳಿದರಂತೆ. "ಪೂರ್ವದಲ್ಲಿ ಆಂಜನೇಯನು, ರಾಮಾವತಾರ ಮುಗಿಯಲಾಗಿ, ಪ್ರಭುವಿರಹವನ್ನು ತಾಳಲಾರದೆ, ಇಲ್ಲಿ ಬಂದು ವಜ್ರದಷ್ಟು ಕಠಿನವಾದ ತನ್ನ ಉಗುರುಗಳಿಂದಲೇ ಈ ದಡದ ಹಲವು ಶಿಲೆಗಳಲ್ಲಿ, ತಾನು ಅನುಭವಿಸಿದ, ತನಗೆ ಭೋಗ್ಯವೆನಿಸಿದ ರಾಮಚರಿತ್ರೆಯನ್ನು ಕೆತ್ತಿ ಹಾಕಿರುವನೆಂದು ಕೇಳಿ ಬಲ್ಲೆವು ! ಆದರೆ ಆ ಶಿಲೆಗಳು ಯಾವುವು ? ಎಲ್ಲಿವೆ ? ಎಂಬುದು ನಮಗೆ ತಿಳಿಯದು !" ಎಂದು ವಿಸ್ಮಿತನಾದ ದೊರೆ, ಆ ಶಿಲೆಗಳ ಪದ್ಯಗಳನ್ನೂ ಗದ್ಯಭಾಗಗಳನ್ನೂ ಒಂದು ಕ್ರಮವಾಗಿ ಕಥೆ ಬಂದಂತೆ ಜೋಡಿಸಲಾಗಿ, ಅದು ವಿಚಿತ್ರ ನಾಟಕರೂಪ ತಳೆಯಿತಂತೆ ! ಈಗ ದೊರಕುವ ಹನೂಮನ್ನಾಟಕವೆಂಬ ಅಪರೂಪ ಮಹಾನಾಟಕ ಅದೇ ಎಂದು ವಿದ್ವಾಂಸರು ಹೇಳುತ್ತಾರೆ. ಇದು ಆಂಜನೇಯು "ಬರೆದ" ರಾಮಾಯಣವೇ ಹೊರತು, ದಿನಾ ಅವನೇ ಗಾನ ಮಾಡುವ ರಾಮಾಯಣ ಅಲ್ಲ ! ಆದ್ದರಿಂದ ಇಲ್ಲಿ ಪ್ರಸ್ತುತವಾದದ್ದು ಈ ಹನೂಮನ್ನಾಟಕವಲ್ಲ ! ಅವನೇ ದಿನಾ ಗಾನ ಮಾಡುವ ಆ ಇನ್ನೊಂದು ರಾಮಾಯಣ, 'ಅಮೃತಗಾನ". ಅದು ಸಂಕ್ಷೇಪವೂ, ಸಪ್ತಕಾಂಡ ಸಾರಭೂತವೂ, ಶ್ರೀರಾಮ ಚಾರಿತ್ರದಲ್ಲಿ ವಿಶೇಷವಾಗಿ ಆಂಜನೇಯನ ಹೃದಯವನ್ನು ಆಕರ್ಷಿಸಿದ ಅಪರೂಪ ಅಂಶಗಳು ಅಡಕವಾದರೂ, ಈಗಲೂ ಓದಿದವನಿಗೆ ರೋಮಾಂಚಕವಾಗುವಂತಿರುವುದೂ, ನಿತ್ಯಪಾರಾಯಣಕ್ಕೆ ನಮಗೂ ಯೋಗ್ಯವಾದುದೂ, ಈಗಲೂ ದೊರಕುವುದೂ ಆಗಿದೆ. ಅದೇ ಇಲ್ಲಿ ಪ್ರಸ್ತುತ. ಅದು ಇರುವುದು, ನೀವು ನಿರೀಕ್ಷಿಸದ ಒಂದು ಜಾಗದಲ್ಲಿ ! ಶ್ರೀಮದ್ಭಾಗವತದಲ್ಲಿ ! (5-19)

ಮೂರು ಗಂಭೀರ ಗದ್ಯ ವಾಕ್ಯಗಳೂ, ಐದು ಚೆಲುವಾದ, ಮನಮೋಹಕ ಶ್ಲೋಕಗಳೂ ಸೇರಿ – ಎಂಟು 'ಗ್ರಂಥ'ದಲ್ಲಿ ಈ ಹನುಮದ್ರಾಮಾಯಣ ಅಡಗಿ ಕುಳಿತಿದೆ. ಇದರ ರಸಾನುಭೂತಿಯನ್ನು, ಭೋಗ್ಯತೆಯ ಆನಂದವನ್ನು ಈಗ ಪಡೋಣ.

## ಆಂಜನೇಯನ ಭವ್ಯ ವ್ಯಕ್ತಿತ್ವ

ಈ ಪುಟ್ಟ ರಾಮಾಯಣದ ಕರ್ತೃವಿನ ದಿವ್ಯಭವ್ಯ ಸ್ವರೂಪದ ಕಲ್ಪನೆ ಇದ್ದ ಹೊರತು ಈ ಪುಟ್ಟ ಗ್ರಂಥದಲ್ಲಿ ಅವನೆಂದು ಅರ್ಥರತ್ನಗಳನ್ನಡಗಿಸುವ ಸಂಭವ ಎಂಬುದು ಮನದಟ್ಟಾಗಲಾರದು ! ರಾಮಭಜನೆಯನ್ನು ಈಗಲೂ ರಾಮಭಕ್ತರೆಲ್ಲ ಮಾಡುವುದುಂಟು. ಸಂತ ತ್ಯಾಗರಾಜರ ಹಾಡುಗಳೆಲ್ಲ ರಾಮಾಯಣಮಯವೇ ! ಭದ್ರಾಚಲರಾಮದಾಸರೂ, ಅಣ್ಣಮಾಚಾರ್ಯರೂ, ಪುರಂದರಾದಿ ದಾಸಶ್ರೇಷ್ಠರೂ ರಾಮಾಯಣದ ಆಯ್ದ ಕಥಾ ಭಾಗಗಳನ್ನೂ, ಆಯ್ದ ರಾಮ ಗುಣಗಳನ್ನೂ ವಿಷಯವನ್ನಾಗಿಟ್ಟುಕೊಂಡು ಅಪೂರ್ವ ಕೃತಿಗಳನ್ನು ರಚಿಸಿದ್ದಾರೆ ! ಆಳ್ವಾರುಗಳೂ ರಾಮಾಯಣ ಕಥಾ ಸನ್ನಿವೇಶಗಳನ್ನೂ, ರಾಮಚರಿತೆಯಲ್ಲಿ ವಾಲ್ಮೀಕಿ ಬರೆಯದೇ ಬಿಟ್ಟ ಎಷ್ಟೋ ಅಂಶಗಳನ್ನು ವಿವರಗಳನ್ನು ಕುರಿತು ಹಾಡಿ ಭಗವಂತನಿಗೆ ಆರತಿ ಎತ್ತಿದ್ದಾರೆ. ಈ ಆಂಜನೇಯ ಗಾನ ಮಾಡಿದ 'ರಾಮಾಯಣ ಸಂಗ್ರಹ'ದಲ್ಲಿ ಪ್ರಭುವಿನ ಗುಣ ವರ್ಣನೆಯೇ ಪ್ರಧಾನ ! ಅದು ಸಾರ್ವಕಾಲಿಕ ಹೇಗೆಂಬುದನ್ನು ಎತ್ತಿ ತೋರಿಸುವ ರೂಪದಲ್ಲಿ, ಸ್ವಾನುಭವರೂಪದಲ್ಲಿರುವುದು ಇಲ್ಲಿನ ವೈಶಿಷ್ಟ್ಯ.

ಆ 'ಸ್ವಾನುಭವ'ವಾದರೂ ಎಂಥದು ? ಕೇಸರೀ ಎಂಬ ವಾನರ ವೀರನಿಗೆ ವಾಯು ದೇವರ ಅಂಶದಿಂದ ಅಂಜನಾದೇವಿಯಲ್ಲಿ ಜನಿಸಿದ ಕರ್ನಾಟಕದ ಹೆಮ್ಮೆಯ ಪುತ್ರ ಈ ಆಂಜನೇಯ ! ಮಹಾ ಸಾಹಸಿಯೂ ಅಪ್ರತಿಮವೀರನೂ, ನ್ಯಾಯ ಪಕ್ಷಪಾತಿಯೂ, ನಿಃಸ್ವಾರ್ಥಿಯೂ, ಮಿತ್ರೋಪಕಾರಿಯೂ, ಕಾಮಾದಿಸಕಲ ಪಾಶ ಮೋಹ ಬಂಧ ದೋಷದೂರನೂ, ಉನ್ನತ ಧ್ಯೇಯವನ್ನು ಜೀವನದಲ್ಲಿ ಎಂದೂ ಮರೆಯದವನೂ, ಸಣ್ಣವರಿಗೆ ತನ್ನನ್ನೆಂದೂ ಮಾರಿಕೊಳ್ಳದವನೂ, ಗುಣಶ್ರೇಷ್ಠರಿಗೆ ದಾಸಾನುದಾಸನಾಗಿರುವಷ್ಟು ವಿನಯವುಳ್ಳವನೂ, ಲೋಕಕ್ಕೆ ಹಿತ ಹೇಳುವಲ್ಲಿ ನಿರ್ಭೀತನೂ, ದಾಕ್ಷಿಣ್ಯ ರಹಿತನೂ, ಸತ್ಯಪಕ್ಷಪಾತಿಯೂ, ಅದಮ್ಯ ಚೈತನ್ಯದ ಚಿಲುಮೆಯೂ, ನಿತ್ಯಯುವಕನೂ, ಕರ್ತವ್ಯ ದಕ್ಷನೂ, ಸಮಯೋಚಿತ ಪ್ರಜ್ಞೆಯುಳ್ಳವನೂ, ತನ್ನನ್ನಾಶ್ರಯಿಸಿದವರಲ್ಲಿ ಅನುಕಂಪಯುಳ್ಳವನೂ, ಪ್ರಾಣವನ್ನು ಕೊಟ್ಟಾದರೂ ಅವರನ್ನು ಕಾಪಾಡುವುದರಲ್ಲಿ ಬದ್ಧ ಶ್ರದ್ಧನೂ, ಸಕಲ ಶಾಸ್ತ್ರ ಪಾರಂಗತನೂ, ಆ ಓದಿದ ಶಾಸ್ತ್ರದಲ್ಲಿ ಯಾವುದು ಯಾವಾಗ ಹೇಗೆ ಪ್ರಸ್ತುತ, ಉಪಯುಕ್ತವೆಂದರಿತವನೂ, ಹೃದಯವಂತನೂ, ಅಷ್ಟೇ ತಾರ್ಕಿಕ ಬುದ್ಧಿ ಬಲವನ್ನುಳ್ಳವನೂ, ಹೃದಯ ಮಿದುಳುಗಳಲ್ಲಿ ಸಮತೋಲವುಳಿಸಿಕೊಂಡ ಧೀಮಂತನೂ, ಭಾರತೀಯ ತತ್ತ್ವಶಾಸ್ತ್ರದ

ಉತ್ತಮೋತ್ತಮಾಂಶಗಳನ್ನೆಲ್ಲ ಅರಗಿಸಿಕೊಂಡು ಆಚರಣೆಯಲ್ಲಿ ತೋರಿಸಿದವನೂ, ವಿರಾಗಿಯೂ, ಭಕ್ತಗ್ರೇಸರನೂ, ರಸಿಕನೂ, ಪಂಡಿತನೂ, ಕ್ರಿಯಾವಂತನೂ ಆದ ಈ ಅತ್ಯಪೂರ್ವ ವ್ಯಕ್ತಿಯ "ಸ್ವ" – ಎಂದರೆ ಎಂಥವಿರಬಹುದು ? ಊಹಿಸಬಲ್ಲಿರಾ ?

ಮಹತ್ವಾಕಾಂಕ್ಷೆ ಇದ್ದಿದ್ದರೆ, ಅವನು ವಾಲಿಯನ್ನೇ ಓಲೈಸಬಹುದಿತ್ತು ! ಅಥವಾ ಅವನನ್ನೂ ಸುಗ್ರೀವನನ್ನೂ 'ಮುಗಿಸಿ' ತಾನೇ ಕಿಷ್ಕಿಂಧೆಯ ಅರಸನಾಗಬಹುದಿತ್ತು ! ರಾವಣನನ್ನೂ ಮುಗಿಸಿ, ಲಂಕೈಶ್ವರ್ಯವನ್ನೂ ತನ್ನದಾಗಿಸಿಕೊಳ್ಳಬಹುದಿತ್ತು ! ಇಂಥ ಕ್ಷುದ್ರ–ಅರ್ಥಹೀನ ರಾಜಕೀಯವನ್ನು ಅವನೆಂದೂ ಮಾಡಲಿಲ್ಲ ! ಹಾಗೆ ಮಾಡಿದವರನ್ನೆಂದೂ ಅವನು ಮೆಚ್ಚಲೂ ಇಲ್ಲ ! ಅವನ 'ಸ್ವ' ಇದಾಗಿರಲಿಲ್ಲ. ವಾಲಿಗೆ–ಇವನಿಗೆ ಸಂಬಂಧ ಹೇಗಿತ್ತು ? ಶ್ರೀರಾಮಾಯಣ ಏನೂ ಹೇಳುವುದಿಲ್ಲ ! "ನನ್ನ ಕಡೆಯೇ ಇರು" ಎಂದು ವಾಲಿ ಕೇಳಲೂ ಇಲ್ಲ ! ಪ್ರಾಯಃ ಆಂಜನೇಯ ಶೀಲ ತಿಳಿದವನಿಗೆ ಹಾಗೆ ಕೇಳಲು ಬಾಯೇ ಬಂದಿರಲಾರದು ! ಕೇಳಿದ್ದರೆ ಅಲ್ಲೇ ಅವನ ತೇಜೋವಧೆಯಾಗುತ್ತಿತ್ತೇನೋ ! ಆದರೆ ತಾರೆಗೆ (ವಾಲಿಯ ಹೆಂಡತಿಗೆ) ಆಂಜನೇಯನಲ್ಲಿ ತುಂಬಾ ಗೌರವ ಇದ್ದಿತು. ತಾರೆಯ ಮಾತು ವಾಲಿಗೆ ಕಷ್ಟವಾಗಿತ್ತು–'ಸುಗ್ರೀವನೊಡನೆ ವೈರ ಬೇಡ' ಎಂಬ ಒಂದು ವಿಷಯದಲ್ಲಿ ಹೊರತು !

ಯದೇಷಾ ಸಾಧ್ವಿತಿ ಬ್ರೂಯಾತ್ ಕಾರ್ಯಂ ತನ್ಮುಕ್ತ ಸಂಶಯಂ !
ನ ಹಿ ತಾರಾಮತಂ ಕಿಂಚಿತ್ ಅನ್ಯಥಾ ಪರಿವರ್ತತೇ ॥
(ಶ್ರೀರಾಮಾಯಣ, ಕಿಷ್ಕಿಂಧಾ, 22–14)

ಎಂದು ಅವನೇ ತನ್ನ ಮರಣಶಯ್ಯೆಯಲ್ಲಿ ಸುಗ್ರೀವನಿಗೆ ಉಪದೇಶಿಸಿರುವ ಈ ಮಾತುಗಳನ್ನು ನೋಡಿ ! "ಇದೇ ಸರಿ ಎಂದು ತಾರೆ ಒಮ್ಮೆ ಹೇಳಿಬಿಟ್ಟಳೆಂದರೆ, ಅದನ್ನು ಯಾರ ಸಂಶಯವೂ ಇಲ್ಲದೆ ಮಾಡತಕ್ಕದ್ದು. ಏಕೆಂದರೆ ಅವಳು ಹೇಳಿದ ಮೇಲೆ ಆ ವಿಷಯ ಬೇರೆ ರೀತಿ ಆಗಿರುವುದು, ಆಗಿ–ಮುಗಿಯುವುದು, ತಿರುವುಮುರುವಾಗುವುದು, ಶಕ್ಯವೇ ಇಲ್ಲ"–ಇದು ವಾಲಿ ತನ್ನ ಹೆಂಡತಿಯ ರಾಜಕಾರಣ ಪ್ರಜ್ಞೆಗೆ ಹಿಡಿದ ಕನ್ನಡಿ ; ಅವಳ ಮುತ್ಸದ್ದಿತನದ ಬಗೆಗೆ ಅವನ ಅಪಾರ ವಿಶ್ವಾಸ.

ಇಂಥ ತಾರೆಗೇ ಆಂಜನೇಯ ವೇದಾಂತೋಪದೇಶಮಾಡುತ್ತಾನೆ, ಅದನ್ನವಳು ನಿರಾಕರಿಸುವುದಿಲ್ಲ, ಮಾತ್ರವಲ್ಲದೆ, ತನ್ನ ಗಂಡನ ಶತ್ರುವಿಗೆ ಮಿತ್ರನಾಗಿ, ಆ 'ಹೊರಗಿನ ಸಹಾಯದಿಂದ, ತನ್ನ ಗಂಡನನ್ನು ಕೊಲ್ಲಿಸಿದನೆಂದೂ ಒಮ್ಮೆಯೂ ಬಾಯಿತಪ್ಪಿಯೂ ಆಕ್ಷೇಪಿಸುವುದಿಲ್ಲವೆಂದರೆ, ಆಂಜನೇಯನ ಭವ್ಯಚಾರಿತ್ರ್ಯ, ಸತ್ಯನಿಷ್ಠೆ, ತ್ರಿಕರಣ ಶುದ್ಧಿಗಳಲ್ಲಿ ಅವಳು ಎಷ್ಟು ವಿಶ್ವಾಸವಿಟ್ಟಿರಬೇಡ ! ಆಂಜನೇಯನ ಉಪದೇಶವಾದರೂ ಏನು ?

ಶೋಚ್ಯಾ ಶೋಚಸಿ ಕಂ ಶೋಚ್ಯ ದೀನಂ ದೀನಾನುಕಂಪಸೇ ।
ಕಸ್ಯ ಕೋ ವಾ ನ ಶೋಚ್ಯೋಽಸ್ತಿ ದೇಹೇಽಸ್ಮಿನ್ ಬುದ್ಬುದೋಪಮೇ ॥

"ಅಮ್ಮ ! ಈ ಶರೀರವು ಜೀವನದಲ್ಲಿ ನೀರಮೇಲಣ ಗುಳ್ಳೆಯಂತೆ ಅಶಾಶ್ವತವಾಗಿರುವಾಗ, (ನಾವೇ ಈಗಲೋ ಆಗಲೋ ಲೋಕವನ್ನು ತೊರೆಯಲೇಬೇಕಾಗಿರುವಾಗ) ನೀನೇ ಶೋಚನೀಯಳಾಗಿರುತ್ತಾ, ದೀನಳಾಗಿರುತ್ತಾ, ಬೇರೆ ಯಾರಿಗೆ ತಾನೇ ಶೋಕಿಸುವುದಿದೆ ? ಈಗ ವೀರನಾದ ವಾಲಿಗೆ ನೀನು ಶೋಕಿಸಿ ಅನುಕಂಪೆ ತೋರುವುದೇಕೆ ? ಯಾರಿಗೆ ಯಾರು ತಾನೇ ಈ ಸಂಸಾರದಲ್ಲಿ ಅಳುವುದು ಯುಕ್ತ ?"

ಭಗವದ್ಗೀತೆಯ "ಅಶೋಚ್ಯಾನ್ ಅನ್ವಶೋಚಸ್ತ್ವಂ..." (ಎರಡನೇ ಅಧ್ಯಾಯ, ಶ್ಲೋ ॥) ಎಂಬ ಸೂಕ್ತಿಯ ಅರ್ಥದ ವಿವರಣೆ ಇಲ್ಲಿರುವುದನ್ನು ಗಮನಿಸಿ. ಜೀವನದಲ್ಲಿ ಯಾರು ತಮ್ಮ ಮುಂದಿನ ಹಾದಿಯ ಸಿದ್ಧತೆಯನ್ನು ಮಾಡಿಕೊಂಡಿಲ್ಲವೋ, ಅವರೇ ಶೋಚನೀಯರು ! ಗಂಡ ಹೆಂಡಿರೇ ಆದರೂ ಅವರವರ ದಾರಿ ಅವರದೇ !" ಗಂಡನಿಗಾಗಿ ಅಳಬೇಡ ! ನಿನಗಾಗಿಯೇ ನೀನು ಅಳು ॥ ಎಂಬುದು ಈ ಉಪದೇಶದ ಸಾರ. ಇದು ಎಂಥ ಧೀರ ಉಪದೇಶ ! ಪ್ರಸಂಗ ಬಂದಿದ್ದರೆ, ಪ್ರಾಯಃ ಇದನ್ನೇ ವಾಲಿಗೂ ಹೇಳಿಬಿಡುವ ಧೀರ ಪ್ರವೃತ್ತಿ ಆಂಜನೇಯನದು ! ಆ ಪ್ರಸಂಗ ಬರಲೇ ಇಲ್ಲವೆಂಬುದು ಬೇರೆ ಮಾತು. ಅಂಥ ಪ್ರಸಂಗ ಬಂದಾಗ ರಾವಣನಿಗೇ ಅದನ್ನು ಆಂಜನೇಯ ಹೇಳಲು ಅಂಜಲಿಲ್ಲ, ಅಳುಕಲಿಲ್ಲ !

ಆ ಸಿದ್ಧಿಯ ದೈವೀ ಮುಖವನ್ನು ಈಗ ನೋಡಿ. ಉಪನಿಷತ್ತುಗಳು, "ಎಲ್ಲ ತಿಳಿದ ಜ್ಞಾನಿಗೆ ಇರುವ ಒಂದೇ ನಿಜವಾದ 'ಸ್ವ'ತ್ತೆಂದರೆ, ಆವನಲ್ಲಿ ಅಂತರಾತ್ಮನಾಗಿರುವ ಭಗವಂತನೇ" ಎಂದು ಹೇಳುತ್ತವೆ. ಇದು ನಮಗೆ ದಿನದಿನವೂ ಅನುಭವಕ್ಕೆ ಬರುವ, ಬರಬೇಕಾದ ಅವಸ್ಥೆಯೆಂದರೆ ಸುಷುಪ್ತಿ ಎಂಬ ಗಾಢಾವಸ್ಥೆಯ ನಿದ್ರೆ, ಅಲ್ಲಿ "ಸ್ವಂ-ಅಪೀತೋ ಭವತಿ" ಎಂದು ಛಾಂದೋಗ್ಯ ಉಪನಿಷತ್ತು ಹೇಳುವಂತೆ, "ತನ್ನ"ವನಾದ ಭಗವಂತನಲ್ಲಿ ಪೂರ್ಣ ವಿಶ್ರಾಂತನಾಗುವ ಸಕಲೇತರ ಬಂಧನಗಳನ್ನು ಶ್ರಮವಿಲ್ಲದಂತೆ ತೊರೆಯುವ ಅವಸ್ಥೆ ಇದು ! "ಯಥಾಸ್ತ್ರಿ ಯಾ ಪ್ರಿಯಯಾ ಸಂಪರಿಷ್ವಕ್ತಃ, ತಥಾ ಪ್ರಾಜ್ಞೇನ ಅಂತರಾತ್ಮನಾ... ನ ಬಾಹ್ಯಾಭ್ಯಂತರಂ ವೇದ ..." ಎಂದು ಬೃಹದಾರಣ್ಯಕ ಉಪನಿಷತ್ತಿನಲ್ಲೂ ಇದೇ ಅವಸ್ಥೆಯನ್ನು ವರ್ಣಿಸಿ, "ಒಬ್ಬನು ತನಗೆ ಪ್ರಿಯಳಾದ ಪತ್ನಿಯ ಗಾಢಾಲಿಂಗನ ಸುಖದಲ್ಲಿರುವಾಗ, ಆ ಸುಖದ ಒಳ-ಹೊರಗೆಂಬ ಭೇದಗಳೂ, (ಅದಕ್ಕೆ ಮೇಲ್ಪಟ್ಟುದೂ) ಯಾವುದೂ ಹೇಗೆ ಅರಿವಿಗೆ ಬರಲಾರದೋ, ಅದೇ ಪರಮಸುಖವಾಗಿರುವುದೋ, ಹಾಗೆ," ಎಂದು ಉದಾಹರಣೆಯನ್ನು ಕೊಟ್ಟಿರು

ವಂತೆ, ಸರ್ವಜ್ಞನಾದ ಪರಮಾತ್ಮನ ತೀವ್ರ, ಗಾಢ, ಸಾಂದ್ರಾನುಭವ ಸುಖವು ತಾನೇ ತಾನಾಗಿರುವ ದಿವ್ಯಾವಸ್ಥೆ ಇದು. ಜ್ಞಾನಿಯ "ಸ್ವ" ಅನುಭವವೆಂದರೆ ಇದೇ !

ಈ ಅನುಭವ ಸುಖವನ್ನು ಆಂಜನೇಯ ರಾಮಾವತಾರಕಾಲದಲ್ಲಿಯೇ ಪಡೆದು ಭಗವಂತನ ಪ್ರಸಾದವನ್ನಾಗಿ ಅನುಭವಿಸಿದ್ದವನು.

# ಸಕಲ ಪುರಾತನರ ವಚನಕಟ್ಟು : ಕೆಲವು ಸಮಸ್ಯೆಗಳು

ಡಾ|| ಎಂ. ಎಂ. ಕಲಬುರ್ಗಿ

ಪ್ರಾಚೀನ ವಚನ ಸಂಕಲನ ಕಟ್ಟುಗಳಲ್ಲಿ "ಸಕಲಪುರಾತನರ ವಚನ" ಕಟ್ಟುಗಳು ಹೆಚ್ಚು ವಿಶ್ವಾಸಾರ್ಹವೆನಿಸಿವೆ. ಸಾಮಾನ್ಯವಾಗಿ ಇವು ಮೂರು ಬಗೆಯಾಗಿದ್ದು ಒಂದು ಗೊಗ್ಗವ್ವೆಯ ವಚನಗಳಿಂದ, ಇನ್ನೊಂದು ಕೋಲಶಾಂತಯ್ಯನ ವಚನಗಳಿಂದ, ಮತ್ತೊಂದು ಬಸವಣ್ಣನ ವಚನಗಳಿಂದ ಪ್ರಾರಂಭವಾಗುತ್ತವೆ. ಈ ಕಟ್ಟುಗಳಲ್ಲಿ ಅಡಕವಾಗಿರುವ ವಚನಕಾರರ ಸಂಖ್ಯೆ, ಪ್ರತಿಯೊಬ್ಬ ವಚನಕಾರನ ವಚನಸಂಖ್ಯೆಗಳು ಕಾಲದಿಂದ ಕಾಲಕ್ಕೆ ವ್ಯತ್ಯಾಸವಾಗುತ್ತ ಬಂದಿರುವುದರಿಂದ ಈ ಮೂರೂ ಬಗೆಯ ಕಟ್ಟುಗಳ ಮೂಲಸ್ವರೂಪವನ್ನು ನಿರ್ಧರಿಸುವುದು ಸಮಸ್ಯೆಯಾಗಿದೆ. ಇದನ್ನು ಬಿಟ್ಟರೂ ಇಲ್ಲಿಯ ಶರಣರ ಹೆಸರು ಮತ್ತು ಮುದ್ರಿಕೆಗಳ ವಿಷಯದಲ್ಲಿ ಕಟ್ಟುಗಳ ಸಂಯೋಜಕರಿಂದ ಇಲ್ಲವೆ ತರುವಾಯದ ಲಿಪಿಕಾರರಿಂದ ಇಲ್ಲವೆ ಆಧುನಿಕ ಸಂಪಾದಕರಿಂದ ಕೆಲವು ದೋಷಗಳು ಘಟಿಸಿವೆ. ಇವುಗಳನ್ನು ವಿದ್ವಾಂಸರ ಗಮನಕ್ಕೆ ತಂದು ಸಾಧ್ಯವಿದ್ದ ಪರಿಹಾರ ಸೂಚಿಸುವುದು ಈ ಲೇಖನದ ಉದ್ದೇಶವಾಗಿದೆ.

## 1. ಮಹಾದೇವೀರಯ್ಯ

ಸಕಲಪುರಾತನರ ವಚನಕಟ್ಟಿನಲ್ಲಿ (ಗೊ) ವೀರಶಂಕರದಾಸಯ್ಯ ಮತ್ತು ಸಂಗಮೇಶ್ವರದ ಅಪ್ಪಣ್ಣ ಇವರ ನಡುವೆ 'ಜಾತಿ ಶೈವರು, ಅಜಾತ ಶೈವರೆಂದೆರಡು ಪ್ರಕಾರವಾಗಿಪರಯ್ಯಾ...' ಎಂದು ಪ್ರಾರಂಭವಾಗಿ 'ಸರ್ವೇಶ್ವರ ಚೆನ್ನಮಲ್ಲಿಕಾರ್ಜುನಯ್ಯ' ಎಂದು ಮುಗಿವ ಒಂದೇ ಒಂದು ವಚನವಿದೆ. ಇದನ್ನು ಆಧುನಿಕ ಎಲ್ಲ ಸಂಪಾದಕರೂ ಮಹಾದೇವಿಯಕ್ಕನ ವಚನವೆಂದು ಗ್ರಹಿಸಿ, ಅವಳ ಹೆಸರಿನಲ್ಲಿ ಪ್ರಕಟಿಸುತ್ತ ಬಂದಿದ್ದಾರೆ. ಆದರೆ ಭಕ್ತಿಭಾವನೆಯ ಅಕ್ಕಮಹಾದೇವಿಯು ಶೈವದ ಪ್ರಕಾರ, ಅವುಗಳ ಲಕ್ಷಣಗಳನ್ನು ಪ್ರತಿಪಾದಿಸುವ ಈ ಶಾಸ್ತ್ರವಚನ ಬರೆದಿರುವುದು

ಸಂದೇಹ. ಈ ಸಂದೇಹ ಪರಿಹಾರಕ್ಕಾಗಿ ಮೂಲಹಸ್ತಪ್ರತಿಯಲ್ಲಿಯ ಪಾಠಪರೀಕ್ಷೆ ಅನಿವಾರ್ಯವಾಗುತ್ತದೆ.

ಹಸ್ತಪ್ರತಿಗಳಲ್ಲಿ ಲಿಪಿಯ ಅಂಗವಾಗಿ ಬರುವ ದೀರ್ಘ (ಉದಾ : ಕಾ)ವನ್ನು ಸರಿಯಾಗಿ ಬರೆಯುವರೇ ಹೊರತು, ಲಿಪಿಯ ಭಾಗವಾಗಿರದ ಸ್ವತಂತ್ರ ದೀರ್ಘವನ್ನು (ೀ) ಬರೆಯುವುದೇ ಇಲ್ಲ. ಸಂದರ್ಭದ ಬಲದಿಂದ ಇಂಥ ದೀರ್ಘವನ್ನು ನಾವು ಭಾವಿಸಿಕೊಳ್ಳಬೇಕಾಗುತ್ತದೆ. ಈ ಮೇರೆಗೆ ಸಕಲ ಪುರಾತನರ ವಚನ ಕಟ್ಟಿನಲ್ಲಿ (ಗೊ) 'ಮಹಾದೇವೀರಯ್ಯ ವಚನ' ಎಂದು (ತಾ.ಪ್ರ. 613), 'ಮಹಾದೇವೀರಯ್ಯಗಳ ವಚನ' ಎಂದು (ತಾ.ಪ್ರ. 693) ಬರೆಯಲಾಗಿದೆ. ಇಲ್ಲಿಯ ಹೆಸರಿನ ಹೋಲಿಕೆ, ಮುದ್ರಿಕೆಯ ಸಾಮ್ಯತೆಗಳು ಪ್ರಾಚೀನ ಲಿಪಿಕಾರರಿಗೆ ಇದು ಮಹಾದೇವಿಯಕ್ಕನ ವಚನವೆಂಬ ಭ್ರಾಂತಿಯನ್ನು ಹುಟ್ಟಿಸಿದಂತಿದೆ. ಇದಕ್ಕೆ ನಿದರ್ಶನವೆಂಬಂತೆ ತಾ.ಪ್ರ.76ರಲ್ಲಿ 'ಮಹಾದೇವಿಯರ ವಚನ' ಎಂದೇ ಬರೆಯಲಾಗಿದೆ. ಹೀಗಾಗಿ ಆಧುನಿಕ ವಿದ್ವಾಂಸರು ಮೇಲೆ ಹೇಳಿದ ವಚನವನ್ನು ಮಹಾದೇವಿಯಕ್ಕನ ಹೆಸರಿನಲ್ಲಿ ತಪ್ಪಾಗಿ ಪ್ರಕಟಿಸುತ್ತ ಬಂದಿದ್ದಾರೆ. ಹೀಗಾಗಿ ಇನ್ನು ಮೇಲೆ ಇದರ ಕರ್ತೃ 'ಮಹಾದೇವೀರಯ್ಯ'ನಾಗಿರುವನೆಂದು ಇಟ್ಟುಕೊಳ್ಳಬೇಕು. ಇದರಿಂದ ಒಬ್ಬ ಹೊಸ ವಚನಕಾರನನ್ನು ಸಾಹಿತ್ಯ ಲೋಕಕ್ಕೆ ಪರಿಚಯಿಸಿದಂತಾಗುತ್ತದೆ.

## 2. ಅಮರಗುಂಡದ ಮಲ್ಲಿಕಾರ್ಜುನ—ಪುರದ ನಾಗಣ

ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿದ ಸಕಲಪುರಾತನರ ವಚನಸಂಪುಟ—3ರಲ್ಲಿ ಅಮರಗುಂಡದ ಮಲ್ಲಿಕಾರ್ಜುನತಂದೆಗಳ ಹೆಸರಿನ ಕೆಳಗೆ ಒಂದೇ ಒಂದು ವಚನ (ಕಾಯವೆಂಬ ಪಟ್ಟಣಕ್ಕೆ...) 'ಅಮರಗುಂಡದ ಮಲ್ಲಿಕಾರ್ಜುನ' ಎಂಬ ಮುದ್ರಿಕೆಯಲ್ಲಿ ಸಿಗುತ್ತದೆ. ಇದೇ ಸಂಪುಟದಲ್ಲಿ ಪುರದ ನಾಗಣ್ಣನ ಹೆಸರಿನ ಕೆಳಗೆ ಒಂದೇ ಒಂದು ವಚನವಿದ್ದು (ನಾನಾ ಯೋನಿಯಲ್ಲಿ...) ಅದರ ಮುದ್ರಿಕೆಯೂ 'ಅಮರಗುಂಡದ ಮಲ್ಲಿಕಾರ್ಜುನಾ' ಎಂದಿದೆ. ಇಲ್ಲಿ ಒಂದೇ ಮುದ್ರಿಕೆ ಇಬ್ಬರ ಹೆಸರಿನಲ್ಲೇಕೆ ? ಎಂದು ಉದ್ಭವಿಸುವ ಪ್ರಶ್ನೆಗೆ ಹೀಗೆ ಉತ್ತರಿಸಬಹುದು.

ಮೂಲತಃ, ಅಮರಗುಂಡದ ಮಲ್ಲಿಕಾರ್ಜುನತಂದೆಗಳ ಮುದ್ರಿಕೆ 'ಅಮರಗುಂಡದ ಮಲ್ಲಿಕಾರ್ಜುನಾ' ಅಲ್ಲ, 'ಮಾಗುಡದ ಮಲ್ಲಿಕಾರ್ಜುನ'. ಲಿಪಿಕಾರರ ಪ್ರಮಾದದಿಂದಾಗಿ ಇದು 'ಅಮರಗುಂಡದ ಮಲ್ಲಿಕಾರ್ಜುನಾ' ಎಂಬ ರೂಪಕ್ಕೆ ತಿರುಗಿದ ಇತಿಹಾಸ ಹೀಗಿದೆ :

ಮೇಲೆ ಹೇಳಿದ 'ಕಾಯವೆಂಬ ಪಟ್ಟಣಕ್ಕೆ...' ಎಂಬ ವಚನ 'ಮಹಾಮಹಿಮಾ ಮಾಗುಡದ ಮಲ್ಲಿಕಾರ್ಜುನಾ' ಎಂದು ಮುಗಿಯುತ್ತದೆ. ಲಿಪಿಸುವ ವೇಗದಲ್ಲಿ ಲಿಪಿಕಾರ ಒಂದು 'ಮಾ' ಬಿಟ್ಟು 'ಮಹಾಮಹಿಮಾ ಗುಡದ ಮಲ್ಲಿಕಾರ್ಜುನಾ' ಎಂದು ಬರೆದಿರ

ಬಹುದು. ಮುಂದೆ ಬಂದ ಲಿಪಿಕಾರರಲ್ಲಿ ಒಬ್ಬನು ಈ ದೋಷಪಾಠವನ್ನು 'ಗುಡ್ಡದ ಮಲ್ಲಿಕಾರ್ಜುನಾ' ಎಂದೂ, ಇನ್ನೊಬ್ಬನು 'ಗುಂಡದ ಮಲ್ಲಿಕಾರ್ಜುನಾ' ಎಂದೂ ತಿದ್ದಿ ಬರೆದುಕೊಂಡ ಪಾಠಗಳು ಹಸ್ತಪ್ರತಿಯಲ್ಲಿ ಸಿಗುತ್ತವೆ. ಇಂಥ ಸಂದರ್ಭದಲ್ಲಿ ಗುಂಡ ಎಂಬುದು ಅಮರಗುಂಡದ ಪರ್ಯಾಯ ನಾಮವಾಗಿರುವುದನ್ನು ಗಮನಿಸಿದ ಬೇರೊಬ್ಬ ಲಿಪಿಕಾರ 'ಗುಂಡದ ಮಲ್ಲಿಕಾರ್ಜುನಾ' ಎಂಬುದನ್ನು 'ಅಮರಗುಂಡದ ಮಲ್ಲಿಕಾರ್ಜುನಾ' ಎಂದು ಬೆಳೆಸಿಕೊಂಡಂತಿದೆ. ಈ ವಚನದ ಕರ್ತೃವಿನ ಹೆಸರೂ 'ಅಮರಗುಂಡದ ಮಲ್ಲಿಕಾರ್ಜುನತಂದೆ' ಎಂದು ಇರುವುದು ಅವನಿಗೆ ಹೀಗೆ ಬೆಳೆಸಿಕೊಳ್ಳಲು ಒತ್ತಾಯ ಮಾಡಿರಬಹುದು. ಆದುದರಿಂದ ಇನ್ನು ಮೇಲೆ ಅಮರಗುಂಡದ ಮಲ್ಲಿಕಾರ್ಜುನತಂದೆಗಳ ಮುದ್ರಿಕೆ 'ಮಾಗುಡದ ಮಲ್ಲಿಕಾರ್ಜುನಾ' ಎಂದೂ ಪುರದ ನಾಗಣ್ಣನ ಮುದ್ರಿಕೆ 'ಅಮರಗುಂಡದ ಮಲ್ಲಿಕಾರ್ಜುನಾ' ಎಂದೂ ಖಚಿತವಾಗಿ ಇಟ್ಟುಕೊಳ್ಳಬೇಕಾಗುತ್ತದೆ.

ತುಮಕೂರು ಜಿಲ್ಲೆಯ ಗುಬ್ಬಿ ಗ್ರಾಮಕ್ಕೆ ಇನ್ನೊಂದು ಹೆಸರು ಅಮರಗುಂಡ. ಇಲ್ಲಿ ಮಲ್ಲಿಕಾರ್ಜುನ ಹೆಸರಿನ ದೇವಾಲಯವಿದೆ. ಈ ಗ್ರಾಮಕ್ಕೆ ಐದು ಮೈಲು ದೂರದಲ್ಲಿ ಪುರ ಹೆಸರಿನ ಗ್ರಾಮವಿದೆ. ಪುರಗ್ರಾಮದ ನಾಗಣ್ಣ ನೆರೆಯ ಅಮರಗುಂಡದ (ಗುಬ್ಬಿ) ಮಲ್ಲಿಕಾರ್ಜುನನ ಭಕ್ತನಾಗಿರಬೇಕು.

ಅಮರಗುಂಡದ ಮಲ್ಲಿಕಾರ್ಜುನತಂದೆಯ ಮುದ್ರಿಕೆಯಲ್ಲಿ ಕಂಡುಬರುವ ಮಾಗುಡ ಎಂಬುದು ಅಮರಗುಂಡದ ಇನ್ನೊಂದು ಹೆಸರಾಗಿರುವಂತಿದೆ. ಇದು ನಿಜ ವಿದ್ದರೆ ಈ ಮಲ್ಲಿಕಾರ್ಜುನತಂದೆಯು ಅಮರಗುಂಡ(ಗುಬ್ಬಿ)ದವನೆಂದೂ ಇವನ ಆರಾಧ್ಯದೈವತ ಅಲ್ಲಿಯ ಮಲ್ಲಿಕಾರ್ಜುನನೆಂದೂ ಹೇಳಬೇಕಾಗುತ್ತದೆ.

### 3. ಅಗ್ಘವಣೆ ಹಂಪಯ್ಯ—ಅಗ್ಘವಣೆ ಹೊನ್ನಯ್ಯ

'ಹಂಸಪತಿ ಗರುಡಪತಿ...' ಎಂದು ಪ್ರಾರಂಭವಾಗಿ 'ಹಂಪೆಯ ವಿರುಪಯ್ಯ' ವೆಂಬ ಮುದ್ರಿಕೆಯಿಂದ ಮುಗಿಯುವ ಒಂದೇ ಒಂದು ವಚನ ಸಕಲಪುರಾತನರ ವಚನ ಕಟ್ಟಿನಲ್ಲಿ(ಗೊ) ಸಿಗುತ್ತದೆ. ಇದರ ಕರ್ತೃ ಅಗ್ಘವಣಿ ಹೊನ್ನಯ್ಯನೆಂದು ಕರ್ನಾಟಕ ವಿಶ್ವವಿದ್ಯಾಲಯದ ಸಕಲಪುರಾತನರ ವಚನಸಂಪುಟದಲ್ಲಿ ಸೂಚಿಸಲಾಗಿದೆ. ಆದರೆ ಮೂಲಹಸ್ತಪ್ರತಿಯಲ್ಲಿ ಅಗ್ಘವಣಿ ಹಂಪಯ್ಯನದೆಂಬ ಸೂಚನೆಯಿರುವುದರಿಂದ ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರದಲ್ಲಿ ಅಗ್ಘವಣಿ ಹಂಪಯ್ಯನ ಮುದ್ರಿಕೆ ಹಂಪೆಯ ವಿರುಪ ಎಂದು ಹೇಳಿರುವುದರಿಂದ ಇನ್ನುಮೇಲೆ ಇದನ್ನು ಅಗ್ಘವಣಿ ಹಂಪಯ್ಯನ ವಚನವೆಂದೇ ಇಟ್ಟುಕೊಳ್ಳಬೇಕು.

ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರದಲ್ಲಿ ಅಗ್ಘವಣಿ ಹೊನ್ನಯ್ಯನ ಮುದ್ರಿಕೆ 'ಪುಲಿಗೆರೆಯ ವರದ ಸೋಮನಾಥಾ' ಎಂದು ಹೇಳಲಾಗಿದೆ. ಆಧುನಿಕ ವಿದ್ವಾಂಸರಲ್ಲಿ ಕೆಲವರು ಈ ಮುದ್ರಿಕೆ ಪುಲಿಗೆರೆಯ ಸೋಮಯ್ಯನದೆಂದು ಹೇಳಿದರೆ,

ಇನ್ನು ಕೆಲವರು ಈ ಮುದ್ರಿಕೆ ಯಾರದೆಂಬ ವಿಷಯದಲ್ಲಿ ಪ್ರಶ್ನೆ ಚಿಹ್ನೆ ಇಡುತ್ತ ಬಂದಿದ್ದಾರೆ. ಆದರೆ ಮೇಲೆ ಹೇಳಿದಂತೆ ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರವನ್ನಾಧರಿಸಿ ಇನ್ನುಮುಂದೆ 'ಪುಲಿಗೆರೆಯ ವರದ ಸೋಮನಾಥಾ' ಎಂಬುದು ಅಗ್ಘವಣಿ ಹೊನ್ನಯ್ಯನ ಮುದ್ರಿಕೆಯೆಂದು ಭಾವಿಸಬೇಕು.

ಒಟ್ಟಿನಲ್ಲಿ ಅಗ್ಘವಣಿ ಹಂಪಯ್ಯನ ಮುದ್ರಿಕೆ 'ಹಂಪೆಯ ವಿರೂಪ', ಅಗ್ಘವಣಿ ಹೊನ್ನಯ್ಯನ ಮುದ್ರಿಕೆ 'ಪುಲಿಗೆರೆಯ ವರದ ಸೋಮನಾಥಾ' ಎಂದು ಇಟ್ಟುಕೊಳ್ಳಬೇಕಾಗುತ್ತದೆ.

## 4. ನಾಚಯ್ಯ—ದಶಗಣ ಸಿಂಗಿದೇವ

ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿದ ಸಕಲಪುರಾತನರ ವಚನಗಳು (ಸಂಪುಟ-3) ಕೃತಿಯಲ್ಲಿ 'ನಾಚಯ್ಯಪ್ರಿಯ ಮಲ್ಲಿನಾಥಾ' ಮುದ್ರಿಕೆಯ

1. ಹೆಂಡಿರೆನ್ನದೆ ಮಕ್ಕಳೆನ್ನದೆ......
2. ಸತಿಸುತ ಮಾತಾಪಿತರಿಗೆಂದು......
3. ಪೂರ್ವಕರ್ಮವ ಕೆಡಿಸಿದನೆನ್ನ ಗುರು......
4. ಮುಂಚಿದೆವಯ್ಯಾ ಪರಬ್ರಹ್ಮವ......

ಎಂಬ ನಾಲ್ಕು ವಚನಗಳು ಒಮ್ಮೆ ನಾಚಯ್ಯನ ಹೆಸರಿನ ಕೆಳಗೆ ಇನ್ನೊಮ್ಮೆ ದಶಗಣ ಸಿಂಗಿ ದೇವನ ಹೆಸರಿನ ಕೆಳಗೆ ಇದೇ ಅನುಕ್ರಮದಲ್ಲಿ ಕಂಡುಬರುತ್ತವೆ.[1] ಮೂಲ ಹಸ್ತಪ್ರತಿಯಲ್ಲಿಯೇ ಒಮ್ಮೆ ಒಬ್ಬನ ಹೆಸರಿನಲ್ಲಿ, ಮತ್ತೊಮ್ಮೆ ಇನ್ನೊಬ್ಬನ ಹೆಸರಿನಲ್ಲಿ ಈ ವಚನಗಳು ಸಿಗುವುದೇ ಈ ರೀತಿ ಪ್ರಕಟಿಸಲು ಕಾರಣವಾಗಿದೆ. ಹೀಗಾಗಿ ಇವುಗಳ ಕರ್ತೃ ನಾಚಯ್ಯನೇ ? ದಶಗುಣ ಸಿಂಗಿದೇವನೆ ? ಎಂಬುದು ಬಿಡಿಸಬೇಕಾದ ಪ್ರಶ್ನೆಯೆನ್ನಿಸಿದೆ.

ವೀರಶೈವ 'ದಶಗಣ' ವರ್ಗಕ್ಕೆ ಸೇರಿದವ ದಶಗಣ ಸಿಂಗಿದೇವ. ಇವನ ಗುರು ಮಾರುಡುಗೆ ನಾಚಯ್ಯ. ಈ ನಾಚಯ್ಯನ ಆರಾಧ್ಯದೈವತ ಮಲ್ಲಿನಾಥ. ಶರಣರು ತಮ್ಮ ಹೆಸರು ಮತ್ತು ತಮ್ಮ ದೈವತದ ಹೆಸರುಗಳ ನಡುವೆ 'ಪ್ರಿಯ'ಶಬ್ದ ಸೇರಿಸಿ ಮುದ್ರಿಕೆ ರೂಪಿಸಿಕೊಳ್ಳುವ ಪದ್ಧತಿ ಕಂಡುಬರುವುದರಿಂದ 'ನಾಚಯ್ಯಪ್ರಿಯ ಮಲ್ಲಿನಾಥಾ' ಎಂಬುದು ಮಾರುಡಿಗೆ ನಾಚಯ್ಯನದೆಂದೂ ಈ ಕಾರಣದಿಂದಾಗಿ ಮೇಲಿನ ನಾಲ್ಕೂ ವಚನಗಳು ಅವನವೆಂದೂ ಹೇಳಬಹುದಾಗಿದೆ.

---

1. ಸಕಲಪುರಾತಪುರ ವಚನಕಟ್ಟುಗಳ (ಕೋ) ಒಂದೆರಡು ಪ್ರತಿಗಳಲ್ಲಿ ಇವು ಉಳಿಯುಮೋಶ್ವರ ಚಿಕ್ಕಯ್ಯನ ವಚನಗಳೆಂದು ತಪ್ಪಾಗಿ ಸೂಚಿಸಲಾಗಿದೆ.

ಈ ಸಂದರ್ಭದಲ್ಲಿ ಒಂದು ಸಂದೇಹ ಉದ್ಭವಿಸುತ್ತದೆ ; ಬಹುರೂಪಿ ಚೌಡಯ್ಯನ ಮುದ್ರಿಕೆ 'ಚೌಡಯ್ಯಪ್ರಿಯ ನಾಗಿನಾಥಾ' ಎಂದು ಇಲ್ಲ, 'ರೇಕಣ್ಣಪ್ರಿಯ ನಾಗಿನಾಥಾ' ಎಂದು ಇದೆ. ಚೌಡಯ್ಯನ ಗುರು ರೇಕನಾಥಾಚಾರ್ಯ (ಭೈ. ಕಾ. ಕ. ಸೂ. ರತ್ನಾಕರ). ತನ್ನ ಗುರುವಿಗೆ ಪ್ರಿಯನಾದ ದೇವತೆ ಎಂಬ ಅರ್ಥದಲ್ಲೇ ಇವನು 'ರೇಕಣ್ಣಪ್ರಿಯ ನಾಗಿನಾಥಾ' ಎಂಬ ಅಂಕಿತ ಇಟ್ಟುಕೊಂಡಿದ್ದಾನೆ. ಇದೇ ರೀತಿ ದಶಗಣ ಸಿಂಗಿದೇವನು ತನ್ನ ಗುರು ನಾಚಯ್ಯನಿಗೆ ಪ್ರಿಯನಾದ ಮಲ್ಲಿನಾಥ ಎಂಬ ಅರ್ಥದಲ್ಲಿ 'ನಾಚಯ್ಯಪ್ರಿಯ ಮಲ್ಲಿನಾಥಾ' ಎಂಬ ಮುದ್ರಿಕೆ ಇಟ್ಟುಕೊಂಡಿರಬಾರದೇಕೆ ? ಎಂಬ ಸಂದೇಹ ತಲೆದೋರುತ್ತದೆ. ಇದು ನಿಜವಿದ್ದರೆ ಮೇಲಿನ ನಾಲ್ಕು ವಚನಗಳ ಕರ್ತೃ ಗುರು ಮಾರುಡುಗೆ ನಾಚಯ್ಯನಲ್ಲ, ಶಿಷ್ಯ ದಶಗಣ ಸಿಂಗಿದೇವನೆಂದು ಹೇಳಲು ಮನಸ್ಸಾಗುತ್ತದೆ.

ಇಂಥ ಸಂದರ್ಭದಲ್ಲಿ ಹಸ್ತಪ್ರತಿಗಳನ್ನೇ ವಿವರವಾಗಿ ಪರೀಕ್ಷಿಸುವುದು ಸೂಕ್ತ. ಸಕಲ ಪುರಾತನರ ವಚನಕಟ್ಟುಗಳಲ್ಲಿ(ಗೊ,ಬ) ತಪ್ಪದೆ ನಾಚಯ್ಯನ ಹೆಸರಿನಲ್ಲಿ ಈ ವಚನಗಳು ಸಿಗುತ್ತವೆ. ಗೊಗ್ಗವ್ವೆಯಿಂದ ಪ್ರಾರಂಭವಾಗುವ ಒಂದೆರೆಡು ಪ್ರತಿಗಳಲ್ಲಿ ಮಾತ್ರ (37, 40) ದಶಗಣ ಸಿಂಗಿದೇವನ ವಚನವೆಂಬ ಶೀರ್ಷಿಕೆಯಲ್ಲಿ ಸಿಗುತ್ತವೆ. ಹೀಗಾಗಿ ಇದು ಲಿಪಿಕಾರರ ಪ್ರಮಾದವೆಂದು ಭಾವಿಸಿ, ಈ ವಚನದ ಕರ್ತೃ ನಾಚಯ್ಯನೆಂದೇ ಇಟ್ಟುಕೊಳ್ಳುವುದು ಯೋಗ್ಯ.

ಹೀಗೆ ಸಮಸ್ಯೆಯನ್ನು ಬಗೆಹರಿಸಿಕೊಂಡ ಸಂದರ್ಭದಲ್ಲಿ ಶರಣಚಾರಿತ್ರ್ಯದ ವಚನಗಳು ಹೆಸರಿನ ಕೃತಿಯಲ್ಲಿ ಸಿಗುವ 'ತನುಉಡುಗಿ, ಮನಉಡುಗಿ....' ಎಂದು ಪ್ರಾರಂಭವಾಗಿ 'ಮಾರುಡುಗೆ ನಾಚೇಶ್ವರಾ' ಎಂದು ಕೊನೆಗೊಳ್ಳುವ, 'ಅರ್ಥಾಸನ ವ್ಯರ್ಥಾಸನ...' ಎಂದು ಪ್ರಾರಂಭವಾಗಿ 'ನಾಚೇಶ್ವರಾ' ಎಂದು ಮುಕ್ತಾಯಗೊಳ್ಳುವ ಈ ವಚನಗಳು ಮೇಲಿನ ನಮ್ಮ ನಿರ್ಣಯಕ್ಕೆ ಅಡ್ಡಬರುತ್ತವೆ. ಆದರೆ ಸಕಲ ಪುರಾತನರ ವಚನಕಟ್ಟು ಈ ಶರಣಚಾರಿತ್ರ್ಯದ ವಚನಕಟ್ಟಿಗಿಂತ ಹೆಚ್ಚು ಅಧಿಕೃತವಾಗಿರುವುದರಿಂದ ಮೇಲೆ ನಿರ್ಣಯಿಸಿದ ಮೇರೆಗೆ ಪ್ರಾರಂಭದಲ್ಲೇ ಪ್ರಸ್ತಾಪಿಸಿರುವ ನಾಲ್ಕು ವಚನಗಳು ನಾಚಯ್ಯನವೆಂದು ಇಟ್ಟುಕೊಳ್ಳಬಹುದು. ಶರಣಚಾರಿತ್ರ್ಯದ ವಚನಗಳು ಕೃತಿಯಲ್ಲಿ ಸಿಗುವ ವಚನಗಳ ಕರ್ತೃತ್ವ ಇತ್ಯಾದಿಗಳು ವಿಚಾರಣೀಯವೆಂದು ಭಾವಿಸಬಹುದು.

## 5. ಹಡಪದ ಅಪ್ಪಣ್ಣ—ಸಂಗಮೇಶ್ವರದ ಅಪ್ಪಣ್ಣ :

ಸಕಲಪುರಾತನರ ವಚನಕಟ್ಟಿನಲ್ಲಿ(ಗೊ) ಒಂದೆಡೆ ಹಡಪದ ಅಪ್ಪಣ್ಣನ ಹೆಸರಿನ ಕೆಳಗೆ, ಇನ್ನೊಂದೆಡೆ ಸಂಗಮೇಶ್ವರದ ಅಪ್ಪಣ್ಣನ ಹೆಸರಿನ ಕೆಳಗೆ ವಚನಗಳು ಕಂಡುಬರುವುದರಿಂದ ಇವರಿಬ್ಬರೂ ಭಿನ್ನರೆಂದು ಸ್ಪಷ್ಟವಾಗುತ್ತದೆ. ಸಂಗಮೇಶ್ವರದ ಅಪ್ಪಣ್ಣನ ವಚನಗಳಲ್ಲಿ ಸಂಸ್ಕೃತದ ಉದ್ಧರಣೆ ಅಧಿಕವಾಗಿದ್ದರೆ, ಹಡಪದ ಅಪ್ಪಣ್ಣನ ವಚನಗಳಲ್ಲಿ

ಬೆಡಗಿನ ಶೈಲಿ ಕೆಲವೊಮ್ಮೆ ಮಿಂಚುತ್ತದೆ. ಈ ವಿಭಿನ್ನ ಲಕ್ಷಣಗಳೂ ಇವರಿಬ್ಬರು ಭಿನ್ನರೆಂಬುದನ್ನು ಪೋಷಿಸುತ್ತವೆ. ಆದರೆ ಇವರ ಮುದ್ರಿಕೆಗಳ ವಿಷಯವಾಗಿ ಬಹು ಕಾಲದ ಹಿಂದೆಯೇ ಗೊಂದಲ ಉದ್ಭವಿಸಿದೆ.

ಸಕಲಪುರಾತನರ ವಚನಕಟ್ಟಿನಲ್ಲಿ ಸಂಗಮೇಶ್ವರದ ಅಪ್ಪಣ್ಣನ ಇಪ್ಪತ್ತು ವಚನಗಳಿದ್ದು, ಅವುಗಳ ಮುದ್ರಿಕೆ 'ಬಸವಪ್ರಿಯ ಕೂಡಲ ಚೆನ್ನಸಂಗಮದೇವ' ಎಂದು ತಪ್ಪದೇ ಬರುವುದರಿಂದ ಇದು ಅವನ ಮುದ್ರಿಕೆಯೆಂದು ಒಪ್ಪಿಕೊಳ್ಳುವುದು ನ್ಯಾಯಸಮ್ಮತ. ನಿಜವಾದ ಸಮಸ್ಯೆ ಇರುವುದು ಹಡಪದ ಅಪ್ಪಣ್ಣನ ವಚನಗಳ ಮುದ್ರಿಕೆಯ ವಿಷಯವಾಗಿ.

ಸಕಲಪುರಾತನರ ವಚನಕಟ್ಟುಗಳಲ್ಲಿ ಹಡಪದ ಅಪ್ಪಣ್ಣನ ಹೆಸರಿನ ಕೆಳಗೆ 4 ವಚನಗಳ ಗುಂಪು, ಈ ನಾಲ್ಕೂ ಒಳಗೊಂಡ 6 ವಚನಗಳ ಗುಂಪು, ಈ ಆರೂ ಒಳಗೊಂಡ 15 ವಚನಗಳ ಗುಂಪು, ಈ ಯಾವ ವಚನಗಳನ್ನೂ ಒಳಗೊಳ್ಳದ 17 ವಚನಗಳ ಗುಂಪು ಈ ರೀತಿ ನಾಲ್ಕು ಕಡೆಗಳಲ್ಲಿ ಅವನ ವಚನಗಳು ಸಿಗುತ್ತವೆ. ಇವುಗಳಲ್ಲಿ 17 ವಚನಗಳ ಗುಂಪಿಗೆ 'ಹಡಪದ ಅಪ್ಪಣ್ಣಗಳು ನುಡಿದ ಬೊಲ್ಲೆಯ ವಚನ' ಎಂದು ನಿರ್ದೇಶಿಸಲಾಗಿದ್ದು ಇವುಗಳಿಗೆ ತಪ್ಪದೆ 'ಬಸವಪ್ರಿಯ ಕೂಡಲಚೆನ್ನಬಸವಣ್ಣ' ಎಂಬ ಮುದ್ರಿಕೆ ಬಳಸಲಾಗಿದೆ. ಇಲ್ಲಿ ಸಮಸ್ಯೆಯಿಲ್ಲ. ಮಿಕ್ಕ ಮೂರು ಕಡೆಗಳಲ್ಲಿ 6ರ ಗುಂಪಿಗೆ ಬಸವಪ್ರಿಯ ಕೂಡಲಸಂಗಮದೇವಾ, 15ರ ಮತ್ತು 4ರ ಗುಂಪುಗಳಿಗೆ ಬಸವಪ್ರಿಯ ಕೂಡಲಚೆನ್ನಸಂಗಮದೇವಾ' ಎಂಬ ಮುದ್ರಿಕೆಗಳು ಹೀಗೆ ಕಂಡು ಬರುತ್ತವೆ :

| | | 15 ವಚನ ಗುಂಪು | 6 ವಚನ ಗುಂಪು | 4 ವಚನ ಗುಂಪು |
|---|---|---|---|---|
| 1. | ಅಯ್ಯಾ ಹಳೆಯ ಹುತ್ತು | ಬ.ಪ್ರಿ.ಕೂ. ಚೆ.ಸಂ.ದೇ. | ಬ.ಪ್ರಿ.ಕೂ. ಸಂ.ದೇ. | ಬ.ಪ್ರಿ.ಕೂ. ಚೆ.ಸಂ.ದೇ. |
| 2. | ಅಯ್ಯಾ ಮರದೊಳಗಣ | " | " | " |
| 3. | ಅಯ್ಯಾ ಎನ್ನ ಹಲ್ಲಮರೆ | " | " | " |
| 4. | ನಾನೊಂದೂರಿಗೆ | " | " | " |
| 5. | ಲಿಂಗ ಮುಂತಾದ ಭಕ್ತ | " | " | — |
| 6. | ಹರನ ಕೈ ಕಪಾಲ | " | " | — |
| 7. | ಶಿವನ ಪ್ರಸಾದವಲ್ಲದೆ | " | — | — |
| 8. | ಕುಲಜರೆಂದು | " | — | — |
| 9. | ದ್ವಿಜರೊಮ್ಮೆ ಮರೆದು | " | — | — |

| | | | | |
|---|---|---|---|---|
| 10. | ದೈವವೆಸಿಸಿಕೊಂಬ | " | — | — |
| 11. | ಅಜನೆಂದು ಸಾರಿ | " | — | — |
| 12. | ಎನಗೆ ನಾನೇ ಹಗೆ | " | — | — |
| 13. | ದೇವಾ ನಿಮ್ಮ ಪರಿಹಾಸ | " | — | — |
| 14. | ಭಕ್ತರಿಗೆ ನೋಡಿ | " | — | — |
| 15. | ಎನ್ನ ತನು ನಿಮ್ಮ ಸೇವೆ | " | — | — |

ಇಲ್ಲಿ 6 ವಚನಗಳ ಗುಂಪು ಮಾತ್ರ ಮುದ್ರಿಕೆಯ ವಿಷಯವಾಗಿ ಪ್ರತ್ಯೇಕ ನಿಲ್ಲುತ್ತದೆ. ನಿಜವಾಗಿಯೂ ಇಲ್ಲಿ ಇರಬೇಕಾದುದು 'ಬಸವಪ್ರಿಯ ಕೂಡಲ ಚೆನ್ನ ಸಂಗಮದೇವಾ' ಎಂಬ ಮುದ್ರಿಕೆಯೇ ಎಂದು ನಾವು ಊಹಿಸಿದರೆ ಸಮಸ್ಯೆ ಮಾಯವಾಗಿ ಹಡಪದ ಅಪ್ಪಣ್ಣನ ಹದಿನೈದೂ ವಚನಗಳ ಮುದ್ರಿಕೆ 'ಬಸವಪ್ರಿಯ ಕೂಡಲ ಚೆನ್ನ ಸಂಗಮದೇವಾ' ಎಂಬುದೇ ಆಗಿದೆಯೆಂದು ಒಪ್ಪಬೇಕಾಗುತ್ತದೆ. ಶೂನ್ಯ ಸಂಪಾದನೆ ಮತ್ತು ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರಗಳಲ್ಲಿಯೂ ಹಡಪದ ಅಪ್ಪಣ್ಣನಿಗೆ ಇದೇ ಮುದ್ರಿಕೆಯನ್ನು ಆರೋಪಿಸಲಾಗಿದೆ.

ಒಟ್ಟಿನಲ್ಲಿ, ಹಡಪದ ಅಪ್ಪಣ್ಣನಿಗೆ ಎರಡು ಮುದ್ರಿಕೆಗಳಿದ್ದು, ಮೇಲೆ ಹೇಳಿದಂತೆ 17 ಬೊಲ್ಲೆಯ ವಚನಗಳಿಗೆ 'ಬಸವಪ್ರಿಯ ಕೂಡಲ ಚೆನ್ನಬಸವಣ್ಣ' 15 ವಚನಗಳಿಗೆ ಮತ್ತು ಮಿಕ್ಕ ವಚನಗಳಿಗೆ 'ಬಸವಪ್ರಿಯ ಕೂಡಲಚೆನ್ನಸಂಗಮದೇವಾ' ಎಂಬ ಮುದ್ರಿಕೆಗಳಿವೆಯೆಂದು ತಾತ್ಪೂರ್ತಿಕವಾಗಿ ಭಾವಿಸಬಹುದು. ಹೀಗಿದ್ದೂ ಬಸವಣ್ಣನಿಗೆ ಪ್ರಿಯನಾದವ ಕೂಡಲಸಂಗಮದೇವನೇ ಹೊರತು ಕೂಡಲ ಚೆನ್ನಸಂಗಮದೇವನಲ್ಲ ಎಂಬ ಸಂದೇಹ ಉಳಿದುಕೊಳ್ಳುತ್ತದೆ. ಸಂಗಮೇಶ್ವರದ ಅಪ್ಪಣ್ಣನದು 'ಬಸವಣ್ಣಪ್ರಿಯ ಕೂಡಲಚೆನ್ನಸಂಗಮದೇವಾ' ಎಂಬ ಮುದ್ರಿಕೆ ಇರುವುದರಿಂದ ಇಬ್ಬರಿಗೂ ಒಂದೇ ಬಗೆಯ ಮುದ್ರಿಕೆಯೇಕೆ ? ಎಂಬ ಇನ್ನೂ ಒಂದು ಸಂದೇಹ ಉಳಿದುಕೊಳ್ಳುತ್ತದೆ.

**6. ಸತ್ತಿಗೆ ಕಾಯಕದ ಮಾರಿತಂದೆ–ಸತ್ತಿಗೆ ಕಾಯಕದ ವಿಟ್ಟಪ್ಪಯ್ಯ :**

ಕರ್ನಾಟಕ ವಿಶ್ವವಿದ್ಯಾಲಯದ ಸಕಲಪುರಾತನರ ವಚನ (ಸಂಪುಟ – 3) ಕೃತಿಯಲ್ಲಿ ಸತ್ತಿಗೆ ಕಾಯಕದ ಮಾರಿತಂದೆ ಹೆಸರಿಗೆ ಕೆಳಗೆ 10 ವಚನಗಳಿವೆ. ಈ ವಚನಗಳ ಕರ್ತೃವಿನ ಹೆಸರಿನ ವಿಷಯವಾಗಿ ಸಂದೇಹವಿದೆ. ಏಕೆಂದರೆ ಕೆಲವು ಪ್ರತಿಗಳಲ್ಲಿ ಸತ್ತಿಗೆ ಕಾಯಕ (ಗೊ 613), ಸತ್ತಿಗೆ ಕಾಯಕದ (ಗೊ 693), ಸತ್ತಿಗೆ ಕಾಯಕದವರ (ಗೊ 40), ಸತ್ತಿಗೆ ಕಾಯಕದವರು (ಗೊ 37), ಸತ್ತಿಗೆ ಕಾಯಕದ ವಚನ (ಗೊ 76)

ಸತ್ತಿಗೆ ಕಾಯಕದವರ ವಚನ (ಕೋ 35, ಕೋ 300) ಎಂದು ವ್ಯಕ್ತಿ ನಾಮವಿಲ್ಲದೆ ಕಾಯಕನಾಮ ಸೂಚಿಸಿ 10 ವಚನಗಳನ್ನು ಅಡಕಗೊಳಿಸಲಾಗಿದೆ. ಬಹುಶಃ ಪ್ರಾಚೀನ ಲಿಪಿಕಾರರಿಗೆ ಈ ಹೆಸರಿನ ಬಗ್ಗೆ ಸಂದೇಹ ತಲೆದೋರಿದ ಕಾರಣ ಅದನ್ನು ಬಿಟ್ಟು ಕೇವಲ ಕಾಯಕವನ್ನು ಸೂಚಿಸುತ್ತ ಹೋಗಿರಬಹುದು. ಹಾಗಾದರೆ ಈ ವಚನಗಳ ಕರ್ತೃವಿನ ಹೆಸರೇನು ? ಎಂಬ ಪ್ರಶ್ನೆ ಎದುರಾಗುತ್ತದೆ.

ಹಸ್ತಪ್ರತಿಗಳಲ್ಲಿ ಕೆಲವೊಮ್ಮೆ ಈ ವಚನ ಕರ್ತೃವಿನ ಹೆಸರಿನ ವಿಷಯದಲ್ಲಿ ಪ್ರಧಾನವಾಗಿ ಎರಡು ಬಗೆಯ ಉಲ್ಲೇಖಗಳು ಸಿಗುತ್ತವೆ : 1. ಸತ್ತಿಗೆಯ ಕಾಯಕದ ಮಾರಿತಂದೆಯ ವಚನ (ಬ. 619). ಸತ್ತಿಗೆ ಕಾಯಕದ ಮಾರಯ್ಯನವರ ವಚನ (ಕೋ 82), 2. ಸತ್ತಿಕೆ ಪಿಟ್ಟಪೈಯ ವಚನ (ಕೋ 269). ಇಲ್ಲಿ ಒಮ್ಮೆ ಮಾರಿ ತಂದೆ ಎಂಬ ಹೆಸರು ಇನ್ನೊಮ್ಮೆ ಪಿಟ್ಟಪೈಯ ಎಂಬ ಹೆಸರು ಕಾಣಿಸಿಕೊಂಡುವುದಕ್ಕೆ ಹೀಗೆ ಸಮಾಧಾನ ಹೇಳಬಹುದು: ಮೂರು ಬಗೆಯ ಗೊ, ಕೋ, ಬ, ಸಕಲಪುರಾತನದ ವಚನ ಕಟ್ಟುಗಳಲ್ಲಿ ಕಂಬದ ಮಾರಿ ತಂದೆಯ ವಚನಗಳ ಬಳಿಕವೇ ಇವನ ವಚನಗಳು ಬರುತ್ತವೆ. ಬಹುಶಃ ಲಿಪಿಕಾರ ಮೇಲಿನ ಕಂಬದ ಮಾರಿತಂದೆ ಎಂಬಲ್ಲಿಯ ಮಾರಿ ತಂದೆ ಎಂಬುದನ್ನು ಕೆಳಗಿನ ವಚನಗಳಿಗೂ ಕೈ ತಪ್ಪಿ ಬಳಸಿ, ಸತ್ತಿಗೆಯ ಕಾಯಕದ ಮಾರಿತಂದೆಗಳ ವಚನ ಎಂದು ಬರೆದಿರಬೇಕು. ಆಮೇಲೆ ಅದು ಪ್ರತಿಯಿಂದ ಪ್ರತಿಗೆ ಸಾಗಿ ಬಂದಿರಬೇಕು. ಆದುದರಿಂದ ಇನ್ನು ಮೇಲೆ ಸತ್ತಿಗೆ ಕಾಯಕದ ಮಾರಿತಂದೆ ಎಂಬ ಹೆಸರನ್ನು ಕೈಬಿಟ್ಟು ಸತ್ತಿಗೆಯ ಕಾಯಕದ ಪಿಟ್ಟಪೈಯ ಎಂಬುದೇ ಇವನ ನಿಜನಾಮವೆಂದು ಇಟ್ಟುಕೊಳ್ಳಬಹುದಾಗಿದೆ. ಕೆಲವೆಡೆ ಇದು ವಿಟ್ಟಪ್ಪಯ್ಯ ಎಂದೂ ಸಿಗುತ್ತದೆ. (ಈ ಸಂದರ್ಭದಲ್ಲಿ ಕೋಲಶಾಂತಯ್ಯನಿಂದ ಪ್ರಾರಂಭವಾಗುವ ಸಕಲ ಪುರಾತನದ ವಚನ ಕಟ್ಟನ್ನು ಆಧರಿಸಿ ರೂಪಿಸುವ ಎಲ್ಲ ಪುರಾತನರ ಸ್ತೋತ್ರದ ವಚನ' (ತಾ. ಪ್ರ. 33) ಕೃತಿಯಲ್ಲಿ ಈ ವಚನಗಳ ತಲೆಯ ಮೇಲೆ 'ಸತ್ತಿಗೆಯ ಕಾಯಕದ ಶಂಕಣ್ಣಗಳ ವಚನ' ಎಂಬ ಸೂಚನೆಯಿದ್ದು, ಬಹುಶಃ ಇದು ದೋಷಪೂರ್ಣ ಬರವಣಿಗೆ ಯಾಗಿರಬಹುದು.

## 7. ಅನಾಮಿಕ ನಾಚಯ್ಯ – ವಿಜಯಪುರದ ಸೋಮಯ್ಯ :

'ಅನಾಮಿಕ ನಾಚಯ್ಯನ ವಚನ' ಹೆಸರಿಗೆ ಕೆಳಗೆ 'ಅನಾಮಿಕ ನಾಚಯ್ಯಪ್ರಿಯ ಚೆನ್ನರಾಮೇಶ್ವರ' ಮುದ್ರಿಕೆಯ ನಾಲ್ಕು ವಚನಗಳು ಸಕಲಪುರಾತನರ ವಚನಕಟ್ಟು ಗಳಲ್ಲಿ ಕಂಡು ಬರುತ್ತವೆ. ಮುದ್ರಿಕೆಯನ್ನು ಗಮನಿಸಿ ಪ್ರಾಚೀನ ಲಿಪಿಕಾರರು ಈ ವಚನಗಳ ಕರ್ತೃ ಅನಾಮಿಕ ನಾಚಯ್ಯನೆಂದು ಭಾವಿಸಿದರೆ ? ಅಥವಾ ನಾಚಯ್ಯನೇ ಇವುಗಳ ನಿಜಕರ್ತೃವಾಗಿರುವನೆ ? ಎಂಬ ಸಂದೇಹ ಮೂಡುತ್ತದೆ. ಈ ಸಂದರ್ಭದಲ್ಲಿ ಸಕಲಪುರಾತನರ ವಚನಕಟ್ಟನ್ನು (ಕೋ) ಆಧರಿಸಿ ರೂಪಗೊಂಡ 'ಎಲ್ಲ ಪುರಾತನರ

ಸ್ತೋತ್ರದ ವಚನಗಳು' ಕೃತಿ (ತಾ. ಪ್ರ 33) ಮೇಲಿನ ನಾಲ್ಕು ವಚನಗಳಲ್ಲಿ ಮೂರನ್ನು ಆಯ್ದುಕೊಂಡು, ಇವು ವಿಜಯಪುರ ಸೋಮಯ್ಯನ ವಚನವೆಂದು ಸೂಚಿಸಿದುದು ನಮ್ಮ ಗಮನ ಸೆಳೆಯುತ್ತದೆ. ಬಹುಶಃ ಅನಾಮಿಕ ನಾಚಯ್ಯನೆಂಬವನಿಗೆ ಪ್ರಿಯನಾದ ಚೆನ್ನರಾಮ ದೇವತೆಯನ್ನು ವಿಜಯಪುರದ ಸೋಮಯ್ಯನು ಮುದ್ರಿಕೆಯಾಗಿ ಇಟ್ಟು ಕೊಂಡಂತಿದೆ, ರೇಕಣ್ಣನಿಗೆ ಪ್ರಿಯನಾದ ನಾಗನಾಥನನ್ನು ಬಹುರೂಪಿ ಚೌಡಯ್ಯ ಮುದ್ರಿಕೆಯಾಗಿ ಇಟ್ಟುಕೊಂಡಂತೆ. ವಿದ್ವಾಂಸರು ಈ ವಿಷಯವನ್ನು ಸಮಾಲೋಚಿಸುವದು ಅಗತ್ಯವಿದೆ.ಹೆಸರೇ ಸೂಚಿಸುವಂತೆ ಅನಾಮಿಕ ನಾಚಯ್ಯನು ಶೂದ್ರನೆಂದು ಕಾಣುತ್ತದೆ.

## 8. ಏಲೇಶ್ವರಕೇತಯ್ಯ – ಅಕ್ಕಮ್ಮ :

ಕೋಲಶಾಂತಯ್ಯನ ವಚನಗಳಿಂದ ಬಸವಣ್ಣನ ವಚನಗಳಿಂದ ಪ್ರಾರಂಭವಾಗುವ ಸಕಲ ಪುರಾತನರ ವಚನ ಕಟ್ಟುಗಳಲ್ಲಿ 'ಏಲೇಶ್ವರಕೇತಯ್ಯನ ವಚನಗಳು' ಹೆಸರಿನ ಕೆಳಗೆ 'ಏಲೇಶ್ವರಲಿಂಗ' ಆಚಾರವೇ ಪ್ರಾಣವಾದ 'ರಾಮೇಶ್ವರಲಿಂಗ' ಹೀಗೆ ಎರಡು ಬಗೆಯ ಅಂಕಿತದ ವಚನಗಳು ಅಡಕವಾಗಿವೆ. ಒಂದಕ್ಕೊಂದು ಸಂಬಂಧವೇ ಇಲ್ಲದ ಈ ಎರಡು ಮುದ್ರಿಕೆಗಳು ಒಬ್ಬನ ಹೆಸರಿನಲ್ಲಿ ಸಿಗುವುದು ಸಹಜವಾಗಿಯೇ ಸಂದೇಹ ಹುಟ್ಟಿಸುತ್ತದೆ. ಈ ಸಂದರ್ಭದಲ್ಲಿ ಗೊಗ್ಗವ್ವೆಯ ವಚನಗಳಿಂದ ಪ್ರಾರಂಭವಾಗುವ ಸಕಲಪುರಾತನರ ವಚನಕಟ್ಟಿನಲ್ಲಿ ಅಕ್ಕಮ್ಮನ ಹೆಸರಿನ ಕೆಳಗೆ ಸಿಗುವ 'ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗ' ಎಂಬ ಅಂಕಿತದ ಮೂರು ವಚನಗಳು ಈ ಮುದ್ರಿಕೆ ಅಕ್ಕಮ್ಮನದೆಂದು ತಿಳಿಸಿಕೊಡುತ್ತವೆ.1 ಇದನ್ನು ಆಧಾರವಾಗಿಟುಕೊಂಡು ಮೇಲೆ ಹೇಳಿದ ಏಲೇಶ್ವರ ಕೇತಯ್ಯನ ಹೆಸರಿನ ಕೆಳಗೆ ಎರಡು ಬಗೆಯ ಮುದ್ರಿಕೆಗಳಲ್ಲಿ ಸಿಗುವ ವಚನಗಳಿಂದ 'ಆಚಾರವೇ ಪ್ರಾಣವಾದ ರಾಮೇಶ್ವರಲಿಂಗ' ಮುದ್ರಿಕೆಯ ವಚನಗಳನ್ನು ಬೇರ್ಪಡಿಸಿಕೊಂಡು, ಅವುಗಳನ್ನು ಡಾ. ಆರ್. ಸಿ. ಹಿರೇಮಠ ಅವರು 'ಅಕ್ಕಮ್ಮನ ವಚನಗಳು' ಕೃತಿಯಲ್ಲಿ ಸೇರಿಸಿಕೊಂಡುದು ಸರಿಯೆಂದು ತೋರುತ್ತದೆ. ಇದರಿಂದಾಗಿ ಏಲೇಶ್ವರ ಕೇತಯ್ಯನ ಹೆಸರಿನಲ್ಲಿ 74 ವಚನಗಳು ಅಕ್ಕಮ್ಮನ ಹೆಸರಿನಲ್ಲಿ 126 ವಚನಗಳು ಅವರ ಆವೃತ್ತಿಗಳಲ್ಲಿ ಸಂಗ್ರಹಗೊಂಡಿವೆ. ಆದರೆ 'ಶಸ್ತ್ರ ಸಮಾಧಿ, ....' ಎಂದು ಪ್ರಾರಂಭವಾಗಿ ಏಲೇಶ್ವರ ಲಿಂಗ' ಎಂದು ಮುಗಿಯುವ ವಚನ ಡಾ. ಹಿರೇಮಠರ ಅಕ್ಕಮ್ಮನ ವಚನಗಳು ಕೃತಿಯಲ್ಲಿ (ನಂ. 138) ಸೇರಿಕೊಂಡಿದೆ. ಇದನ್ನು ತೆಗೆದು ಏಲೇಶ್ವರ ಕೇತಯ್ಯನ ವಚನಗಳಲ್ಲಿ ಸೇರಿಸಬೇಕು.

ಇಷ್ಟೆಲ್ಲ ಚರ್ಚೆ ಮಾಡಿದರೂ ಕೋಲಶಾಂತಯ್ಯನ ವಚನದಿಂದ ಪ್ರಾರಂಭವಾಗುವ ಸಕಲಪುರಾತನರ ವಚನಕಟ್ಟಿನಲ್ಲಿ 'ಏಲೇಶ್ವರ ಕೇತಯ್ಯನ ವಚನಗಳು' ಎಂಬ

---

1. ಈ ಮೂರು ವಚನಗಳು ಸಕಲಪುರಾತನರ ವಚನಕಟ್ಟುಗಳಲ್ಲಿ (ಕೋ) ಏಲೇಶ್ವರ ಕೇತಯ್ಯನ ಹೆಸರಿನ ಕೆಳಗೂ ಸಿಗುತ್ತವೆ.

ಶೀರ್ಷಿಕೆಯ ಕೆಳಗೆ ಎರಡೂ ಮುದ್ರಿಕೆಯ ವಚನಗಳು ಏಕೆ ಸೇರಿದವು ? ಆಚಾರವೇ ಪ್ರಾಣವಾದ ರಾಮೇಶ್ವರಲಿಂಗ ಮುದ್ರಿಕೆಯಲ್ಲಿ ಅಕ್ಕಮ್ಮನ 126 ರಷ್ಟು ವಚನಗಳು ಸಿಗುತ್ತಿದ್ದರೂ ಸಕಲಪುರಾತನದ ಕಟ್ಟಿನಲ್ಲಿ ಮೂರೇ ವಚನಗಳನ್ನು ಏಕೆ ಆಯ್ದು ಕೊಂಡರು ? ಇವೇ ಮೊದಲಾದ ಪ್ರಶ್ನೆಗಳು ಉಳಿದುಕೊಳ್ಳುತ್ತವೆ.

## 9. ಏಕಾಂತರಾಮಯ್ಯ – ಏಕಾಂತರಾಮಯ್ಯನ ಪುಣ್ಯಸ್ತ್ರೀ :

ಗೊಗ್ಗವ್ವೆ, ಕೋಲಶಾಂತಯ್ಯಗಳಿಂದ ಪ್ರಾರಂಭವಾಗುವ ಸಕಲಪುರಾತನರ ವಚನಕಟ್ಟುಗಳಲ್ಲಿ ಏಕಾಂತರಾಮಯ್ಯನ ಒಟ್ಟು 6 ವಚನಗಳು ಸಿಗುತ್ತವೆ. ಇವನ ಮುದ್ರಿಕೆ 'ಎನ್ನಯ್ಯ ಚೆನ್ನರಾಮಾ'

ಷಟ್‌ಪ್ರಕಾರ ಸಂಗ್ರಹದಲ್ಲಿ 'ಮುನ್ನವೆ ಮುನ್ನವೆ ... ಎಂದು ಪ್ರಾರಂಭವಾಗುವ ವಚನ (ನಂ. 479) ಎನ್ನಯ್ಯ ಚೆನ್ನರಾಮ' ಎಂದು, 'ಶಿಲೆ ಹಲವು ತೆರೆದಲ್ಲಿ' ಎಂದು ಪ್ರಾರಂಭವಾಗುವ ವಚನ (ನಂ. 689) 'ಎನ್ನಯ್ಯಪ್ರಿಯ ಚೆನ್ನರಾಮ' ಎಂದು ಮುಗಿಯುತ್ತವೆ. ಇದನ್ನು ನೋಡಿ ಈ ಕೃತಿಯ ಸಂಪಾದಕರು ಮೊದಲಿನದು ಏಕಾಂತ ರಾಮಯ್ಯನ ವಚನವೆಂದೂ ಎರಡನೆಯದು ಅವನ ಪತ್ನಿ (?) ಯ ವಚನವೆಂದೂ ಪ್ರಶ್ನೆ ಚಿಹ್ನೆಯಿಂದ ಸೂಚಿಸಿದ್ದಾರೆ. ಆದರೆ 'ಶಿಲೆ ಹಲವು ತೆರೆದಲ್ಲಿ...' ಎಂದು ಪ್ರಾರಂಭವಾಗಿ 'ಎನ್ನಯ್ಯ ಚೆನ್ನರಾಮಾ' ಎಂದು ಮುಗಿಯುವ ವಚನವೊಂದು ಸಕಲ ಪುರಾತನರ ವಚನ (ಗೊ) ಕಟ್ಟಿನಲ್ಲಿ ಏಕಾಂತ ರಾಮಯ್ಯನ ಹೆಸರಿನಲ್ಲಿಯೇ ಸಿಗುವುದರಿಂದ ಷಟ್‌ಪ್ರಕಾರ ಸಂಗ್ರಹದ ಈ ವಚನದಲ್ಲಿ 'ಪ್ರಿಯ' ಎಂಬುದು ಪ್ರಮಾದವಶಾತ್ ಹೆಚ್ಚಿನದಾಗಿ ಸೇರಿಕೊಂಡಿದೆಯೆಂದು ಹೇಳಬೇಕಾಗುತ್ತದೆ. ಆಗ ಏಕಾಂತದ ರಾಮಯ್ಯನ ಹೆಂಡತಿ ಹೆಸರಿನಲ್ಲಿ ಷಟ್‌ಪ್ರಕಾರ ಸಂಗ್ರಹದ ಸಂಪಾದಕರು ಊಹಿಸಿದ ಇದೊಂದು ವಚನ ಈಗ ಏಕಾಂತ ರಾಮಯ್ಯನ ಹೆಸರಿನಲ್ಲಿಯೇ ಸೇರಿಕೊಳ್ಳುತ್ತದೆ. ಇದರಿಂದ ಏಕಾಂತದ ರಾಮಯ್ಯನ ಪುಣ್ಯಸ್ತ್ರೀ ವಚನ ಬರೆದಿಲ್ಲ' ಅಷ್ಟೇ ಅಲ್ಲ ಅವರಿಗೆ ಪುಣ್ಯಸ್ತ್ರೀ ಇದ್ದ ಬಗ್ಗೆ ಆಧಾರಗಳೇ ಇಲ್ಲವೆಂದು ಹೇಳಬೇಕಾಗುತ್ತದೆ.

ಭೈರವೇಶ್ವರಕಾವ್ಯದ ಕಥಾಮಣಿಸೂತ್ರ ರತ್ನಾಕರದಲ್ಲಿ ಏಕಾಂತ ರಾಮಯ್ಯನ ಮುದ್ರಿಕೆ 'ಎನ್ನಯ್ಯಪ್ರಿಯ ಚೆನ್ನರಾಮ' ಎಂದು ಹೇಳಿರುವದು ನಾವು ಈವರೆಗೆ ಚರ್ಚಿಸಿದ ವಿಷಯಕ್ಕೆ ವಿರುದ್ಧವಾಗಿ ನಿಲ್ಲುತ್ತದೆ. ಬಹುಶಃ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರಕಾರನು ತಪ್ಪು ಮುದ್ರಿಕೆಯನ್ನು ಗ್ರಹಿಸಿದಂತಿದೆ. ಇಲ್ಲವೆ ಏಕಾಂತದ ರಾಮಯ್ಯನಿಗೆ ಎರಡೂ ಮುದ್ರಿಕೆಗಳಿರುವ ಸಾಧ್ಯತೆಯಿದೆ.

## 10. ಕೊಟ್ಟಣದ ಸೋಮವ್ವೆ – ಸೂಳೆ ಸಂಕವ್ವೆ :

ಕೊಟ್ಟಣದ ಸೋಮವ್ವೆ, ಸೂಳೆ ಸಂಕವ್ವೆಯರ ಒಂದೊಂದು ವಚನ ಮಾತ್ರ

ಈವರೆಗೆ ಸಿಕ್ಕಿವೆ. ಎರಡರಲ್ಲಿಯೂ ಉತ್ತರಾರ್ಧದ ಪಾಠ ಒಂದೇ ಬಗೆಯಾಗಿದ್ದು, ಮುದ್ರಿಕೆಯೂ ಒಂದೇ ರೀತಿ ಅಂದರೆ 'ನಿರ್ಲಜ್ಜೇಶ್ವರಾ' ಎಂದೇ ಇದೆ :

ಹದ ತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿಯಲ್ಲ
ವ್ರತಹೀನನ ನೆರೆಯೆ ನರಕವಲ್ಲದೆ ಮುಕ್ತಿಯಿಲ್ಲ
ಅರಿಯದವರು ಹೋಗಲಿ, ಅರಿದು ಬೆರೆದೆನಾದಡೆ
ಕಾದ ಕತ್ತಿಯಲ್ಲಿ ಕಿವಿಯ ಕೊಯ್ಯುವರಯ್ಯಾ
ಒಲ್ಲೆ ಬಲ್ಲೆನಾಗಿ ನಿಮ್ಮಾಣೆ, ನಿರ್ಲಜ್ಜೇಶ್ವರಾ

(ಕೊಟ್ಟಣದ ಸೋಮವ್ವೆ)

ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೆ
ಹಿಡಿದಡೆ ಬತ್ತಲೆ ನಿಲಿಸಿ ಕೊಲುವರಯ್ಯಾ
ವ್ರತಹೀನನ ಅರಿದು ಬೆರೆದಡೆ
ಕಾದ ಕತ್ತಿಯಲ್ಲಿ ಕೈ, ಕಿವಿ, ಮೂಗ ಕೊಯ್ವರಯ್ಯ
ಒಲ್ಲೆನೊಲ್ಲೆ ಬಲ್ಲೆನಾಗಿ ನಿಮ್ಮಾಣೆ, ನಿರ್ಲಜ್ಜೇಶ್ವರಾ

(ಸೂಳೆ ಸಂಕವ್ವೆ)

ಇವುಗಳಲ್ಲಿ ಕೊಟ್ಟಣದ ಸೋಮವ್ವೆಯ ವಚನ ಸಕಲಪುರಾತನದ ವಚನಕಟ್ಟು, ಶೀಲ ಸಂಪಾದನೆಯ ವಚನಗಳು, ಜ್ಞಾನಷಟ್‌ಸ್ಥಲಸಾರ ಕೃತಿಗಳಲ್ಲಿ, ಸೂಳೆಸಂಕವ್ವೆಯ ವಚನ ಸಕಲಪುರಾತನರವಚನ ಕಟ್ಟು, ಶೀಲಸಂಪಾದನೆಯ ವಚನಗಳು ಕೃತಿಗಳಲ್ಲಿ ಪಾಠ ದೃಷ್ಟಿಯಿಂದ ಏನೂ ವ್ಯತ್ಯಾಸವಿಲ್ಲದೆ ಹೀಗೆಯೇ ಸಿಗುತ್ತವೆ. ಇಲ್ಲಿಯು ಶೀಲ ಸಂಪಾದನೆಯ ವಚನಗಳು ಕೃತಿಗೆ ಸಕಲಪುರಾತನದ ವಚನಕಟ್ಟು ಆಧಾರವಾಗಿದೆ. ಬಹುಶಃ ಜ್ಞಾನಷಟ್‌ಸ್ಥಲಸಾರಕ್ಕೂ ಸಕಲಪುರಾತನರ ವಚನಕಟ್ಟು ಆಕರವಾಗಿರಬಹುದು. ಆದುದರಿಂದ ಸಕಲ ಪುರಾತನದ ವಚನ ಕಟ್ಟುಗಳಷ್ಟು ಪೂರ್ವದಲ್ಲಿಯೇ ಮೇಲಿನ ವಚನಗಳು ಪರಸ್ಪರ ಬೆರೆತುಹೋಗಿವೆಯೆಂದು, ಇಲ್ಲವೆ ಈ ವಚನಗಳ ನಿಜಪಾಠವೇ ಈ ರೀತಿ ಇದೆಯೆಂದು ಭಾವಿಸಬೇಕಾಗುತ್ತದೆ. ಬಹುಶಃ ಬೆರೆತುಹೋಗಿರುವ ಸಾಧ್ಯತೆಯೇ ಅಧಿಕವಾಗಿರುವುದರಿಂದ ಇವುಗಳ ನಿಜಪಾಠದ ಬಗ್ಗೆ ಇಲ್ಲಿ ಚರ್ಚಿಸಬಹುದು.

'ನಿರ್ಲಜ್ಜೇಶ್ವರಾ' ಎಂಬುದು ಸೂಳೆವೃತ್ತಿಯ ಸಂಕವ್ವೆಗೆ ಒಪ್ಪುವ ಮುದ್ರಿಕೆಯಾಗಿದೆ. ಇವಳ ವಚನದ ಅರ್ಥವೂ ಮೊದಲ ಚರಣದಿಂದ ಕೊನೆಯ ಚರಣದವರೆಗೂ ಇವಳ ವೃತ್ತಿಗನುಗುಣವಾಗಿ ಬಿಚ್ಚುತ್ತಹೋಗಿ ಪೂರ್ಣಗೊಳ್ಳುತ್ತದೆ. ಆದುದರಿಂದ ಮೇಲಿನ ಎರಡನೆಯ ವಚನ ಇಡಿಯಾಗಿ ಸೂಳೆ ಸಂಕವ್ವೆಯದೆಂದೂ ಮುದ್ರಿಕೆ 'ನಿರ್ಲಜ್ಜೇಶ್ವರಾ' ಎಂದೂ ಇಟ್ಟುಕೊಳ್ಳಬಹುದು.

ಹೀಗೆ ಒಪ್ಪಿಕೊಂಡಾಗ ಮಿಶ್ರ ಪಾಠಕ್ಕೆ ಗುರಿಯಾದುದು ಕೊಟ್ಟಣದ ಸೋಮವ್ವೆಯದೆಂದು ಹೇಳುವುದು ಅನಿವಾರ್ಯವಾಗುತ್ತದೆ. 'ನಿರ್ಲಜ್ಜೇಶ್ವರಾ' ಎಂಬುದು ಕೊಟ್ಟಣದ ಸೋಮವ್ವೆಗೆ ಒಪ್ಪುವ ಮುದ್ರಿಕೆಯಲ್ಲ. ಅವಳ ಮುದ್ರಿಕೆ ಬೇರೊಂದಿರಬಹುದು. ಲಿಪಿಕಾರನ ಅನವಧಾನದಿಂದಾಗಿ ಅವಳ ವಚನದ ಉತ್ತರಾರ್ಧ ದಲ್ಲಿ ಸೂಳೆಸಂಕವ್ವೆಯ ವಚನದ ಉತ್ತರಾರ್ಧ ಸೇರಿಕೊಂಡಂತಿದೆ. ಆದುದರಿಂದ ಸೋಮವ್ವೆಯ ವಚನದ ಪೂರ್ವಾರ್ಧದ

ಹದತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿಯಿಲ್ಲ
ವ್ರತಹೀನನ ನೆರೆಯೆ ನರಕವಲ್ಲದೆ ಮುಕ್ತಿಯಿಲ್ಲ
ಅರಿಯದವರು ಹೋಗಲಿ

ವರೆಗಿನ ವಚನಪಾಠ ಅವಳದಾಗಿರಬಹುದು. ಇಲ್ಲಿ ಬಳಸಲಾದ ಕುಟ್ಟುವ ರೂಪಕವೂ ಈ ಅಭಿಪ್ರಾಯವನ್ನು ಸೂಚಿಸುತ್ತದೆ. ಇಲ್ಲಿಂದ ಮುಂದೆ ಕಳೆದುಹೋಗಿರುವ ಇವಳ ವಚನದ ಉತ್ತರಾರ್ಧವನ್ನು ನಾವು ಶೋಧಿಸಬೇಕು. ಆಗ ಸಹಜವಾಗಿಯೇ ಕಣ್ಮರೆ ಯಾಗಿರುವ ಇವಳ ಮುದ್ರಿಕೆಯೂ ನಮಗೆ ಲಭ್ಯವಾಗುತ್ತದೆ.

## 11 ಅಮುಗಿದೇವಯ್ಯಗಳ ಪುಣ್ಯಸ್ತ್ರೀ – ರಾಯಸದ ಮಂಚಣ್ಣಗಳ ಪುಣ್ಯಸ್ತ್ರೀ ರಾಯಮ್ಮ

ಬಸವಣ್ಣನ ವಚನಗಳಿಂದ ಪ್ರಾರಂಭವಾಗುವ ಸಕಲಪುರಾತನದ ವಚನಕಟ್ಟಿನಲ್ಲಿ ಅಮುಗಿದೇವಯ್ಯಗಳ ಪುಣ್ಯಸ್ತ್ರೀ ಶೀರ್ಷಿಕೆಯ ಕೆಳಗೆ ಒಂದೇ ಒಂದು ವಚನ, ಗೊಗ್ಗವ್ವೆಯ ವಚನಗಳಿಂದ ಪ್ರಾರಂಭವಾಗುವ ಸಕಲ ಪುರಾತನರ ವಚನಕಟ್ಟಿನಲ್ಲಿ ರಾಯಸದ ಮಂಚಣ್ಣನ ಪುಣ್ಯಸ್ತ್ರೀ ರಾಯಮ್ಮ ಶೀರ್ಷಿಕೆಯ್ಮ ಕೆಳಗೆ ಒಂದೇ ಒಂದು ವಚನ ಹೀಗೆ ಸಿಗುತ್ತವೆ :

ಅಂಗಕ್ಕಾಚಾರ ಮನಕ್ಕೆ ಜ್ಞಾನ ಸಮರಸಾದ್ವೈತವಾದ ಮತ್ತೆ
ಪುನರಪಿ ಪುನರ್ದೀಕ್ಷೆಯುಂಟೆ ?
ಗರುಡಿಯಲಿ ಕೋಲಲ್ಲದೆ ಕಾಳಗದಲ್ಲಿ ಉಂಟೆ ಕೋಲು ?
ಭವಿಗೆ ಮೋಲು ವ್ರತ ಪುನರ್ದೀಕ್ಷೆಯಲ್ಲದೆ ಭಕ್ತಗುಂಟೆ ?
ವ್ರತ ತಪ್ಪಿ ಅನುಗ್ರಹವಿಡಿದ ನರಕಿಗಳಿಗೆ ಮುಕ್ತಿಯಿಲ್ಲ ಎಂದೆ
ಅಮುಗೇಶ್ವರ ಲಿಂಗದಲ್ಲಿ.

(ಅಮುಗಿದೇವಯ್ಯಗಳ ಪುಣ್ಯಸ್ತ್ರೀಯ ವಚನ)

ಗರುಡಿಯಲ್ಲಿ ಕೋಲಲ್ಲದೆ ಕಾಳಗದಲ್ಲಿ ಕೋಲುಂಟೆ ?
ಭವಿಗೆ ಮೋಲುವ್ರತ ಪುನರ್ದೀಕ್ಷೆಯಲ್ಲದೆ ಭಕ್ತಗುಂಟೆ ?

ವ್ರತತಪ್ಪಲು ಶರೀರವಿಡಿದ ನರಕಿಗೆ ಮುಕ್ತಿಯಿಲ್ಲ
ಅಮುಗೇಶ್ವರ ಲಿಂಗದಲ್ಲಿ.
(ರಾಯಸದ ಮಂಚಣ್ಣಗಳ ಪುಣ್ಯಸ್ತ್ರೀ ರಾಯಮ್ಮಗಳ ವಚನ)

ಪರಸ್ಪರ ಹೋಲಿಕೆಯಿಂದ ಕೂಡಿರುವ ಇವುಗಳಲ್ಲಿ ಮೊದಲಿನದು ಸಕಲಪುರಾತನರ ವಚನ (ಬಿ), ಶರಣ ಚಾರಿತ್ರದ ವಚನ-ಹೀಗೆ ಎರಡು ಕೃತಿಗಳಲ್ಲಿ, ಎರಡನೆಯದು ಸಕಲಪುರಾತನರ ವಚನ (ಗೊ), ಶೀಲ ಸಂಪಾದನೆಯ ವಚನಗಳು ಜ್ಞಾನಷಟ್‌ಸ್ಥಲಸಾರ ಹೀಗೆ ಮೂರು ಕೃತಿಗಳಲ್ಲಿ ಸಿಗುತ್ತವೆ. ಇವೆಲ್ಲವುಗಳಿಗೆ ಮೂಲವಾದುದು ಸಕಲಪುರಾತನರ ವಚನಕಟ್ಟುಯೆಂಬುದರಲ್ಲಿ ಸಂದೇಹವಿಲ್ಲ. ಹೀಗಾಗಿ ಈ ಪಾಠವ್ಯತ್ಯಾಸ ಬಹು ಕಾಲದ ಹಿಂದೆಯೇ ಘಟಿಸಿದಂತೆ ತೋರುತ್ತದೆ. ಅಮುಗಿದೇವಯ್ಯನ ಪತ್ನಿಯ ಹೆಸರು ರಾಯಮ್ಮನೆಂದು ಅನ್ಯಮೂಲಗಳಿಂದ ತಿಳಿದು ಬರುತ್ತದೆ. ರಾಯಸದ ಮಂಚಣ್ಣಗಳ ಹೆಂಡತಿಯ ಹೆಸರು ರಾಯಮ್ಮನೆಂದು ಇಲ್ಲಿ ಹೇಳಲಾಗಿದೆ. ಹೆಸರಿನ ಈ ಸಾಮ್ಯತೆಯಿಂದಾಗಿ ಮೇಲಿನ ವಚನಗಳಲ್ಲಿ ಗೊಂದಲ ಸೃಷ್ಟಿಯಾದಂತಿದೆ.

ಸಾಮಾನ್ಯವಾಗಿ ಹೆಂಡತಿಯ ವಚನಮುದ್ರಿಕೆಯಲ್ಲಿ ಗಂಡನ ದೈವತ್ವದ ಸೂಚನೆಯಿರುತ್ತದೆ. ಈ ದೃಷ್ಟಿಯಿಂದ ನೋಡಿದರೆ ಅಮುಗಿದೇವಯ್ಯಗಳ 'ಸಿದ್ಧಸೋಮನಾಥ' ಎಂಬ ರಾಯಸದ ಮಂಚಣ್ಣಗಳ 'ಜಾಂಬೇಶ್ವರಾ' ಎಂಬ ಮುದ್ರಿಕೆಗಳು ಮೇಲಿನ ಗೊಂದಲವನ್ನು ಬಿಡಿಸುವಲ್ಲಿ ನೆರವಾಗುವುದಿಲ್ಲ. ಆದರೆ ಗಂಡನ ಹೆಸರಿನಲ್ಲಿಯ ಅಮುಗಿದೇವಯ್ಯ, ಹೆಂಡತಿಯ ಮುದ್ರಿಕೆಯಲ್ಲಿಯ ಅಮುಗೇಶ್ವರಲಿಂಗ-ಇವುಗಳ ಸಾಮ್ಯತೆಯ ಮೇಲೆ ಒತ್ತು ಕೊಟ್ಟು ನಾವು ಅಮುಗೇರಶ್ವಲಿಂಗ ಮುದ್ರಿಕೆಯ ಮೊದಲಿನ ವಚನ ಅಮುಗೆದೇವಯ್ಯಗಳ ಪುಣ್ಯಸ್ತ್ರೀಯದೆಂದು ಇಟ್ಟುಕೊಳ್ಳಬಹುದು. ಆಗ ರಾಯಸದ ಮಂಚಣ್ಣಗಳ ಪುಣ್ಯಸ್ತ್ರೀ ರಾಯಮ್ಮ ವಚನ ಬರೆದಿಲ್ಲವೆಂದೂ ಲಿಪಿಕಾರರು ಅಮುಗೆ ರಾಯಮ್ಮನ ವಚನವನ್ನೇ ಹೆಸರಿನ ಸಾಮ್ಯಭ್ರಾಂತಿಯಿಂದ ರಾಯಸದ ರಾಯಮ್ಮನ ತಲೆಗೆ ಕಟ್ಟಿರುವರೆಂದೂ, ಹೀಗೆ ಮಾಡುವಾಗ ಮೊದಲಿನ ಎರಡು ಸಾಲುಗಳು ಕಳಚಿ ಹೋಗಿವೆಯೆಂದೂ ಹೇಳಬಹುದಾಗಿದೆ.

ಅಮುಗೆರಾಯಮ್ಮನ ವಚನಕ್ಕೆ ಮೇಲೆ ಸೂಚಿಸಿದ ಎರಡು ಆಕರಗಳಲ್ಲದೆ 'ಅಮುಗೆರಾಯಮ್ಮನ ವಚನಗಳು' ಎಂಬ ಹೆಸರಿನ ಪ್ರತ್ಯೇಕ ಕಟ್ಟು ಸಿಗುತ್ತಿದ್ದು, ಈ ಮೂರೂ ಆಕರಗಳು ಇವಳಿಗೇ ಸಂಬಂಧಪಟ್ಟಿವೆಯೆಂದು ಇಟ್ಟುಕೊಳ್ಳಬಹುದು. ಹೀಗೆ ಇಟ್ಟುಕೊಂಡು ಡಾ. ಆರ್. ಸಿ. ಹಿರೇಮಠ ಅವರು ಈ ಮೂರೂ ಆಕರಗಳಿಂದ ವಚನಗಳನ್ನು ಸಂಗ್ರಹಿಸಿ, 'ಅಮುಗೆರಾಯಮ್ಮನ ವಚನಗಳು' ಹೆಸರಿನಲ್ಲಿ ಅಚ್ಚಿಸಿರುವುದು ಸೂಕ್ತವಾಗಿದೆಯೆಂದೂ ಸಕಲಪುರಾತನರ ವಚನಗಳು (ಸಂಪುಟ-3) ಕೃತಿಯಲ್ಲಿ

ಅಮುಗಿದೇವಯ್ಯಗಳ ಪುಣ್ಯಸ್ತ್ರೀ, ರಾಯಸದ ಮಂಚಣ್ಣಗಳ ಪುಣ್ಯಸ್ತ್ರೀ ರಾಯಮ್ಮನ ವಚನವೆಂದು ಪ್ರತ್ಯೇಕಿಸಿದುದು ಸೂಕ್ತವಲ್ಲವೆನಿಸುತ್ತದೆ.

ಹೀಗೆ ಶರಣರ ಮುದ್ರಿಕೆಗಳ ವಚನಗಳ ವಿಷಯವಾಗಿ ಸಕಲಪುರಾತನರ ವಚನಗಳ ಸಂಕಲನಕಾರರೂ, ಪ್ರಾಚೀನ ಲಿಪಿಕಾರರೂ, ಆಧುನಿಕ ಸಂಪಾದನಕಾರರೂ ಗೊಂದಲಗಳನ್ನು ಸೃಷ್ಟಿಸಿದ್ದಾರೆ. ಈ ಗೊಂದಲಗಳ ತಿಳುವಳಿಕೆಯಿಲ್ಲದೆ ಹೋದರೆ ಅಭ್ಯಾಸಿಗಳು ಖಂಡಿತ ತಪ್ಪುದಾರಿ ಹಿಡಿಯುತ್ತಾರೆ. ಒಟ್ಟು ಸಮಸ್ಯೆಗಳನ್ನು ಪ್ರಥಮ ಬಾರಿ ವಿದ್ವಾಂಸರ ಗಮನಕ್ಕೆ ಇಲ್ಲಿ ತರಲಾಗಿದ್ದು ಇವುಗಳ ಬಗ್ಗೆ ಹೆಚ್ಚಿನ ಶೋಧ ಅವಶ್ಯವಿದೆ.[1]



1. ಈ ಲೇಖನದಲ್ಲಿ ಸೂಚಿಸಲಾದ ಹಸ್ತಪ್ರತಿಗಳು ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಂಡಾರಕ್ಕೆ ಸಂಬಂಧಿಸಿದವುಗಳಾಗಿವೆ.

# ಭಕ್ತಿ ಮತ್ತು ಅನುಭಾವ ಸಾಹಿತ್ಯ ಚಳವಳಿಗಳು

---

ಡಾ॥ ಜಿ. ಎಸ್. ಶಿವರುದ್ರಪ್ಪ

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಎರಡನೆಯ ಮಹತ್ವದ ತಿರುವು ಕಾಣಿಸಿಕೊಂಡದ್ದು, ವೀರಶೈವ ಮತ್ತು ಹರಿದಾಸ ಚಳವಳಿಗಳ ಕಾರಣದಿಂದ. ಇವೆರಡಕ್ಕೂ ಮುಖ್ಯ ಪ್ರೇರಣೆ ಎಂದರೆ ಆನುಭಾವಿಕ ನೆಲೆಗಳೇ. ಈ ಚಳವಳಿ, ಪಂಪನ ನಂತರ ಸುಮಾರು ಎರಡು ಶತಮಾನಗಳ ಕಾಲ ಕನ್ನಡ ಸಾಹಿತ್ಯವನ್ನು ವ್ಯಾಪಿಸಿಕೊಂಡಿದ್ದ ಮಾರ್ಗಕಾವ್ಯ ಪದ್ಧತಿಯನ್ನು ಮುರಿದು ವಚನ, ರಗಳೆ, ಷಟ್ಪದಿ, ಕೀರ್ತನಗಳೆಂಬ ಹಲವು ದೇಸೀ ಪ್ರಧಾನವಾದ ರೂಪಗಳನ್ನು ಆವಿಷ್ಕಾರ ಮಾಡಿದ್ದು ಮಹತ್ವದ ಸಂಗತಿಯಾಗಿರುವಂತೆಯೆ, ಈ ಕಾಲದ ಸೃಜನಶೀಲತೆಗೂ ಸಾಕ್ಷಿಯಾಗಿದೆ. ಭಕ್ತರೂ, ಸಂತರೂ, ಅನುಭಾವಿಗಳೂ ತಮ್ಮ ಅಭಿವ್ಯಕ್ತಿಯ ಮೂಲಕ ಒಂದು ಹೊಸ ಸಾಮಾಜಿಕ, ಧಾರ್ಮಿಕ ಎಚ್ಚರವನ್ನು ಹುಟ್ಟಿಸಿದ್ದು ಈ ಚಳವಳಿಗಳ ಒಂದು ವಿಶೇಷತೆಯಾಗಿದೆ.

ಕನ್ನಡ ಸಾಹಿತ್ಯದ ಮೊದಲ ಹಂತದ ಜೈನಸಾಹಿತ್ಯ, ಹೇಗೆ ಭಾರತೀಯ ವೈದಿಕ ಪರಂಪರೆಗೆ ಒಂದು ಪ್ರತಿಕ್ರಿಯೆಯಾಗಿ ರೂಪುಗೊಂಡಿತೋ, ಹಾಗೆಯೇ ಎರಡನೆಯ ಹಂತದ ವೀರಶೈವ ಸಾಹಿತ್ಯವೂ, ಪರಂಪರಾಗತವಾದ ವೈದಿಕ ನಿಲುವಿಗೆ ತೋರಿದ ಪ್ರತಿಭಟನೆಯ ಪರಿಣಾಮವಾಗಿದೆ. ಮತ್ತು ಈ ಲಕ್ಷಣ ವಚನಕಾರರ ನಿಲುವುಗಳಲ್ಲಿ ಮೂರ್ತಗೊಂಡು, ಅನಂತರದ ಹರಿಹರ–ರಾಘವಾಂಕಾದಿ ಕವಿಗಳಲ್ಲಿ ಅನುರಣಿತವಾಗಿದೆ. ಈ ದೃಷ್ಟಿಯಿಂದ ನೋಡಿದರೆ, ಜೈನಸಾಹಿತ್ಯದ್ದು ವೈದಿಕ ಪರಂಪರೆಗೆ ತೋರಿದ ಪ್ರತಿಕ್ರಿಯೆಯಾದರೆ, ವೀರಶೈವ ಶರಣರ ವಚನ ಸಾಹಿತ್ಯ ಮತ್ತಿತರ ಅದೇ ಧರ್ಮದ ಕವಿಗಳ ಬರಹ ವೈದಿಕ ಪರಂಪರೆಗೆ ತೋರಿದ ಪ್ರತಿಭಟನೆಯಾಗಿದೆ. ಹೀಗೆ ಪ್ರತಿಭಟನೆಯನ್ನು ಕೇಂದ್ರವಾಗಿ ಉಳ್ಳ ಮೊತ್ತ ಮೊದಲ ಸಾಹಿತ್ಯ ಚಳವಳಿ ಎಂದರೆ ವಚನ ಚಳವಳಿಯೇ.

ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರ ವ್ಯಕ್ತಿ ಕೇಂದ್ರದಲ್ಲಿ ಸಂಘವಿಸಿದ ಈ ವಚನ ಚಳವಳಿ, ಅದುವರೆಗೆ ಭಾರತೀಯ ಪರಿಸರದಲ್ಲಿ ಮಾತ್ರವಲ್ಲ, ಇಡೀ ಜಾಗತಿಕ ಪರಿಸರದಲ್ಲಿಯೂ ನಡೆಯದಿದ್ದ ಒಂದು ಅಭೂತಪೂರ್ವ ಘಟನೆಯಾಗಿದೆ. ಶಿವಭಕ್ತಿಯ ನೆಲೆಯಲ್ಲಿ ನಡೆದ ಈ ಚಳವಳಿ ಮೂಲತಃ ಸಾಮಾಜಿಕ–ಧಾರ್ಮಿಕ ಸ್ವರೂಪದ್ದಾಗಿದ್ದು, ವೈದಿಕ ಧರ್ಮದ ಚಾತುರ್ವರ್ಣ್ಯ ಕಲ್ಪನೆಯಿಂದ ಕೂಡಿ ಜಡವಾದ ಸಾಮಾಜಿಕ ಅಸಮಾನತೆಗಳ ವಿರುದ್ಧವಾಗಿ ನಿಂತು, ಅದಕೆ ಪ್ರತಿಯಾಗಿ ಜಾತಿ–ವರ್ಗ–ಲಿಂಗಭೇದವಿಲ್ಲದ ಸಮಾನತಾ ಸಮಾಜವೊಂದನ್ನು ನೆಲೆಗೊಳಿಸುವ ಧರ್ಮವೊಂದನ್ನು ಸ್ಥಾಪಿಸುವ ಉದ್ದೇಶದ್ದಾಗಿತ್ತು. ಅದರ ಪರಿಣಾಮವಾಗಿ ರೂಪುಗೊಂಡದ್ದು ವೀರಶೈವ ಎಂಬ ಹೊಸ ಧರ್ಮ; ಮತ್ತು ಈ ಧರ್ಮದ ಸಂದರ್ಭದಲ್ಲಿ ಅದರಲ್ಲಿ ತೊಡಗಿಕೊಂಡವರು, ತಮ್ಮ ಅನುಭವಗಳಿಗೆ, ವಿಚಾರಗಳಿಗೆ ಹಾಗೂ ಕಾಣ್ಕೆಗಳಿಗೆ ನೀಡಿದ ಅಭಿವ್ಯಕ್ತಿಯೇ 'ವಚನ'. ಹೀಗೆ ವೀರಶೈವವೆಂಬ ಒಂದು ಸಾಮಾಜಿಕ–ಧಾರ್ಮಿಕ ಆಂದೋಳನದ ಸಂದರ್ಭದಲ್ಲಿ ಹುಟ್ಟಿಕೊಂಡದ್ದು ವಚನಗಳೆಂಬ ವಿಶಿಷ್ಟ ಅಭಿವ್ಯಕ್ತಿ ಪ್ರಕಾರ.

ಹನ್ನೆರಡನೆಯ ಶತಮಾನದಷ್ಟು ಹಿಂದೆ, ಒಂದು ಸಾಮಾಜಿಕ—ಧಾರ್ಮಿಕ ಚಳವಳಿಯ ಉಪಉತ್ಪನ್ನಗಳಾಗಿ ಕಾಣಿಸಿಕೊಂಡ 'ವಚನ'ಗಳನ್ನು ಇವತ್ತು ನಾವು, ಕನ್ನಡ ಸಾಹಿತ್ಯದ ಒಂದು ವಿಶಿಷ್ಟ ಪ್ರಕಾರವಾಗಿ ಗಣನೆಗೆ ತೆಗೆದುಕೊಂಡು, ಅವುಗಳಲ್ಲಿ ಅತ್ಯುತ್ತಮ ಸಾಹಿತ್ಯದ ಲಕ್ಷಣಗಳನ್ನು ಗುರುತಿಸುತ್ತೇವೆ. ಮತ್ತು ಈ ವಚನಗಳು ಹುಟ್ಟಿಕೊಂಡ ಸಂದರ್ಭವನ್ನು 'ವಚನ ಸಾಹಿತ್ಯ ಚಳವಳಿ' ಎಂದು ಕರೆಯುತ್ತೇವೆ. ಹಾಗೆಯೆ ವಚನಗಳ ಸಾಹಿತ್ಯಕ ಮೌಲ್ಯಗಳನ್ನು ಕುರಿತು ಚರ್ಚಿಸುತ್ತೇವೆ. ಆದರೆ, ಸಾಹಿತ್ಯ ಪರಂಪರೆಯ ಹಿನ್ನೆಲೆಯಲ್ಲಿ ವಚನಗಳನ್ನು ಇರಿಸಿ ಚರ್ಚಿಸುವ ಕ್ರಮ ಕೇವಲ ಆಧುನಿಕ ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ ಹುಟ್ಟಿಕೊಂಡದ್ದೇ ಹೊರತು ಇದಕ್ಕೆ ಹಿಂದಿನ ಕಾಲಮಾನಗಳಲ್ಲಿ ಎಂದೂ ವಚನಗಳನ್ನು ಸಾಹಿತ್ಯದ ಲೆಕ್ಕದಲ್ಲಿ ಎಣಿಸಿದ್ದೇ ಇಲ್ಲ ಎನ್ನುವುದು ಸ್ವಾರಸ್ಯದ ಸಂಗತಿಯಾಗಿದೆ. ಯಾಕೆಂದರೆ ವಚನಗಳನ್ನು ಸಾಹಿತ್ಯ ಕೃತಿಗಳೆಂದೂ, ವಚನಕಾರರನ್ನು ಕವಿ ಅಥವಾ ಸಾಹಿತಿಗಳೆಂದೂ ಭಾವಿಸಿದ, ಗುರುತಿಸಿದ ಹಾಗೂ ಸ್ಮರಿಸಿದ ಯಾವೊಂದೂ ಉಲ್ಲೇಖವೂ ಆಧುನಿಕ ಪೂರ್ವ ಸಾಹಿತ್ಯ ಪರಂಪರೆಯಲ್ಲಿ ಕಂಡು ಬರುವುದಿಲ್ಲ. ಅದರ ಬದಲು ವಚನಗಳನ್ನು 'ಶಾಸ್ತ್ರ'ಗಳೆಂದೂ, ಪವಿತ್ರವಾದ ಧಾರ್ಮಿಕ ಉಲ್ಲೇಖಗಳೆಂದೂ, ವಚನಕಾರರನ್ನು ಕೇವಲ ಶರಣರು, ಮಹಾನುಭಾವಿಗಳು, ದೈವಾಂಶಪುರುಷರು ಎಂದೂ ಭಾವಿಸಲಾಗಿದೆಯೆ ವಿನಾ, ಸಾಹಿತ್ಯ–ಸಾಹಿತಿ ಪರಿಭಾಷೆಗಳಲ್ಲಿ ಗ್ರಹಿಸಿದ ದಾಖಲೆಗಳೇ ಇಲ್ಲ. ಇದಕ್ಕಿಂತ ಮಿಗಿಲಾಗಿ ವಚನಗಳನ್ನು ಬರೆದವರು ಕೂಡಾ ತಾವೊಂದು ಸಾಹಿತ್ಯ ಪರಂಪರೆಯ ಸಂದರ್ಭದಲ್ಲಿ ಕೆಲಸ ಮಾಡುತ್ತಿದ್ದೇವೆ

ಎಂದಾಗಲೀ, ವಚನ ರಚನೆಯ ಮೂಲಕ ಕನ್ನಡ ಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆಗಳನ್ನು ನೀಡುತ್ತಿದ್ದೇವೆ ಎಂದಾಗಲೀ ಎಂದೂ ಭಾವಿಸಿರಲಿಲ್ಲವೆಂಬುದನ್ನು ನೆನೆದರೆ, ವಚನ ನಿರ್ಮಿತಿ ನಿಜವಾದ ಸಾಹಿತ್ಯೇತರ ನಿಲುವಿನಲ್ಲಿ ಹುಟ್ಟಿಕೊಂಡ ಒಂದು ವಿಶಿಷ್ಟ ಪ್ರಕಾರವಾಗಿದೆ ಎನ್ನುವುದು ಸ್ಪಷ್ಟವಾಗುತ್ತದೆ. ಆದರೆ, ಕನ್ನಡ ಭಾಷೆಯ ಸಂದರ್ಭದಲ್ಲಿ ರೂಪುಗೊಂಡ ಈ ವಚನಗಳು, ಅತ್ಯಪೂರ್ವವಾದ ರೀತಿಯ ಅಭಿವ್ಯಕ್ತಿ ಪ್ರಕಾರಗಳಾಗಿ ಕನ್ನಡ ಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆಗಳಾಗಿರುವುದಂತೂ ನಿಶ್ಚಯವಾದ ಸಂಗತಿಯಾಗಿದೆ. ಮತ್ತು ಈ ಬಗೆಯ ಅಭಿವ್ಯಕ್ತಿ ಕ್ರಮ ಆವರೆಗೂ ಕನ್ನಡ ಸಾಹಿತ್ಯ ಪರಂಪರೆಯಲ್ಲಿಯೆ ಇರಲಿಲ್ಲವೆಂಬುದು ಮಾತ್ರವಲ್ಲ, ಜಗತ್ತಿನ ಸಾಹಿತ್ಯದಲ್ಲಿಯೆ ಇವುಗಳನ್ನು ಹೋಲುವ ರೂಪಗಳು ತೀರಾ ವಿರಳ.

ವಚನಗಳೆಂಬ ವಿಶಿಷ್ಟ ಅಭಿವ್ಯಕ್ತಿಗೆ ಕಾರಣವಾದ ಈ ಚಳವಳಿ ಮೂಲತಃ ಒಂದು ಸಾಮೂಹಿಕ ವೈಚಾರಿಕ ಚಳವಳಿಯಾಗಿದೆ. ಅಂದಿನ ಸಮಾಜದ ವಿವಿಧ ಸ್ತರಗಳಿಂದ, ವಿವಿಧ ವೃತ್ತಿಗಳಲ್ಲಿ ನಿರತರಾದ ಸಾಮಾನ್ಯ ಜನರು, ಬಸವಣ್ಣನವರ ವ್ಯಕ್ತಿ ಕೇಂದ್ರದಲ್ಲಿ ಸಂಘಟಿತರಾಗಿ ತಮ್ಮ ಪರಿಸರವನ್ನು, ಪರಂಪರೆಯನ್ನು ಕುರಿತು ಪ್ರಶ್ನೆ ಮಾಡುತ್ತ ವೈಚಾರಿಕ ಸಂವಾದದಲ್ಲಿ ತೊಡಗಿದ್ದು ಈ ಚಳವಳಿಯ ವೈಶಿಷ್ಟ್ಯವಾಗಿದೆ. ಮತ್ತು ಈ ಬಗೆಯ ಚರ್ಚೆಯಲ್ಲಿ ತೊಡಗಲು, ವೇದಶಾಸ್ತ್ರಾದಿಗಳ ಪಾಂಡಿತ್ಯವಿರಬೇಕಾಗಿಲ್ಲ, ಶ್ರೇಷ್ಠವಾದ ಕುಲದಲ್ಲಿ ಹುಟ್ಟಿರಬೇಕಾಗಿಲ್ಲ, ಗಂಡೆನ್ನದೆ, ಹೆಣ್ಣೆನ್ನದೆ, ಕಲಿತವರೆನ್ನದೆ, ಕಲಿಯದವರೆನ್ನದೆ ಎಲ್ಲರೂ ಆತ್ಮಪ್ರತ್ಯಯವಿರುವ ಮತ್ತು ವಿಚಾರ ಮಾಡಲು ಸಮರ್ಥರಾದ ಯಾರು ಬೇಕಾದರೂ, ಇಲ್ಲಿ ಪಾಲುಗೊಳ್ಳಲು ಸಾಧ್ಯ ಎಂಬ ಧೈರ್ಯವೇ ಈ ಸಂಘಟನೆಯ ಜೀವಾಳವಾಗಿದೆ. ಇದರಿಂದಾಗಿ, ಈ ಜನ ಪರಂಪರಾಗತವಾಗಿತವಾದ ಈ ದೇಶದ ವೈಚಾರಿಕತೆಯನ್ನೂ ಮತ್ತು ಬದುಕನ್ನು ನಿಯಂತ್ರಿಸುತ್ತಿದ್ದ ವೇದ–ಶಾಸ್ತ್ರ–ಪುರಾಣ–ಆಗಮಗಳನ್ನು ನಿರಾಕರಿಸುವುದನ್ನು ಮೊದಲ ಹೆಜ್ಜೆಯನ್ನಾಗಿ ಕೈಕೊಂಡರು. ಯಾಕೆಂದರೆ ವೇದ–ಶಾಸ್ತ್ರ–ಪುರಾಣ–ಆಗಮಗಳೇ ಸಾಮಾಜಿಕ ತರ–ತಮಗಳನ್ನು ಸುಭದ್ರವಾಗಿ ಉಳಿಸುವ ಚಾತುರ್ವರ್ಣ್ಯವನ್ನು ಪ್ರತಿಪಾದಿಸುವ ಪ್ರಬಲ ಮಾಧ್ಯಮಗಳೆಂಬುದನ್ನು ಇವರು ಅನುಭವದಿಂದ ಕಂಡುಕೊಂಡವರಾಗಿದ್ದರು. ಹಾಗೆಯೇ ರಾಮಾಯಣ–ಮಹಾಭಾರತಗಳನ್ನು ಓದಿಕೊಳ್ಳುವುದೇ ವಿದ್ಯೆ ಎಂದು ಪರಿಗಣಿತವಾದ ಸಂದರ್ಭದಲ್ಲಿ ಮನುಷ್ಯನಾದವನು ಅವುಗಳನ್ನು ಓದಿಕೊಳ್ಳದೆಯೆ ವಿಚಾರವಂತನಾಗಿ ಬದುಕಲು ಸಾಧ್ಯ ಎಂಬ ನಿಲುವನ್ನೂ ಪ್ರತಿಪಾದಿಸಿದರು. ಹೀಗೆ ಈ ದೇಶದ ಮಹತ್ ಪರಂಪರೆ ಎಂದು ಯಾವುದನ್ನು ಕರೆಯುತ್ತಾರೋ, ಆ ವೇದ–ಶಾಸ್ತ್ರ–ಪುರಾಣಾಗಮ–ಮಹಾಕಾವ್ಯ ಪರಂಪರೆಯನ್ನೇ ವಚನಕಾರರು ನಿರಾಕರಿಸುವುದರ ಮೂಲಕ ವೈದಿಕ ಸಂಪ್ರದಾಯದ ಬಗ್ಗೆ ತಮ್ಮ ಪ್ರತಿಭಟನೆಯನ್ನು ದಾಖಲು ಮಾಡುತ್ತಾರೆ. ಮತ್ತು ಪ್ರಸ್ತುತ ಪ್ರತಿಭಟನೆ

ವಚನ ಸಾಹಿತ್ಯದ ಒಂದು ಮುಖ್ಯ ಧೋರಣೆ ಮಾತ್ರವಲ್ಲ, ಮುಂದಿನ ವೀರಶೈವ ಸಾಹಿತ್ಯದ ಪ್ರಧಾನ ನಿಲುವೂ ಆಗಿದೆ. ಈ ಕಾರಣದಿಂದ, ವೀರಶೈವ ಕವಿಗಳು ಯಾರೂ ರಾಮಾಯಣ ಮಹಾಭಾರತದಿಂದ, ಯಾವ 'ವಸ್ತು'ವನ್ನೂ ತೆಗೆದುಕೊಳ್ಳದೆ ಶಿವನನ್ನೂ, ಶಿವಭಕ್ತರನ್ನೂ ತಮ್ಮ ಕಾವ್ಯದ 'ವಸ್ತು'ಗಳನ್ನಾಗಿ ಮಾಡಿಕೊಂಡರು. ಮತ್ತು ಶಿವಭಕ್ತರನ್ನು ಕುರಿತ ನಿರ್ವಹಣೆಯಲ್ಲಿ, ಪ್ರಾಚೀನ ಅರವತ್ತು ಮೂವರು ಪುರಾತನರೂ, ಹಾಗೆಯೇ ಬಸವಾದಿ ಶಿವಶರಣರೂ ಕನ್ನಡ ಕಾವ್ಯದ ನಾಯಕರಾಗುತ್ತ, ಐತಿಹಾಸಿಕ–ಪೌರಾಣಿಕ ವೀರರ ಬದಲು ಈ ನೆಲದ ಸಾಮಾನ್ಯ ಜನರು, ಅಸಾಮಾನ್ಯ ರಾಗಿ ಬದುಕಿದ ಕಥೆಯನ್ನು ಕಟ್ಟಿಕೊಡುವ ಪರಂಪರೆಯೊಂದು ಪ್ರಾರಂಭವಾಯಿತು.

ವಚನ ಚಳವಳಿಯ ಮುಖ್ಯವಾದ ಧಾರ್ಮಿಕ ನಿಲುವೆಂದರೆ, ಅದು ವಾಸ್ತವ ಜೀವನವನ್ನು ಒಪ್ಪಿಕೊಂಡ ಒಂದು ಕ್ರಮ, ಅಧ್ಯಾತ್ಮ ಎನ್ನುವುದು ಸಂಸಾರಕ್ಕೆ ವಿರೋಧವಾದುದಲ್ಲ ; ಸನ್ಯಾಸವೆಂದರೆ ಈ ವಾಸ್ತವ ಬದುಕಿನಿಂದ ದೂರಸರಿದು ಕಾಡು–ಮೇಡುಗಳಿಗೆ ಹೋಗುವ ವಿಧಾನವಲ್ಲ ; ಹೆಣ್ಣು ಎಂಬುದು ತಪೋವಿಘ್ನಕಾರಿ ಯಾದ ಮಾಯೆ ಅಲ್ಲ ; ಈ ಜಗತ್ತು ಮಿಥ್ಯೆ ಅಲ್ಲ ; ಅದೂ ಸತ್ಯ. ಈ ಚಿಂತನೆಗಳು ವೈದಿಕ–ಬೌದ್ಧ–ಜೈನ ತತ್ವಗಳ ನಿಲುವಿಗೆ ತೋರಿದ ಪ್ರತಿಕ್ರಿಯೆಗಳಾಗಿವೆ. ಹಾಗೆಯೇ ಜೀವನ ಪ್ರೀತಿಯನ್ನೂ, ಆದರ್ಶವನ್ನೂ ಒಟ್ಟಿಗೇ ಹಿಡಿದುನೋಡುವ ದೃಷ್ಟಿಕೋನದ ಪರಿಣಾಮಗಳಾಗಿವೆ. ಸಂಸಾರವನ್ನೂ ಶಿವಯೋಗವನ್ನೂ ಹೊಂದಾಣಿಕೆಗೊಳಿಸುವ ಈ ನಿಲುವು, ಹೆಣ್ಣಿನ ವಿಚಾರಕ್ಕೆ ತಂದುಕೊಟ್ಟ ಗೌರವವು ಮಹತ್ವದ್ದಾಗಿದೆ. ಹಾಗೆಯೇ ಹೆಣ್ಣಿಗೆ, ಆಧ್ಯಾತ್ಮಿಕ ಸಮಾನತೆಯನ್ನೂ ವೈಚಾರಿಕ ಸ್ವಾತಂತ್ರ್ಯವನ್ನೂ ತಂದು ಕೊಡುವುದರ ಮೂಲಕ ವಚನ ಚಳವಳಿಯಲ್ಲಿ ಅವರೂ ಸಕ್ರಿಯವಾಗಿ ಪಾಲುಗೊಳ್ಳುವ ಅವಕಾಶ ಲಭಿಸಿದಂತಾಯಿತು. ಸುಮಾರು ಮೂವತ್ತಕ್ಕೂ ಮೀರಿದ ವಚನಕಾರ್ತಿಯರು ಈ ಸಂದರ್ಭಗಳಲ್ಲಿ ಕಾಣಿಸಿಕೊಂಡಿರುವುದಲ್ಲದೆ, ಅಕ್ಕಮಹಾದೇವಿ ಕನ್ನಡದ ಮೊದಲ ಹಾಗೂ ಮೊದಲ ದರ್ಜೆಯ ಕವಯಿತ್ರಿ ಯಾಗಿದ್ದಾಳೆ ಎನ್ನುವುದು ಈ ಚಳವಳಿಯ ಮಹತ್ವಕ್ಕೆ ಸಾಕ್ಷಿಯಾಗಿದೆ. ಈಗ ಪ್ರಸ್ತಾಪಿಸಿದ ಕೆಲವು ಸಂಗತಿಗಳು ವೀರಶೈವ ಕವಿಗಳ ಕಾವ್ಯ ನಿರ್ವಹಣೆಯಲ್ಲಿ ತಕ್ಕ ವಸ್ತು ಪ್ರತಿರೂಪಗಳ ಮೂಲಕ ಅಭಿವ್ಯಕ್ತಗೊಂಡಿವೆ. ಇದನ್ನು ಇನ್ನೂ ಸ್ಪಷ್ಟ ಪಡಿಸುವುದಾದರೆ, ಹರಿಹರನ ರಗಳೆಗಳ ಕಥಾನಾಯಕರೆಲ್ಲ ಬಹುತೇಕ ಸಂಸಾರಿಗಳೇ, ಅವರೆಲ್ಲ ಸಂಸಾರದಲ್ಲಿದ್ದುಕೊಂಡೇ ಶಿವಯೋಗವನ್ನು ಸಾಧಿಸಿದವರು. ಮತ್ತು ಅವರು ಯಾರೂ ಪರದ ಹೆಸರಿನಲ್ಲಿ ಇಹವನ್ನು ಕೀಳಾಗಿ ಕಂಡವರಲ್ಲ : ಹಾಗೆಯೇ ಅಕ್ಕಮಹಾದೇವಿ, ಸೋಮನಾಥ ಚರಿತೆಯ ಪದ್ಮಾವತಿ, ಹರಿಶ್ಚಂದ್ರ ಕಾವ್ಯದ ಚಂದ್ರಮತಿ, ಗಿರಿಜಾ ಕಲ್ಯಾಣದ ಗಿರಿಜೆ—ಇವರೆಲ್ಲರೂ ಆತ್ಮಪ್ರತ್ಯಯವುಳ್ಳ ಹಾಗೂ ಸ್ವತಂತ್ರ ವ್ಯಕ್ತಿತ್ವವುಳ್ಳ ಹೆಣ್ಣಿನ ಪ್ರತೀಕಗಳಾಗಿದ್ದಾರೆ.

ವರ್ಣ–ವರ್ಗಗಳ ತಾರತಮ್ಯವನ್ನು ಬಲವಾಗಿ ವಿರೋಧಿಸಿ, ಶಿವಭಕ್ತಿಯ ನೆಲೆಯಲ್ಲಿ ಎಲ್ಲರೂ ಸಮಾನರು—ಎಂಬ ನಿಲುವನ್ನು ಪ್ರತಿಪಾದಿಸಿದ್ದು ವಚನ ಚಳವಳಿಯ ಬಹು ಮುಖ್ಯವಾದ ಸಂಗತಿಯಾಗಿದೆ. 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರನೂ ಒಂದೇ ಎಂಬೆ' ಎನ್ನುವುದೇ ಇಲ್ಲಿನ ಧೋರಣೆ. ಶಿವಭಕ್ತನಾಗಿರುವುದು ಎಲ್ಲದಕ್ಕಿಂತ ಮಹತ್ವದ್ದು, ಅದೇ ಸಮಾನತೆಯ ಸೂತ್ರ, ಹೀಗೆ ಶಿವಭಕ್ತನಾಗಿ, ಶರಣಧರ್ಮವನ್ನು ಒಪ್ಪಿಕೊಳ್ಳುವ ಮೊದಲು ಅವನು ಇದ್ದ ಸಾಮಾಜಿಕ ನೆಲೆಯಾವುದು, ಅವನು ನಿರ್ವಹಿಸುತ್ತಿದ್ದ ವೃತ್ತಿ ಯಾವುದು ಎಂಬುದನ್ನು ಗಣನೆಗೆ ತೆಗೆದುಕೊಳ್ಳಬಾರದು. ಅವನವನು ಕೈಕೊಂಡ ವೃತ್ತಿಗಳನ್ನು ಆತ ಈ ಧರ್ಮಕ್ಕೆ ಸೇರಿದ ಕಾರಣದಿಂದ, ಆತ ಅವುಗಳನ್ನು ವರ್ಜಿಸಬೇಕೆಂದೇನೂ ಇಲ್ಲ ; ಯಾಕೆಂದರೆ ಆವೃತ್ತಿಗಳು ಸಮಾಜದ ಸಂಪತ್ತಿಗೆ ಅಗತ್ಯವಾದ ದುಡಿಮೆಗಳು ಮತ್ತು ಈ ವೃತ್ತಿಗಳು ಶರಣ ಧರ್ಮದ ಶಿವಾರ್ಪಿತ ಮನೋಭಾವದ ದುಡಿಮೆಗಳಾದ ಕಾರಣ ಅವುಗಳು 'ಕಾಯಕ'ಗಳೆಂದೂ ನಿರ್ದೇಶಿತವಾಗಿ ಸಮಾಜದ ಪ್ರತಿಯೊಬ್ಬನೂ ಕಾಯಕ ಮಾಡುತ್ತಲೇ ಬದುಕುವುದು ಅಗತ್ಯ ಎಂಬ ನಿಯಮವನ್ನು ಒಂದು ತತ್ವವೆಂದು ಅಂಗೀಕರಿಸಲಾಯಿತು. ಹಾಗೆಯೇ ಸಮಾಜದಲ್ಲಿ ಅವನವನ ಸ್ಥಾನಮಾನಗಳು ಅವನು ಕೈಗೊಂಡ ಕಾಯಕದ ಮೂಲಮಾನದಿಂದ ನಿಷ್ಕರ್ಷೆಗೊಳ್ಳತಕ್ಕವಲ್ಲ : ಅದರ ಬದಲು ಅವನು ಶಿವಭಕ್ತನಾಗಿರುವಿಕೆಯ ಮೂಲಮಾನದಿಂದ ಸಮಾನತೆಯ ನೆಲೆಯಲ್ಲಿ ಸ್ವೀಕೃತನಾಗಬೇಕು—ಎಂಬ ಧಾರ್ಮಿಕ ಸಮಾಜವೊಂದು ಪ್ರತಿಪಾದಿತವಾಗಿದೆ. ಈ ನಿಲುವುಗಳು ಮುಖ್ಯವಾಗಿ ರಾಘವಾಂಕನ ಸಿದ್ಧರಾಮಚರಿತ್ರೆ, ಹರಿಹರನ 'ಮಾದರ ಚೆನ್ನಯ್ಯನ ರಗಳೆ', 'ಬೇಡರ ಕಣ್ಣಪ್ಪನ ರಗಳೆ' 'ಸಾಮವೇದಿಗಳ ರಗಳೆ' ಇತ್ಯಾದಿಗಳಲ್ಲಿ ಬಹುಸೊಗಸಾಗಿ ವ್ಯಾಖ್ಯಾನಿತವಾಗಿವೆ.

ಭಕ್ತಿಪಂಥದ ಬಹುಮುಖ್ಯವಾದ ಲಕ್ಷಣವೆಂದರೆ ಲೌಕಿಕ ಅಧೀನತೆಗಳನ್ನು ನಿರಾಕರಿಸುವುದು ಮತ್ತು ಸಾಮಾಜಿಕವಾಗಿ ಸಮಾನತೆಯನ್ನು ಎತ್ತಿಹಿಡಿಯುವುದು. ಯಾವಾಗ ಒಬ್ಬ ವ್ಯಕ್ತಿ ಧರ್ಮಶ್ರದ್ಧೆಯ ನಿಲುವಿನಲ್ಲಿ ತನ್ನ ವ್ಯಕ್ತಿತ್ವವನ್ನು ತನ್ನ ಇಷ್ಟದೈವಕ್ಕೆ ಅರ್ಪಿಸಿಕೊಳ್ಳುತ್ತಾನೆಯೋ ಆಗ ಆತನಲ್ಲಿ ಹುಟ್ಟಿಕೊಳ್ಳುವ ಆತ್ಮಪ್ರತ್ಯಯ ಹಾಗೂ ಧೈರ್ಯ ವಿಶೇಷವಾದ ರೀತಿಯದು. ವಚನಕಾರರ ಕಾಲದ ನಿಲುವಿನಲ್ಲಿ ಈ ಬಗೆಯ ಧೈರ್ಯ ಸಾಮಾನ್ಯ ಜನದಲ್ಲಿ ಗಟ್ಟಿಗೊಂಡದ್ದು ಬಸವಣ್ಣನವರ ಭಕ್ತಿಪಂಥದ ಪರಿಣಾಮವಾಗಿದೆ. ಮೂಲಭೂತವಾಗಿ ಇದು ಪ್ರಭುತ್ವ ಅಥವಾ ರಾಜವಿರೋಧಿಯಾದ ನಿಲುವೊಂದನ್ನು ಎತ್ತಿ ಹಿಡಿಯುತ್ತದೆ. ಬಸವಣ್ಣನವರಿಗೆ ಪೂರ್ವದಲ್ಲಿಯೇ ಕೊಂಡಗುಳಿ ಕೇಶಿರಾಜನ ನಡವಳಿಕೆಯಲ್ಲಿ ಈ ನಿಲುವು ಪ್ರಕಟವಾಗಿದ್ದರೂ, ಬಸವಣ್ಣನವರ ಕಾಲದಲ್ಲಿ ಈ ಮನೋಧರ್ಮ ಒಂದು ಸಾರ್ವತ್ರಿಕ ಸ್ವರೂಪವನ್ನು ಪಡೆದಂತೆ ತೋರುತ್ತದೆ. ಸ್ವತಃ ಬಸವಣ್ಣನವರೇ ಚಕ್ರವರ್ತಿ ಬಿಜ್ಜಳನ ಕೈಕೆಳಗೆ ಕೆಲಸ ಮಾಡುವ ಅನಿವಾರ್ಯತೆಗೆ

ಒಳಗಾದರೂ, ಭಕ್ತರಾಗಿ ಅವರು ಗಳಿಸಿಕೊಂಡ ಅವರ ಸ್ವತಂತ್ರ ವ್ಯಕ್ತಿತ್ವ ಮಾನಸಿಕವಾಗಿ ಈ ರಾಜಸತ್ತೆಯನ್ನು ಪ್ರಬಲವಾಗಿ ವಿರೋಧಿಸಿದರೂ, ತಾವು ಕೈಗೊಂಡ ಸೇವಾವೃತ್ತಿ, ತಮ್ಮ ಸ್ವಂತಕ್ಕಲ್ಲ, ಸರ್ವಜನಹಿತಕ್ಕಾಗಿ ಎಂಬ ನೆಲೆಯಲ್ಲಿ ಅವರು ಸಮಾಧಾನಪಟ್ಟುಕೊಂಡ ಹಾಗೆ ಕಾಣುತ್ತದೆ. ಆದರೂ ಬಸವಣ್ಣನವರಲ್ಲಿ ಐಶ್ವಯದ ಬಗ್ಗೆ, ಅಧಿಕಾರದ ಬಗ್ಗೆ, ಹಾಗೂ ಸಂಪತ್ತಿನ ಬಗ್ಗೆ ಹೇವರಿಕೆಯ ಭಾವನೆಗಳಿರುವಂತೆಯೇ, ರಾಜಸತ್ತಗೆ ತಮ್ಮ ಅಧೀನತೆಯನ್ನು ನಿರಾಕರಿಸುವ ಧ್ವನಿಗಳೂ ಅವರ ಭಕ್ತಸ್ಥಲದ ನೆಲೆಯಲ್ಲಿ ಸಾಕಷ್ಟು ಸಶಕ್ತವಾಗಿಯೇ ಅಭಿವ್ಯಕ್ತಿಯನ್ನು ಪಡೆದುಕೊಂಡಿವೆ. ಸಾಹಿತ್ಯಕ ನೆಲೆಯಿಂದ ನೋಡುವುದಾದರೆ, 'ತಾಳಮಾನ ಸರಸವನರಿಯೆ, ಓಜೆ ಬಜಾವಣೆ ಲೆಕ್ಕವನರಿಯೆ, ಅಮೃತಗಣ ದೇವಗಣವನರಿಯೆ, ಕೂಡಲ ಸಂಗಮದೇವಾ ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ' ಎಂಬ ಅವರ ಘೋಷಣೆ ಬರವಣಿಗೆಯ ಸಿದ್ಧ ಸಂಪ್ರದಾಯಗಳ ಬಗೆಗೆ ಹೇಗೋ ಹಾಗೆಯೇ ಆ ಬರವಣಿಗೆಗಳು ಅದುವರೆಗೆ ಆಶ್ರಯ ಪಡೆದುಕೊಂಡ ವ್ಯವಸ್ಥೆಗಳ ಬಗೆಗೂ ತೋರಿದ ಪ್ರತಿಕ್ರಿಯೆಯಾಗಿವೆ. ಪರಂಪರಾಗತವಾದ ಕಾವ್ಯವಸ್ತುವಿನೊಂದಿಗೆ ತಮ್ಮ ಅಭಿವ್ಯಕ್ತಿಯನ್ನೂ ರಾಜ ಮಹಾರಾಜ ಹಾಗೂ ರಾಜಾಸ್ಥಾನಗಳ ಪಂಡಿತವರ್ಗದ ಅಭಿರುಚಿಗೆ ತಮ್ಮನ್ನೂ ಒಪ್ಪಿಸಿಕೊಂಡ ಕವಿಗಳನ್ನು ಕುರಿತ ಟೀಕೆಯಾಗಿಯೂ ಈ ಘೋಷಣೆ ಮೌಲಿಕವಾಗಿದೆ. ಹಾಗೆಯೇ ಕೂಡಲಸಂಗಮನಿಗಾಗಿ 'ಆನು ಒಲಿದಂತೆ ಹಾಡುವೆ' ಎಂಬುದು ವಚನ ಚಳವಳಿಯ ಬಹುಮುಖ್ಯವಾದ ಸಾಹಿತ್ಯಕ ನಿಲುವಾಗಿದೆ. ಮನುಜರ ಮೇಲೆ ಸಾವವರ ಮೇಲೆ ಇಂದ್ರ ಚಂದ್ರ ದೇವೇಂದ್ರನೆಂದು ಹೊಗಳಿ ನಾನು ಬರೆಯಲಾರೆ ಎಂಬ ಹರಿಹರನ ಮಾತಿನಲ್ಲಿ 'ಕಾವ್ಯಮಂ ಕೇಳ್ದು ಜನಬದುಕಬೇಕೆಂದು ಪೇಳ್ದನ್ ಅನಪೇಕ್ಷೆಯಿಂದೆ' ಎಂಬ ರಾಘವಾಂಕನ ಮಾತಿನಲ್ಲಿ ಈ ವಚನ ಚಳವಳಿಯ ಜನಪರ ಧೋರಣೆಗಳು ಅತ್ಯಂತ ಸ್ಪಷ್ಟವಾಗಿ ಮೂರ್ತಗೊಂಡಿವೆ.

ವಚನ ಚಳವಳಿ, ಒಂದು ಜನಪರ ಆಂದೋಲನವಾದದ್ದು, ಅದು ಜನಭಾಷೆಯಾದ ಕನ್ನಡವನ್ನು ತನ್ನ ವಿಚಾರದ ಮಾಧ್ಯಮವನ್ನಾಗಿ ರೂಢಿಸಿಕೊಂಡದ್ದರಿಂದ. ಹಿಂದೆಯೇ ಪ್ರಸ್ತಾಪಿಸಿದ ಹಾಗೆ ವಚನಕಾರರು ವೈದಿಕ ಸಂಪ್ರದಾಯವನ್ನು ನಿರಾಕರಿಸಿದಂತೆಯೆ ಆ ಸಂಪ್ರದಾಯದ ಭಾಷೆಯಾದ ಸಂಸ್ಕೃತವನ್ನೂ ನಿರಾಕರಿಸಿ ತಮ್ಮ ಅಂತರಂಗ ಅನುಭವಗಳಿಗೆ ಕನ್ನಡವನ್ನು ತಕ್ಕ ಮಾಧ್ಯಮವನ್ನಾಗಿ ದುಡಿಸಿಕೊಂಡರು. ಅದುವರೆಗೂ ಭಾರತದಲ್ಲಿ ಬುದ್ಧಿಯ ಭಾಷೆಯಾಗಿ ಸಂಸ್ಕೃತವು ಏನೇನನ್ನು ಸಾಧಿಸಿತೋ, ಅದನ್ನು ಕನ್ನಡವೂ ಸಾಧಿಸಲು ಸಾಧ್ಯ ಎಂಬುದನ್ನು ಪ್ರಾಯೋಗಿಕವಾಗಿ ಈ ಚಳವಳಿ ಮಾಡಿತೋರಿಸಿತು. ಕನ್ನಡವು ಗಹನವಾದ ಗೂಢವಾದ ಆಧ್ಯಾತ್ಮಿಕ ಅನುಭವಗಳನ್ನು ಅಭಿವ್ಯಕ್ತಪಡಿಸಲು ಸಮರ್ಥವಾದ ಭಾಷೆ ಎಂಬುದನ್ನು ಈ ಸಂದರ್ಭವು ಸಾಬೀತುಪಡಿಸಿತು. ಈ ಚಳವಳಿಯ ಮುಂದಾಳುಗಳಾದ ಬಸವ,

ಚೆನ್ನಬಸವ ಅಲ್ಲಮ ಮತ್ತು ಇನ್ನೂ ಕೆಲವರು ವೇದಶಾಸ್ತ್ರ ಆಗಮಗಳನ್ನು ಬಲ್ಲ ವಿದ್ವಾಂಸರಾಗಿದ್ದರೂ, ಅವರು ಉದ್ದೇಶಪೂರ್ವಕವಾಗಿ ಈ ಸಂಪ್ರದಾಯದ ಭಾಷೆಯನ್ನು ನಿರಾಕರಿಸಿ ಕನ್ನಡವನ್ನು ಈ ಸಂದರ್ಭದ ಸಂವಾದ ಭಾಷೆಯನ್ನಾಗಿ ರೂಢಿಸುವುದರ ಮೂಲಕ ಬಹು ಸಂಖ್ಯಾತ ಜನ ಸಮುದಾಯವನ್ನು ಈ ಚಳವಳಿಯೊಳಕ್ಕೆ ಸಂಗಡಿಸಿಕೊಂಡರು. ಈ ಕಾರಣದಿಂದಲೇ ಅನಕ್ಷರಸ್ಥ ಬಹುಜನ ಸಮುದಾಯವೊಂದು ಸಕ್ರಿಯವಾಗಿ ಈ ಚಳವಳಿಯ ಸಂದರ್ಭದಲ್ಲಿ ಧೈರ್ಯದಿಂದ ಮಾತನಾಡಲು ಸಾಧ್ಯವಾಯಿತು. ಮತ್ತು ಈ ವಚನ ಚಳವಳಿಯ ಸಂದರ್ಭದಲ್ಲಿ ಧೈರ್ಯದಿಂದ ಮಾತನಾಡಲು ಸಾಧ್ಯವಾಯಿತು. ಮತ್ತು ಈ ವಚನ ಚಳವಳಿಯ ಸಂದರ್ಭದಲ್ಲಿ ಧೈರ್ಯದಿಂದ ಕನ್ನಡ ಭಾಷೆ ತನ್ನೆಲ್ಲ ದೇಶೀಯ ಸತ್ವದಿಂದ, ಅನನ್ಯವಾದ ರೀತಿಯಲ್ಲಿ ಸೃಜನಾತ್ಮಕವಾಗಿ ಬಳಕೆಯಾಯಿತು. ಭರತ ಖಂಡದ ಇತಿಹಾಸದಲ್ಲಿ ಜನಭಾಷೆಯಾದ ಪಾಳಿಯನ್ನು ಮೊಟ್ಟ ಮೊದಲಿಗೆ ಭಗವಾನ್ ಬುದ್ಧನು ತನ್ನ ಧರ್ಮದ ಭಾಷೆಯನ್ನಾಗಿ ಬಳಸಿದ ನಂತರ, ಅದೇ ರೀಯಲ್ಲಿ ದೇಶಭಾಷೆಯಾದ ಕನ್ನಡ ಧರ್ಮದ ಭಾಷೆಯಾಗಿ ಬಳಕೆಯಾದದ್ದು ಬಸವಣ್ಣನವರ ಮುಂದಾಳುತನದಲ್ಲಿ ನಡೆದ ವಚನ ಚಳವಳಿಯ ಕಾಲದಲ್ಲಿಯೇ.

ಯಾವುದೇ ಎದ್ದು ಕಾಣುವ ಘೋಷಣೆಯಿಲ್ಲದೆ ನಿರಾಕರಿಸಿ, ಅಚ್ಚಗನ್ನಡದಲ್ಲಿ ತನ್ನ ಅಭಿವ್ಯಕ್ತಿಯನ್ನು ರೂಪಿಸಿಕೊಂಡ ವಚನ ಎಂಬ ಈ ಪ್ರಕಾರವು, ಪದ್ಯಗಂಧಿಯಾದ ಬಿಡಿ ಬಿಡಿ ಘಟಕಗಳ ಮೂಲಮಾಸದಲ್ಲಿ ಕಾಣಿಸುವ ಒಂದು ವ್ಯಕ್ತಿ ವಿಶಿಷ್ಟ ಅಭಿವ್ಯಕ್ತಿಯಾಗಿದೆ. ತನಗಿಂತ ಹಿಂದಿನ ಯಾವ ಸಾಹಿತ್ಯರೂಪವನ್ನೂ ಹೋಲದ, ಮತ್ತು ಮುಂದಿನ ರಗಳೆ–ಷಟ್ಪದಿ–ಸಾಂಗತ್ಯಾದಿ ರೂಪಗಳಿಂದ ಭಿನ್ನವಾದ 'ವಚನ' ಪ್ರಕಾರವು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಒಂದು ದ್ವೀಪ ಸಂಭವದಂತೆ ಕಾಣುತ್ತದೆ. ಪ್ರತಿಯೊಬ್ಬ ವಚನಕಾರನ ಅಂತರಂಗದ ಅನುಭವವಗಳನ್ನು, ಸುತ್ತಣ ಸಾಮಾಜಿಕ ಬದುಕಿಗೆ ಅವನು ತೋರಿದ ಪ್ರತಿಕ್ರಿಯೆಗಳನ್ನು ಬದುಕಿನ ಪರವಾದ ನಿಲುವುಗಳನ್ನು, ಅವನವನ ವ್ಯಕ್ತಿ ವಿಶಿಷ್ಟತೆಯನ್ನು ಸ್ಪಷ್ಟಪಡಿಸುವ 'ಅಂಕಿತ'ಗಳ ಸಹಿತ–ಹಿಡಿದು ಮೂಡಿಸುವ 'ವಚನಗಳೆಂಬ ಅಭಿವ್ಯಕ್ತಿ ಪ್ರಕಾರವು, ಕಾವ್ಯದ ಭಾಷೆಗೆ ಇರುವ ಎಲ್ಲ ಲಕ್ಷಣಗಳನ್ನೂ ಪಡೆದುಕೊಂಡು ಕನ್ನಡ ಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆಯಾಗಿದೆ. ಕಾವ್ಯದ ರಮ್ಯತೆ ಶಾಸ್ತ್ರದ ವೈಚಾರಿಕತೆ, ಅನುಭವಿಕ ಒಳನೋಟಗಳು—ಇತ್ಯಾದಿಗಳಿಂದ ಕೂಡಿದ ಈ ವಚನ ವಾಙ್ಮಯವು, ಮುಂದಿನ ವೀರಶೈವ ಕವಿಗಳ ಮೇಲೆಯೂ ಗಾಢವಾದ ಪ್ರಭಾವವನ್ನು ಬೀರಿರುವುದು ಮಾತ್ರವಲ್ಲ, ಭಕ್ತಿ ಚಳವಳಿಯ ಮುಂದಿನ ಹಂತವಾದ ಹರಿದಾಸ ಚಳವಳಿಯ ಮೇಲೆಯೂ ತಕ್ಕಷ್ಟು ಪ್ರಭಾವವನ್ನು ಬೀರಿದೆ ಎಂಬುದು ಗಮನಿಸಬೇಕಾದ ಸಂಗತಿಯಾಗಿದೆ.

ಕನ್ನಡ ಸಾಹಿತ್ಯ ಪರಂಪರೆಯ ಹಿಂದೆ ಬಹುಮುಖ್ಯವಾದ ಪ್ರೇರಣೆಗಳಾಗಿ

ಕೆಲಸಮಾಡಿರುವ ಧರ್ಮಗಳೆಂದರೆ ಜೈನಧರ್ಮ, ವೀರಶೈವ ಧರ್ಮ ಮತ್ತು ವೈಷ್ಣವ ಧರ್ಮಗಳು ಇವುಗಳಲ್ಲಿ ಮೊದಲ ಎರಡು ಇಡೀ ವೈದಿಕ ಧಾರ್ಮಿಕ ನಿಲುವುಗಳಿಗೆ, ಪ್ರತಿ ಭಟನೆಯನ್ನು ದಾಖಲುಮಾಡಿದ ಕಾರಣದಿಂದ, ಈ ಧರ್ಮದ ಪ್ರೇರಣೆಯಿಂದ ರೂಪು ಗೊಂಡ ಸಾಹಿತ್ಯವೂ ಮೂಲಭೂತವಾಗಿ ವೈದಿಕ ಪರಂಪರೆಯನ್ನು ನಿರಾಕರಿಸುತ್ತ, ಸಂಸ್ಕೃತ ಸಾಹಿತ್ಯ ಪರಂಪರೆಯಿಂದ ಭಿನ್ನವಾದ ಕಾವ್ಯಮಾರ್ಗಗಳನ್ನು ಕನ್ನಡದಲ್ಲಿ ರೂಢಿ ಸಿದವು. ಇನ್ನು ಮೂರನೆಯದಾದ ವೈಷ್ಣಧರ್ಮದ ವಿಚಾರಕ್ಕೆ ಬಂದರೆ, ಕನ್ನಡದಲ್ಲಿ ಈ ವೈಷ್ಣವ ಧರ್ಮವು, ಎರಡು ಬೇರೆ ಬೇರೆಯ ಕವಲುಗಳಲ್ಲಿ ಕಾಣಿಸಿಕೊಂಡಿದೆ. ಮೊದಲನೆಯದು ತಮಿಳುನಾಡಿನಿಂದ ಕನ್ನಡಕ್ಕೆ ಬಂದ ಶ್ರೀವೈಷ್ಣವ ಧರ್ಮ. ಇದರ ಪ್ರವರ್ತಕರು ಶ್ರೀರಾಮಾನುಜಾಚಾರ್ಯರು. ಎರಡನೆಯದು, ಭಾಗವತ ಪರಂಪರೆ ಯಿಂದ ಪ್ರಭಾವಿತವಾದ ಮತ್ತು ಮಧ್ವಾಚಾರ್ಯರ ದ್ವೈತಸಿದ್ಧಾಂತದಿಂದ ಹುಟ್ಟಿಕೊಂಡ ವೈಷ್ಣವಧರ್ಮ. ರಾಮಾನುಜರ ಶ್ರೀವೈಷ್ಣವ—ಧೋರಣೆಯಲ್ಲಿ ಮಧ್ವರದಕ್ಕಿಂತ ಉದಾರವಾದುದಾದರೂ, ಅದು ಕನ್ನಡ ಭಾಷೆಯನ್ನು ಬಳಸುವ ಬಗ್ಗೆ ಅಂತಹ ಆಸಕ್ತಿ ಯನ್ನು ತೋರಿಸದ ಕಾರಣದಿಂದ, ಅದು ಸಾಹಿತ್ಯಕವಾದ ಒಂದು ಪ್ರಭಾವವಾಗದೆ ಹೋಯಿತು. ಆದರೆ ಭಾಗವತ ಪಂಥದ ಪ್ರತಿನಿಧಿಯಾದ ಕುಮಾರವ್ಯಾಸ ಭಾರತ ಮತ್ತು ತದನಂತರ ಸಮೀಪ ಕಾಲದಲ್ಲಿ ಹುಟ್ಟಿಕೊಂಡ ಹರಿದಾಸಕೀರ್ತನ ಚಳವಳಿಗಳು ಮತ್ತೆ ಕನ್ನಡ ಸಾಹಿತ್ಯಕ್ಕೆ ಹೊಸ ತಿರುವನ್ನು ತಂದ ಪ್ರೇರಣೆಗಳಾಗಿವೆ.

ವಚನ ಚಳವಳಿಯಂತೆಯೇ ಹರಿದಾಸ ಚಳವಳಿಯೂ ಭಕ್ತಿಪಂಥದ ಒಂದು ಆವಿಷ್ಕಾರವಾಗಿದೆ. ಮೊದಲನೆಯದಕ್ಕೆ ಹರಭಕ್ತಿ ಪ್ರೇರಣೆಯಾದರೆ, ಎರಡನೆಯದಕ್ಕೆ ಹರಿಭಕ್ತಿ ಪ್ರೇರಣೆಯಾಗಿದೆ. ವಚನ ಚಳವಳಿ ಮೂಲಭೂತವಾಗಿ ವೈದಿಕ ಪರಂಪರೆಗೆ ತೋರಿದ ಪ್ರತಿಭಟನೆಯಾದರೆ, ಹರಿದಾಸ ಚಳವಳಿ, ವೈದಿಕ ಧರ್ಮದ ತಿರುಳಾದ ವರ್ಣಾಶ್ರಮ ಪದ್ಧತಿಯನ್ನು ಪರಿಶುದ್ಧವಾದ ವಿಷ್ಣುಭಕ್ತಿಯ ತಳಹದಿಯ ಮೇಲೆ ನಿಲ್ಲಿಸಿದ ಮಧ್ವಸಿದ್ಧಾಂತದ ಪ್ರತಿಪಾದನೆಯಾಗಿದೆ. ಹೀಗಾಗಿ ಇದು ವರ್ಣಾಶ್ರಮ ವ್ಯವಸ್ಥೆಯನ್ನು ಒಪ್ಪಿಕೊಂಡ, ಆದರೆ ಭಕ್ತಿಯ ಕಾರಣದಿಂದ ಸ್ವಲ್ಪ ಉದಾರವಾದ ನಿಲುವುಗಳನ್ನು ಎತ್ತಿಹಿಡಿಯುವ ಸ್ವರೂಪದ್ದಾಗಿದೆ. ಈ ಕಾರಣದಿಂದ ಈ ಚಳವಳಿ ಒಂದರ್ಥದಲ್ಲಿ ವೈದಿಕ ಪರಂಪರೆಯ ಸ್ವಲ್ಪ ಸುಧಾರಿತವಾದ ಮುಂದುವರಿಕೆ ಎನ್ನಬಹುದು. ಮತ್ತು ವಚನ ಚಳವಳಿಯಂತೆ, ವರ್ಣ–ವರ್ಗಗಳ ತರ ತಮಗಳನ್ನು ಕುರಿತು, ಮೂಲ ಭೂತವಾದ ಬದಲಾವಣೆಯನ್ನು ತರುವ ನಿಶಿತ ವೈಚಾರಿಕತೆಯನ್ನು ಒಳಗೊಂಡದ್ದಾಗಿ ರಲಿಲ್ಲ. ವಚನಕಾರರು, ವೇದೋಪನಿಷತ್ತು–ಪುರಾಣ ಮಹಾಕಾವ್ಯಗಳನ್ನು ನಿರಾಕರಿಸಿ ದರೆ, ಹರಿದಾಸ ಚಳವಳಿ, ವೇದೋಪನಿಷತ್ತುಗಳ ಸಾರವನ್ನು ಕನ್ನಡದಲ್ಲಿ ಎಲ್ಲರಿಗೂ ತಿಳಿಯುವಂತೆ ಹೇಳುವುದರಲ್ಲಿ ಮತ್ತು ಪುರಾಣ ಪ್ರಸಂಗಗಳನ್ನೆ ಭಗವಂತನ ಮಹಿಮೆ ಹಾಗೂ ಭಕ್ತ ವತ್ಸಲತೆಗಳ ಪ್ರತಿಪಾದನೆಯನ್ನು ಕೀರ್ತನೆಗಳಲ್ಲಿ ನಿರೂಪಿಸುವುದರಲ್ಲಿ

ಆಸಕ್ತಿಯನ್ನು ಪ್ರಕಟಿಸಿತು. ವಚನಕಾರರಂತೆ, ಸಮಾಜ ವಿಮರ್ಶೆಯನ್ನು, ಲೋಕ ವಿಡಂಬನೆಗಳನ್ನು, ಹರಿದಾಸ ಚಳವಳಿ ಕೈಕೊಂಡರೂ, ಅದು ಕೇವಲ ನೀತಿನಿಷ್ಠ ನಿಲುವಾಗಿದೆಯೇ ಹೊರತು, ಅದಕ್ಕಿಂತ ಹೆಚ್ಚೇನಲ್ಲ. ಆದರೆ ಶ್ರೀ ಹರಿಭಕ್ತಿಯನ್ನು ಅತ್ಯಂತ ಉತ್ಕಟವಾಗಿ, ಅನುಭವಿಸುತ್ತ ಅದನ್ನು ಸಕಲ ಜನಹಿತಕ್ಕಾಗಿ ಮನೆಮನೆಯ ಬಾಗಿಲಿಗೆ ತೆಗೆದುಕೊಂಡು ಹೋಗಬೇಕೆನ್ನುವ ಲೋಕಾನುಕಂಪ ಇಲ್ಲಿ ಅನನ್ಯವಾಗಿದೆ. ಹಾಗೆಯೇ ಕೀರ್ತನೆಗಳೆಂಬ ಹೊಸ ಗೇಯರೂಪದ ಪ್ರವಾಹವೊಂದು, ಈ ಚಳವಳಿಯ ಪರಿಣಾಮವಾಗಿದೆ. ಮೂಲತಃ ಹಾಡುಗಾರಿಕೆಗೇ ಅಳವಡುವ, ಹಾಡಿದಾಗ ಇನ್ನೂ ಹೆಚ್ಚು ಭಾವಪೂರ್ಣತೆಯಿಂದ ಸಂವಹನಗೊಳ್ಳುವ ಈ ಕೀರ್ತನೆಗಳು, ಸಾಹಿತ್ಯಕ್ಕಿಂತ ಸಂಗೀತಕ್ಕೇ ಮಹತ್ವದ ಕೊಡುಗೆಗಳಾಗಿವೆ. ಅಲ್ಲಿದೆ ಕೀರ್ತನಕಾರರಲ್ಲಿ ದೊಡ್ಡ ಹೆಸರಾಗಿರುವ ಪುರಂದರದಾಸರು ತೆಲುಗಿನ ಮಹಾ ವಾಗ್ಗೇಯಕಾರರಾದ ತ್ಯಾಗರಾಜರಿಗೆ ಸ್ಫೂರ್ತಿಯೂ ಪ್ರೇರಣೆಯೂ ಆಗಿ, ಕರ್ನಾಟಕ ಸಂಗೀತದ ಪಿತಾಮಹರಾಗಿದ್ದಾರೆ.

ವಚನಕಾರರಿಗೂ ಕೀರ್ತನಕಾರರಿಗೂ ಸಮಾನವಾದ ಒಂದು ಸಂಗತಿಯೆಂದರೆ ಕನ್ನಡಪರವಾದ ಒಲವು ಮತ್ತು ಆ ಮೂಲಕ ಪ್ರಕಟವಾಗುವ ಜನಪರ ನಿಲುವುಗಳು. ಕನ್ನಡವನ್ನು ಮೊತ್ತಮೊದಲಿಗೆ ಆಧ್ಯಾತ್ಮ ಹಾಗೂ ತತ್ವಜ್ಞಾನದ ಭಾಷೆಯನ್ನಾಗಿ ರೂಢಿಸಿದವರು ಹರಿದಾಸರು. ಹರಿದಾಸರಿಗೆ ಹಿನ್ನೆಲೆಯಾದ ಮಾಧ್ವಸಿದ್ಧಾಂತವಿರುವುದು ಶುದ್ಧ ಸಂಸ್ಕೃತದಲ್ಲಿ. ಆದರೆ ಈ ಸಿದ್ಧಾಂತದ ಸಾರವನ್ನು ಕನ್ನಡದಲ್ಲಿ ಹಿಡಿದುಕೊಟ್ಟವರು ಹರಿದಾಸರು. ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ನರಹರಿ ತೀರ್ಥರು ಕನ್ನಡದಲ್ಲಿ ಮೊತ್ತಮೊದಲು ದೇವರನಾಮಗಳನ್ನು ಬರೆದರೆಂದು ತಿಳಿದುಬರುತ್ತದೆ ; ಮುಂದೆ ಒಂದು ಶತಮಾನಕ್ಕೂ ಕಡಿಮೆಯ ಕಾಲಮಾನದಲ್ಲಿ ಬಂದ ವ್ಯಾಸತೀರ್ಥರು ಉದ್ಧಾಮ ಪಂಡಿತರಾಗಿದ್ದು, ಉತ್ತರಭಾರತದ ಯಾತ್ರೆಯನ್ನು ಮುಗಿಸಿ ಮುಳಬಾಗಿಲಿನ ಶ್ರೀಪಾದರಾಯರಲ್ಲಿಗೆ ಬಂದಾಗ ಶ್ರೀಪಾದರಾಯರು ಕನ್ನಡದಲ್ಲಿ ಬರೆದು, ದೇವರ ಪೂಜೆಯ ವೇಳೆಗೆ ಬಳಸುತ್ತಿದ್ದ ಹರಿಭಕ್ತಿಪರವಾದ ಹಾಡುಗಳನ್ನು ಕೇಳಿ, ಅವುಗಳಿಂದ ಬಹುಮಟ್ಟಿಗೆ ಪ್ರಭಾವಿತರಾದರು.ಮುಂದೆ ವ್ಯಾಸರಾಯರು ವಿಜಯನಗರಕ್ಕೆ ಬಂದು ಕೃಷ್ಣದೇವರಾಯನ ಗುರುಗಳಾಗಿದ್ದು ಬ್ರಹ್ಮಸೂತ್ರಗಳ ಅರ್ಥ ಎಲ್ಲರಿಗೂ ತಿಳಿಯುವಂತೆ ಕನ್ನಡದಲ್ಲಿ ಬರೆಯುವ ಸಾಹಸವನ್ನು ಮಾಡಿದರು. ಹಾಗೂ ಪುರಂದರದಾಸ, ಕನಕದಾಸರಂಥ ಶಿಷ್ಯರಿಗೆ ಅನುಗ್ರಹಮಾಡಿ ಕನ್ನಡದ ಕೀರ್ತನ ಪರಂಪರೆಯ, ಉತ್ಕರ್ಷಕ್ಕೆ, ಕಾರಣರಾದರು. ಈ ಹಿನ್ನೆಲೆಯಿಂದಹೇಳುವುದಾದರೆ ವಚನಗಳಂತೆ ಕೀರ್ತನೆಗಳೂ ಕನ್ನಡ ಭಕ್ತಿ ಸಾಹಿತ್ಯದ ಅತ್ಯಂತ ವಿಶಿಷ್ಟರೂಪಗಳು. ಭಕ್ತಿ ಹಾಗೂ ಅನುಭಾವ ಚಳವಳಿಯ ಪರಿಣಾಮಗಳಾದ ವಚನ ಮತ್ತು ಕೀರ್ತನ ಪ್ರಕಾರಗಳು, ಆಧುನಿಕ ಕನ್ನಡ ಸಾಹಿತ್ಯದ ಮೇಲೆಯೂ ತಮ್ಮ ಪ್ರೇರಣೆ– ಪ್ರಭಾವಗಳನ್ನು ಒಡ್ಡಿವೆ ಎಂಬುದು ಗುರುತಿಸಿಕೊಳ್ಳಬೇಕಾದ ಸಂಗತಿಯಾಗಿದೆ.



# ಮಕ್ಕಳ ಆಟಗಳು : ಕೆಲವು ವಿಚಾರಗಳು

---

**ಡಾ. ಅಂಬಳಿಕೆ ಹಿರಿಯಣ್ಣ**

ಮಕ್ಕಳ ಆಟಗಳ ಅಧ್ಯಯನಕಾರರು ಅನೇಕ ವಿರೋಧಾಭಾಸಗಳನ್ನು ಎದುರಿಸಬೇಕಾಗುತ್ತದೆ. ಮೊದಲನೆಯದು, ವ್ಯಾಪಕವಾಗಿ ಪ್ರಚಲಿತದಲ್ಲಿರುವ ಕೆಲವು ಆಟಗಳು ಸಾರ್ವತ್ರಿಕವಾಗಿದ್ದರೆ ಮತ್ತೆ ಕೆಲವು ಮಾನವ ವೈವಿಧ್ಯದ ಉತ್ಪನ್ನಗಳಾಗಿ ತೋರಿಬರುವುದು. ಎರಡನೆಯದು, ಹತ್ತೊಂಬತ್ತನೆಯ ಶತಮಾನದಲ್ಲೇ ಬೆಳೆದು ರೂಪುಗೊಂಡ ಅಭಿಪ್ರಾಯದಂತೆ ಮಕ್ಕಳ ಆಟಗಳು ಆರಂಭಿಕ ಕಾಲದ ವಯಸ್ಕರ ಸಾಂಸ್ಕೃತಿಕ ಪದ್ಧತಿಗಳ ಉಳಿಕೆಗಳು ಎಂಬ ಅರಿವು ಒಂದೆಡೆಯಾದರೆ ಇನ್ನೊಂದೆಡೆಯಲ್ಲಿ ಈ ಶತಮಾನದ ಅಧ್ಯಯನಕಾರರು ಮಕ್ಕಳ ಸೃಜನಶೀಲತೆಯನ್ನು ಆಟಗಳ ಮೂಲಕ ಒತ್ತಿ ಹೇಳಿರುವುದು. ಕೈಲಾಯ್ಸ್ ಅವರು ಅಭಿಪ್ರಾಯಪಟ್ಟಿರುವಂತೆ, ಆಟದಲ್ಲಿ ಎಲ್ಲವೂ ಕಳೆದುಹೋಗುತ್ತವೆ ಎಂಬ ಟೈಲರ್ ವಾದವನ್ನಾಗಲಿ ಆಟದೊಡನೆ ಎಲ್ಲವೂ ಆರಂಭಗೊಳ್ಳುತ್ತವೆ ಎಂಬ ಹುಯ್ಜಿಂಗಾ ಅವರ ಅಭಿಪ್ರಾಯವನ್ನಾಗಲಿ ಒಪ್ಪುವುದು ಕಷ್ಟ.[1] ಆಟಗಳ ವಿಶ್ವವ್ಯಾಪಕತೆಯನ್ನು ಪ್ರಾಣಿ ಮತ್ತು ಮಾನವಶಾಸ್ತ್ರೀಯ ಸಾಕ್ಷ್ಯಾಧಾರ— ಹೀಗೆ ಈ ಎರಡೂ ದೃಷ್ಟಿಯಿಂದ ನೋಡುವುದು ಅವಶ್ಯಕ.

ಪ್ರಾಣಿಕ್ರೀಡೆಗಳ ಸಂಬಂಧವಾಗಿ ನಡೆದಿರುವ ಕೆಲಸವನ್ನು ಬಹುಪಾಲು ಸಮಾಜ ವಿಜ್ಞಾನಿಗಳು ಗಮನಿಸಿರುವಂತೆ ಕಾಣುವುದಿಲ್ಲ. ಒಂದು ಶ್ರದ್ಧಾಪೂರ್ವಕ ಪ್ರಯತ್ನವಾಗಿಯಾದರೂ ಅದನ್ನು ನಾವು ಲಕ್ಷ್ಯಕ್ಕೆ ತೆಗೆದುಕೊಳ್ಳಬೇಕು. ಪಕ್ಷಿ ಮತ್ತು ಸಸ್ತನಿಗಳ ಅಧ್ಯಯನದಾಚೆಗೆ ಕಂಡುಬರುವ ಆಟ ಬಗೆಗಳಲ್ಲಿ ಹೊಡೆದಾಡುವ ಮತ್ತು ಬೆನ್ನಟ್ಟಿ ಹೋಗುವ ಆಟಗಳು, ಸರದಿ ಪ್ರಯೋಗಗಳು ಮತ್ತು ಕುಶಲ ನಿರ್ವಹಣೆಗಳು ಮುಖ್ಯವಾದವು.

---

1. Caillois Roger, Man, Play and Games, Newyork, 1961

ಆಟಗಳ ಬಗೆಗೆ ವಿಶೇಷ ಆಸಕ್ತಿ ವಹಿಸಿದ ಆರಂಭಿಕ ಅಧ್ಯಯನಕಾರರು ಮನುಕುಲದ 'ಮಾನಸಿಕ ಏಕತೆ'ಯತ್ತ ಲಕ್ಷ್ಯಹರಿಸಿರುವುದು ಕಂಡುಬರುತ್ತದೆ. ಅದರಲ್ಲೂ ಪ್ರಾಣಿ ಶಾಸ್ತ್ರ ಸಿದ್ಧಾಂತಕಾರರು ಆಟ ಚಟುವಟಿಕೆಗಳ ಸಾರ್ವಕಾಲಿಕತೆಯನ್ನು ವಿಸ್ತರಿಸಿ ಹೇಳಲು ಶ್ರಮಿಸಿರುವುದು ಸ್ತುತ್ಯಾರ್ಹ. ಜೀವಿಗಳ ವಿಕಾಸದಲ್ಲಿ ಪರ್ಯಾಯ ಪ್ರಕ್ರಿಯೆಗಳ ವೈವಿಧ್ಯತೆಯನ್ನು ವೃದ್ಧಿಗೊಳಿಸುವಲ್ಲಿ ಆಟಗಳ ಪಾತ್ರವೇನೆಂಬುದನ್ನು ವಿವೇಚಿಸುವ ಅಗತ್ಯ ಈಗೀಗ ಕಂಡುಬಂದಿದೆ.

ರಾಬರ್ಟ್ಸ್ ಮುಂತಾದವರು ನಡೆಸಿರುವ ಅಂತರ ಸಾಂಸ್ಕೃತಿಕ ಅಧ್ಯಯನಗಳು ದೈಹಿಕ ಜಾಣ್ಮೆ, ವ್ಯೂಹ ಮತ್ತು ಅದೃಷ್ಟದ ಆಟಗಳಿಗೆ ಸೀಮಿತವಾಗಿವೆ.2 ಇಷ್ಟಾದರೂ ಅವರು ದೈಹಿಕ ಜಾಣ್ಮೆಯ ಆಟಗಳು ಹೆಚ್ಚು ವ್ಯಾಪಕವಾದವೆಂದೂ ವ್ಯೂಹ ಮತ್ತು ಅದೃಷ್ಟದ ಆಟಗಳು ಕೆಲವೇ ಕೆಲವು ಸಾಂಸ್ಕೃತಿಕ ಸಂದರ್ಭಗಳಲ್ಲಿ ಕಾಣುವಂಥವೆಂದೂ ತೋರಿಸಿಕೊಟ್ಟಿದ್ದಾರೆ. ಕೆಲವು ಮಹತ್ವದ ಸಾಂಸ್ಕೃತಿಕ ಸಂಘಟನೆಗಳಲ್ಲಿ ದೈಹಿಕ ಜಾಣ್ಮೆಯ ಆಟಗಳಿಗೆ ಹೆಚ್ಚು ಪ್ರಾಶಸ್ತ್ಯವಿದ್ದರೆ ವ್ಯೂಹ ಮತ್ತು ಅದೃಷ್ಟದ ಆಟಗಳಿಗೆ ಸಂಘ ಸಂಸ್ಥೆಗಳ ಆಶ್ರಯವಿಲ್ಲ ಎಂದಲ್ಲ. ದೈಹಿಕ ಚಟುವಟಿಕೆಯನ್ನೇ ಬಹುವಾಗಿ ಆಧರಿಸಿರುವ ಆಟ ಬಗೆಗಳಲ್ಲಿ ಹೆಚ್ಚು ಬಲಯುತವಾದ ಹೊಂದಾಣಿಕೆಯ ಅಂಶವಿದ್ದರೆ ವ್ಯೂಹ ಮತ್ತು ಅದೃಷ್ಟದ ಆಟಗಳಲ್ಲಿ ಅಷ್ಟೇ ಪ್ರಬಲವಾದ ಸಾಂಸ್ಕೃತಿಕ ಘಟಕಾಂಶ ವಿರುವುದು ಸಾಬೀತಾಗಿದೆ. ವಾಸ್ತವವಾಗಿ ದೈಹಿಕ ಜಾಣ್ಮೆಯ ಆಟಗಳಲ್ಲಿ ಸಂಪ್ರದಾಯ ವಹಿಸುವ ಪಾತ್ರ ಅತ್ಯಲ್ಪವಾದುದು. ಸಾಂಕೇತಿಕ ಅಂಶಗಳು ಪ್ರಧಾನವಾಗಿರುವ ಆಟ ಗಳಲ್ಲಿ ಆಟದ ಹೃದಯ ಸ್ಥಾನದಲ್ಲಿ ಸಾಂಕೇತಿಕತೆ ಕೆಲಸ ಮಾಡುವುದನ್ನು ನೋಡ ಬಹುದು.

ಈ ಬೆಳಕಿನಲ್ಲಿ ಮೇಲಿನ ವಿರೋಧಭಾಸಗಳನ್ನು ಒಪ್ಪಿಕೊಳ್ಳಲು ಹೆಚ್ಚೇನೂ ಕಷ್ಟ ವಾಗುವುದಿಲ್ಲ. ಏಕೆಂದರೆ ಮಕ್ಕಳ ಆಟಕ್ಕೆ ಕಡೇಪಕ್ಷ ಎರಡು ಮೂಲಗಳಿವೆ ; ಮಕ್ಕಳ ಆಟಗಳು ಏಕಕಾಲದಲ್ಲಿ ಎರಡು ವಿಭಿನ್ನ ಸ್ತರಗಳಲ್ಲಿ ಒಂದರೊಡನೊಂದು ಬೆಸೆದುಕೊಂಡಿ ರುತ್ತವೆಯೇ ಹೊರತು ಅವು ಗಂಭೀರ ಚಟುವಟಿಕೆಗಳ ಅವಸಾನದ ಫಲವಲ್ಲ ಎನ್ನಲು ಸಾಕಷ್ಟು ಆಧಾರಗಳಿವೆ. ಅನೇಕ ಸಂದರ್ಭಗಳಲ್ಲಿ ಆಟದ ರಚನೆಗಳು ಮತ್ತು ಅವುಗಳ ನೈಜತೆ ಅಭೇದವಾದವಾಗಿರುತ್ತವೆ. ಅಷ್ಟೇ ಅಲ್ಲ, ಆಟ ಚಟುವಟಿಕೆಗಳನ್ನು ಕಾಲ ಮತ್ತು ದೇಶಗಳಲ್ಲಿ ಸೀಮಿತಗೊಳಿಸಲಾಗುವುದಿಲ್ಲ. ಸಾಂಘಿಕವಾಗಿ ಅಸ್ತಿತ್ವ ಹೊಂದ ಲಾಗದ ನೆಲೆಗಳಲ್ಲಿ ಅವು ಸಂಭವಿಸುತ್ತವೆ ಎಂಬುದನ್ನು ನೆನಪಿಡಬೇಕು.

---

2. Sutton Smith, Brain and John Roberts, the Cross-Cultural and Psychological study of Games, The Folk games of children. Brain Sutton Smith (Ed.) Austin, 1972.

ಮಕ್ಕಳು ಪ್ರೌಢ ಸಂಪ್ರದಾಯದ ನೈಜತೆಯನ್ನು ಅನುಕರಿಸುವುದು ಸಾಮಾನ್ಯ. ಆದರೆ ಹಾಗೆ ಮಾಡುವಲ್ಲಿ ಅವು ತಮ್ಮದೇ ಆದ ಒಂದು ಆರಂಭವನ್ನು ಕಂಡುಕೊಳ್ಳುತ್ತವೆ. ಈ ವಿಭಿನ್ನತೆ ನಮ್ಮ ಆಟಗಳಲ್ಲಿ ಅಷ್ಟು ಸಲೀಸಾಗಿ ಕಂಡು ಬರುವುದನ್ನು ವಿದ್ವಾಂಸರು ಲಕ್ಷಿಸಿದ್ದಾರೆ.3 ಯಾವುದೊ ಒಂದು ಸನ್ನಿವೇಶದಲ್ಲಿ ಪವಿತ್ರ ಉದ್ದೇಶಕ್ಕಾಗಿ ಬಳಸಲಾದ ಗೊಂಬೆಗಳನ್ನೇ ಮತ್ತೊಂದು ಸನ್ನಿವೇಶದಲ್ಲಿ ಮಕ್ಕಳು ಆಟಿಕೆಗಳಾಗಿ ಬಳಸಹುದು. ನಾವು ಯೋಚಿಸುವ ರೀತಿಯಲ್ಲಿಲ್ಲದ, ತೀರ ಸರಳವಾದ ಪವಿತ್ರ ಹಾಗೂ ಅಪವಿತ್ರಗಳ ನಡುವಿನ ಸಂಬಂಧಗಳನ್ನು ಮಕ್ಕಳು ತಿಳಿದಿರುತ್ತವೆ ಎಂಬುದು ನಿರ್ವಿವಾದ ಸಂಗತಿಯಾಗಿದೆ. ಪವಿತ್ರ ಮತ್ತು ಅಪವಿತ್ರಗಳ ನಡುವಿನ ವಿರೋಧ ತೀರ ಸಂದಿಗ್ಧವೂ ಅಲ್ಲ ನಿರಂತರವೂ ಅಲ್ಲ. ಕೆಲವು ಸಾಂಸ್ಕೃತಿಕ ಸನ್ನಿವೇಶಗಳಲ್ಲಿ ಪ್ರೌಢ ಮತ್ತು ಶೈಶವದ ಎಲ್ಲೆಗಳ ನಡುವೆ, ಪವಿತ್ರ ಮತ್ತು ಅಪವಿತ್ರಗಳ ನಡುವೆ ಅಸ್ಥಿರತೆ ಗೋಚರಿಸಬಹುದು. ಆದರೆ ಅವು ಎಂತಹ ಸನ್ನಿವೇಶವೊಂದಕ್ಕೆ ಎಡೆಮಾಡಿಕೊಡುತ್ತವೆಯೆಂದರೆ ಪ್ರೌಢ ಸಂಪ್ರದಾಯಗಳ ಆಳವಡಿಕೆಗಳಂತೆ, ಅವುಗಳ ಉಳಿಕೆಗಳಂತೆ ತೋರಿ ಬರುತ್ತವೆ. ಮಧ್ಯಕಾಲೀನ ಯುಗದಿಂದ ಈ ಕಾಲದವರೆಗೆ ಆಟಗಳ ಬಗೆಗೆ ನಾವು ಹೊಂದಿರುವ ಆಧಾರಗಳೆಲ್ಲ ಮಕ್ಕಳ ಆಟಗಳಿಗೆ ಸಂಬಂಧಿಸಿದೇ ಆಗಿದ್ದು ಅವು ಮೊದಲಿಗೆ ಪ್ರೌಢರ ಆಟಗಳಾಗಿದ್ದವು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಕ್ರಮೇಣ ಈ ವಯೋಸ್ತರಗಳು ಮರೆಯಾದುದರಿಂದ ಮಕ್ಕಳು ಹಿಂದಿನ ಪ್ರೌಢ ಸಂಪ್ರದಾಯಗಳನ್ನು ಅನುಸರಿಸುವುದಕ್ಕಿಂತ ಪ್ರೌಢ ಆಟಗಳನ್ನು ಅನುಕರಿಸುತ್ತಾ ಬಂದಿವೆ.

ಸದ್ಯ ಲಭ್ಯವಿರುವ ಪ್ರಾಣಿ ಮತ್ತು ಮಾನವಶಾಸ್ತ್ರೀಯ ಸಾಕ್ಷ್ಯಾಧಾರದಿಂದ ಹೇಳುವುದಾದರೆ ಮಕ್ಕಳ ಆಟಗಳ ಕೆಲವು ಸಂಗತಿಗಳು ಮಕ್ಕಳದೇ ಆದ ಜೈವಿಕತೆಯಿಂದಲೂ ಇನ್ನೂ ಕೆಲವು, ಸಾಂಕೇತಿಕ ಆಟಗಳು ಸಾಂಸ್ಕೃತಿಕ ಪರಂಪರೆಗಳಿಂದಲೂ ಹೆಚ್ಚು ಪ್ರಭಾವಿತವಾಗಿವೆ. ಸಾಂಸ್ಕೃತಿಕ ಪರಂಪರೆಗೆ ಸಂಬಂಧಿಸಿದಂತೆ ಹೇಳುವುದಾದರೆ ಮಕ್ಕಳು ಮನೆಯಾಟ, ಇಸ್ಕೂಲಾಟ, ಮದುವೆಯಾಟ ಮುಂತಾದವುಗಳನ್ನು ತುಸು ಮಾರ್ಪಾಟುಗಳೊಡನೆ ನಕಲು ಮಾಡಬಹುದು. ವಯಸ್ಕರಾದಂತೆ ನಟಿಸಿ ಆಡುವ ಆಟಗಳಾದ್ದರಿಂದ ಇಲ್ಲಿ ಯಾವಾಗಲೂ ವ್ಯತ್ಯಾಸ ಇದ್ದೇ ತೀರಬೇಕು. ಮಕ್ಕಳು ಸಾಮಾನ್ಯವಾಗಿ ಹಳೆಯ ಮಕ್ಕಳಿಂದ ಆಟಗಳನ್ನು ಕಲಿತುಕೊಳ್ಳುವುದು ಸ್ವಾಭಾವಿಕ.4 ಪ್ರಾಯಃ ಈ ಮಾರ್ಗದಿಂದಲೇ ಸಾಕಷ್ಟು ಸರಳ ರೂಪದಲ್ಲಿ ವಯಸ್ಕ ಸಂಸ್ಕೃತಿಯ ಆಟಗಳು ಮಕ್ಕಳ ಕೈಗೆ ಬಂದಿರಬೇಕು. ಯಾವ ಆಟಗಳನ್ನೂ ಮಕ್ಕಳು ಹೊಸದಾಗಿ

---

3. Levistranss Claude, Tristes Tropiques, New York, 1977.
4. Piaget Jean. The Moral Judgements of the Child, Glencoe, 1948.

ಕಂಡುಹಿಡಿಯುವುದಿಲ್ಲ ಅಥವಾ ಮಾರ್ಪಡಿಸುವುದಿಲ್ಲ. ಹಾಗೆ ಮಾಡಲು ಮಕ್ಕಳಿಗೆ ಹೆಚ್ಚಿನ ಆಮಿಷವೇನೂ ಇರುವುದಿಲ್ಲ. ಈ ಸಾಮರ್ಥ್ಯವಿರುವ ತರುಣರು ವ್ಯವಸ್ಥಿತ ಕ್ರೀಡೆಗಳಲ್ಲಿ ಅಥವಾ ಇತರ ಬಗೆಯ ಮನೋರಂಜನೆಗಳಲ್ಲಿ ತೊಡಗಿರುತ್ತಾರೆ. ಮಕ್ಕಳ ಆಟಗಳೆಂದರೆ ಹಳೆಯ ಮಕ್ಕಳು ಅಥವಾ ವಯಸ್ಕರು ಒಂದು ಕಾಲದಲ್ಲಿ ಆಡುತ್ತಿದ್ದ ಆಟಗಳ ಅನುಕರಣೆಗಳೇ ಆಗಿವೆ ಅಥವಾ ವಯಸ್ಕರೇ ವಿಶೇಷವಾಗಿ ಮಕ್ಕಳಿಗಾಗಿ ಸೃಷ್ಟಿಸಿದಂಥವು ಎಂದಾಗುತ್ತದೆ.

ಮಕ್ಕಳ ಆಟಗಳ ಬಗೆಗೆ ನಾವು ನಡೆಸುತ್ತಿರುವ ಜಿಜ್ಞಾಸೆ, ನಿಜವಾಗಿಯೂ, ಹತ್ತೊಂಬತ್ತನೆಯ ಶತಮಾನದಲ್ಲಿ ಆಡಲು ಇದ್ದ ಸನ್ನಿವೇಶಗಳೊಡನೆ ತಾಳೆಯಾಗುವುದಿಲ್ಲ. ಒಂದಲ್ಲ ಒಂದು ಯೋಗ್ಯತೆಯಲ್ಲಿ ಮಕ್ಕಳು ಕುಟುಂಬದ ಆರ್ಥಿಕ ಅವಲಂಬನೆಯ ಮುಂಚಿನ ದಿನಗಳಲ್ಲಿ ತಮ್ಮ ಹಿರಿಯರನ್ನು ಸೇರಿದ್ದಾರೆ. ಮೂಲ ನಿವಾಸಿ ಬೇಟೆಗಾರರು ಮತ್ತು ಆಹಾರ ಸಂಗ್ರಹಕರ ವಿಷಯದಲ್ಲಿ ಇದು ನಿಜವಲ್ಲ. ಆದರೂ ಕೈಗಾರಿಕಾ ಸಮಾಜಗಳ ಬೆಳವಣಿಗೆಯಿಂದಾಗಿ ಈಗ ಮಕ್ಕಳು ಪೋರ ಗುಂಪುಗಳೊಡನೆ ಅಥವಾ ಸೋಮಾರಿಗಳೊಡನೆ ಸೇರಿ ಕಾಲ ಕಳೆಯುವುದು ಸಾಮಾನ್ಯವಾಗಿದೆ. ಮುಂಚಿನ ಹಳ್ಳಿಗಳ ಹಾಗೂ ಬಂಧು ಉದ್ಯೋಗಾರ್ಥಿಗಳಿಂದ ಮಕ್ಕಳು ಹೆಚ್ಚು ಮುಕ್ತರಾಗಿರುವುದೇ ಅದಕ್ಕೆ ಕಾರಣ. ಈ ಸಮಸ್ಯೆಗೆ ಒಂದು ಉತ್ತಮ ಪರಿಹಾರವೆಂದರೆ ಒಂದು ಸಾರ್ವತ್ರಿಕ ಶಾಲೆಗಳು, ವ್ಯವಸ್ಥಿತ ವಿಶ್ರಾಂತಿ ಇನ್ನೊಂದು.[5]

ನಗರದ ಬೀದಿಗಳು, ಶಾಲೆಗಳು ಮತ್ತು ಆಟದ ಬಯಲುಗಳು ಈಗೀಗ ಹೆಚ್ಚು ಮಕ್ಕಳನ್ನು ಹತ್ತಿರ ಹತ್ತಿರ ತರುತ್ತಿವೆ. ಆಟದ ಬಯಲುಗಳಂತೂ ಯುಕ್ತ ಸಂಪನ್ಮೂಲಗಳೊಡನೆ ಬಿಡುವಿನ ವೇಳೆಯನ್ನು ತುಂಬಲು ಹಾಗೂ ಪರಂಪರಾಗತ ಆಟಗಳ ಪ್ರಸರಣಕ್ಕೆ ಸೆಣಸುತ್ತಿವೆ. ಈಗಂತೂ ಸಾರ್ವಜನಿಕ ವಿದ್ಯಾ ಸಂಸ್ಥೆಗಳ ಆವಿರ್ಭಾವದಿಂದಾಗಿ ಆಟಗಳ ಸಂಖ್ಯೆ ದ್ವಿಗುಣಗೊಂಡಿರುವುದಷ್ಟೇಯಲ್ಲ ಭಿನ್ನತೆಗಳೂ ಹೆಚ್ಚಾಗಿವೆ.

ಮೊದಲನೆಯ ಮಹಾಯುದ್ಧದ ಅನಂತರ ವ್ಯವಸ್ಥಿತ ಆಟಗಳ ಆವಿರ್ಭಾವ ಆಗಿರುವುದಷ್ಟೇ ಅಲ್ಲ ಆಟದ ಬಯಲ ಕಲ್ಪನೆಯೊಡನೆ ಹುಟ್ಟಿಕೊಂಡ ಆಟದ ಸಾಮಾನುಗಳು, ಶಾರೀರಿಕ ಶಿಕ್ಷಣ ಹಾಗೂ ಬೋಧನಾ ವೃತ್ತಿಗಳ ಸಮರೂಪತೆಯಿಂದ ಆಟಗಳ ವೈವಿಧ್ಯದಲ್ಲಿ ಇಳಿತವುಂಟಾಯಿತು. ಇಂದಿನ ಬಹುಮಟ್ಟಿನ ವಯಸ್ಕರು ಬಹು ಹಿಂದಿನ ಕಾಲದ ಹೆಚ್ಚು ವೈವಿಧ್ಯದ ಆಟಗಳ ಬಗೆಗೆ ಅಲ್ಪ ಜ್ಞಾನವನ್ನು ಹೊಂದಿದ್ದಾರೆ. ಇದು ಅಸಾಧುವಾದುದೇನಲ್ಲ. ಆದರೂ ಹತ್ತೊಂಬತ್ತನೆಯ ಶತಮಾನದ ಆರಂಭಿಕ ದಶಕಗಳಲ್ಲಿ ಶಾಲೆ ಮತ್ತು ನಗರ ಬೀದಿಯಾಟ ಸಂಸ್ಕೃತಿಗಳು ಹೆಚ್ಚು ಕಡಿಮೆ ಹೊಸ ಘಟನೆಗಳೇ ಆಗಿ ಪರಿಣಮಿಸಿದವು. ಗ್ರಾಮಾಂತರ ಮತ್ತು ಬುಡಕಟ್ಟು ಜ್ಞಾನದ

---

5. Goodman, Cary, Choosing Sides, New York, 1970.

ಸಂಪನ್ಮೂಲದೊಡನೆ ಅನೇಕ ಮಕ್ಕಳನ್ನು ಇಂಥ ಒಂದು ನಿಕಟ ಒಡನಾಟಕ್ಕೆ ಒಟ್ಟು ಗೂಡಿಸುವ ಪ್ರಯತ್ನ ನಡೆದಿದೆ. ಅತ್ಯಂತ ಕಡಿಮೆ ಹಸ್ತಕ್ಷೇಪದೊಡನೆ ಆಟಗಳನ್ನು ಮಕ್ಕಳು ಮುಂದುವರಿಸಿಕೊಂಡು ಹೋಗಬಹುದಾಗಿದೆ. ಸಂಚಾರ ವ್ಯವಸ್ಥೆಯಲ್ಲಿನ ಲೋಪದಿಂದ ಮತ್ತು ಆಟದ ಬಯಲಿನ ಅವ್ಯವಸ್ಥೆಯಿಂದ ಆಟಗಾರಿಕೆಗೆ ಯೋಗ್ಯ ಪುರಸ್ಕಾರ ಲಭ್ಯವಾಗದಿದ್ದರೂ ಇಂದು ಪರಂಪರಾಗತ ಆಟಗಳ ಒಂದು ಉಲ್ಲಾಸದ ಕಾಲವಾಗಿದೆ. ಹಾಗೆ ನೋಡಿದರೆ ಇತಿಹಾಸದ ಉಳಿದ ಕಾಲದುದ್ದಕ್ಕೂ ಮಕ್ಕಳ ಸನ್ನಿವೇಶಗಳು ತೀರ ವಿಶಿಷ್ಟವಾಗೇನೂ ಇರಲಿಲ್ಲ.

ಮಕ್ಕಳ ಆಟಗಳ ಬಗೆಗೆ ಇಲ್ಲಿ ಒದಗಿಸಿರುವ ಮಾಹಿತಿಯೆಲ್ಲಾ ಪ್ರಾಸಂಗಿಕವಾದುದು. ಆದುದರಿಂದಲೇ ಮಕ್ಕಳ ಆಟಗಳಲ್ಲಿಯ ವ್ಯತ್ಯಾಸದ ಪರಿಮಾಣವನ್ನು ದೃಢವಾಗಿ ಹೇಳಲು ಸಾಧ್ಯವಾಗುತ್ತಿಲ್ಲ. ಪೀಟರ್ ಓಪೀ ಅವರು ನಿಖರವಾಗಿ ತಿಳಿಸಿರುವಂತೆ, ಮಕ್ಕಳ ಆಟಗಳ ದಾಖಲೆಗಳು ಮಾನವ ಸ್ವಭಾವದ ನೈರಂತರ್ಯತೆಯನ್ನು ಪ್ರತಿ ಪಾದಿಸುತ್ತವೆ.6 ಬ್ರಿಟಿಷ್ ದ್ವೀಪದ ಆಟಗಳು ಮತ್ತು ಪ್ರಾಸಗಳಲ್ಲಿ ಹಳೆಯ ನೈರಂತರ್ಯತೆಯನ್ನು ಅವರು ಕಂಡಿದ್ದಾರೆ. ಆಟಗಳನ್ನು ಕುರಿತ ಈಚಿನ ಸಂಗ್ರಹಗಳ ನಡುವಿನ ವೈದೃಶ್ಯ ಎದ್ದು ಕಾಣುವಂಥದು. ನಾಲ್ಕು ದಶಕಗಳಿಂದೀಚೆಗಂತೂ ಶ್ರೇಣಿ ಯಾಟಗಳಲ್ಲಿ ಸ್ಪಷ್ಟ ಇಳಿತ ಕಂಡು ಬಂದಿದೆ. ವಿಶೇಷವಾಗಿ ಸಾಂಪ್ರದಾಯಿಕ ಹಾಡಿನ ಆಟಗಳಲ್ಲಿ, ಸಂವಾದಾತ್ಮಕ ಆಟಗಳಲ್ಲಿ ಮತ್ತು ಆಚರಣಾತ್ಮಕ ಶಾಬ್ದಿಕ ನಿರೂಪಣೆಗಳಲ್ಲಿ ಶ್ರೇಣಿಯಾಟಗಳ ಇಳಿತವನ್ನು ಕಾಣುತ್ತೇವೆ. ಆದರೆ ಓಟದಾಟ, ಚಪ್ಪಾಳೆಯಾಟ, ಹಗ್ಗದಾಟ ಮತ್ತು ಬೆನ್ನಟ್ಟುವ ಆಟ ಬಗೆಗಳಲ್ಲಿ ತೀವ್ರ ಹೆಚ್ಚಳ ಕಂಡು ಬಂದಿದೆ. ಈ ಆಟಗಳನ್ನು ಅನೌಪಚಾರಿಕವಾಗಿ ಹಾಗೂ ಕೆಲವು ಆಚರಣಾತ್ಮಕ ಸಂದರ್ಭಗಳಲ್ಲಿ ನಿರ್ವಹಿಸುವುದು ಸಾಮಾನ್ಯ. ಭೌತಿಕ ಚಾಣ್ಮೆಯ ಆಟಗಳು ಹೆಚ್ಚು ಸಂದರ್ಭಗಳಲ್ಲಿ ಆಟದ ಪರಿಕರಗಳಾದ ಚೆಂಡು ದಾಂಡುಗಳ ಸಹಾಯದಿಂದ ಬೆಳೆದರೆ ಮತ್ತೆ ಕೆಲವು ವೇಳೆ ಮಕ್ಕಳೇ ರಚಿಸಿದ ಆಟದ ವಸ್ತುಗಳೊ, ಅಂಗಿಯ ಗುಂಡಿಗಳೊ, ಉರುಳುವ ಗುಂಡನೆಯ ಕಲ್ಲುಗಳೊ ಕಾಯಿಗಳೊ ಮುಂತಾದವುಗಳೊಡನೆ ವಿಕಾಸ ಹೊಂದುತ್ತವೆ. ಸಾಮಾನ್ಯವಾಗಿ ಇಂದಿನ ಮಕ್ಕಳ ಆಟಗಳು ಹೆಚ್ಚು ಕೌಟುಂಬಿಕ ಸ್ವರೂಪದವು. ಸ್ವಭಾವತಃ ಅವು ಹೆಚ್ಚು ಒರಟಾದವಲ್ಲ ಮತ್ತು ಕಡಿಮೆ ಕೆಣಕುವ ಜಾಯಮಾನದವು. ಆದರೆ ಅವು ಹೆಚ್ಚು ಆಟದ ಸಾಮಾನು ಮತ್ತು ಸಾಮಗ್ರಿಗಳೊಡನೆ ಹೆಚ್ಚು ಯಾಂತ್ರೀ ಕರಣಗೊಂಡಿವೆ. ಅಲ್ಲದೆ ಅವು ಶಾಬ್ದಿಕವಾಗಿ ಮತ್ತು ಸಾಂಕೇತಿಕವಾಗಿ ಹೆಚ್ಚು ನವಿ ರಾದವು. ಪರಿಸ್ಥಿತಿ ಭಿನ್ನವಾಗಿದ್ದ ಬಹು ಮುಂಚಿನ ವರ್ಗಗಳಲ್ಲಿ ಶೈಶವ ಕಾಲದ ಬಹು

6. Opie, Iona and Peter Opie, Children's Games in Street and playground, Oxford, 1969.

ಪ್ರಶಸ್ತ ಸಮಯವನ್ನು ಪರಂಪರಾಗತ ಆಟಗಳಿಗೆ ವಿನಿಯೋಗಿಸುವುದಕ್ಕಿಂತ ಹೆಚ್ಚಾಗಿ ಬಾಹ್ಯಪರಿಶೋಧನೆ ಮತ್ತು ಸಾಹಸಗಳಲ್ಲಿ ಮೆರೆಯುವ ಪರಿಪಾಠವಿತ್ತು. ಒಂದು ಮುಕ್ತ ಹಾಗೂ ಉಲ್ಲಾಸಕರ ಪರಿಸರ ಈ ಬಗೆಯ ಚಟುವಟಿಕೆಗಳನ್ನು ಪ್ರೋತ್ಸಾಹಿಸುವುದು ಸಹಜ. ಈಗಂತೂ ದೂರದರ್ಶನದ ಆಗಮನ ಮತ್ತು ಉಪನಗರಗಳಲ್ಲಿಯ ನೆಲೆವಾಸ–ಎರಡೂ ಪ್ರಭಾವಗಳು ಮಕ್ಕಳನ್ನು ಆಟದ ಸಮಯದಲ್ಲಿ ಒಬ್ಬರಿಂದ ಮತ್ತೊಬ್ಬರನ್ನು ಪ್ರತ್ಯೇಕಗೊಳಿಸುವಂತೆ ಮಾಡಲು ಪ್ರೇರಣೆ ಒದಗಿಸುತ್ತವೆ. ಮಕ್ಕಳು ಪರಂಪರಾಗತ ಆಟಗಳನ್ನು ಆಡದಂತೆ ಅವು ಹೊಂಚುಹಾಕುತ್ತಿರುವಂತೆ ಕಾಣುತ್ತದೆ.

ಕಳೆದ ಕೆಲವು ವರ್ಷಗಳ ಪ್ರೌಢ ಶಿಕ್ಷಣ ಕಾರ್ಯಕ್ರಮದ ವ್ಯಾಪಕ ಅನುಷ್ಠಾನದ ಉದ್ದೇಶ ಗೊತ್ತುಗುರಿಯಿಲ್ಲದ ಮಕ್ಕಳನ್ನು ನಾಗರಿಕ ಹತೋಟಿಗೆ ತರುವುದೇ ಆಗಿದೆ. ಇದನ್ನು ಶಾಲೆ ಮತ್ತು ಬಿಡುವಿನ ವೇಳೆಯ ಚಟುವಟಿಕೆಗಳ ಮೂಲಕವೂ ಸಾಧಿಸಲಾಗುತ್ತಿದೆ. ಬಹುಪಾಲು ಮಂದಿಗೆ ಶಾರೀರಕ್ಕೆ ಶಿಕ್ಷಣ ಪಾಠಗಳು, ಆಟಿಕೆಗಳು, ಅದ್ಭುತ ತರಬೇತಿ ಆಟಗಳು ನಿಯಂತ್ರಣದ ಸಾಧನಗಳಾಗಿ ಪರಿಣಮಿಸಿವೆ. ಈ ಕಾರ್ಯಕ್ರಮಗಳಿಂದಾಗಿ ಪರಂಪರಾಗತ ಹಾಗೂ ಸ್ಫೂರ್ತಿದಾಯಕ ಆಟ ಚಟುವಟಿಕೆಗಳನ್ನು ಜೀವಂತವಾಗಿಸಿಕೊಳ್ಳುವುದು ಕಷ್ಟವಾಗಬಹುದು. ಇದು ಅನಿವಾರ್ಯ.

ಬೀದಿ ಮತ್ತು ಆಟದ ಬಯಲುಗಳಲ್ಲಾಡುವ ಮಕ್ಕಳ ಆಟಗಳಿಗೂ ಸಮರ ಸದೃಶ ಆಟಗಳಿಗೂ ಕೆಲವು ಹೋಲಿಕೆಗಳಿವೆ. ಎರಡರಲ್ಲೂ ಬೆನ್ನಟ್ಟುವ ಹಾಗೂ ಹೋರಾಟ ನಡೆಸುವ ಆಟ ಬಗೆಗಳೇ ಇವೆ. ಇದಕ್ಕೆ ಸಾಕಷ್ಟು ಉದಾಹರಣೆಗಳಿವೆ. ಅಲ್ಲದೆ ಅವಕ್ಕೆ ಅನೇಕ ಹೆಸರುಗಳನ್ನು ಕೊಡಲಾಗಿದೆ. ಪ್ರಾಣಿ ಕ್ರೀಡೆಗಳ ಅಧ್ಯಯನವನ್ನಾಧರಿಸಿ ಹೇಳುವುದಾದರೆ ಈ ತೆರನ ಆಟಗಳು ಬಹುದಿನದಿಂದ ಇರುವಂಥವಾಗಿವೆ. ಏಕೆಂದರೆ ಮಕ್ಕಳಿಗೆ ವಿಶಿಷ್ಟವಾದ ಚಟುವಟಿಕೆಗಳಲ್ಲಿ ಅವು ಹೆಚ್ಚು ಪ್ರಬಲವಾದ ಹೊಂದಾಣಿಕೆಯನ್ನು ಇಟ್ಟುಕೊಂಡಿವೆ. ಈ ಆಟಗಳು ಪ್ರೌಢ ವಯಸ್ಕರಿಗೆ ಸಹಜವಾದ ಒತ್ತಡಗಳನ್ನು ಪ್ರತಿರೋಧಿಸುತ್ತವೆ. ಮಕ್ಕಳ ಶಿಕ್ಷಣಕ್ರಮದಲ್ಲಿ ಎಷ್ಟೇ ಮಾರ್ಪಾಟುಗಳಾದರೂ ಓಟ ಮತ್ತು ಹೋರಾಟದಲ್ಲಿ ಅವು ತೊಡಗಿರಲು ರೂಢಿಗತ ಮೌಲ್ಯಗಳು ಬೆಂಬಲವಾಗಿವೆ. ಬೆನ್ನಟ್ಟುವಿಕೆ, ಓಡಿ ಹಿಡಿಯುವಿಕೆ, ಹುಡುಕುವಿಕೆ, ಬೇಟೆಯಾಡುವಿಕೆ, ಸ್ಪರ್ಧಿಸುವಿಕೆ ದ್ವಂದ್ವಯುದ್ಧ ಮತ್ತು ಸಾಹಸದಾಟಗಳು ಆಟಗಳ 2/[illegible] ಭಾಗವನ್ನು ಆಕ್ರಮಿಸಿವೆ. ಆದರೆ ಹೆಚ್ಚಿನ ಅಧ್ಯಯನಕಾರರು ಬೆನ್ನಟ್ಟುವ ಮತ್ತು ಹೊಡೆದಾಡುವ ಆಟಗಳಿಗೆ ಹೆಚ್ಚು ಲಕ್ಷ್ಯ ನೀಡಿಲ್ಲ. ಭೌತಿಕವಾಗಿ ಅಥವಾ ಶಾಬ್ದಿಕವಾಗಿ ಮಕ್ಕಳು ಬಲ ಮತ್ತು ಪ್ರತಿಷ್ಠೆಯನ್ನು ಗಳಿಸಿಕೊಳ್ಳಲು ಅನುಸರಿಸುವ ರೀತಿಗಳಷ್ಟೇ ಗಮನ ಹರಿಸಲಾಗಿದೆ. ಅವರೂ ಅವರ ಪ್ರಯತ್ನಗಳಲ್ಲೂ ಇರುವ ಕೀಲಿ ಸಮಸ್ಯೆಗಳ ಜಿಜ್ಞಾಸೆ ಇರುವುದನ್ನು ನಿರ್ಲಕ್ಷಿಸಲಾಗುವುದಿಲ್ಲ.

ಬೆನ್ನಟ್ಟುವ ಮತ್ತು ಹೊಡೆದಾಡುವ ಆಟಗಳು ಹೆಚ್ಚು ಸಾರ್ವತ್ರಿಕವಾಗಿದ್ದರೂ ಅವನ್ನು ಅತ್ಯಂತ ಅನೌಪಚಾರಿಕವಾಗಿ ಹೊಸ ಮಾದರಿಯಲ್ಲಿ ಆಡುವುದು ಪ್ರಚಲಿತ ದಲ್ಲಿದೆ. ಸಹಜವಾಗಿ ಈ ಬಗೆಯ ಆಟಗಳಲ್ಲಿ ಬೆನ್ನಟ್ಟುವಿಕೆಯ ಬಹುತೇಕ ಪರಂಪರಾಗತ ಮೂಲಾಂಶಗಳು ದೂರವಾಗಿವೆ. ಬಿಡುವಿನ ವೇಳೆಯಲ್ಲಿ ಮಕ್ಕಳು ಪರಸ್ಪರರ ಬೆನ್ನಟ್ಟಲು, ಲೇವಡಿ ಮಾಡಲು ಮತ್ತು ಹೊಡೆದಾಡಲು ಅಥವಾ ಬೇರೇನ ನ್ನಾದರೂ ಮಾಡಲು ಪರಂಪರಾಗತ ಅಂಶಗಳು ಒಳ್ಳೆಯ ಅವಕಾಶ ಕಲ್ಪಿಸಿದ್ದವು. ಪರಂಪರಾತ ಆಟಗಳನ್ನೇ ಹೆಚ್ಚಾಗಿ ಆಡುವ ಹುಡುಗಿಯರ ಆಟಗಳಲ್ಲೂ ಪರಂಪರಾಗತ ಮೂಲಾಂಶಗಳು ಮಾಯವಾಗುತ್ತಿವೆ. ಹಗ್ಗದಾಟ, ಗೋಲಿಯಾಟ, ಬುಗುರಿಯಾಟ ಮುಂತಾದವು ಈಗ ಹೆಚ್ಚು ವ್ಯಾಪಕವಾಗಿ ಆಡುವ ಆಟಗಳಾಗಿ ಉಳಿದಿಲ್ಲ.

ಇತ್ತೀಚಿನ ದಶಕಗಳವರೆಗೂ ಮಕ್ಕಳ ಆಟಗಳಲ್ಲಿ ಹೆಚ್ಚು ಪ್ರಬಲವಾಗಿದ್ದವೆಂದರೆ ದಲಿತ ಹೆಣ್ಣು ಮಕ್ಕಳ ಆಟಗಳು. ವಿಷಾದದ ಸಂಗತಿಯೆಂದರೆ ಈ ಮಕ್ಕಳ ಆಟಗಳಲ್ಲೂ ಪರಂಪರಾಗತ ಅಂಶಗಳು ಕ್ಷೀಣಿಸಿದ್ದು ಅವನ್ನಾಡುವ ಆಸಕ್ತಿಯೇ ಮಾಯವಾಗಿರುವಾಗ ವಿದ್ವಾಂಸರು ಮಕ್ಕಳ ಆಟಗಳ ಆಳವಾದ ಅಧ್ಯಯನವನ್ನು ಕೈಗೆತ್ತಿಕೊಳ್ಳಲು ಆರಂಭಿಸಿರುವುದು. ಆಟಗಳ ದಾಖಲೀಕರಣ ಕಾರ್ಯವಂತೂ ಅಸಮರ್ಪಕವಾಗಿದೆ. ಪರಿಣಾಮವಾಗಿ ಆಟ ನಿರ್ವಹಣೆಯ ಸರಳ ದಾಖಲೀಕರಣ ಮತ್ತು ಆಟಗಳ ಬಾಹ್ಯ ನಿಯಮಗಳ ನಿರೂಪಣೆ ಮಕ್ಕಳು ತಮ್ಮ ಆಟ ಸಂಪ್ರದಾಯಗಳೊಡನೆ ನಡೆದುಕೊಳ್ಳು ತ್ತಿರುವ ರೀತಿಯ ಬಗೆಗೆ ಅತ್ಯಂತ ಕಡಿಮೆ ಹೇಳುತ್ತವೆ. ಹ್ಯೂಸ್ ಹೇಳಿರುವಂತೆ, ಆಟವನ್ನು ಆಡುವ ರೀತಿಯ ಒಡಂಬಡಿಕೆಯ ವಿವರಣೆಯಂತೆ ಆಟ ಚಟುವಟಿಕೆ ಬಹಳ ಅಪರೂಪವಾದುದು.7 ಈ ಹಿನ್ನೆಲೆಯಲ್ಲಿ ಎಲಿಜಬತ್ ವ್ಯಾಟ್ಲೆ ಅವರು ಆಟದ ವೇಳೆಯಲ್ಲಿಯ ಕಪ್ಪು ಹುಡುಗಿಯರನ್ನು ಕುರಿತು ಅವಲೋಕನಾತ್ಮಕ ಅಧ್ಯಯನ ನಡೆಸಿದ್ದಾರೆ. ಗುಂಪೊಂದು ಹೇಗೆ ವಿಭಿನ್ನ ಆಟಗಳನ್ನು ವಿಭಿನ್ನ ಉದ್ದೇಶಗಳಿಗಾಗಿ ಬಳಸಿಕೊಳ್ಳಬಹುದು ಎಂಬುದನ್ನು ಅವರು ತೋರಿಸಿಕೊಟ್ಟಿದ್ದಾರೆ.8 ಅವರ ಅಧ್ಯಯನದಲ್ಲಿ, ಚೆನ್ನಾಗಿ ಹೊಂದಿಕೊಂಡು ಚಪ್ಪಾಳೆ ತಟ್ಟುತ್ತಾ ಹಾಗೂ ಹಾಡುತ್ತಾ ಆಡುವ ಆಟಗಳಲ್ಲಿ ಪ್ರಾಸಗಳು, ಚಪ್ಪಾಳೆಗಳು ಹಾಗೂ ಆಂಗಿಕ ಚಲನವಲನಗಳಿಗಾಗಿ

---

7. Hughes, Linda 1983 Foursquare : Beyond the Rules of the Game : Why are Rooie Rules Nice. In the world of play Ed. Frank E· Manning 188– 99, New York.
8. Whatley, Elizabeth, Hand clapping and Jump Rope. Research.
   Notes : News letter of the Association for the Anthropological study of play 4 (2), 1977.

ಮಕ್ಕಳು ಪರಸ್ಪರ ಸಹಯೋಗ ಹೊಂದಲು, ಚೌಕಟ್ಟುಗಳನ್ನು ಸ್ಥಾಪಿಸಲು ಅವಸರ ತೋರುವುದನ್ನು ಗುರುತಿಸಿದ್ದಾರೆ. ಹಾಗೆಂದು ಹೆಣ್ಣು ಮಕ್ಕಳ ಆಟಗಳಲ್ಲಿ ಸ್ಪರ್ಧಾ ಮನೋಭಾವ ಇರುವುದಿಲ್ಲ ಎಂದಲ್ಲ. ಹಗ್ಗದಾಟವಾಡುವಾಗ ಹೆಣ್ಣು ಮಕ್ಕಳು ಮಹಾನ್ ಸ್ಪರ್ಧಾ ಮನೋಭಾವ ತೋರುವುವನ್ನು ಲಕ್ಷಿಸಬೇಕು. ಅಷ್ಟೇ ಅಲ್ಲ, ಇಂಥ ಆಟಗಳು ಪರಸ್ಪರರನ್ನು ಕೆಣಕುವುದನ್ನು, ವೈರತ್ವ ಸಾಧಿಸುವುದನ್ನು ತಡೆಯುತ್ತವೆ ಎಂಬುದು ಗಮನಾರ್ಹ. ಅದೇ ರೀತಿಯಾಗಿ ಆಟದ ಜಾಗದಲ್ಲಿ ವಯಸ್ಕಾದವರಿಲ್ಲದೆ ಹುಡುಗರೇನಾದರೂ ಇದ್ದರೆ ಅಶ್ಲೀಲವಾದ ಅಸಂಬದ್ಧ ಪ್ರಾಸಗಳನ್ನು ಉಚ್ಚರಿಸುವುದು ಅಭ್ಯಾಸ. ವಯಸ್ಕಾದವರಿದ್ದರೆ ಸಾಮಾನ್ಯ ಪ್ರಾಸಗಳನ್ನು ಉಚ್ಚರಿಸುವುದು ಸರ್ವೇ ಸಾಮಾನ್ಯ.

ಗಂಡು ಮತ್ತು ಹೆಣ್ಣು ಮಕ್ಕಳು–ಇಬ್ಬರೂ ತಮ್ಮ ಸಾಂಪ್ರದಾಯಿಕ ಆಟ ಚಟುವಟಿಕೆಗಳ ನಡುವೆ ವ್ಯಾವಹಾರಿಕವಾದ ತುಸು ಭಿನ್ನ ವಿನ್ಯಾಸಗಳ ಆಟಗಳನ್ನು ಬೆಳೆಸಿಕೊಂಡಿರುವುದಕ್ಕೆ ಆಧಾರಗಳಾಗಿವೆ.9

ಎರಡು ಮತ್ತು ಮೂರು ವರ್ಷದ ಹೆಣ್ಣುಮಕ್ಕಳು ಆಟದಲ್ಲಿ ಒಳಗೆ ಮತ್ತು ಹೊರಗಿರುವ ತಂತ್ರಗಳನ್ನು ರೂಪಿಸಿಕೊಳ್ಳಲು ಮತ್ತು ತಮ್ಮ ಪಾರಾಗುವ ದಾರಿಯನ್ನು ಕಂಡುಕೊಳ್ಳಲು ಆಗಾಗ ಭೌತಿಕ ಬಲ ಮತ್ತು ಸಂಕಲ್ಪವನ್ನು ಉಪಯೋಗ ಮಾಡಿ ಕೊಳ್ಳುವುದುಂಟು. ಸ್ವತಂತ್ರ ನಿರ್ವಹಣೆ ಅದನ್ನು ಆಗುಮಾಡಿಕೊಡುತ್ತವೆ. ಎಷ್ಟೋ ವೇಳೆ ಈ ಲಿಂಗ ವ್ಯತ್ಯಾಸ ಅಮುಖ್ಯವಾಗಿ ವ್ಯಕ್ತಿಗತವಲ್ಲದ ಗುಂಪುನಿಷ್ಠೆಯಾಗುವುದಕ್ಕಿಂತ ಪ್ರಾಥಮಿಕವೂ ಚಿರಪರಿಚಿತವೂ ಆದ ಸ್ಫೂರ್ತಿದಾಯಕವಾದ ಸಾಮೂಹಿಕ ನಿರ್ದೇಶನತ್ವ ವನ್ನು ಬಿಂಬಿಸುತ್ತದೆ. ರೂಢಿಯನುಸಾರ ಹೇಳುವುದಾದರೆ, ಆಟವಾಡುವಾಗ ಹೆಣ್ಣು ಮಕ್ಕಳ ಗುಂಪಿನೊಳಗೆ ಪ್ರವೇಶ ಹೊಂದುವುದು ಕಷ್ಟ. ಆದರೆ ಹುಡುಗರ ಗುಂಪಿಗೆ ಪ್ರವೇಶ ಪಡೆಯುವುದು ಸುಲಭ. ಹುಡುಗರು ಯಾವತ್ತೂ ಹೊರಗಿನ ಕ್ಷೇತ್ರ ಪಾಲರನ್ನು ಬಯಸುತ್ತಾರೆ (ಆದರೆ ಹೆಚ್ಚು ಕುಶಲರಾಗುವವರೆಗೆ ಅದು ಒಳ್ಳೆಯ ದೇನನ್ನೂ ಮಾಡುವುದಿಲ್ಲ. ಉದಾಹರಣೆಗೆ ಚಿನ್ನಿದಾಂಡಿನಲ್ಲಿ ಎರಡೂ ಕಡೆಯವರು ಚತುರರಿರಬೇಕು). ಏನೇ ಇರಲಿ, ಹುಡುಗರ ಮತ್ತು ಹುಡುಗಿಯರ ಆಟದಲ್ಲಿನ ವ್ಯತಾಸಗಳು ರಾಜಕೀಯ ಶಿಕ್ಷಣದಲ್ಲಿ ಸ್ತ್ರೀಯರು ಮತ್ತು ಪುರುಷರ ನಡುವಿನ ವ್ಯತ್ಯಾಸ ಗಳನ್ನು ಒತ್ತಿ ಹೇಳುತ್ತವೆ. ಹುಡುಗರ ಮೊಂಡು ವಾದ ಮತ್ತು ಬಿಟ್ಟುಕೊಡದ ಪ್ರವೃತ್ತಿ ಹಾಗೂ ಸವಾಲು ಎದುರಾದಾಗ ಹುಡುಗಿಯರು ಆಟದಿಂದ ಹಿಮ್ಮೆಟ್ಟುವುದು–ಇಲ್ಲಿ ವೈದೃಶ್ಯವಿರುವುದನ್ನು ಎತ್ತಿ ಹೇಳಬೇಕಾಗಿಲ್ಲ. ಉದ್ಯೋಗದಲ್ಲಿರುವ ಮಹಿಳೆಯರನ್ನು

9. ಆಟದ ಗುಂಪಿನ ನಾಯಕ ಮತ್ತು ಇತರರ ನಡುವೆ ವಿವಾದ ಆರಂಭಗೊಂಡಾಗ ಆಟ ನಿಂತು ಹೋಗಿ ಅದರ ಸ್ಥಾನದಲ್ಲಿ ಬೇರೊಂದು ಆಟ ಆರಂಭಿಸುವುದು ರೂಢಿ.

ಕುರಿತು ನಡೆಸಿರುವ ಪ್ರಚಲಿತ ವಿಶ್ಲೇಷಣೆ ಇದೇ ರೀತಿಯ ಹೋಲಿಕೆಗಳನ್ನು ಸ್ಥಾಪಿಸುತ್ತದೆ. ಈ ಭಿನ್ನತೆ ತೀರ ಸರಳವಾದುದೇನಲ್ಲ. ಚೆಂಡು ಪುಟಿಸುವ ಆಟದಲ್ಲಿ ನಾಲ್ಕು ಚೌಕಗಳಲ್ಲಿ ನಾಲ್ಕು ಮಕ್ಕಳು ನಿಲ್ಲುತ್ತವೆ. ಚೆಂಡನ್ನು ಹಿಂದಕ್ಕೂ ಮುಂದಕ್ಕೂ ಪುಟಿಸುತ್ತಾ ಇರುತ್ತವೆ. ಚೆಂಡು ಕಳೆದುಕೊಂಡ ಮಗು ಆಟದಿಂದ ನಿರ್ಗಮಿಸುವುದು ನಿಯಮ. ಅದು ಹೊರ ಹೋದಮೇಲೆ ಅದರ ಸ್ಥಾನದಲ್ಲಿ ಬೇರೊಂದು ಮಗು ಆಡುತ್ತದೆ—ಸ್ಪರ್ಧಾತ್ಮಕವಾಗಿ ಆಡುವ ಹುಡುಗಿಯರ ಆಟಕ್ಕಿಂತ ಭಿನ್ನವಾಗಿ ಆಡುವುದು ಇಲ್ಲಿನ ವಿಶೇಷ. ಯಾವಾಗಲಾದರೂ ಹೊಸ ಆಟಗಾರನೊಬ್ಬ ಬಂದನೆಂದರೆ ಮೊದಲ ಸ್ಥಾನದಲ್ಲಿದ್ದ ಮಗು ಮುಖ್ಯಸ್ಥನಂತೆ ನಟಿಸಿ ನಿಯಮಗಳನ್ನು ಕೂಗಲು ಬಿಡುತ್ತದೆ. ಕಾಲಕಾಲಕ್ಕೆ ಯಾರನ್ನಾದರೂ ಕೈಬಿಡುವಂತೆ ಮಾಡುತ್ತದೆ. ನಿಯಮ ಸ್ಥಾಪನೆಗೆ ಸಾಕಷ್ಟು ವೇಳೆಯನ್ನು ಮೀಸಲಿರಿಸುತ್ತದೆ. ಆಟದ ಕ್ರಿಯೆಗೆ ಸಾಕಷ್ಟು ಕಡಿಮೆ ಸಮಯವನ್ನು ವ್ಯಯ ಮಾಡುವುದು ಇಲ್ಲಿನ ಉದ್ದೇಶ. ವ್ಯವಹಾರ ಕೌಶಲ ವನ್ನು ಬೆಳೆಸಿಕೊಳ್ಳಲು ಆಟದ ರೂಪವನ್ನು ಬಳಸಿಕೊಳ್ಳುವ ಹುಡುಗಿಯರು ಜೊತೆ ಗಾತಿಯರನ್ನು ಆಟದಿಂದ ಕೈಬಿಡುವ ವಿಷಯದಲ್ಲಿ ಹೆಚ್ಚು ಶಾಸ್ತ್ರೀಯ ನಿಲುವನ್ನು ತೋರುತ್ತಾರೆ. ಹುಡುಗರಾದರೋ ಇದನ್ನು ಕ್ರಿಯಾ ಚಾಣ್ಮೆಯ ಒರೆಗಲ್ಲಾಗಿ ಬಳಸಿ ಕೊಳ್ಳುತ್ತಾರೆ.

ಒಟ್ಟಿನಲ್ಲಿ ಈ ಕೆಲವು ವಿಚಾರಗಳು ಒಂದೇ ತೆರನ ಹಾಗೂ ವಿಭಿನ್ನ ಸಂಪ್ರದಾಯದ ಆಟಗಳು ಬಹುಮುಖ ಸಾಮರ್ಥ್ಯದ ಅರ್ಥಗಳನ್ನು ಹೊರಡಿಸುತ್ತವೆ ಎಂಬುದನ್ನು ಸ್ಪಷ್ಟಪಡಿಸುತ್ತವೆ. ಬೆನ್ನಟ್ಟುವಿಕೆ, ಹೊಡೆದಾಡುವಿಕೆ ಹಾಗೂ ಮೇಲ್ಗೈಗಾಗಿ ಪೈಪೋಟಿ ನಡೆಸುವ ಮನೋಭಾವಗಳಿಗೆ ಹೊಂದಿಕೊಳ್ಳುವ ಕಾಳಜಿ ತೋರಿದಾಗ ಮಾತ್ರ ಆಟಗಳ ವೃದ್ಧಿ ಸಾಧ್ಯ. ಈ ಕೆಲವು ಸಂದಿಗ್ಧ ಸಮಸ್ಯೆಗಳಿಗೆ ಎಲ್ಲಿಯತನಕ ಉತ್ತರಗಳಾಗಿರುತ್ತವೊ ಅಲ್ಲಿಯವರೆಗೆ ಆಟಗಳು ಮಕ್ಕಳ ಸಂಪ್ರದಾಯಗಳಾಗಿ ಉಳಿದಿರುತ್ತವೆ.

# ಅಲ್ಲಮ ಪ್ರಭು : ಬೇಂದ್ರೆಯವರ ದೃಷ್ಟಿಯಲ್ಲಿ

ಜಿ. ಎಸ್. ಆಮೂರ

ಕನ್ನಡ ಕಾವ್ಯ ಪರಂಪರೆಯಲ್ಲಿ ಬೇಂದ್ರೆಯವರು ಸಾಹಿತ್ಯ ಕವಿಗಳಿಗಿಂತ ಭಕ್ತ ಕವಿಗಳನ್ನೇ ಹೆಚ್ಚಾಗಿ ಮೆಚ್ಚಿಕೊಂಡಿದ್ದರು. ಇದಕ್ಕೆ ಕಾರಣವನ್ನು ಅವರೇ ಸೂಚಿಸಿದ್ದಾರೆ : "ಸಾಹಿತ್ಯ ಕವಿಯು ಸೃಷ್ಟಿ ಶಬ್ದದ ಮಾಯೆ... ವಚನಗಳ ಮಾತು ಹಾಗಲ್ಲ. ಬಸವನ ವಚನಗಳೇ ಆಗಲಿ, ಮಹಾದೇವಿಯ ವಚನಗಳೇ ಆಗಲಿ, ಪ್ರಭುವಿನ ವಚನಗಳೇ ಆಗಲಿ ಅವುಗಳಲ್ಲಿ ಮಹತ್ತರವಾದ ಪ್ರಾಣಶಕ್ತಿಯು ಸ್ಪಂದಿಸುವುದು. ಅವರ ಜೀವನವೇ ಬೇರೆ ಕವಿಗಳಿಗೆ ಕಾವ್ಯವಸ್ತುವಾಯಿತು. ಸಾಹಿತ್ಯ ಕವಿಗಳಿಗೆ ಅವರ ಜೀವನವಿಲ್ಲ"1 'ನನ್ನದು ಕನ್ನಡ ನಾಡು' ಎಂಬ ಕವಿತೆಯಲ್ಲಿ ಅಲ್ಲಮ, ಬಸವ, ಮಹಾದೇವಿಯರನ್ನು ಕುರಿತು,

ಒಂದೊಂದು ಮೂರ್ತಿ ಒಡಮೂಡಿ
ಆವರಣವನ್ನು ಜಡಗೂಡಿ
ಸಾಕ್ಷಾತ್ತು ಆಯಿತು ಕಾವ್ಯವೋಡ್ಯ2

ಎಂದು ಬೇಂದ್ರೆಯವರು ಹಾಡಿದ್ದಾರೆ. ಅವರಿಗೆ ವಚನಕಾರರಲ್ಲಿಯೇ ಅಲ್ಲಮಪ್ರಭು ಅತ್ಯಂತ ಆತ್ಮೀಯನು, ಪೂಜ್ಯನು, ಕನ್ನಡ ಸಾಹಿತ್ಯದ ನಾಲ್ಕು ನಾಯಕರತ್ನಗಳಲ್ಲಿ ಭರತ, ಶ್ರೀಕೃಷ್ಣರೊಂದಿಗೆ ಅಲ್ಲಮನಿಗೂ ಅವರು ಗೌರವದ ಸ್ಥಾನವನ್ನು ಕೊಟ್ಟರು.3 ಉಯ್ಯಾಲೆಯಲ್ಲಿ 'ಅಲ್ಲಮಪ್ರಭು'ವನ್ನುದ್ದೇಶಿಸಿದ ಸುನೀತವಿದೆ.4 ಅವರ ಅನೇಕ ಕನ್ನಡ ಮತ್ತು ಮರಾಠೀ ಲೇಖನಗಳಲ್ಲಿ ಅಲ್ಲಮನ ಪ್ರಸ್ತಾಪ ಮೇಲಿಂದ ಮೇಲೆ ಬರುತ್ತದೆ. ಇಷ್ಟೇ ಅಲ್ಲದೆ, ಬೇಂದ್ರೆಯವರಿಗೆ ಜ್ಞಾನಪೀಠ ಪ್ರಶಸ್ತಿ ದೊರಕಿಸಿಕೊಟ್ಟ ಶೀರ್ಷಿಕೆ ಕವನಕ್ಕೆ ಅಲ್ಲಮನ ವಚನವೇ ಆಧಾರವಾಗಿದೆ.

ಅಲ್ಲಮನ ಶ್ರೇಷ್ಠತೆಯನ್ನು ಬೇಂದ್ರೆಯವರು ಒಪ್ಪಿಕೊಂಡಿರುವುದಕ್ಕೆ ಹಲವಾರು ಕಾರಣಗಳಿವೆ. ಇವುಗಳಲ್ಲಿ ಅತಿ ಮುಖ್ಯವಾದುದೇಂದರೆ ಅವರು ಪ್ರಭುವಿನಲ್ಲಿ ಕಂಡ ಅಸಾಮಾನ್ಯ ಹಾಗೂ ಪರಿಪೂರ್ಣ ವ್ಯಕ್ತಿತ್ವ. ಇದರ ಸಕೃದ್ದರ್ಶನ ಅವರ 'ಅಲ್ಲಮಪ್ರಭು' ಸುನೀತದಲ್ಲಿದೆ.

ನೀರ, ನೇಹಿಗ, ನಂಟ, ಬಂಟ, ಸಂವಾದಿ, ಗುರು,
ಶಿಷ್ಯ ಪ್ರೀತಿಯ ಜಾತಿಗಾರ : ಎಲ್ಲಿರುವೆ
ರಸಸಿದ್ಧ ?

ಎಂದು ಆವನಿಗಾಗಿ ಅವರು ಹಂಬಲಿಸಿದ್ದಾರೆ. ಆತನ ಶ್ರೇಷ್ಠ ಸಾಧನೆಯನ್ನು ಸ್ಮರಿಸುತ್ತ,

ವಚನ ವಿದ್ಯಾನಟಿಯು ಕುಣಿಕುಣಿದಳಿಂದು, ಮ
ದ್ದಳೆಯು ಸೊಲ್ಲಿಗೆ ವಿವಿಧ ಭಂಗಿಯಲಿ ; ಶೂನ್ಯದಲಿ
ಹುಟ್ಟುಗಟ್ಟಿತು ಹದುಳದೊಂದು ಹುಣ್ಣಿಮೆ ಬೆಡಗು
ಬಿನ್ನಾಣ ಬಿಡಿಸಿ, ಬೆಳುದಿಂಗಳವ ಕುಡಿದೆ ಮಧು
ಮತ್ತ ಚಿ-ತ್ತ–ಚಕೋರ ಕೇಳುತಿ-ದೆ–ಹೇಳುತಿ-ದೆ
"ಬೇರೆ ದರುಶನವೇಕೆ ? ಮಾತೆ–ಜ್ಯೋತಿರ್ಲಿಂಗ !"

ಎಂದು ಉದ್ಗರಿಸುತ್ತಾರೆ. ಶಬ್ದಬ್ರಹ್ಮನ ಉಪಾಸಕರಾಗಿದ್ದ ಬೇಂದ್ರೆಯವರಿಗೆ 'ಮಾತೆ ಜ್ಯೋತಿರ್ಲಿಂಗ' ಎಂಬ ವಚನ ಬೀಜಮಂತ್ರವಾದುದರಲ್ಲಿ ಆಶ್ಚರ್ಯವಿಲ್ಲ.

ಅಲ್ಲಮನಲ್ಲಿ ಬೇಂದ್ರೆಯರು ಮಹಾತ್ಮದ ಮೂರು ಮುಖಗಳನ್ನು ಕಂಡರು. ಇವುಗಳಲ್ಲಿ ಅವರಿಗೆ ಅತ್ಯಂತ ಮುಖ್ಯವೆನ್ನಿಸಿದ್ದು ಪ್ರಭುವಿನ ನಿರಹಂಕಾರ. "ಪ್ರಭು ಆದವನು ಸುಜ್ಞಾನಿಯಾಗಿದ್ದೂ ನಿರಹಂಕಾರಿಯಾಗಿರಬೇಕು"[5] ಎಂದು ಅವರು ಹೇಳುತ್ತಾರೆ. ನಿರಹಂಕಾರ—ಸುಜ್ಞಾನಗಳನ್ನು ತಂದೆ–ತಾಯಿಯರನ್ನಾಗಿ ಪಡೆದ ಅಲ್ಲಮನಿಗೆ ಜ್ಞಾನ–ನಿರಹಂಕಾರಗಳೆರಡೂ ರಕ್ತಗತವಾದ ಗುಣಗಳೇ ಆಗಿದ್ದವು. 'ಅಲ್ಲಮ'ನೆಂಬ ಹೆಸರಿನ ಉತ್ಪತ್ತಿಯನ್ನು ವಿವರಿಸುತ್ತ ಚಾಮರಸ ಅಲ್ಲಮ ಹೇಳುವ ಮಾತು

ಬಿರಿದಿನ ಬಿಂಕಕಾರ
ವಾಸಿಗರನಲ್ಲೆನಿಸುವಲ್ಲಮನೆಂಬ ಪೆಸರೆನಗೆ

ಬೇಂದ್ರೆಯವರಿಗೆ ಸಂಪೂರ್ಣವಾಗಿ ಒಪ್ಪಿತವಾದದ್ದು. ನಿರಹಂಕಾರದಂತೆ ಜ್ಞಾನವೂ ಅಲ್ಲಮನ ಸೊತ್ತು. "ಜ್ಯೋತಿ ಎಂದರೆ ಮಾರ್ಗದರ್ಶನ ಶಕ್ತಿ"6 ಎಂದು ಬೇಂದ್ರೆ ಹೇಳುತ್ತಾರೆ. ತನ್ನ ದಿಗ್ವಿಜಯದಲ್ಲಿ ಅಲ್ಲಮ ಅನೇಕ ಭಕ್ತರ ಜೀವನಕ್ಕೆ ಬೆಳಕು ನೀಡಿ ಮಾರ್ಗದರ್ಶನ ಮಾಡುತ್ತಾನೆ. ಪರಿತಪಿಸುವವರನ್ನು ಉದ್ಧರಿಸುತ್ತಾನೆ. ಇದು ಅವನ ಜ್ಞಾನದ ಶಕ್ತಿ. ಅಲ್ಲಮನಲ್ಲಿ ಬೇಂದ್ರೆಯವರು ಕಂಡ ಇನ್ನೊಂದು ಮಹಾತ್ಮವೆಂದರೆ ಅವನ ರಸಾದ್ರ್ರತೆ. ಆತನನ್ನು ಅವರು "ರಸಾದ್ರ್ರವಾಗಿದ್ದ ಶಿವಸ್ವರೂಪಿನ ಸಾಕ್ಷಾತ್ ಅಂಶ" ಎಂದು ವರ್ಣಿಸಿದ್ದಾರೆ. ಪ್ರಭುಲಿಂಗ ಲೀಲೆಯ

ಪರಮಾನಂದ ರಸಭರಿತ
ಜಾತನಲ್ಲ, ವಿಚಾರಿಸುವೊಡೆಯು
ಜಾತನಲ್ಲ

ಎಂಬ ಉಕ್ತಿಯನ್ನು ಉದ್ಧರಿಸುತ್ತ—"ಪ್ರಭುದೇವರಲ್ಲಿದ್ದ ರಸ ಲೌಕಿಕ ರಸವಲ್ಲ, ಅದು ಅಲೌಕಿಕ ರಸ. ಅಲ್ಲಮ ಪ್ರಭುದೇವರೆಂದರೆ ರಸಪುರುಷ"7 ಎಂದಿದ್ದಾರೆ.

ಅಲ್ಲಮಪ್ರಭುವಿನ ನಿಜರೂಪವನ್ನು ಸಾಕ್ಷಾತ್ಕರಿಸಿಕೊಳ್ಳಲು ಬೇಂದ್ರೆಯವರು ಹರಿಹರ, ಚಾಮರಸ, ಶೂನ್ಯಸಂಪಾದನಕಾರರು—ಹೀಗೆ ಅನೇಕ ಮೂಲಗಳನ್ನು ಶೋಧಿಸಿದರು. ಅಲ್ಲಮನ ಜೀವನದಲ್ಲಿ ಆತ ಮಾಯೆಯನ್ನು ಸಂಧಿಸಿದುದು ಮಹತ್ವದ ಘಟನೆಯೆನ್ನುವುದನ್ನೂ ಬೇಂದ್ರೆಯವರು ಎತ್ತಿ ತೋರಿಸಿದ್ದಾರೆ. ಈ ದೃಷ್ಟಿಯಿಂದ ಚಾಮರಸ ಈ ಘಟನೆಗೆ ಕೊಡುವ ಮಹತ್ವ ಸಮರ್ಪಕವಾದುದು ಎಂದು ಅವರ ಅಭಿಪ್ರಾಯ.8 ಮಾಯೆಯ ಮೇಲೆ ಅಲ್ಲಮನ ವಿಜಯವನ್ನು ತೋರಿಸುವ ಚಾಮರಸ ಅಲ್ಲಮನ ಸೋಲನ್ನು ವರ್ಣಿಸುವ ಹರಿಹರನಿಗಿಂತ ಅವರಿಗೆ ಹೆಚ್ಚು ಪ್ರಿಯನಾದವನು. ಆದರೆ ಅವರು ಅಲ್ಲಮನ ನಿಜವಾದ ಚಾರಿತ್ರಿಕ ಸತ್ವವನ್ನು ಗುರುತಿಸುವುದು **ಶೂನ್ಯಸಂಪಾದನೆಗಳಲ್ಲಿಯೇ.**

> ಒಂದು ಚರಿತ್ರ ; ಇನ್ನೊಂದು ಏನೆಂದರೂ ಕಾವ್ಯ...'ಪ್ರಭುಲಿಂಗ ಲೀಲೆ'ಯು ಮೆಚ್ಚಬೇಕಾದ ಕಾವ್ಯ. 'ಪ್ರಭುಲಿಂಗಲೀಲೆ' ತಾಯ ಮೊಲೆ ಹಾಲು ಎನ್ನಬಹುದು. ಆದರೆ ತಾಯಂದಿರ ಅನಂತ ಸಂತತಿಯ ಜೀವನಕ್ಕೆ ಜೀವನವಾದ ಗಂಗೆಯಂತೆ 'ಶೂನ್ಯ ಸಂಪಾನೆ'ಯ ವಚನ ರಚನೆ. ಪ್ರಭುವಿನ ನಡೆಯಲ್ಲಿ, ನೋಟದಲ್ಲಿ, ಮಾಟದಲ್ಲಿ, ತಪಸ್ವಿ ದಧೀಚಿಯ ಎಲುಬಿನಿಂದ ಸಮೆದ ವಜ್ರದಂಥ ಪ್ರಚಂಡ ಶಕ್ತಿಯಿದೆ.9

ಮಾತು ಹೇಗೆ ಜ್ಯೋತಿರ್ಲಿಂಗವಾಗಬಹುದು ಎನ್ನುವುದಕ್ಕೆ

ಮುಕ್ತಾಯಕ್ಕ-ಅಲ್ಲಮರ ಸಂವಾದವನ್ನು ಬೇಂದ್ರೆಯವರು ಒಂದಕ್ಕಿಂತ ಹೆಚ್ಚು ಸಲ ಉದಾಹರಿಸಿದ್ದಾರೆ. ಆದರೆ ಅವರ ಮೇಲೆ ಆತ್ಯಂತಿಕವಾದ ಪ್ರಭಾವವನ್ನು ಬೀರಿದವಚನ

ನಾನೆಂಬುದು ಪ್ರಮಾಣು, ನೀನೆಂಬುದು ಪ್ರಮಾಣು,
ಸ್ವಯಂ ಎಂಬುದು ಪ್ರಮಾಣು, ಪರಂ ಎಂಬುದು ಪ್ರಮಾಣು,
ಪ್ರಮಾಣು ಎಂಬುದು ಪ್ರಮಾಣು, ಗುಹೇಶ್ವರನೆಂಬುದು
ಅಪ್ರಮಾಣು10

ಈ ವಚನ ಅವರ 'ಕಾವ್ಯೋದ್ಯೋಗ'ವಲ್ಲದೆ ಇತರ ಅನೇಕ ಸ್ಥಳಗಳಲ್ಲಿ ಉದ್ಧೃತ ವಾಗಿದೆ. ಉದಾಹರಣೆಗೆ : **ಸಂತ ಮಹಂತಾಂಚಾ ಪೂರ್ಣ ಶಂಭೂ ವಿಠ್ಠಲ** ಎಂಬ ಅವರ ಮರಾಠೀ ಗ್ರಂಥದಲ್ಲಿ ಅವರು ಈ ವಚನಕ್ಕೆ ಕೊಡುವ ವ್ಯಾಖ್ಯಾನವನ್ನು ನೋಡ ಬಹುದು ;

ಅನುಭವೀ ಸಂವಾದದಲ್ಲಿ ನನಗೆ 'ನೀನು' ಪ್ರಮಾಣ, 'ನಾನು' ನಿನಗೆ ಪ್ರಮಾಣವಾಗದಿದ್ದರೆ ಸಂವಾದ ಹೇಗೆ ಸಾಧ್ಯ ? ಹಾಗೆಯೆ 'ಸ್ವಯಂ' ಮತ್ತು 'ಪರಂ'ಗಳ ಸಾಮಂಜಸ್ಯ ಅನುಭವ ವೇದ್ಯವಾಗದಿದ್ದರೆ, ಪ್ರಮಾಣವೇ ನಿಂತು ಹೋಗುತ್ತದೆ. ಸ್ವಯಂ ಪ್ರಮಾಣದ ಅಧಿಷ್ಠಾನವಿಲ್ಲದೆ ಅನುಭವ ಮಾರ್ಗದಲ್ಲಿ ಕಾಲಿಡುವುದಾದರೂ ಹೇಗೆ ? ಇಂಥ ಪ್ರಶ್ನೆಗಳನ್ನು ಕೇಳಿ ಅಲ್ಲಮ ದಿಕ್ಕು ತೋರಿದ್ದಾನೆ. ಹಾಗೆಯೆ ಮೌನಿಗಳೆಲ್ಲ ಬ್ರಹ್ಮಜ್ಞಾನಿಗಳಾಗುತ್ತಾರೆ ಅಥವಾ ಬ್ರಹ್ಮ ಜ್ಞಾನಿಗಳೆಲ್ಲ ಮೌನಿಗಳಾಗಿರಬೇಕು ಎಂದು ಒಳ್ಳೊಳ್ಳೆಯವರಲ್ಲಿಯೂ ಭ್ರಮೆ ಇರುತ್ತದೆ. ಆದರೆ ಮುಕ್ತಾಯಕ್ಕನನ್ನು ಅಲ್ಲಮಪ್ರಭು ಮಾತಿನಲ್ಲಿಯೇ ಹೇಗೆ ಎಚ್ಚರಿಸಿದ ಎನ್ನುವುದನ್ನು ಒಂದು ಸಂಭಾಷಣೆಯಲ್ಲಿ ಮಂಡಿಸಲಾಗಿದೆ.11

ಅಲ್ಲಮನ ವಚನದಲ್ಲಿನ 'ನಾನು', 'ನೀನು', 'ಸ್ವಯಂ', 'ಪರಂ' ಚತುರ್ಮುಖ ದರ್ಶನ ಬೇಂದ್ರೆಯವರ ಅನೇಕ ಕವನಗಳಲ್ಲಿ ಅಭಿವ್ಯಕ್ತಿ ಪಡೆದು 'ನಾಕು ತಂತಿ'ಯಲ್ಲಿ ನಿರ್ಣಾಯಕ ಸ್ವರೂಪವನ್ನು ಹೊಂದಿದೆ.

ನಾನು ನೀನು
ಆನು ತಾನು
ನಾಕೇ ನಾಕು ತಂತಿ–12

'ಆತ್ಮಾ ಚತುಷ್ಪಾತ್' ಎಂಬ ಮಾತು ಉಪನಿಷತ್ತುಗಳಲ್ಲಿದೆ. ಆದರೆ

ಬೇಂದ್ರೆಯವರ ಸಾಲುಗಳ ನಿಜವಾದ ಮೂಲ ಅಲ್ಲಮನ ವಚನದಲ್ಲಿದೆ ಎಂದೆನಿಸುತ್ತದೆ. ಇಲ್ಲಿ 'ನಾನು' 'ನೀನು' ಹಾಗೆಯೆ ಉಳಿದು 'ಸ್ವಯಂ' ಎನ್ನುವುದು 'ಆನು' ಆಗಿ 'ಪರಂ' 'ತಾನು' ಆಗಿ ಪರಿವರ್ತಿತವಾಗಿವೆ.

ಕನ್ನಡದ ಶಕ್ತಿಯಲ್ಲಿ ಬೇಂದ್ರೆಯವರಿಗೆ ಅಪಾರ ಶ್ರದ್ಧೆಯಿತ್ತು. "ಮನದೆಲ್ಲ ದಾಹವನ್ನು ಶಮನಗೊಳಿಸುವ ರಸಸ್ಫುರಿಯು ಕನ್ನಡದ ಕೆಚ್ಚಿನಲ್ಲಿದೆ. ಚಿತ್ತದ ಎಲ್ಲ ಪೊರೆಗಳನ್ನೂ ಬಿಚ್ಚಿ ತೋರಿಸುವ ಕಸುವು ಕನ್ನಡ ನುಡಿಗಿದೆ"[13] ಎಂದು ಅವರು ಹೇಳಿದ್ದಾರೆ. ಈ ಶ್ರದ್ಧೆಯನ್ನು ಅವರು ವಚನಕಾರರ ಮೂಲಕವಾಗಿ—ಅದರಲ್ಲಿಯೂ ಮುಖ್ಯವಾಗಿ ಅಲ್ಲಮಪ್ರಭುವಿನ ಮೂಲಕವಾಗಿ ಪಡೆದುಕೊಂಡರು ಎಂದು ನಿಃಸಂಶಯವಾಗಿ ಹೇಳಬಹುದು.

## ಟಿಪ್ಪಣಿಗಳು

1. ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ, 1974 ; ಪ. 196.
2. ಅಂಬಿಕಾತನಯದತ್ತ, ನಮನ, ಸಮಾಜ ಪುಸ್ತಕಾಲಯ, ಧಾರವಾಡ, 1958, ಪು. 91.
3. ದ.ರಾ. ಬೇಂದ್ರೆ, ಕನ್ನಡಸಾಹಿತ್ಯದಲ್ಲಿ ನಾಲ್ಕು ನಾಯಕ ರತ್ನಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1968.
4. ಅಂಬಿಕಾತನಯದತ್ತ, ಉಯ್ಯಾಲೆ, ಕಾವ್ಯಾಲಯ, ಮೈಸೂರು, 1950, ಪು. 16.
5. ಕನ್ನಡ ಸಾಹಿತ್ಯದಲ್ಲಿ ನಾಲ್ಕು ನಾಯಕರತ್ನಗಳು, ಪು. 35.
6. ಅದೇ
7. ಅದೇ, ಪು. 30
8. ಅದೇ, ಪು. 32.
9. ಸಾಹಿತ್ಯದ ವಿರಾಟ್ ಸ್ವರೂಪ, ಪು. 499.
10. ಎಲ್. ಬಸವರಾಜು, ಅಲ್ಲಮನ ವಚನ ಚಂದ್ರಿಕೆ.
11. ದ.ರಾ. ಬೇಂದ್ರೆ, ಸಂತ ಮಹಂತಾಂಚಾ ಪೂರ್ಣ ಶಂಭೂ ವಿಠ್ಠಲ ಶಿಕ್ಷಣ ಪ್ರಸಾರಕ ಮಂಡಳೀ, ಸರ ಪರಶುರಾಮಭಾವೂ ಮಹಾವಿದ್ಯಾಲಯ, ಪುಣೆ, ಪು. 12.
12. ಅಂಬಿಕಾತನಯದತ್ತ, ನಾಕು ತಂತಿ, ಸಮಾಜ ಪುಸ್ತಕಾಲಯ, ಧಾರವಾಡ, 1964, ಪು. 10.
13. ದ.ರಾ. ಬೇಂದ್ರೆ, ಸಾಹಿತ್ಯ ಸಂಶೋಧನ, ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ, 1940, 'ಲೇಖಕನ ನುಡಿ'

# ನವ್ಯ ಕಥಾಸಾಹಿತ್ಯ – ಅಪೂರ್ವ ಸಿದ್ಧಿ

ಡಾ|| ನರಹಳ್ಳಿ ಬಾಲಸುಬ್ರಹ್ಮಣ್ಯ

ಕನ್ನಡ ಸಾಹಿತ್ಯದಲ್ಲಿ ನವ್ಯತೆ ಮೊದಲು ಕಾವ್ಯ ಮತ್ತು ಸಣ್ಣಕತೆ ಎರಡೂ ಪ್ರಕಾರಗಳಲ್ಲಿ ಕಾಣಿಸಿಕೊಂಡಿತು. ಕಾವ್ಯದಂತೆ ಸಣ್ಣಕತೆಯೂ ಪ್ರಯೋಗಶೀಲತೆಗೆ ಉತ್ತಮ ಮಾಧ್ಯಮವಾಗಿರುವುದು ಮತ್ತು ಕನ್ನಡದ ಪ್ರತಿಭಾವಂತ ಮನಸ್ಸುಗಳು ಸಣ್ಣಕತೆಯ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡದ್ದು ಇದಕ್ಕೆ ಕಾರಣವಿರಬಹುದು. ಗೋಪಾಲಕೃಷ್ಣ ಅಡಿಗರ ಪ್ರಖರ ಪ್ರತಿಭೆಗೆ ಸವಾಲಾಗುವಂಥ ಪ್ರತಿಭೆಯನ್ನು ನವ್ಯ ಸಾಹಿತ್ಯ ಸಂದರ್ಭದಲ್ಲಿ ನಾವು ಗುರ್ತಿಸಬಹುದಾದರೆ ಅದು ಸಣ್ಣಕತೆಯ ಪ್ರಕಾರದಲ್ಲಿ. ನವ್ಯಸಾಹಿತ್ಯದ ಇತರ ಯಾವುದೇ ಪ್ರಕಾರದಲ್ಲಿ ಕಾಣಸಿಗದಷ್ಟು ವೈವಿಧ್ಯಮಯವಾದ ಪ್ರತಿಭೆಯನ್ನು ನಾವು ಸಣ್ಣ ಕತೆಯ ಕ್ಷೇತ್ರದಲ್ಲಿ ಕಾಣುತ್ತೇವೆ. ಅನಂತಮೂರ್ತಿ, ಯಶವಂತಚಿತ್ತಾಲ, ಲಂಕೇಶ, ಶಾಂತಿನಾಥದೇಸಾಯಿ, ಪೂರ್ಣಚಂದ್ರತೇಜಸ್ವಿ, ಸದಾಶಿವ, ಖಾಸನೀಸ–ಮೊದಲಾದವರ ಸಾಧನೆ ಯಾವುದೇ ಭಾಷೆಯ ಸಾಹಿತ್ಯಕ್ಕೂ ಹೆಮ್ಮೆ ತರುವಂಥದಾಗಿದೆ.

ಸಣ್ಣಕತೆಯ ಸಾಧನೆಯ ಸಮಗ್ರ ಅಭ್ಯಾಸ ನಮ್ಮಲ್ಲಿನ್ನೂ ಆಗಬೇಕಾಗಿದೆ. ಗಿರಡ್ಡಿ ಗೋವಿಂದರಾಜ ಅವರು ತಮ್ಮ 'ಸಣ್ಣಕತೆಯ ಹೊಸ ಒಲವುಗಳು' ಪುಸ್ತಕದಲ್ಲಿ ನವ್ಯಕಥಾ ಸಾಹಿತ್ಯವನ್ನು ಕುರಿತು ಚರ್ಚಿಸಿದ್ದಾರೆ. ಆದರೆ ಈ ಪ್ರಕಾರದ ಅಸಾಮಾನ್ಯ ಸಾಧನೆಯ ಸ್ವರೂಪವನ್ನು ಕನ್ನಡ ವಿಮರ್ಶೆ ಇನ್ನೂ ವಿವರವಾಗಿ ಪರಿಶೀಲಿಸಿದಂತಿಲ್ಲ. ಮಾಸ್ತಿಯವರ ಪರಂಪರೆ, ಪ್ರಗತಿಶೀಲ ಕಥಾ ಸಾಹಿತ್ಯ, ಕಥಾ ಸಾಹಿತ್ಯದಲ್ಲಿ ಕಾಣಿಸಿಕೊಂಡ ನವ್ಯಮನೋಧರ್ಮ, ಅನಂತರದಲ್ಲಿ ನವ್ಯ ಕಥಾ ಸಾಹಿತ್ಯ ತನ್ನ ಮಿತಿಗಳನ್ನು ಗುರ್ತಿಸಿಕೊಂಡು ಅದನ್ನು ಮೀರಿ ಗಳಿಸಿದ ಯಶಸ್ಸು–ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಣ್ಣು ಸೆಳೆಯುವಂಥದು. ಹಾಗೆ ನೋಡಿದರೆ ನವ್ಯಕಾವ್ಯಕ್ಕಿಂತಲೂ ಸಣ್ಣ

ಕತೆಯ ಸಾಧನೆ ಹೆಚ್ಚು ಮಹತ್ವದ್ದೆನ್ನಿಸುತ್ತದೆ. ಪ್ರಮುಖ ನವ್ಯಲೇಖಕರಲ್ಲೊಬ್ಬರಾದ ಶಾಂತಿನಾಥ ದೇಸಾಯಿಯವರು ನವ್ಯ ಸಣ್ಣಕತೆಯ ಸಾಧನೆಯನ್ನು ಹೀಗೆ ಗುರ್ತಿಸುತ್ತಾರೆ : 'ಅರವತ್ತರ ಸಣ್ಣಕಥಾ ಪ್ರಪಂಚವು ನನ್ನ ಮಟ್ಟಿಗೆ ಕಾವ್ಯಕ್ಕಿಂತ ಅರ್ಥಪೂರ್ಣವಾದುದು. ಜೀವನಾನುಭವದ ಪ್ರತ್ಯಕ್ಷ ಪ್ರದರ್ಶನ ಸಣ್ಣಕತೆಗಳ ವೈವಿಧ್ಯಮಯವಾದ ಚುಟುಕು ದರ್ಶನಗಳಲ್ಲಿ ಚುರುಕಾಗಿ ಮೂಡಿಬಂತು. ಕಾದಂಬರಿಗಳಿಗಿಂತ ನವ್ಯಕತೆ ಹೆಚ್ಚು ಸೂಕ್ಷ್ಮವಾಗಿ, ಹೆಚ್ಚು ರಸವತ್ತಾಗಿ, ಹೆಚ್ಚು ಚಲನಶೀಲವಾಗಿ ಹೆಚ್ಚು ವೈವಿಧ್ಯಮಯವಾಗಿ ಕೆಲಸ ಮಾಡಿದೆ. ಕನ್ನಡದಲ್ಲಿ ಕಾದಂಬರಿ ತನ್ನೆಲ್ಲ ಸಾಧ್ಯತೆಗಳನ್ನು ಕಂಡುಕೊಂಡಿಲ್ಲವೆಂದು ನನ್ನ ಮತ ; ಆದರೆ ಸಣ್ಣಕತೆಯ ಕೃಷಿ ಮಾತ್ರ ಅಗಾಧವಾಗಿದೆ.' (ನವ್ಯ ಸಾಹಿತ್ಯ ದರ್ಶನ, 1990)

ಮುಂದುವರೆದು ದೇಸಾಯಿಯವರು ಒಂದು ಪ್ರಮುಖ ತಾತ್ವಿಕ ಪ್ರಶ್ನೆಯೆತ್ತುತ್ತಾರೆ : ನವ್ಯ ಕಾದಂಬರಿ ಸಾಕಷ್ಟು ಮಹತ್ವಾಕಾಂಕ್ಷೆಯನ್ನು ಹೊತ್ತುಕೊಂಡೇ ಆರಂಭವಾಯಿತು. ಆದರೆ ನವ್ಯಮನೋಧರ್ಮದಲ್ಲಿಯೇ ಕಾದಂಬರಿ ಸೃಷ್ಟಿಗೆ ಬೇಕಾದ 'ವಿಶಾಲ ದೃಷ್ಟಿ' ಇಲ್ಲವೇನೋ. ಸಣ್ಣಕತೆಯೇ ಅಸ್ತಿತ್ವವಾದೀ ಭೂಮಿಕೆಗೆ ತಕ್ಕುದಾದ ಸಾಹಿತ್ಯ ಪ್ರಕಾರವೇನೋ. ನಕಾರಾತ್ಮಕ, ವ್ಯಂಗ್ಯಾತ್ಮಕ ದೃಷ್ಟಿಕೋನವೇ ಪ್ರಮುಖವಾದ ನವ್ಯತೆಗೆ ಜೀವನ ವಿಚ್ಛಿದ್ರವಾಗಿಯೇ, ವಿಘಟನೆಯ ರೂಪದಲ್ಲಿಯೇ ಕಾಣಿಸುವುದರಿಂದ ವಿಶಾಲ ಕಾಣ್ಕೆಯ ಪ್ರತಿಫಲವಾದ ಕಾದಂಬರಿಗಿಂತ ತುಣುಕು ತುಣುಕಾದ ಅನುಭವಗಳಿಗೆ ಚಿಕ್ಕ ಕಾದಂಬರಿ, ಸಣ್ಣಕತೆಗಳ ಪ್ರಕಾರವೇ ಯೋಗ್ಯವಾಗಿರಬೇಕು. ಒಂದು ನಿರ್ದಿಷ್ಟ ಮನೋಧರ್ಮ ತನಗೆ ತನ್ನ ಪ್ರಕಾರವನ್ನು ತಾನೇ ಆಯ್ದುಕೊಳ್ಳುತ್ತದೆಯೇ? ಆ ಮನೋಧರ್ಮದ ಸಾಹಿತ್ಯ ಚಳವಳಿಯಲ್ಲಿ ಒಂದು ಸಾಹಿತ್ಯ ಪ್ರಕಾರದ ಸಾಧನೆ ಹೆಚ್ಚು ಮಹತ್ವದ್ದಾಗುವುದು ಸಹಜವೇ ? ಒಂದು ಮನೋಧರ್ಮಕ್ಕೂ, ಸಾಹಿತ್ಯ ಪ್ರಕಾರಕ್ಕೂ ಸಂಬಂಧಿಸಿದಂತೆ ದೇಸಾಯಿಯವರು ಎತ್ತಿರುವ ಈ ಜಟಿಲ ಪ್ರಶ್ನೆ ಗಂಭೀರ ಚರ್ಚೆಯನ್ನು ಬಯಸುವಂಥದು. ನವ್ಯಕಥಾ ಸಾಹಿತ್ಯದ ಚರ್ಚೆಯಲ್ಲಿನ ಈ ಅಂಶ ಒಟ್ಟು ಸಾಹಿತ್ಯದ ಬಗ್ಗೆಯೇ ಕೆಲವು ಮಹತ್ವದ ಸಂಗತಿಗಳನ್ನು ಅರಿಯಲು ನೆರವಾಗುವಂಥದು.

ತ. ರಾ. ಸು. ಅವರ 0–0=0 ಚಾರಿತ್ರಿಕವಾಗಿ ನವ್ಯಪ್ರಜ್ಞೆಯ ಕೆಲವು ಅಂಶಗಳನ್ನು ಪ್ರಕಟಿಸಿದ ಮೊದಲ ಕತೆಯೆಂದು ವಿಮರ್ಶಕರು ಈಗಾಗಲೇ ಗುರ್ತಿಸಿದ್ದಾರೆ. ಆದರೆ ನವ್ಯತೆಯನ್ನು ಅದರ ನಿಜವಾದ ಅರ್ಥದಲ್ಲಿ ಕಥಾಸಾಹಿತ್ಯದಲ್ಲಿ ಮೊದಲಿಗೆ ತಂದವರು ಬಿ. ಸಿ. ರಾಮಚಂದ್ರಶರ್ಮರು. 'ಯಾರು ಹಿತವರು ನಿನಗೆ' 'ಸೆರಗಿನ ಕೆಂಡ'– ಮೊದಲಾದ ಕತೆಗಳಲ್ಲಿ ಶರ್ಮರು ಮನುಷ್ಯನ ಮೂಲಭೂತ ಪ್ರವೃತ್ತಿ ಹಾಗೂ ತೊಳಲಾಟಗಳನ್ನು ಯಾವುದೇ ಮೌಲ್ಯಗಳ ಭಾರವಿಲ್ಲದೆ ವಸ್ತುನಿಷ್ಠವಾಗಿ, ಆದರೆ ತೀವ್ರತೆಯಿಂದ ಚಿತ್ರಿಸಿದ್ದಾರೆ. ಸಂಪ್ರದಾಯದ ಸಮಾಜ, ಅದನ್ನು ಪ್ರತಿಭಟಿಸಿ ಹೊಸ

ಬಾಳನ್ನು ಬದುಕಬೇಕೆಂಬ ಇರಾದೆ—ಇವುಗಳ ನಡುವಿನ ದ್ವಂದ್ವ ಆಧುನಿಕ ಮನಸ್ಸಿನ ಸಮಸ್ಯೆ. ದ್ವಂದ್ವ ವ್ಯಕ್ತಿತ್ವದ ಈ ಸಮಸ್ಯೆಯನ್ನು ಶರ್ಮರು ಮನೋವಿಜ್ಞಾನದ ಹಿನ್ನೆಲೆಯಲ್ಲಿ ಸಮರ್ಥವಾಗಿ ತಮ್ಮ ಕತೆಗಳನ್ನು ಹಿಡಿದಿಟ್ಟರು. ಅನಂತರದಲ್ಲಿ ಇದು ಕನ್ನಡ ಸಾಹಿತ್ಯದ ಕೇಂದ್ರಪ್ರಜ್ಞೆಯಾಗಿ ವಿವಿಧ ರೂಪಗಳಲ್ಲಿ ದಟ್ಟವಾಗಿ ಕಾಣಿಸಿಕೊಂಡಿತು.

ಅನಂತಮೂರ್ತಿ, ಯಶವಂತಚಿತ್ತಾಲ, ಲಂಕೇಶ, ಶಾಂತಿನಾಥ ದೇಸಾಯಿ, ಸದಾಶಿವ–ಇವರ ಪ್ರವೇಶ ಸಣ್ಣಕತೆಗೆ ಹೊಸ ಆಯಾಮವನ್ನೇ ನೀಡಿತು. ಸಣ್ಣಕತೆಗೆ ಒಂದು ಗಟ್ಟಿಯಾದ ನೆಲೆಗಟ್ಟನ್ನು ಒದಗಿಸಿಕೊಟ್ಟಿದ್ದ ಮಾಸ್ತಿಯವರ ಪರಂಪರೆಗಿಂತ ಭಿನ್ನವಾಗಿ, ಪ್ರಗತಿಶೀಲರ ಮಿತಿಗಳನ್ನು ಅರ್ಥಮಾಡಿಕೊಂಡು ಸಮಕಾಲೀನ ಸಂವೇದನೆಯ ಅಗತ್ಯಕ್ಕೆ ಸಹಜವಾಗಿ ಸ್ಪಂದಿಸಿದ ಸೃಜನಶೀಲ ಮನಸ್ಸು ಸಂಪೂರ್ಣವಾಗಿ ಹೊಸ ಜಾಡು ಹಿಡಿಯಿತು. ಪರಿಣಾಮವಾಗಿ 'ಇವುಗಳು ಕತೆಯೇ ?' ಎನ್ನುವಂತಹ ಟೀಕೆಯನ್ನು ನವ್ಯಕಾವ್ಯದಂತೆ ನವ್ಯಕತೆಯೂ ಎದುರಿಸಬೇಕಾಯಿತು. ಲಂಕೇಶರು 'ನವ್ಯಕತೆ ಹೇಗೆ ನವ್ಯ' ಎಂಬ ಲೇಖನವನ್ನು ಬರೆದು ನವ್ಯಕತೆಯ ರೀತಿಯನ್ನು ವಿವರಿಸಬೇಕಾಯಿತು. ಇಂಥ ಪ್ರತಿಕ್ರಿಯೆ ತೀರ ಸಹಜವೆನ್ನಿಸುತ್ತದೆ. ಏಕೆಂದರೆ ಆನಂದರ 'ನಾನು ಕೊಂದ ಹುಡುಗಿ' ಯಂಥ ಕತೆಯನ್ನು ಓದಿ ಉದ್ಗಾರ ತೆಗೆದ ಮನಸ್ಸು ಶಾಂತಿನಾಥ ದೇಸಾಯಿ ಅವರ 'ಕ್ಷಿತಿಜ' ವನ್ನೋ, ಅನಂತಮೂರ್ತಿಯವರ 'ಕ್ಲಿಪ್ ಜಾಯಿಂಟ್' ಕತೆಯನ್ನೋ ಅಥವಾ ಲಂಕೇಶರ 'ನಿವೃತ್ತರು' ಕತೆಯನ್ನೋ ಓದಿದಾಗ ಆಗುವ ಅನುಭವ ತೀರ ಭಿನ್ನವಾದುದು. ನೇರವಾಗಿ ಸರಳವಾಗಿ ಹೇಳುವ ಮಾಸ್ತಿ, ಆನಂದರ ರೀತಿಗೂ, ಅನುಭವದ ಸಂಕೀರ್ಣತೆಯನ್ನು ಅದರ ಎಲ್ಲ ಮಗ್ಗುಲುಗಳಲ್ಲೂ ಶೋಧಿಸಬಯಸಿದ ಹೊಸ ರೀತಿಗೂ ಅಗಾಧ ವ್ಯತ್ಯಾಸವಿತ್ತು.

ನವ್ಯಸಣ್ಣಕತೆ ಮನುಷ್ಯನ ವ್ಯಕ್ತಿತ್ವದ ಬಗ್ಗೆಯೇ ಹೊಸ ಕಲ್ಪನೆ ಮೂಡಿಸಿತು. ಮಾನವ ವ್ಯಕ್ತಿತ್ವ ಗಟ್ಟಿಯಾದ ಕೆಲವು ಅಂಶಗಳನ್ನೊಳಗೊಂಡ ಒಂದು ಚೇತನ ಎಂಬ ಕಲ್ಪನೆಗೆ ಬದಲಾಗಿ ಅನೇಕ ದೌರ್ಬಲ್ಯಗಳನ್ನೊಳಗೊಂಡ ಸೂಕ್ಷ್ಮ ಮನಸ್ಸು ಎಂಬುದಾಗಿ ಪರಿಭಾವಿಸಿತು. ಹೀಗಾಗಿ ವ್ಯಕ್ತಿಯನ್ನು ಆದರ್ಶದ, ಮೌಲ್ಯದ ನೆರಳಿನಲ್ಲಿ ನೋಡದೆ ಆತನ ನಿಜದ ನೆಲೆಯಲ್ಲಿ ಕಾಣುವ, ಮುಖವಾಡವನ್ನು ಕಳಚಿ ಕಟುವಾಸ್ತವದ ಸಂದರ್ಭದಲ್ಲಿ ಅರ್ಥೈಸುವ ಪ್ರಯತ್ನವನ್ನು ನವ್ಯ ಕಥಾಸಾಹಿತ್ಯ ಯಶಸ್ವಿಯಾಗಿ ಮಾಡಿತು. ಈ ಉದ್ದೇಶ ಸಾಧನೆಗಾಗಿ ಸಣ್ಣಕತೆ ಗದ್ಯಸಾಧ್ಯತೆಗಳ ಜೊತೆಗೆ ಕಾವ್ಯವ್ಯಾಪಾರದ ಅನೇಕ ಸೂಕ್ಷ್ಮಗಳನ್ನೂ ಒಳಗೊಳ್ಳುತ್ತಾ ಹೋಯಿತು. ಕಾವ್ಯಕ್ರಿಯೆಯ ಗಾಢತೆ ಹಾಗೂ ಧ್ವನಿಶಕ್ತಿ ಸಣ್ಣಕತೆಯ ರಚನೆಯಲ್ಲಿ ಅನಿವಾರ್ಯ ಅಗತ್ಯವೆಂದಾಯಿತು. ಕತೆ ಹೆಚ್ಚು ಹೆಚ್ಚು ಸಾಂಕೇತಿಕವಾಗತೊಡಗಿತು. ಹೀಗೆ ಸಣ್ಣಕತೆ ನವ್ಯ ಸಂದರ್ಭದಲ್ಲಿ ಕಾವ್ಯದ ಹತ್ತಿರ ಹತ್ತಿರ ಬಂದಿತು ಮಾತ್ರವಲ್ಲ, ಕಾವ್ಯದ ಕೆಲವು ಅಂಶಗಳನ್ನು ಬಳಸಿಕೊಳ್ಳುವುದರ ಜೊತೆಗೆ ಗದ್ಯದ ವಿಶಿಷ್ಟತೆಯನ್ನು ಕಾಯ್ದುಕೊಳ್ಳುವ ಪ್ರಯತ್ನ

ಮಾಡಿತು. ಆಧುನಿಕ ಮನಸ್ಸಿನ ಮನೋಭೂಮಿಕೆಯ ಅಭಿವ್ಯಕ್ತಿಗೆ ಕಾವ್ಯದ ಕಾವು ಅಗತ್ಯವೆಂದು ನಂಬಿದ ನವ್ಯಲೇಖಕರು ಕತೆಯನ್ನು ಕಾವ್ಯಕಸುಬಿನಷ್ಟೇ ಎಚ್ಚರದಿಂದ ಕಟ್ಟಿದರು. ಇದು ಕತೆಯನ್ನು ಕಾವ್ಯಮಯವಾಗಿ ಬರೆಯುವ ರೀತಿಯಲ್ಲ ಎಂಬುದನ್ನು ನಾವಿಲ್ಲಿ ಮರೆಯಬಾರದು. ವಸ್ತುವಿಗೆ ತಕ್ಕ ಶರೀರವನ್ನು ಕತೆ ಪಡೆದು ಕೊಳ್ಳಬೇಕೆಂಬ ಕಲಾತ್ಮಕ ಎಚ್ಚರ ಸಣ್ಣಕತೆಯ ರಚನೆಯನ್ನು ಒಂದು ಸವಾಲಾಗಿಸಿತು. ಹಾಗೆ ನೋಡಿದರೆ ಅನಂತಮೂರ್ತಿಯವರು ತಮ್ಮ ಕತೆಗಳ ಮೂಲಕ ಬರೆದದ್ದು ಕಾವ್ಯ ವನ್ನೇ. ಚಿತ್ತಾಲರು ಕಾವ್ಯಶಿಲ್ಪವನ್ನು ಕತೆಯ ಬಂಧವನ್ನಾಗಿ ರೂಪಿಸಿಕೊಂಡದ್ದು, ಲಂಕೇಶರು ನವ್ಯಸಾಹಿತ್ಯದ ಕೇಂದ್ರಪ್ರವೃತ್ತಿ (mode) ಯಾದ 'ವ್ಯಂಗ್ಯ' ವನ್ನು ತಮ್ಮ ಕತೆಗಳ ವಿನ್ಯಾಸದಲ್ಲಿ ಸಮರ್ಥವಾಗಿ ತಂದದ್ದು—ಈ ಎಲ್ಲ ನವ್ಯ ಮಾರ್ಗದಲ್ಲಿ ಕನ್ನಡದ ಅತ್ಯುತ್ತಮ ಕಾವ್ಯ, ಕತೆಗಳ ಮೂಲಕವೂ ಅಭಿವ್ಯಕ್ತಿ ಪಡೆದಿದೆ ಎಂದು ಹೇಳುವ ಉತ್ಸಾಹವನ್ನುಂಟುಮಾಡುತ್ತದೆ.

ನವ್ಯಸಣ್ಣಕತೆಗಳಲ್ಲಿ ವ್ಯಕ್ತಿಯೇ ಕೇಂದ್ರಬಿಂದುವಾದರೂ ಈ ಕಥಾಸಾಹಿತ್ಯ ಒಳ ಗೊಂಡ ವಸ್ತುವಿಸ್ತಾರ ಸಾಮಾಜಿಕ ಸಾಂಸ್ಕೃತಿಕ ವ್ಯಾಪ್ತಿಯುಳ್ಳದ್ದು. ಅನಂತಮೂರ್ತಿ ಯವರ ಕಥಾ ಪ್ರಪಂಚವಂತೂ ಕಾದಂಬರಿಯ ಹರಹನ್ನು ಕತೆಯೊಳಗೆ ತರುವ, ಜೀವನದ ಅರ್ಥವನ್ನು ಬದುಕಿನ ಒಟ್ಟಂದದ ಹಿನ್ನೆಲೆಯನ್ನು ಶೋಧಿಸಬೇಕೆಂಬ ಘನ ವಾದ ಉದ್ದೇಶವುಳ್ಳಂಥದು. ಪರಂಪರಾಗತ ಮೌಲ್ಯಗಳನ್ನು ಆಧುನಿಕ ಬದುಕಿನ ಸಂದರ್ಭದಲ್ಲಿಟ್ಟು ಒರೆಗೆ ಹಚ್ಚಿ ನೋಡುವ ಅನಂತಮೂರ್ತಿಯವರು ಸಣ್ಣಕತೆಯ ಪ್ರಕಾರದ ಸಾಧ್ಯತೆಗಳನ್ನು ವಿಸ್ತರಿಸಿದಂಥವರು. ಅವರ ಘಟಶ್ರಾದ್ಧ, ಕಾರ್ತೀಕ, ಕ್ಲಿಪ್‌ಜಾಯಿಂಟ್ ಮೊದಲಾದ ಕತೆಗಳು ಕನ್ನಡ ಸಣ್ಣಕತೆಯ ಸಂದರ್ಭಗಳಲ್ಲಿ ಮಹತ್ವದ ರಚನೆಗಳಾಗಿವೆ. ಶಾಂತಿನಾಥ ದೇಸಾಯಿಯವರ 'ಕ್ಷಿತಿಜ', ಲಂಕೇಶರ 'ರೊಟ್ಟಿ', 'ವಾಮನ', 'ನಿವೃತ್ತರು', ಚಿತ್ತಾಲರ 'ಆಟ', 'ಪಯಣ', 'ಸೆರೆ' ಸದಾಶಿವರ 'ರಾಮನ ಸವಾರಿ ಸಂತೆಗೆ ಹೋದದ್ದು' ಮೊದಲಾದ ಕತೆಗಳ ವಸ್ತುವೈವಿಧ್ಯ, ರಚನಾ ಕ್ರಮ ನವ್ಯಸಣ್ಣಕತೆಯ ಸಾಧನೆಗೆ ಉತ್ತಮ ನಿದರ್ಶನವಾಗಿದೆ. ಇದೇ ಸಂದರ್ಭದಲ್ಲಿ ರಾಘವ, ಜಿ. ಎಸ್. ಸದಾಶಿವ, ವೀಣಾಶಾಂತೇಶ್ವರ ಮೊದಲಾದವರನ್ನು ನಾವು ನೆನಪಿಸಿಕೊಳ್ಳಬೇಕು. 'ತಬ್ಬಲಿಗಳು' ಅಂತಹ ಅತ್ಯುತ್ತಮ ಕತೆ ಬರೆದ ರಾಘವೇಂದ್ರ ಖಾಸನೀಸ ಅವರದು ಸಣ್ಣಕತೆಯ ಕ್ಷೇತ್ರದಲ್ಲಿ ವಿಶಿಷ್ಟವಾದ ಮುಖ್ಯ ಹೆಸರು.

ಮಾಸ್ತಿ ಪರಂಪರೆಯ ಕತೆಗಳಲ್ಲಿ ಅನುಭವಗಳ ಮಂಡನೆಯ ಮೂಲಕ ಒಪ್ಪಿತ ಮೌಲ್ಯಗಳನ್ನು ಪ್ರತಿಪಾದನೆ ಮಾಡುವ ರೀತಿಯನ್ನು ನಾವು ಕಾಣುತ್ತೇವೆ. ಅದಕ್ಕೆ ಅವರು ಒಂದು ಗಟ್ಟಿಯಾದ ಕಥಾವಸ್ತುವನ್ನು ಆಶ್ರಯಿಸುತ್ತಿದ್ದರು. ಆದರೆ ನವ್ಯ ಕತೆಗಳಲ್ಲಿ ಅನುಭವದ ಮಂಡನೆಗೆ ಬದಲಾಗಿ ಅದರ ಶೋಧನೆಯನ್ನು ಕಾಣುತ್ತೇವೆ. ಮೌಲ್ಯಗಳ ಪ್ರತಿಪಾದನೆ ಇಲ್ಲಿಲ್ಲ : ಬದಲಾಗಿ ಅವುಗಳನ್ನು ಸಮಕಾಲೀನ ಸನ್ನಿವೇಶ

ದಲ್ಲಿಟ್ಟು ವಿಶ್ಲೇಷಿಸುವ ಬಗೆ ಇಲ್ಲಿದೆ. ಹೀಗಾಗಿ ಅನುಭವದ ಮಂಡನೆ ಇಲ್ಲಿ ಚಿಂತನೆಯ ಹಂತಕ್ಕೇರುತ್ತದೆ. ಕಥನ ಅನುಭವದ ಅರ್ಥೈಸುವಿಕೆಯ ಸಾಧನವಾಗುತ್ತದೆ. ಆದ್ದರಿಂದಲೇ ನವ್ಯ ಕತೆಯಲ್ಲಿ ಕತೆಯನ್ನು ಸಂಗ್ರಹಿಸುವುದು, ಸಾರಾಂಶರೂಪದಲ್ಲಿ ಹೇಳುವುದು ತಮಾಷೆಯಾಗಿ ಕಾಣಿಸುತ್ತದೆ.

ನವ್ಯಕಥಾ ಸಾಹಿತ್ಯ ಭಾಷೆಯ ಬಳಕೆಗೆ ಸಂಬಂಧಿಸಿದಂತೆ ವಹಿಸಿದ ಎಚ್ಚರ ವಿಶೇಷವಾಗಿ ಗಮನಿಸಬೇಕಾದಂಥದು. ನವ್ಯಸಾಹಿತ್ಯದ ಮೂಲಭೂತ ಧೋರಣೆಯಲ್ಲಿಯೇ ಭಾಷೆಯ ಬಳಕೆಗೆ ವಿಶಿಷ್ಟ ಸ್ಥಾನವಿದೆ. ಬರವಣಿಗೆಯ ಕ್ರಮಕ್ಕೂ, ನಾವು ಪರಿಭಾವಿಸುವ ಕ್ರಮಕ್ಕೂ ಅನ್ಯೋನ್ಯ ಸಂಬಂಧವಿದೆಯೆಂದು ತಿಳಿಯುವ ನವ್ಯ ಸಾಹಿತ್ಯ ಪ್ರತಿಪಾದನೆಗೆಂದು ಬಳಸುವ ಭಾಷೆಗಿಂತ ಶೋಧನೆಗೆ ತೊಡಗುವ ಭಾಷೆ ಹೆಚ್ಚು ಮಹತ್ವದ್ದೆಂದು ನಂಬುತ್ತದೆ. ನವೋದಯ ರೀತಿಯಲ್ಲಿ ಭಾಷೆ ಅನುಭವ ಮಂಡಿಸಲು ವಾಹಕವಾಗಿ ಮಾತ್ರ ಬಳಕೆಯಾಗುತ್ತಿತ್ತು. ಅಲ್ಲಿ ಅದು ಪಾರದರ್ಶಕ. ಆದರೆ ನವ್ಯ ಕಥಾಸಾಹಿತ್ಯದಲ್ಲಿ ಭಾಷೆಯ ಮೂಲಕವೇ ಅನುಭವವನ್ನು ಅರ್ಥೈಸುತ್ತಾ ಹೋಗುವುದರಿಂದ ಭಾಷೆ ಇಲ್ಲಿ ಕೇವಲ ವಾಹಕ ಮಾತ್ರವಾಗದೆ ಶೋಧಕವೂ ಆಗುತ್ತದೆ. ನಮ್ಮ ಜೀವನ ಇಂದು ಮಧ್ಯಯುಗದ ಧಾರ್ಮಿಕ ಆಚಾರಗಳಿಂದ, ಇಪ್ಪತ್ತನೆಯ ಶತಮಾನದ ವಿಚಾರಗಳಿಂದ, ವಸಾಹತುಶಾಹಿ ಸಂಸ್ಕೃತಿಯ ಭಾರದಿಂದ, ಮೂರನೇ ಜಗತ್ತಿಗೆ ಸಂಬಂಧಿಸಿದ ವಿಶಿಷ್ಟ ರೀತಿಯ ಸಮಸ್ಯೆಗಳಿಂದ ಕೂಡಿ ಗೊಂದಲಮಯವಾಗಿದೆ. ಇಂಥ ಗೊಂದಲದ ಸನ್ನಿವೇಶದಲ್ಲಿ ಸೂಕ್ಷ್ಮ ಸಂವೇದನಾಶೀಲನಾದ ಸಾಹಿತಿ ಭಾಷೆಯ ಬಳಕೆಯಲ್ಲಿ ಹೆಚ್ಚಿನ ಸವಾಲನ್ನೆದುರಿಸಬೇಕಾಗುತ್ತದೆ. ರೂಢವಾದ ಜಡ ಭಾಷೆಗೆ ಹೊಸ ಜೀವ ತುಂಬಬೇಕಾಗುತ್ತದೆ. ನವ್ಯ ಕಥಾಸಾಹಿತ್ಯ ಇಂಥ ಸವಾಲನ್ನು ಸ್ವೀಕರಿಸಿ. ಯಶಸ್ವಿಯಾಗಿ ಎದುರಿಸಿತು ಎಂಬುದು ಮಹತ್ವದ ಸಂಗತಿಯಾಗಿದೆ.

ಒಂದು ರೀತಿಯ ಬರವಣಿಗೆ ಕ್ರಮೇಣ ತನ್ನ ಸತ್ವ ಕಳೆದುಕೊಂಡು, ಅದರ ಉತ್ಸಾಹ ಶಕ್ತಿ ಕಡಿಮೆಯಾಗುತ್ತದೆ. ಒಂದು ಸಂಪ್ರದಾಯವಾಗಿ ರೂಪುಗೊಂಡ ಸಾಹಿತ್ಯ ಮಾರ್ಗ ಕ್ರಮೇಣ ತನ್ನನ್ನೇ ತಾನು ಅನುಕರಿಸುತ್ತ, ತತ್ಕಾಲೀನತೆಯ ಅಗತ್ಯವನ್ನು ಪೂರೈಸುವ ಶಕ್ತಿ ಕಳೆದುಕೊಳ್ಳುತ್ತದೆ. ಆಗ ಅದಕ್ಕೆ ಪ್ರತಿಭಟನೆಯೆಂಬಂತೆ ಹೊಸ ರೀತಿಯ ಬರವಣಿಗೆ ಚಲಾವಣೆಗೆ ಬರುತ್ತದೆ. ಎಪ್ಪತ್ತರ ದಶಕದಲ್ಲಿ ಇಂಥ ಬದಲಾವಣೆ ಕನ್ನಡ ಸಾಹಿತ್ಯದಲ್ಲಿ ಬಂದಿತು. ಈ ಬದಲಾವಣೆ ಮೊದಲು ಕಾಣಿಸಿಕೊಂಡದ್ದು ಕಥಾಸಾಹಿತ್ಯದಲ್ಲಿ, ಅದೂ ನವ್ಯಮಾರ್ಗದ ಪ್ರಮುಖ ಲೇಖಕರಿಂದಲೇ ಎಂಬುದು ಚಾರಿತ್ರಿಕವಾಗಿ ಮಹತ್ವದ ಸಂಗತಿ. 1973ರಲ್ಲಿ ಪ್ರಕಟವಾದ "ಅಬಚೂರಿನ ಪೋಸ್ಟಾಫೀಸು" ಕಥಾಸಂಕಲನದ ಮೂಲಕ ಪೂರ್ಣಚಂದ್ರ ತೇಜಸ್ವಿಯವರು ನವ್ಯಮಾರ್ಗದ ಮಿತಿಗಳನ್ನು ಗುರ್ತಿಸಿ ಹೊಸ ರೀತಿಯ ಬರವಣಿಗೆಯ

ಅಗತ್ಯವನ್ನು ಪ್ರತಿಪಾದಿಸಿದರು. ಲಂಕೇಶರೂ ಇವರ ಜೊತೆ ಸೇರಿದರು. ನವ್ಯಕಥಾ ಸಾಹಿತ್ಯ ಮಹತ್ವಾಕಾಂಕ್ಷೆಯ ಮತ್ತೊಂದು ತಿರುವು ಪಡೆಯಿತು. ವ್ಯಕ್ತಿ ಕೇಂದ್ರದಿಂದ ಕತೆ ಪರಿಸರ ಕೇಂದ್ರಕ್ಕೆ ಬದಲಾಯಿತು. ತೇಜಸ್ವಿಯವರ ಕುಬಿ ಮತ್ತು ಇಯಾಲ, ತುಕ್ಕೋಜಿ, ಅನಂತಮೂರ್ತಿಯವರ ನವಿಲುಗಳು, ಸೂರ್ಯನ ಕುದುರೆ, ಲಂಕೇಶರ 'ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ', ಚಿತ್ತಾಲರ 'ಕತೆಯಾದಳು ಹುಡುಗಿ, ಸಿದ್ಧಾರ್ಥ' ಮೊದಲಾದವು ನವ್ಯಕಥಾ ಸಾಹಿತ್ಯದ ಎರಡನೆಯ ಘಟ್ಟದ ಮಹತ್ವದ ಕತೆಗಳಲ್ಲಿ ಕೆಲವು.

ಹೀಗಾಗಿ ನವ್ಯಕಥಾ ಸಾಹಿತ್ಯಕ್ಕೆ ಎರಡು ಘಟ್ಟಗಳಿವೆ. ಅರವತ್ತರ ದಶಕದ ಕಥಾಸಾಹಿತ್ಯ ಮೊದಲ ಹಂತವಾದರೆ, ಎಪ್ಪತ್ತರ ದಶಕದ ಉತ್ತರಾರ್ಧದಲ್ಲಿ ಇದರ ಎರಡನೆಯ ಘಟ್ಟವನ್ನು ನಾವು ಕಾಣುತ್ತೇವೆ.

ಈ ಬದಲಾವಣೆಯನ್ನು ಸ್ವೀಕರಿಸಲು ಸಾಧ್ಯವಾಗದ ನವ್ಯದ ಮೊದಲ ಹಂತದ ಕೆಲವು ಕತೆಗಾರರು ಅನಂತರದಲ್ಲಿ ಮಹತ್ವದ್ದನ್ನು ಸೃಷ್ಟಿಸಲಿಲ್ಲವೆಂಬುದನ್ನೂ ನಾವಿಲ್ಲಿ ಗಮನಿಸಬೇಕು. ಟಿ. ಜಿ. ರಾಘವ, ರಾಘವೇಂದ್ರ ಖಾಸನೀಸ ಮೊದಲಾದವರು ಈ ಬದಲಾವಣೆಯ ಗತಿಗೆ ಹೊಂದಿಕೊಳ್ಳಲಿಲ್ಲ. ಶಾಂತಿನಾಥ ದೇಸಾಯಿಯಂಥ ಸಮರ್ಥ ಕತೆಗಾರರೂ ಸಹ ಈ ಬದಲಾವಣೆಯ ಸಂದರ್ಭದಲ್ಲಿ ಸೃಜನಾತ್ಮಕ ಸಮಸ್ಯೆಯನ್ನೆದುರಿಸುತ್ತಿದ್ದಾರೆ.

ಒಟ್ಟಾರೆ ಆಧುನಿಕ ಸಾಹಿತ್ಯದಲ್ಲಿ ನವ್ಯಕತೆಯ ಸಾಧನೆ ಅತ್ಯಂತ ಮಹತ್ವಪೂರ್ಣವಾದುದೂ ವಿಶಿಷ್ಟವಾದುದೂ ಆಗಿದೆ.

# ಕನ್ನಡದಲ್ಲಿ ವೀರಶೈವ ಶತಕ ಸಾಹಿತ್ಯ

ಡಾ. ಶ್ರೀಕೃಷ್ಣಭಟ್, ಅರ್ತಿಕಜೆ.

ವೈವಿಧ್ಯಮಯವೂ, ವಿಪುಲವೂ, ವೈಶಿಷ್ಟ್ಯಪೂರ್ಣವೂ ಆದ ಕನ್ನಡ ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ಶತಕವೂ ಒಂದು. ಭಾರತದ ಅನೇಕ ಭಾಷೆಗಳಲ್ಲಿ ಶತಕ ಸಾಹಿತ್ಯದ ರಚನೆಯಾಗಿದೆ. ಪ್ರಾಕೃತದಲ್ಲಿ ಆರಂಭವಾದ ಶತಕವು ಸಂಸ್ಕೃತದಲ್ಲಿ ಸರ್ವತೋಮುಖ ವಾಗಿ ಬೆಳೆದು ದ್ರಾವಿಡ ಭಾಷೆಗಳಲ್ಲಿ ಪ್ರಸಿದ್ಧಿಯನ್ನು ಪಡೆಯಿತು. ಜನರ ಬದುಕಿಗೆ ಕೈ ದೀವಿಗೆಯಾಗಬಲ್ಲ ಬೋಧಪ್ರದ ಸಾಹಿತ್ಯವಾದ ಶತಕವು ಪ್ರಧಾನವಾಗಿ ಭಕ್ತಿ, ನೀತಿ, ವೈರಾಗ್ಯ, ಶೃಂಗಾರ, ಧರ್ಮ, ತತ್ತ್ವ ಮುಂತಾದ ವಿಚಾರಗಳನ್ನು ಒಳಗೊಂಡಿರುತ್ತದೆ. ಶತಕವನ್ನು 'ಸ್ತೋತ್ರ ಸಾಹಿತ್ಯ' ವೆಂದೂ, 'ನೀತಿ ಬೋಧಕ ಸಾಹಿತ್ಯ'ವೆಂದೂ ಕರೆಯು ಲಾಗುತ್ತದೆ.

ಕನ್ನಡದಲ್ಲಿ ಶತಕ ಸಾಹಿತ್ಯದ ರಚನೆ ವಿಪುಲವಾಗಿದೆ ; ವಿಷಯ ವೈವಿಧ್ಯದಿಂದ ಕೂಡಿ ವಿಸ್ತಾರವಾಗಿದೆ. ಚಂಪೂ ಕಾವ್ಯಗಳು ಹೆಚ್ಚು ಪ್ರಚಲಿತವಾಗಿದ್ದ ಕಾಲದಲ್ಲಿಯೇ ಕನ್ನಡದಲ್ಲಿ ಶತಕಗಳ ರಚನೆ ಆರಂಭವಾಯಿತು. ಮೊದಮೊದಲು ಈ ಸಾಹಿತ್ಯ ಪ್ರಕಾರಕ್ಕೆ ಹೆಚ್ಚಿನ ಜನಮನ್ನಣೆ ದೊರೆಯದಿದ್ದರೂ ಕ್ರಮೇಣ ತನಗೂ ಸಾಹಿತ್ಯದಲ್ಲಿ ಒಂದು ಸ್ಥಾನವಿದೆಯೆಂಬುದನ್ನು ಅದು ತೋರಿಸಿಕೊಟ್ಟಿತು. ಕೆಲವು ಕವಿಗಳು ಜನ ಸಾಮಾನ್ಯರಿಗೂ ಅರ್ಥವಾಗುವ ಸರಳ ಶೈಲಿಯಲ್ಲಿ ಹೆಚ್ಚು ದೀರ್ಘವಾಗಿರದೆ, ಸುಮಾರು ನೂರು ಪದ್ಯಗಳಲ್ಲಿ ಸಹಜ ಸ್ಫೂರ್ತವಾಗಿ ಮೂಡಿ ಬಂದ ಭಾವಗಳನ್ನು ನಿರೂಪಿಸಲು ಪ್ರಾರಂಭಿಸಿದರು. ಕವಿ ಇಲ್ಲಿ ವ್ಯಕ್ತಿ ಜೀವನವನ್ನು ತಿದ್ದಿ ಉತ್ತಮ ಸಂಸ್ಕೃತಿಯ ನ್ನುಂಟು ಮಾಡುವ ಪ್ರಾಮಾಣಿಕ ಪ್ರಯತ್ನವನ್ನು ಮಾಡುತ್ತಾನೆ. ಆದುದರಿಂದ ಶತಕ ಸಾಹಿತ್ಯವು ಶ್ರೀಸಾಮಾನ್ಯರ ಉದ್ಧಾರದ ಸಾಧನವಾಗಿ ಜನಪ್ರಿಯವಾಗಿದೆ ಯಲ್ಲದೆ, ಅದು ಜೀವನದ ನೇರ ದರ್ಶನವನ್ನೂ ಮಾಡಿಸಿದೆ. ಪುಲಿಗೆರೆಯ ಸೋಮ ಕವಿ ತನ್ನ 'ಸೋಮೇಶ್ವರ ಶತಕ'ದಲ್ಲಿ ಹೇಳಿರುವ–

"ಮತಿಯುಂ ಬುದ್ಧಿಯು ಜಾಣ್ಮೆಯುಂ ಗಮಕಂ ಗಾಂಭೀರ್ಯಮುಂ ನೀತಿ
ಯಾಯುತಮುಂ ನಿಶ್ಚಲ ಚಿತ್ತಮುಂ ನೃಪವರಾಸ್ಥಾನೋಚಿತಾರ್ಥಂಗಳಂ
ಅತಿ ಮಾಧುರ್ಯ ಸುಭಾಷಿತಂಗಳಂ ಮಹಾಸತ್ಕೀರ್ತಿಯುಂ ಬಾಳ್ಕೆಯುಂ
ಶತಕಾರ್ಥ ಕ್ಕೊಡರ್ಪುದೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥"

ಎಂಬ ಮಾತುಗಳು ಶತಕ ಸಾಹಿತ್ಯದ ಮಹತ್ವವನ್ನು ಸ್ಪಷ್ಟಪಡಿಸುತ್ತವೆ. ಜನಾಂಗವನ್ನು ನೀತಿ ಮಾರ್ಗದಲ್ಲಿ ಕರೆದೊಯ್ದು ಅವರಲ್ಲಿ ಸತ್ಯ, ಧರ್ಮ, ಅಹಿಂಸೆ, ನಿಸ್ವಾರ್ಥ, ಸೇವಾತತ್ಪರತೆಗಳನ್ನು ಮೂಡಿಸಿರುವುದರಿಂದ ಶತಕಗಳು ಸಮಾಜದ ಪ್ರಗತಿಗೆ ಸೋಪಾನ ಗಳಾಗಿವೆ. ಜನತೆಯಲ್ಲಿ ದೈವೀ ದೃಷ್ಟಿ ದೂರವಾದಾಗ, ಜೀವನದ ಮೌಲ್ಯಕ್ಕೆ ಕುಂದೊ ದಗಿದಾಗ ಪ್ರೀತಿ, ವಾತ್ಸಲ್ಯ, ದಯೆ ವಿಶ್ವಾಸಗಳು ಹೃದಯದಲ್ಲಿ ಬತ್ತಿ ಹೋಗುವುವೋ ಎನ್ನುವಾಗ ಅಜ್ಞಾನ, ಅಹಂಕಾರ ಅಂಧಕಾರದಲ್ಲಿ ಮುಳುಗಿ ಹೋಗುವಾಗ ಜೀವನ ವನ್ನು ಮೇಲೆತ್ತಿ, ಬೆಳಕು ಕಾಣಿಸಿ, ದಾರಿ ತೋರುವ ಶತಕ ಸಾಹಿತ್ಯ ಸಮಾಜದ ಸಮರಸ ಜೀವನದ ಸಾಧನವಾಗಿದೆ. ಸಮಾಜದ ಒಳಿತಿನ ದೃಷ್ಟಿಯಿಂದ ಈ ಸಾಹಿತ್ಯಪ್ರಕಾರ ಹೆಚ್ಚು ಪರಿಣಾಮಕಾರಿಯೂ ಆಗಿದೆ. "ಕನ್ನಡಿಗರು ತಾತ್ವಿಕ ವಿಷಯವನ್ನೂ, ಧಾರ್ಮಿಕ ಆಚಾರ–ವಿಚಾರಗಳನ್ನೂ, ಮಹಾನುಭಾವರ ಮಹಿಮೆಯನ್ನೂ, ಸಾಮಾನ್ಯ ನೀತಿಯನ್ನೂ ಬಿತ್ತರಿಸಲು ಶತಕಗಳನ್ನು ಬರೆಯ ತೊಡಗಿದರು." ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಕನ್ನಡದಲ್ಲಿ ಸುಮಾರು ನಾಲ್ಕು ನೂರಕ್ಕೂ ಹೆಚ್ಚು ಶತಕಗಳು ರಚಿತವಾಗಿವೆ. ಹನ್ನೊಂದನೆಯ ಶತಮಾನದಲ್ಲಿ [ಸುಮಾರು ಕ್ರಿ. ಶ. 1070ರಲ್ಲಿ] ರಚಿತವಾದ ನಾಗ ವರ್ಮಾಚಾರ್ಯನ 'ಚಂದ್ರಚೂಡಾಮಣಿ ಶತಕ'ವೇ ಕನ್ನಡದ ಮೊತ್ತಮೊದಲ ಶತಕ ವಾಗಿದೆ. ಕನ್ನಡ ಭಾಷೆಯಲ್ಲಿ ನಾಗವರ್ಮಾಚಾರ್ಯನ ಶತಕದಿಂದ ತೊಡಗಿ ಇತ್ತೀಚಿ ನವರೆಗೂ ಶತಕ ಸಾಹಿತ್ಯದ ಸೃಷ್ಟಿಯಾಗಿದೆ. ಈಗಲೂ ಕೆಲವು ಶತಕಗಳು ರಚಿತವಾಗು ತ್ತಿರುವುದನ್ನು ನಾವು ಗಮನಿಸಬಹುದು. ತೆಲುಗಿಗೆ ಹೋಲಿಸಿದರೆ ಕನ್ನಡದಲ್ಲಿ ರಚಿತ ವಾದ ಶತಕಗಳ ಸಂಖ್ಯೆ ತೀರಾ ಕಡಿಮೆಯೆಂದು ಹೇಳಬಹುದು. ತೆಲುಗಿನಲ್ಲಿ ಸುಮಾರು ಎರಡು ಸಾವಿರಕ್ಕಿಂತಲೂ ಹೆಚ್ಚು ಶತಕಗಳ ರಚನೆಯಾಗಿದೆಯೆಂದು ತಿಳಿದು ಬರುತ್ತದೆ. ಸಂಸ್ಕೃತ, ಹಿಂದಿ, ತಮಿಳು, ಮಲಯಾಳ ಭಾಷೆಗಳಲ್ಲಿ ಶತಕಗಳ ರಚನೆ ಗಮನಾರ್ಹವಾಗಿ ಆಗಿದೆ. ಶತಕಗಳನ್ನು ರಚಿಸುವಾಗ ಅನೇಕ ವಿಷಯಗಳಲ್ಲಿ ಕನ್ನಡಿಗರು ತಮ್ಮ ಸ್ವಂತಿಕೆ ಯನ್ನು ತೋರಿಸಿದ್ದಾರೆಂಬುದು ಅವರು ಆರಿಸಿಕೊಂಡಿರುವ ವಸ್ತು, ಛಂದಸ್ಸು ಹಾಗೂ ನಿರೂಪಣಾ ವಿಧಾನಗಳಿಂದ ಸ್ಪಷ್ಟವಾಗುತ್ತದೆ. ಕನ್ನಡ ಶತಕ ಸಾಹಿತ್ಯದ ರಚನೆಗೆ ಸಂಸ್ಕೃತ ಸಾಹಿತ್ಯದ ಪ್ರೋತ್ಸಾಹ ಮತ್ತು ಮಾರ್ಗದರ್ಶನವೂ, ಕನ್ನಡ ವಚನ ಸಾಹಿತ್ಯದ ಅನುಭಾವ ಸಂಪತ್ತಿನ ಪುಷ್ಟಿಯೂ ದೊರೆಯಿತು. ಹೆಚ್ಚಿನ ಸಂಖ್ಯೆಯಲ್ಲಿ ರಚಿತವಾದ ಶೈವಭಕ್ತಿ, ವೀರಶೈವ ಧರ್ಮ ಹಾಗೂ ತತ್ತ್ವಗಳನ್ನು ನಿರೂಪಿಸುವ ಶತಕಗಳ ಮೇಲೆ ವಚನ

ಸಾಹಿತ್ಯದ ಪ್ರಭಾವ ಆಗಿರುವುದನ್ನು ಗಮನಿಸಬಹುದು. ಒಂಬತ್ತು ಶತಮಾನಗಳಷ್ಟು ಪ್ರಾಚೀನವಾದ ಕನ್ನಡ ಶತಕ ಸಾಹಿತ್ಯವು ಇಂದಿಗೂ ಒಂದು ಪ್ರತ್ಯೇಕ ಸಾಹಿತ್ಯ ಪ್ರಕಾರವಾಗಿ ತನ್ನ ಸ್ಥಾನವನ್ನು ಉಳಿಸಿಕೊಂಡಿದೆ.

ಶತಕಗಳನ್ನು ಮುಖ್ಯವಾಗಿ ಅವುಗಳನ್ನು ರಚಿಸಿದ ಕವಿಗಳ ಮತದ ಆಧಾರದಿಂದ ವೀರಶೈವ ಕವಿಕೃತ ಶತಕಗಳು, ವೈಷ್ಣವ ಕವಿಕೃತ ಶತಕಗಳು, ಬ್ರಾಹ್ಮಣ ಕವಿಕೃತ ಶತಕಗಳು ಮತ್ತು ಅನ್ಯಮತ ಕವಿಕೃತ ಶತಕಗಳು ಎಂದೂ ಶತಕಗಳಲ್ಲಿ ನಿರೂಪಿತವಾಗಿರುವ ವಸ್ತು, ವಿಷಯುಗಳನ್ನು ಆಧರಿಸಿ ಅವುಗಳನ್ನು 'ಭಕ್ತಿಜ್ಞಾನ ನಿರೂಪಕ ಶತಕಗಳು', 'ನೀತಿ ಶತಕಗಳು', ವೈರಾಗ್ಯ ಶತಕಗಳು', 'ಶೃಂಗಾರ ಶತಕಗಳು', 'ಮತ-ಧರ್ಮ-ತತ್ತ್ವ ನಿರೂಪಕ ಶತಕಗಳು' 'ಚಾರಿತ್ರಿಕ ಶತಕಗಳು', 'ಸಂಕೀರ್ಣ ಶತಕಗಳು' ಮತ್ತು 'ಇತರ ಶತಕಗಳು' ಎಂದೂ ಎರಡು ರೀತಿಯಲ್ಲಿ ವಿಭಾಗಿಸಬಹುದು.

ಕನ್ನಡ ಸಾಹಿತ್ಯಕ್ಕೆ ವೀರಶೈವ ಕವಿಗಳು ನೀಡಿದ ಕೊಡುಗೆ ಅಮೂಲ್ಯವಾದುದು ಹಾಗೂ ಹಿರಿದಾದುದು. ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೃತಿ ರಚನೆ ಮಾಡಿದಂತೆ ಶತಕ ಪ್ರಕಾರದಲ್ಲೂ ಅನೇಕ ವೀರಶೈವ ಕವಿಗಳು ಕೃತಿ ರಚನೆ ಮಾಡಿದ್ದಾರೆ. ಸುಮಾರು ಅರುವತ್ತಕ್ಕೂ ಹೆಚ್ಚು ವೀರಶೈವ ಕವಿಗಳು ಶತಕಗಳನ್ನು ರಚಿಸಿದ್ದಾರೆಂಬುದು ಗಮನಾರ್ಹ. ವೀರಶೈವ ಕವಿಗಳು ರಚಿಸಿದ ಎಲ್ಲಾ ಶತಕಗಳನ್ನು ವಿವೇಚಿಸುವುದು ಇಲ್ಲಿ ಅಸಾಧ್ಯವಾದುದರಿಂದ ಕೆಲವೊಂದು ಪ್ರಮುಖ ವೀರಶೈವ ಶತಕಗಳ ಪರಿಚಯಾತ್ಮಕ ಸ್ಥೂಲ ನೋಟವನ್ನು ಮಾತ್ರ ಇಲ್ಲಿ ನೀಡಲಾಗಿದೆ.

ಇತರ ಕವಿಗಳಂತೆ ವೀರಶೈವ ಕವಿಗಳೂ ತಮ್ಮ ಮತದ ತತ್ತ್ವಗಳನ್ನು ಶತಕಗಳ ಮೂಲಕ ಪ್ರಚುರ ಪಡಿಸುವುದಕ್ಕೆ ತೊಡಗಿದರು. ಶತಕಗಳಲ್ಲಿ ಸಾಮಾನ್ಯವಾಗಿ ನೂರೊಂದು ವೃತ್ತಗಳಿರುವುದು ಸಂಪ್ರದಾಯ. ಆದರೆ ವೀರಶೈವ ಕವಿಗಳು ಈ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸಿಲ್ಲ. ಕೆಲವು ವೀರಶೈವ ಶತಕಗಳಲ್ಲಿ ವೃತ್ತಗಳ ಸಂಖ್ಯೆ ನೂರರಿಂದ ನೂರಿಪ್ಪತ್ತರವರೆಗೆ ಏರಿರುವುದು ಕಂಡುಬರುತ್ತದೆ. ಕೆಲವು ವೀರಶೈವ ಕವಿಗಳು ಸಂಸ್ಕೃತ ವೃತ್ತಗಳಿಗೆ ಬದಲಾಗಿ ಕಂದ, ತ್ರಿಪದಿ, ಷಟ್ಪದಿ ಮುಂತಾದ ಛಂದಸ್ಸುಗಳಲ್ಲಿ ಶತಕಗಳನ್ನು ರಚಿಸತೊಡಗಿದರು. ಈ ರೀತಿ ವಸ್ತು, ಶೈಲಿ, ಛಂದಸ್ಸು ಮತ್ತು ಪದ್ಯಗಳ ಸಂಖ್ಯೆಯಲ್ಲಿ ಬದಲಾವಣೆಯನ್ನು ತಂದು ಕನ್ನಡ ಶತಕ ಸಾಹಿತ್ಯದ ಬೆಳವಣಿಗೆಗೆ ಪ್ರಮುಖ ಕಾರಣರಾದರು. ಕೇವಲ ವಿದ್ವಾಂಸರ, ಪಂಡಿತರ ಸೊತ್ತಾಗಿದ್ದ ಸಾಹಿತ್ಯವನ್ನು ಸಾಮಾನ್ಯ ಜನರಿಗೂ ತಲುಪುವಂತೆ ಮಾಡಿದುದರಲ್ಲಿ ವೀರಶೈವ ಕವಿಗಳ ಪಾತ್ರ ಹಿರಿದಾದುದು.

ಹಂಪೆಯ ಹರಿಹರ, ಮಗ್ಗೆಯ ಮಾಯಿದೇವ, ಪುಲಿಗೆರೆ ಸೋಮ, ಗುಮ್ಮಟಾರ್ಯ, ಚಂದ್ರಕವಿ, ವೀರಭದ್ರ ರಾಜ, ಶಂಕರ ದೇವ, ಸಿರಿಸಾಮಧೇಯ, ಶಾಂತ ವೃಷಭೇಶ, ಯೋಗಾನಂದ, ಕುಡಸಿದ್ಧೇಶ್ವರ, ಮಡ್ಲೇರಿ ಶಿವಲಿಂಗ, ಚೆನ್ನವೀರ ದೇಶಿಕ,

ಕಪ್ಪುಸಿ ನಿಜಲಿಂಗಾರಾಧ್ಯ, ದೇವಲಾಪುರದ ನಂಜುಂಡ, ಚೆನ್ನಮಲ್ಲಿಕಾರ್ಜುನ, ಗೌರವಾಚಾರ್ಯ ಬಸವಣ್ಣ, ಕರಸ್ಥಲದ ವೀರಣ್ಣೊಡೆಯ, ಸಂಗವಿಭು, ಸಿದ್ಧನಂಜೇಶ, ಗುರುಬಸವ, ವಿರಕ್ತ ತೋಂಟದಾರ್ಯ ಮೊದಲಾದವರು ವೀರಶೈವ ಶತಕ ಕವಿಗಳಲ್ಲಿ ಪ್ರಸಿದ್ಧರಾದವರು.

'ಮಂತ್ರ ಮಹತ್ವದ ಕಂದ' ಹಾಗೂ 'ಲಿಂಗ ಮಹತ್ವದ ಕಂದ' ಎಂಬ ಕೃತಿಗಳನ್ನು ರಚಿಸಿದ ಕೊಂಡಗುಳಿ ಕೇಶಿರಾಜನೇ ವೀರಶೈವ ಶತಕ ಕವಿಗಳಲ್ಲಿ ಮೊದಲಸೆಯವನೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಈತನ ಕೃತಿಗಳಲ್ಲಿ ಶತಕದ ಕೆಲವು ಲಕ್ಷಣಗಳು ಕಂಡು ಬರುವುದರಿಂದ ಅವುಗಳು ಶತಕಗಳೇ ಎಂಬುದು ಅವರ ವಾದ. 'ಲಿಂಗಸ್ತೋತ್ರದ ಕಂದ'ಕ್ಕೆ 'ಶಿವ ಪ್ರಾರ್ಥನಾ ಶತಕ' ವೆಂಬ ಹೆಸರಿತ್ತೆಂದು ಕೆಲವರು ಅಭಿಪ್ರಾಯಪಟ್ಟರೂ ಅದಕ್ಕೆ ಸಾಕಷ್ಟು ಆಧಾರಗಳಿಲ್ಲದಿರುವುದರಿಂದ ವೀರಶೈವಕವಿಗಳಲ್ಲಿ ಹರಿಹರನೇ ಮೊದಲನೆಯ ಶತಕಕಾರನೆಂದು ಹೇಳಬಹುದು.

ಗೀತ ಸಾಹಿತ್ಯದಲ್ಲಿ ಭಕ್ತಿಗೀತೆಗಳು ಬಹು ಮುಖ್ಯಸ್ಥಾನವನ್ನು ಪಡೆದಿವೆ. ಸಾಹಿತ್ಯದ ಇತರ ಶಾಖೆಯ ಕೃತಿಗಳಿಗಿಂತ ಸಂಖ್ಯಾತ್ಮಕ ನಿರ್ದೇಶನಗಳಿಂದ ಕೂಡಿದ ಪಂಚಕ, ಅಷ್ಟಕ, ದಶಕ, ಪಂಚಾಶಿಕ, ಶತಕ, ಸಪ್ತಶತಿ ಮೊದಲಾದವು ಬಹಳ ಜನಪ್ರಿಯವಾಗಿವೆ. ದೇಶದ ಧರ್ಮಜ್ಯೋತಿಯನ್ನು ಉಜ್ವಲವಾಗಿ ಬೆಳಗಿಸುವುದಕ್ಕೆ ಇವು ಬಹುಮಟ್ಟಿಗೆ ಕಾರಣವೆಂದೂ ಭಾರತದ ಭಿನ್ನ ಮತಗಳ ಆಧ್ಯಾತ್ಮಿಕ ಬೆಳವಣಿಗೆಗೆ ಇವು ಪ್ರಧಾನ ಪೋಷಕವೆಂದೂ ಹೇಳಬಹುದು. ಐಹಿಕ ಪ್ರವೃತ್ತಿಗಳಿಂದ ಮಾನವನನ್ನು ಅಧ್ಯಾತ್ಮಿಕದ ಕಡೆ ತಿರುಗಿಸುವಂತೆ ಮಾಡುವುದು ಇವುಗಳ ಏಕೈಕ ಧ್ಯೇಯ.

ಕನ್ನಡದಲ್ಲಿ ಇತರ ಶತಕಗಳಿಗಿಂತ ಭಕ್ತಿ ಪ್ರಧಾನವಾದ ಶತಕಗಳ ರಚನೆ ಅಧಿಕವಾಗಿದೆ. ಸ್ತೋತ್ರ ಸಾಹಿತ್ಯದಲ್ಲಿ ಶತಕಕ್ಕೆ ಅಗ್ರ ಸ್ಥಾನವಿದೆ. ಕನ್ನಡದ ಭಕ್ತಿ ನಿರೂಪಕ ಶತಕಗಳನ್ನು ಮುಖ್ಯವಾಗಿ 'ಶೈವಭಕ್ತಿ ಶತಕಗಳು', 'ವೈಷ್ಣವಭಕ್ತಿ ಶತಕ'ಗಳು ಮತ್ತು 'ಅನ್ಯದೇವತಾಭಕ್ತಿ ಶತಕ'ಗಳೆಂದು ಮೂರು ವಿಭಾಗ ಮಾಡಬಹುದು. ಭಕ್ತಿಶತಕಗಳಲ್ಲಿ ಹೆಚ್ಚಾಗಿ ಜ್ಞಾನವೂ ನಿರೂಪಿತವಾಗಿರುತ್ತದೆ.

ವೀರಶೈವ ಶತಕ ಕವಿಗಳಲ್ಲಿ ಮೊದಲಿಗನೂ ಶ್ರೇಷ್ಠನೂ ಆದ ಹಂಪೆಯ ಹರಿಹರನು 'ಪಂಪಾಶತಕ' ಮತ್ತು 'ರಕ್ಷಾ ಶತಕ'ಗಳೆಂಬ ಎರಡು ಶತಕಗಳನ್ನು ರಚಿಸಿದ್ದಾನೆ. ಇವೆರಡೂ ಹರಿಹರನ ವಿಶಿಷ್ಟ ಕೃತಿಗಳು. ಕವಿಯ ಸ್ವಾನುಭಾವ, ಶಿವಭಕ್ತಿ ಈ ಶತಕಗಳಲ್ಲಿ ತುಂಬಿದೆ. ಈ ಕೃತಿಗಳ ರಚನೆಗೆ ಅವನ ಜೀವನಾನುಭವವೇ ಕಾರಣ. ಹರಿಹರನ ಶತಕಗಳು ಅವನ ಆತ್ಮಗೀತೆಗಳಂತಿದ್ದು ಅವುಗಳಲ್ಲಿ ಸ್ವಾನುಭವ ಹಾಗೂ ಶುದ್ಧ ಶಿವಭಕ್ತಿ ಮತ್ತು ವಿರಕ್ತಿಭಾವದ ಚಿತ್ರಣವಿದೆ. ಅವನ ಅಂತರಂಗದ ತೀವ್ರಾನುಭವಗಳು ಇಲ್ಲಿ ಅಭಿವ್ಯಕ್ತಗೊಂಡಿವೆ. ಸ್ವತಂತ್ರ ಮನೋವೃತ್ತಿಯ ಭಕ್ತನಾದ ಹರಿಹರನು ನರರ ಸೇವೆಗಿಂತ ಹರನ ಸೇವೆಯೇ ಮಿಗಿಲೆಂದು ತಿಳಿದಿದ್ದಾನೆ. ಪಂಪಾ ವಿರೂಪಾಕ್ಷನ ಅನನ್ಯ

ಭಕ್ತನಾದ ಹರಿಹರನ ಶತಕಗಳು ಭಕ್ತಿಯನ್ನು ಪ್ರಧಾನವಾಗಿಯೂ, ಜ್ಞಾನ ವೈರಾಗ್ಯಗಳನ್ನು ಅದರ ಅಂಗವಾಗಿಯೂ ನಿರೂಪಿಸುತ್ತವೆ.

ಹರಿಹರನು ಹಂಪೆಯ ವಿರೂಪಾಕ್ಷನಲ್ಲಿ ತಳೆದ ಭಕ್ತಿಯು ಭಾವಾವೇಶವಾಗಿ ವೀರನಿಷ್ಠೆಯಾಗಿ ಪಂಪಾಶತಕದಲ್ಲಿ ಹೊರಹೊಮ್ಮಿದೆ. ಇಲ್ಲಿ ಆತನ ನೈಷ್ಠಿಕ ಭಕ್ತಿ, ವೀರಭಕ್ತಿ, ಮಾಹೇಶ್ವರಸ್ಥಲ ಭಕ್ತಿಗಳನ್ನು ಕಾಣಬಹುದು. ಈ ಶತಕದಲ್ಲಿ ಹರಿಹರನ ಭಕ್ತಿಯ ಪರಾಕಾಷ್ಠೆಯನ್ನು ಕಾಣಬಹುದು. ಕವಿ ತನಗೆ ಸದ್ಭಕ್ತಿಯನ್ನು ನೀಡೆಂದು ಸರ್ವೇಶನಲ್ಲಿ ಬೇಡಿಕೊಳ್ಳುತ್ತಾನೆ. ವಿರೂಪಾಕ್ಷನ ರೂಪವು ಸದಾ ತನ್ನ ಕಣ್ಣುಗಳಲ್ಲಿಯೂ ವಿರೂಪಾಕ್ಷನ ನಾಮವು ಸದಾ ತನ್ನ ನಾಲಗೆಯಲ್ಲಿಯೂ ನೆಲೆಸಿರಲಿ ಎಂದು ಹರಿಹರ ಬಯಸುತ್ತಾನೆ. ಶಿವನೇ ಸರ್ವಸ್ವವೆಂದೂ, ಅವನೊಬ್ಬನೇ ದೇವರೆಂದೂ ನಂಬಿ ಅವನ ವೇಷಭೂಷಗಳನ್ನು ಮೆಚ್ಚಿ ವರ್ಣಿಸಿ "ಕಂಡೆಂ ವಿರೂಪಾಕ್ಷನಂ" ಎಂದು ಭಕ್ತಿಯ ಆವೇಶದಲ್ಲಿ ಕುಣಿದಾಡುತ್ತಾನೆ. ಶಿವ ಪಾರಮ್ಯವನ್ನು ಕೊಂಡಾಡಿ ಅವನ ಲೀಲಾ ವೈಭವವನ್ನು ವರ್ಣಿಸಿ ಅವನ ಪರಮ ಭಕ್ತರ ಪುಣ್ಯ ಚರಿತ್ರೆಗಳನ್ನು ಲೋಕಕ್ಕೆ ತಿಳಿಯ ಹೇಳುವುದೇ ಹರಿಹರನ ಶತಕಗಳ ಉದ್ದೇಶ.

ಹರಿಹರ ಶುದ್ಧ ವೀರಶೈವ ಪಕ್ಷಪಾತಿ. ತನ್ನ ಇಷ್ಟದೈವವನ್ನು ಸ್ತುತಿಸಿ ನಲಿದಂತೆ ವೀರಶೈವರಲ್ಲದವರನ್ನು ಕಟುವಾಗಿ ನಿಂದಿಸಿದ್ದಾನೆ. 'ರಕ್ಷಾಶತಕ'ದಲ್ಲಿ ಹರಿಹರನ ಭಕ್ತಿ ಸಾಧನೆಯ ಒಂದು ಆಧ್ಯಾತ್ಮಿಕ ಆತ್ಮಕಥೆಯೇ ಅಡಗಿರುವಂತೆ ತೋರುತ್ತದೆ. ಇದು ಹರಿಹರನ ಬದುಕಿನ ಧ್ಯೇಯವನ್ನು ಹೆಚ್ಚು ಸ್ಪಷ್ಟವಾಗಿ ನಿರೂಪಿಸುತ್ತದೆ. 'ರಕ್ಷಾಶತಕನ'ದ ಮೊದಲ ಪದ್ಯದಲ್ಲಿ ತನ್ನ ಆರಾಧ್ಯಮೂರ್ತಿಯಾದ ಹಂಪೆಯ ವಿರೂಪಾಕ್ಷನನ್ನು 'ಸಾಕಾರ ಬ್ರಹ್ಮ'ನೆಂದೂ, 'ಭಕ್ತಿ ಪ್ರೇಮಾಂಭೋರಾಶಿ' ಎಂದೂ ವಿಶ್ಲೇಷಿಸಿ ಸಪ್ರೇಮ ಭಕ್ತಿ ಸಿದ್ಧಾಂತವೇ ತನ್ನ ಕಾವ್ಯದ ವಸ್ತುವೆಂದು ಸೂಚಿಸಿದ್ದಾನೆ. ಹರಿಹರನದು ಮಾಹೇಶ್ವರ ಸ್ಥಲದ ಭಕ್ತಿ. ಅವನ ಚೇತನ ಲೌಕಿಕ ಭೋಗ ಭಾಗ್ಯಗಳನ್ನೆಲ್ಲ ತಿರಸ್ಕರಿಸಿ ಈಶ್ವರನಿಗೆ ಶರಣಾಗಿ ಭಗವದಾಶ್ರಯವನ್ನು ಪಡೆಯ ಬಯಸುತ್ತದೆ. ರಕ್ಷಾ ಶತಕದಲ್ಲಿ ಶಿವನ ಸ್ವಾನುಭಾವಪೂರ್ಣ ವೇದಾಂತ ಹಾಗೂ ವೈರಾಗ್ಯದ ಚಿತ್ರಣವಿದೆ. ಭವಸಾಗರವನ್ನು ದಾಟಲು ಭಕ್ತಿ ಮಾರ್ಗವೇ ದಾರಿಯೆಂಬುದನ್ನು ಕವಿ ನಿರೂಪಿಸಿದ್ದಾನೆ. ಈ ಶತಕವನ್ನು ಕುರಿತು ಕೊ. ಚನ್ನಬಸಪ್ಪನವರು, "ಇದು ಭಕ್ತರ ನಿಕ್ಷೇಪ. ಗುರಿತಪ್ಪದೆ ದಾರಿ ತೋರಿಸಿ ಗುರಿ ಮುಟ್ಟಿಸುವ ಮಹಾಗುರು. ಇದು ಪ್ರಧಾನವಾಗಿ ಭಕ್ತಿ ಕಾವ್ಯ. ಇದರಲ್ಲಿ ದರ್ಶನಾಂಶಕ್ಕೂ, ಕಾವ್ಯಾಂಶಕ್ಕೂ ಯಾವ ಕೊರತೆಯೂ ಇಲ್ಲ. ಇದರಲ್ಲಿ ಸಾಧಕರಿಗೆ ದರ್ಶನವೂ, ಕಾವ್ಯಾಭ್ಯಾಸಿಗಳಿಗೆ ಸಾಹಿತ್ಯವೂ, ಪಂಡಿತರಿಗೆ ರಸದೌತಣವೂ ಇದೆ" ಎಂದು ಹೇಳಿದ್ದಾರೆ.

"ಹರಿಹರನ ಶತಕಗಳು ಅನೂನ ಭಕ್ತಿರಸ ಪೂರಗಳು...ಭಕ್ತಿರಸದ ಉತ್ಕಟತೆ, ತನ್ಮಯತೆಗಳನ್ನು, ಕೊರಗು ಕಳವಳಗಳನ್ನು ಉದ್ಗಾರ ಪುನರುಕ್ತಿಗಳಿಂದ ವಿಶಿಷ್ಟವಾದ

ಶೈಲಿಯಲ್ಲಿ ಹರಿಹರ ವ್ಯಕ್ತಪಡಿಸಿದ್ದಾನೆ." ಎಂಬುದು ರಂ. ಶ್ರೀ. ಮುಗಳಿಯವರ ಅಭಿಪ್ರಾಯ.

ಹರಿಹರನ ಬಳಿಕ ಅತ್ಯಂತ ಪ್ರಸಿದ್ಧನಾದ ವೀರಶೈವ ಶತಕಕವಿ ಮೊಗ್ಗೆಯ ಮಾಯಿದೇವ. ಮಾಯಿದೇವನು ಐಪುರಿ ಸೋಮನಾಥನ ಪರಮ ಭಕ್ತನಾಗಿದ್ದ ಈತ ಆತ್ಮ ವಿದ್ಯೆಯಲ್ಲಿ ನಿಪುಣನೂ, ಕುಮತ ಭೇದಿಯೂ, ಷಟ್ಸ್ಥಲ ಬ್ರಹ್ಮ ವಾದಿಯೂ, ಗುರುಚರಣ ನಿಜಭಕ್ತನೂ, ಶಿವಮಾರ್ಗಾನುವರ್ತಿಯೂ ಆಗಿದ್ದ. ಭಕ್ತಿ, ಜ್ಞಾನ, ವೈರಾಗ್ಯಗಳನ್ನು ನಿರೂಪಿಸುವ ಇವನ 'ಶಿವಾಧವ', 'ಶಿವಾವಲ್ಲಭ' ಮತ್ತು 'ಮಹದೈಪುರೀಶ್ವರ ಶತಕ'ಗಳು ಶಿವಾಗಮದ ಸಾರದಂತಿವೆ. ಇವನ ಮೂರು ಶತಕ ಗಳಲ್ಲೂ ವೀರಶೈವ ಮತ ಹಾಗೂ ತತ್ವದ ವಿವರಣೆ ಪ್ರತಿಪಾದಿತವಾಗಿದೆ. ಮಾಯಿ ದೇವನ 'ಶಿವಾಧವ ಶತಕ'ದಲ್ಲಿ ಭಕ್ತಿಯ ಹಿರಿಮೆಯೂ, 'ಶಿವಾವಲ್ಲಭ ಶತಕದಲ್ಲಿ' ಜ್ಞಾನದ ಮಹತ್ವವೂ, ಮಹದೈಪುರೀಶ್ವರ ಶತಕದಲ್ಲಿ ವೈರಾಗ್ಯವೂ ಚಿತ್ರಿತವಾಗಿವೆ. 'ಶಿವಾಧವ ಶತಕ'ದಲ್ಲಿ ಈತನು "ಶಿವಭಕ್ತಿಯ ಮಹಿಮೆಯನ್ನು ವರ್ಣಿಸುವುದಸದಳ ; ಭಕ್ತಿಯೋಗದ ಮುಂದೆ ಬೇರೆ ಯಾವ ಯೋಗವೂ ಇಲ್ಲ. ಮುಕ್ತಿಗಿಂತ ಭಕ್ತಿಯ ಸುಖ ಹೆಚ್ಚಿನದು. ಭಕ್ತಿಯ ವೈಭವವು ಅನುಪಮವಾದುದು" ಎಂದು ಸಾರಿದ್ದಾನೆ. ಷಟ್ಸ್ಥಲ ಸಿದ್ಧಾಂತವನ್ನು ಸಂಕ್ಷಿಪ್ತವಾಗಿಯೂ ಸುಂದರವಾಗಿಯೂ ಪ್ರತಿಪಾದಿಸುವ ಈತನ ಶತಕಗಳಲ್ಲಿ ಶಿವಾಗಮಗಳ ಸಾರ, ನಿರ್ದುಷ್ಟಾಚರಣೆಯ ನಿರೂಪಣೆ. ಸತ್ಯ ಸುಂದರ ಶಿವಾದ್ವೈತ ಪ್ರಜ್ಞೆ ಮೊದಲಾದವುಗಳು ಒಳಗೊಂಡಿವೆ. ಒಟ್ಟಿನಲ್ಲಿ ಕವಿಗೆ ವೀರಶೈವ ಸಿದ್ಧಾಂತದ ಮೇಲೆ ಅಧಿಕವಾದ ನಿಷ್ಠೆಯಿರುವುದು ಕಂಡು ಬರುತ್ತದೆ. ಮಾಯಿದೇವನ ಮೂರು ಶತಕಗಳ ಬಗ್ಗೆ ಬರೆಯುತ್ತಾ, ಜ. ಚ. ನಿ.ಯವರು, "ಕನ್ನಡ ಶತಕ ಸಾಹಿತ್ಯದಲ್ಲಿ ಮಾಯಿದೇವ ಶಿವಾಚಾರ್ಯನ ಶತಕತ್ರಯ ಒಂದು ಮೇರು ಕೃತಿ, ಚಾರುಕೃತಿ. ಅದು ವೀರಶೈವ ಧರ್ಮಸಾರ......ಶತಕತ್ರಯವು ವೀರಶೈವ ಪ್ರಮಾಣ ಗ್ರಂಥವಾಗಿದೆ. ತತ್ತ್ವ ಪ್ರತಿಪಾದಕ ಸತ್ವವುಳ್ಳ ಕಾವ್ಯ ಶತಕತ್ರಯ. ವೀರಶೈವ ತತ್ತ್ವ ಶವಕ ನಿಧಿಗಳಲ್ಲಿ ಶತಕತ್ರಯವೂ ಒಂದು" ಎಂದಿದ್ದಾರೆ.

ಹದಿನೈದನೇ ಶತಮಾನದಲ್ಲಿದ್ದ ಪುಲಿಗೆರೆಯ ಸೋಮನು ರಚಿಸಿದ 'ಸೋಮೇಶ್ವರ ಶತಕ'ವು ಕನ್ನಡ ಶತಕ ಸಾಹಿತ್ಯದಲ್ಲಿ ಅತ್ಯಂತ ಹೆಚ್ಚು ಜನಪ್ರಿಯವೂ ಪ್ರಸಿದ್ಧವೂ ಆದ ಒಂದು ನೀತಿಬೋಧಕ ಶತಕ. ಮೊದಲಿನಿಂದ ಕಡೆಯವರೆಗೂ ಯಥೇಚ್ಛವಾಗಿ ನೀತಿ ಬೋಧೆ ಮಾಡಿರುವುದು ಕಂಡುಬರುತ್ತದೆ. ಈ ಶತಕದಲ್ಲಿ "ಶ್ರೀ ಚೆನ್ನ ಸೋಮೇಶ್ವರಾ" ಎಂಬ ಅಂಕಿತದಿಂದ ಅಂತ್ಯವಾಗುವ 107 ವೃತ್ತಗಳಿವೆ. ಕವಿಯು "ತನ್ನದು ನೀತಿಯೆ ಸಕಲ ಲೋಕಕ್ಕಾಗಬೇಕೆಂದು ಪೇಳಿದ ಕೃತಿ" ಎಂದು ಹೇಳಿದ್ದಾನೆ. ಬದುಕಿನ ನೈಜ ಚಿತ್ರಣವಿರುವ ಈ ಶತಕದಲ್ಲಿ ವ್ಯಕ್ತಿ, ಸಮಾಜ ಹಾಗೂ ಲೋಕಕ್ಕೆ ಸಂಬಂಧಿಸಿದ ಸಾರ್ವದೇಶಿಕ ಮತ್ತು ಸಾರ್ವಕಾಲಿಕ ನೀತಿಯ ಚಿತ್ರಣವಿದೆ. "ಶಿವನೇ ದೈವ

ಜಗಂಗಳೊಳ್" ಎಂಬಲ್ಲಿ ಮತೀಯ ಪ್ರಸಕ್ತಿ ಹೆಚ್ಚಾಗಿ ಕಂಡುಬಂದರೂ ಸಾರ್ವಕಾಲಿಕ ನೀತಿಯೇ ಇಲ್ಲಿ ಪ್ರಧಾನವಾಗಿದೆ.

ಸುಮಾರು ಕ್ರಿ.ಶ. 1400ರಲ್ಲಿದ್ದ ಚಂದ್ರಕವಿಯು 101 ವೃತ್ತಗಳಿರುವ 'ಶಂಕರ ಶತಕ'ವನ್ನು ರಚಿಸಿದ್ದಾನೆ. 'ಗುರುಮೂರ್ತಿ ಶಂಕರಾ' ಎಂದು ಅಂತ್ಯಗೊಳ್ಳುವ ಈ ಶತಕದ ಪದ್ಯಗಳಲ್ಲಿ ಭಕ್ತಿ, ವಿರಕ್ತಿ, ಮುಕ್ತಿಗಳೇ ಆಧ್ಯಾತ್ಮಿಕ ಜೀವನದ ಸಾರ ಸರ್ವಸ್ವವೆಂದು ತಿಳಿಸಲಾಗಿದೆ. ಶಿವನ ಮಹಿಮೆಯನ್ನು ಕೊಂಡಾಡುವ ಮೂಲಕ ಕವಿ ಶಿವಪಾರಮ್ಯವನ್ನು ಪ್ರತಿಪಾದಿಸಿದ್ದಾನೆ. ಭಕ್ತಿಯೇ ಪ್ರಧಾನವಾದ ಈ ಶತಕದಲ್ಲಿ ಶಿವೈಕ ನಿಷ್ಠೆಯಿದ್ದರೂ ಪರಧರ್ಮ ಸಹಿಷ್ಣುತೆ ಎದ್ದು ತೋರುತ್ತದೆ.

ಗುಮ್ಮಟಾರ್ಯನು (ಕ್ರಿ.ಶ. 1500) ವೈರಾಗ್ಯವನ್ನು ಪ್ರತಿಪಾದಿಸುವ 'ಗುಮ್ಮಟ ಶತಕ' ಅಥವಾ 'ಅರ್ಧೇಂದುಮೌಳಿ ಶತಕ'ವನ್ನು ರಚಿಸಿದ್ದಾನೆ. ಇದರಲ್ಲಿ 108 ವೃತ್ತಗಳಿವೆ. ಈ ಶತಕದಲ್ಲಿ ಭಕ್ತಿ-ಮುಕ್ತಿ ಮಾರ್ಗವನ್ನು ಸುಂದರವಾಗಿ ಚಿತ್ರಿಸಲಾಗಿದೆ. ವೀರಶೈವ ಶತಕಗಳಲ್ಲಿ ಸಾಮಾನ್ಯವಾಗಿ ಬರುವ ಷಟ್ಸ್ಥಲ ಸಿದ್ಧಾಂತ, ಅಷ್ಟಾವರಣ ಮಹಿಮೆಗಳು ಈ ಶತಕದಲ್ಲಿಲ್ಲ. ಲಿಂಗಾಂಗ ಸಾಮರಸ್ಯಕ್ಕೆ ಶಿವಯೋಗವೇ ಸಾಕೆಂದು ಭಾವಿಸಿದ ಕವಿಯು ಯೋಗದ ವಿಷಯವನ್ನು ಶಾಸ್ತ್ರೋಕ್ತವಾಗಿಯೂ ವಿಶದವಾಗಿಯೂ ಪ್ರತಿಪಾದಿಸಿದ್ದಾನೆ. ಪ್ರತಿಭೆ, ಪಾಂಡಿತ್ಯಗಳಿಂದ ಕೂಡಿದ ಕವಿಯ ಶೈಲಿ ಮನೋಹರ ವಾಗಿದೆ. ಪರಮತ ವಿಡಂಬನೆ ಇದ್ದರೂ ಇದು ಸರ್ವಜನ ಗ್ರಾಹ್ಯವಾದ ಕೃತಿಯಾಗಿದೆ.

ಹದಿನೈದನೇ ಶತಮಾನದ ಇನ್ನೊಬ್ಬ ವೀರಶೈವ ಭಕ್ತ ಕವಿಯಾದ ಶಂಕರದೇವನು ರಚಿಸಿದ 'ಶಂಕರ ಶತಕ' ಅಥವಾ 'ಗುರುಶಂಕರ ಶತಕ'ವು ವೀರಶೈವ ವೇದಾಂತವನ್ನು ಬೋಧಿಸುತ್ತದೆ. ಈ ಶತಕದಲ್ಲಿ 100 ವೃತ್ತಗಳಿವೆ. ಕವಿಯ ಸ್ವಾನುಭವದಿಂದ ಕೂಡಿದ ಈ ಸರಳ ಸುಂದರ ಕೃತಿಯಲ್ಲಿ ಭಕ್ತಿ, ಜ್ಞಾನ, ವೈರಾಗ್ಯಗಳ ನಿರೂಪಣೆಯಿದೆ. ಗುರುಲಿಂಗ ಜಂಗಮತ್ರಯದ ಮಹತ್ವವನ್ನು ಈ ಶತಕ ತಿಳಿಸುತ್ತದೆ. ಗುರುಲಿಂಗ ಜಂಗಮ ಸ್ತೋತ್ರ, ಸಂಸಾರ ನಿರಸನದ ಪ್ರತಿಪಾದನೆ ಮತ್ತು ತೋರಿಕೆಯ ವಿಡಂಬನೆ ಯಿರುವ 'ಚಂದ್ರಲೇಖಾ ವಸಂತ ಶತಕ'ವು ಹದಿನೈದನೆಯ ಶತಮಾನದ ಕವಿ ಪರ್ವತ ನಿಂದ ರಚಿತವಾಗಿದೆ. ವೀರಶೈವ ಧರ್ಮದ ತತ್ತ್ವಗಳು, ಆಚಾರಗಳು ಇದರಲ್ಲಿ ಅಡಕ ವಾಗಿವೆ.

ರಾಜವಂಶೀಯನಾದ ವೀರಭದ್ರ ರಾಜನು (ಕ್ರಿ.ಶ. 1520) 'ಪಾರ್ವತೀ ವಲ್ಲಭ ಶತಕ', 'ಉಮಾಮಹೇಶ್ವರ ಶತಕ', 'ಪ್ರಾಣನಾಥ ಶತಕ', 'ಶ್ರೀಕಂಠ ಸೋಮೇಶ್ವರ ಶತಕ' ಮತ್ತು 'ಅಂಬಿಕಾಪತಿ ಶತಕ' ಅಥವಾ 'ಕಂದ ಶತಕ'ವೆಂಬ ಐದು ಶತಕಗಳನ್ನು ರಚಿಸಿದ್ದಾನೆ. ಇವನ ಶತಕಗಳು ಭಕ್ತಿ ಪ್ರಧಾನವಾಗಿದ್ದು ಶಿವಮಹಿಮೆ ಯನ್ನು ಸಾರುತ್ತವೆ. ಅಂತೆಯೇ ಈ ಶತಕಗಳಲ್ಲಿ ವೀರಶೈವ ಸಿದ್ಧಾಂತದ ಬೋಧೆ, ನೀತಿ ವೈರಾಗ್ಯಗಳ ಪ್ರತಿಪಾದನೆಯೂ ಇದೆ. 'ಪಾರ್ವತೀ ವಲ್ಲಭ ಶತಕದದಲ್ಲಿ ನೀತಿಯೂ

‘ಉಮಾಮಹೇಶ್ವರ ಶತಕ’ದಲ್ಲಿ ಶಿವಪಾರ್ವತಿಯರ ಲೌಕಿಕ ಮತ್ತು ತಾತ್ವಿಕ ಸಂಬಂಧಗಳ ವಿಚಾರವೂ ಶ್ರೀಕಂಠ ಸೋಮೇಶ್ವರ ಶತಕ’ದಲ್ಲಿ ಶಿವಸ್ತುತಿ ಹಾಗೂ ನೀತಿಬೋಧೆಯೂ, ‘ಪ್ರಾಣನಾಥ ಶತಕ’ದಲ್ಲಿ ವೈರಾಗ್ಯವೂ, ‘ಕಂದಶತಕ’ದಲ್ಲಿ ಶಿವನ ಗುಣಾಧಿಕ್ಯ ಹಾಗೂ ನೀತಿಯೂ ನಿರೂಪಿತವಾಗಿವೆ. ಇವನ ಶತಕಗಳು ಮತೀಯ ಆವರಣದೊಳಗೇ ರಚಿತವಾಗಿವೆ.

ಸುಮಾರು ಕ್ರಿ. ಶ. 1550ರಲ್ಲಿದ್ದ ಸಿರಿನಾಮಧೇಯನು ರಚಿಸಿದ ‘ಮಲ್ಲೇಶ್ವರ ಶತಕ’ದಲ್ಲಿ 111 ವೃತ್ತಗಳಿವೆ. ಈಶ್ವರ ಸ್ತುತಿ ರೂಪವಾಗಿಯೂ, ವೀರಶೈವ ಸಿದ್ಧಾಂತ ಬೋಧಕವಾಗಿಯೂ ಇರುವ ಈ ಶತಕವಲ್ಲಿ ಗುರು, ಲಿಂಗ, ಜಂಗಮ. ಪಾದೋದಕ, ವಿಭೂತಿ, ರುದ್ರಾಕ್ಷಿ, ಪಂಚಾಕ್ಷರಿ, ಪ್ರಸಾದ ಇವುಗಳ ಮಹಿಮೆ ವರ್ಣಿತವಾಗಿದೆ. ಕ್ರಿ.ಶ. 1560 ರಲ್ಲಿದ್ದ ಚೆನ್ನಮಲ್ಲಿಕಾರ್ಜುನನು ರಚಿಸಿದ ‘ಶಿವಮಹಿಮಾ ಶತಕ’ಕ್ಕೆ ‘ಚೆನ್ನಮಲ್ಲೇಶ್ವರ ಶತಕ’ ಎಂಬ ಹೆಸರೂ ಇದೆ. ತನ್ನ ಶತಕವು “ಶ್ರುತಿ, ಸೂಕ್ತಿ, ರತ್ನಮಾಲಾ ಸ್ತುತಿ ವೇದಾಂತ ಸಾರಾರ್ಥದಿಂದೆಸೆದಿರ್ಪ ಶತಕಂ” ಎಂದು ಹೇಳಿಕೊಂಡಿರುವನಲ್ಲದೆ “ ಈ ಶತಕವು ವೈಷ್ಣವವಾಗದ್ವೈತಿ ಕರ್ಮಿಗಳ ಹೃಚ್ಛಲ್ಯಂ” ಎಂದು ಪರಮತ ನಿಂದನೆಯನ್ನೂ ಮಾಡಿದ್ದಾನೆ.

ವೀರಶೈವ ಕವಿಯಾದ ವಿರಕ್ತ ತೋಂಟದಾರ್ಯನು [ಕ್ರಿ.ಶ. 1560] ‘ಸರ್ವಮಂಗಳೆ ಶತಕ’ ಮತ್ತು ‘ಸಿದ್ಧಲಿಂಗೇಶ್ವರ ಶತಕ’ ಗಳನ್ನು ಬರೆದಿರುವನು. ‘ಸರ್ವಮಂಗಳೆ ಶತಕ’ದಲ್ಲಿ 108 ವೃತ್ತಗಳಿವೆ. ಭಕ್ತಿಯೇ ಮುಖ್ಯ ವಸ್ತುವಾದ ಇದರಲ್ಲಿ ಪಾರ್ವತಿಯ ಮಹಿಮೆಯೂ ವರ್ಣಿತವಾಗಿದೆ. ಇದೊಂದು ಅಪ್ರಕಟಿತ ಕೃತಿಯಾಗಿದೆ. 135 ವೃತ್ತಗಳಿರುವ ‘ಸಿದ್ಧಲಿಂಗೇಶ್ವರ ಶತಕ’ವು ಒಂದು ಶುದ್ಧ ತಾತ್ವಿಕ ಕೃತಿ. ಇದರಲ್ಲಿ ವೀರಶೈವ ತತ್ತ್ವಗಳನ್ನು ಅತ್ಯಂತ ಮಾರ್ಮಿಕವಾಗಿ ಪ್ರತಿಪಾದಿಸಲಾಗಿದೆ. ಇದೊಂದು ಶತಕ ರೂಪದ ಅನುಭಾವ ಕಾವ್ಯ. ‘ನಿರಂಜನ ಶತಕ’ ಹಾಗೂ ‘ನಿರಂಜನ ಲಿಂಗ ಶತಕ’ಗಳನ್ನೂ ಈ ಕವಿಯೇ ಬರೆದಿರುವನೆಂದು ತಿಳಿಯಲಾಗಿದೆ. ‘ನಿರಂಜನ ಶತಕ’ ದಲ್ಲಿ ವೀರಶೈವ ತತ್ತ್ವ ಹಾಗೂ ನೀತಿ ನಿರೂಪಿತವಾಗಿದೆ. ಕಂದದಲ್ಲಿ ರಚಿತವಾದ ನಿರಂಜನ ಲಿಂಗ ಶತಕಕ್ಕೆ ‘ಶಿವಗಣ ಸ್ತೋತ್ರ’ವೆಂಬ ಹೆಸರೂ ಇರುವಂತೆ ತಿಳಿದು ಬರುತ್ತದೆ. ಈ ಕೃತಿಯಲ್ಲಿ 101 ಮಂದಿ ಶಿವಗಣಾದಿಗಳನ್ನು ಸ್ತೋತ್ರ ಮಾಡಲಾಗಿದೆ.

ಕ್ರಿ.ಶ. 1570 ರಲ್ಲಿ ರಚಿತವಾದ ‘ಇಷ್ಟಲಿಂಗೇಶ್ವರ ಶತಕ’ದಲ್ಲಿ 98 ವೃತ್ತಗಳಿದ್ದು ಈ ಶತಕವು ಇಷ್ಟಲಿಂಗೇಶ್ವರನ ಸ್ತುತಿಪರವಾಗಿದೆ. ಇದನ್ನು ರಚಿಸಿದವನು ಮೆದ್ಲೇರಿ ಶಿವಲಿಂಗನೆಂಬುವನು. ಈ ಶತಕದಲ್ಲಿ ನೀತಿ, ಲೋಕಾನುಭವ, ಶಿವನ ಸ್ತೋತ್ರ ಹಾಗೂ ಮಹಿಮೆ ವರ್ಣಿತವಾಗಿದೆ. ಇದೊಂದು ಅಪ್ರಕಟಿತ ಕೃತಿಯಾಗಿದೆ.

ಗೌರವಾಚಾರ್ಯ ಬಸವಾಂಕನು [ಕ್ರಿ.ಶ. 1580] ‘ಕಲ್ಯಾಣ ಶತಕ’ವನ್ನು ರಚಿಸಿದ್ದಾನೆ. ಸಂಸಾರವು ಹೇಯವಾದುದೆಂಬುದನ್ನೂ, ವೀರಶೈವ ಧರ್ಮದ ಸಾರವನ್ನೂ,

ಶೃಂಗಾರ ವಿಚಾರಗಳನ್ನೂ ಕವಿ ಈ ಶತಕದಲ್ಲಿ ವಿವರಿಸಿರುವನು. ಈ ಶತಕವು ಭಕ್ತಿ, ಜ್ಞಾನ, ವೈರಾಗ್ಯ ಬೋಧಕವಾಗಿರುವಂತೆ ಶೃಂಗಾರ ವಿಷಯ ಪ್ರತಿಪಾದಕವೂ ಆಗಿದೆ. ಕ್ರಿ.ಶ. ಸುಮಾರು 1650 ರಲ್ಲಿದ್ದ ಚೆನ್ನಾರ್ಯ ಅಥವಾ ಚೆನ್ನವೀರ ದೇಶಿಕನು 'ಅಷ್ಟಾವರಣ ಮಣಿ ದರ್ಪಣ ಶತಕ' ಹಾಗೂ ಈಶ್ವರವೋಲಗ ಶತಕ' ಎಂಬ ಎರಡು ಕೃತಿಗಳನ್ನು ರಚಿಸಿದ್ದಾನೆ. ವೃತ್ತದಲ್ಲಿ ರಚಿತವಾದ 'ಅಷ್ಟಾವರಣ ಮಣಿ ದರ್ಪಣ ಶತಕ'ಕ್ಕೆ 'ಶಂಭು ಶತಕ'ವೆಂದೂ ಹೆಸರಿದೆ. ಇದು ವೀರಶೈವ ತತ್ತ್ವ ಬೋಧಕವಾಗಿಯೂ, ಈಶ್ವರ ಸ್ತುತಿರೂಪವಾಗಿಯೂ ಇದೆ. ಇದು ಪ್ರಕಟವಾಗಿಲ್ಲ. 'ಈಶ್ವರವೋಲಗ ಶತಕ' ವೂ ವೃತ್ತದಲ್ಲಿದೆ. ಇದಕ್ಕೆ, "ಮಲ್ಲಿಕಾರ್ಜುನ ಮಹಾತ್ಮೆ" ಎಂಬ ಹೆಸರೂ ಇದೆ. ಇದರಲ್ಲಿ ನಿರ್ದಿಷ್ಟವಾದ ಅಂಕಿತವಿಲ್ಲ. ಈಶ್ವರ ಸ್ತೋತ್ರರೂಪವಾಗಿರುವ ಈ ಶತಕದಲ್ಲಿ ಮಲ್ಲಿಕಾರ್ಜುನ ಕ್ಷೇತ್ರ ಮಹಾತ್ಮೆ ವರ್ಣಿತವಾಗಿದೆ. ಇದೇ ಕಾಲದಲ್ಲಿದ್ದ ಶಾಂತವೀರ ದೇಶಿಕನು 'ಶಿವ ಮಹತ್ವಸಾರ ಶಿಖಾಮಣಿ ಸಂಗ್ರಹ ಶತಕ'ವನ್ನು ರಚಿಸಿದ್ದಾನೆ. 100 ವೃತ್ತಗಳಿರುವ ಈ ಶತಕದಲ್ಲಿ ಶಿವ ಮಹತ್ವವು ಪ್ರತಿಪಾದಿತವಾಗಿದೆ.

ವೀರಶೈವ ಕವಿಯಾದ ಶಾಂತವೃಷಭೇಶನು [ಕ್ರಿ.ಶ. 1700] ರಚಿಸಿದ ಅನುಭವ ಶತಕದಲ್ಲಿ 115 ಕಂದ ಪದ್ಯಗಳಿವೆ. ಇದೊಂದು ಅಪ್ರಕಟಿತ ಕೃತಿ. ಈ ಶತಕವು ವೀರಶೈವ ವೇದಾಂತವನ್ನು ಬೋಧಿಸುತ್ತದೆ. ಕವಿಯು ತನ್ನ ಗ್ರಂಥದ ಮಹತ್ವವನ್ನು ಕುರಿತು. "ಶರಣರು ಕೇಳಲು ಭ್ರಾಂತಳಿದಪರು ವೀರಶೈವದ ಮತಮಂ" ಎಂದು ಹೇಳಿಕೊಂಡಿದ್ದಾನೆ. ಗುರುವ ಎಂಬ ವೀರಶೈವ ಕವಿ 'ಪ್ರಾಣಲಿಂಗ ಶತಕ' ಎಂಬ ಶತಕವನ್ನು ರಚಿಸಿದ್ದಾನೆ. 101 ವೃತ್ತಗಳುಳ್ಳ ಈ ಶತಕವು ವೀರಶೈವ ಸಿದ್ಧಾಂತವನ್ನೂ, ಅಲ್ಲಲ್ಲಿ ಪುರಾತನರ ಚಾರಿತ್ರವನ್ನೂ ತಿಳಿಸುತ್ತದೆ. ಶಾಂತಾಚಾರ್ಯನೆಂಬ ಕವಿ, 'ಮರಣ ಮಣಿ ದರ್ಪಣ' ಎಂಬ ಶತಕವನ್ನು ರಚಿಸಿದ್ದಾನೆ. ಈತನು ತನ್ನನ್ನು 'ಯೋಗಾಚಾರ್ಯ ಪಟ್ಟಸ್ಥಲ ನಿರ್ಣಯಾನ್ವಿತ' ಎಂದು ಹೇಳಿಕೊಂಡಿದ್ದಾನೆ. ಒಂದು ನೂರು ಕಂದ ಪದ್ಯಗಳಿರುವ ಈ ಶತಕದಲ್ಲಿ ಕವಿ ಸ್ಕಾಂದ ಪುರಾಣಾದಿ ಗ್ರಂಥಗಳಲ್ಲಿ ನಿರೂಪಿತವಾದ ಮರಣ ಸೂಚನೆಗಳನ್ನು ಕನ್ನಡಕ್ಕೆ ಅನುವಾದಿಸಿರುವಂತೆ ಕಂಡುಬರುತ್ತದೆ. ಈ ಶತಕದಲ್ಲಿ ಮರಣ ಸೂಚನೆಗಳು ಮಾತ್ರವಲ್ಲದೆ ಸುಸ್ವಪ್ನ, ದುಃಸ್ವಪ್ನ ಫಲ, ಆಯುವೃದ್ಧಿ, ಕಾರಣಗಳೂ ನಿರೂಪಿತವಾಗಿವೆ.

ಕ್ರಿ.ಶ. ಸುಮಾರು 1725 ರಲ್ಲಿದ್ದ ಕಾಡಸಿದ್ಧೇಶನು 111 ವೃತ್ತಗಳಿರುವ 'ಇಷ್ಟಲಿಂಗ ಶತಕ'ವನ್ನು ರಚಿಸಿದ್ದಾನೆ. ಶಿವಾಧಿಕ್ಯವನ್ನು ಬೋಧಿಸುವುದರಿಂದ ಈ ಕೃತಿಗೆ, 'ಶಿವಾಧಿಕ್ಯ ಶತಕ'ವೆಂಬ ಹೆಸರೂ ಇದ್ದಂತೆ ತಿಳಿದು ಬರುತ್ತದೆ. ವೀರಶೈವ ಕವಿಯಾದ ಯೋಗಾನಂದನು [ಕ್ರಿ.ಶ. 1750] 'ವಿರೂಪಾಕ್ಷ ಶತಕ' ಮತ್ತು 'ಬಸವ ಶತಕ'ಗಳನ್ನು ರಚಿಸಿದ್ದಾನೆ. ವೇದಾಂತ ಬೋಧಕವಾದ 'ವಿರೂಪಾಕ್ಷ ಶತಕ'ದಲ್ಲಿ 103 ಕಂದಗಳಿವೆ. 110 ಹಾಡು ಅಥವಾ ಪದ್ಯಗಳಿರುವ 'ಬಸವ ಶತಕವು ಗುರು ಶಿಷ್ಯ ಸಂವಾದ ರೂಪ

ದಲ್ಲಿದ್ದು ವೇದಾಂತವನ್ನು ಬೋಧಿಸುತ್ತದೆ. ಇದೇ ಕಾಲದಲ್ಲಿದ್ದ ವೀರಶೈವಕವಿ ಶಿವಯೋಗೀಶ್ವರನು ಭಕ್ತಿಮಾರ್ಗವನ್ನನುಸರಿಸಿ ವಾರ್ಧಕ ಷಟ್ಪದಿಯಲ್ಲಿ ಕೆಲವು ಶತಕಗಳನ್ನು ರಚಿಸಿರುವನೆಂದು ಕವಿಚರಿತೆಕಾರರು ಹೇಳಿದರೂ ಅವು ಉಪಲಬ್ಧವಾಗಿಲ್ಲ. ಕ್ರಿ.ಶ. 1800 ರಲ್ಲಿದ್ದ ಕಪ್ಪಿನಿಯು 'ನಂಜುಂಡ ಶತಕ'ವನ್ನು ರಚಿಸಿದ್ದಾನೆ. 103 ಕಂದ ಪದ್ಯಗಳಿರುವ ಈ ಶತಕವು ನೀತಿಬೋಧಕ ಕೃತಿಯಾಗಿದೆ. ಸಂಸ್ಕೃತ ಶ್ಲೋಕಗಳನ್ನು ಕವಿ ಕನ್ನಡಕ್ಕೆ ಪರಿವರ್ತಿಸಿರುವಂತೆ ತಿಳಿದು ಬರುತ್ತದೆ. ಇವಕ್ಕೆ 'ನಂಜುಂಡ ಲಿಂಗ ಶತಕ'ವೆಂಬ ಹೆಸರೂ ಇದೆ

ಇದೇ ಕಾಲದಲ್ಲಿ ನಿಜಲಿಂಗಾರಾಧ್ಯನೆಂಬ ವೀರಶೈವ ಕವಿ 'ನಿಜಲಿಂಗ ಶತಕ'ವನ್ನು ರಚಿಸಿದ್ದಾನೆ. ಇದರಲ್ಲಿ 100 ವಾರ್ಧಕ ಷಟ್ಪದಿಗಳಿವೆ. ಈ ಕೃತಿಯು ಶಿವಸ್ತುತಿ ರೂಪವಾಗಿಯೂ, ನೀತಿ–ವೈರಾಗ್ಯ ಬೋಧಕವಾಗಿಯೂ, ತತ್ತ್ವ ನಿರೂಪಕವಾಗಿಯೂ ಇದೆ. ಪ್ರಪಂಚದಲ್ಲಿ ಜಾಣರೂ ಇದ್ದಾರೆ, ಮೂರ್ಖರೂ ಇದ್ದಾರೆ. ನೀತಿ–ನಡವಳಿಕೆಗಳಿಂದಲೇ ಅವರನ್ನು ತಿಳಿದುಕೊಳ್ಳಬೇಕು ಎಂಬ ಜಾಣ ಪದ್ಧತಿ ಹಾಗೂ ಮೂರ್ಖ ಪದ್ಧತಿಗಳನ್ನು ಕವಿ ವರ್ಣಿಸಿದ್ದಾನೆ.

ಸಂಗವಿಭು ಅಥವಾ ಗಣೇಕಲ್ ಸಂಗಪ್ಪ ಎಂಬ ಕವಿಯು ಕ್ರಿ.ಶ. 1832ರಿಂದ 1856ರ ಅವಧಿಯಲ್ಲಿ 'ಬಸವ ಶತಕ' 'ಭುವನೈಕ ನಾಯಕೀ ಶತಕ' ಮತ್ತು 'ಪಂಪಾ ಶತಕ'ಗಳನ್ನು ರಚಿಸಿರುವನೆಂದು ಅವುಗಳನ್ನು ಸಂಪಾದಿಸಿರುವ ಶಾಂತರಸ ಅವರು ಹೇಳುತ್ತಾರೆ, 'ಭುವನೈಕ ನಾಯಕೀ ಶತಕ' ವೊಂದನ್ನುಳಿದು ಇತರ ಎರಡು ಶತಕಗಳಲ್ಲಿಯೂ ಸಂಗವಿಭು ತಾನೇ ಕೃತಿಕರ್ತನೆಂದು ಹೇಳಿಕೊಂಡಿದ್ದಾನೆ. ಬಸವ ಶತಕದಲ್ಲಿ 100 ವೃತ್ತಗಳಿವೆ. ಇವಕ್ಕೆ 'ಶರಣಾಗತ ವಜ್ರ ಪಂಜರ ಶತಕ'ವೆಂಬ ಹೆಸರೂ ಇದೆ. ಇದರಲ್ಲಿ ಬಸವಣ್ಣನವರ ವ್ಯಕ್ತಿತ್ವವು ಸುಂದರವಾಗಿ ಮತ್ತು ಸ್ಫುಟವಾಗಿ ವರ್ಣಿತವಾಗಿದೆ. ಅಲ್ಲದೆ ಇದರಲ್ಲಿ ಇತಿಹಾಸ, ಪವಾಡ, ಸಾಮಾನ್ಯ ನೀತಿ ಮತ್ತು ಸಮಕಾಲೀನ ಪರಿಸ್ಥಿತಿಯ ಚಿತ್ರಣವಿದೆ. ಭುವನೈಕ ನಾಯಕೀ ಶತಕ'ದಲ್ಲಿ ಪಾರ್ವತಿಯ ಅಂಗಾಂಗಗಳನ್ನೂ, ಅವುಗಳ ಚೆಲುವನ್ನೂ ಆಕೆ ಲೋಕೈಕ ಸುಂದರಿ ಎಂಬ ದೃಷ್ಟಿಯಿಂದ ವರ್ಣಿಸಿದ್ದಾನೆ. ಈ ಶತಕದಲ್ಲಿ 100 ವೃತ್ತಗಳಿವೆ. 101 ವೃತ್ತಗಳಿರುವ 'ಪಂಪಾ ಶತಕ'ದಲ್ಲಿ ಕವಿಯು ಶಿವನ ಮಹತ್ವವನ್ನೂ, ಮಹಿಮೆಯನ್ನೂ ಹೊಗಳುತ್ತಾ ಆರ್ತತೆಯಿಂದ ತನ್ನನ್ನು ಉದ್ಧರಿಸಬೇಕೆಂದು ಆತನಲ್ಲಿ ಮೊರೆಯಿಡುತ್ತಾನೆ. ಈ ಶತಕವು ಅಲಂಕಾರ, ಚಮತ್ಕಾರ ಮೊದಲಾದವುಗಳಿಲ್ಲದೆ ಸಹಜ ಸೌಂದರ್ಯದಿಂದ ಕೂಡಿದೆ. ಸಂಗವಿಭುವಿನ ಶೈಲಿ ಬಂಧುರವೂ, ಲಲಿತವೂ ಆಗಿದೆ. ಸಂಸ್ಕೃತ ಮತ್ತು ಕನ್ನಡ ಎರಡೂ ಭಾಷೆಗಳಲ್ಲಿ ಅವನಿಗೆ ಪಾಂಡಿತ್ಯವೂ ಪ್ರಭುತ್ವವೂ ಇತ್ತೆಂಬುದು ಅವನ ಕೃತಿಗಳನ್ನು ಅವಲೋಕಿಸಿದಾಗ ತಿಳಿಯುತ್ತದೆ.

ನಿಜಲಿಂಗ ಪ್ರಭುವಿನ 'ಓಂಕಾರ ನಿಜಲಿಂಗ ಪ್ರಭು ಶತಕ'ವು ಪಠನದಲ್ಲಿದೆ.

ವೀರಶೈವರು ಮುಕ್ತರಾಗುವ ತತ್ತ್ವ ಪ್ರತಿಪಾದನೆಗಳನ್ನೂ, ಅವರ ಧರ್ಮವನ್ನೂ ಮತ್ತು ಇಷ್ಟಲಿಂಗದ ಪ್ರಾಪ್ತಿಯನ್ನೂ 100 ವಚನಗಳಲ್ಲಿ ಕವಿ ಹೇಳಿದ್ದಾನೆ. ಇಷ್ಟ ಲಿಂಗ, ಜಂಗಮ ಲಿಂಗ ಮತ್ತು ಪ್ರಾಣಲಿಂಗ ಎಂಬ ಲಿಂಗತ್ರಯಗಳ ಮಹತ್ವವನ್ನು ಈ ಶತಕದಲ್ಲಿ ವಿವರಿಸಲಾಗಿದೆ. ಕರಸ್ಥಲದ ವೀರಣ್ಣೊಡೆಯರ 'ನಿಷ್ಕಲ ಶತಕ'ದಲ್ಲಿ ಶರಣರ ಆಚಾರ ವಿಚಾರಗಳನ್ನೂ ಅವರ ಮಹತ್ವವನ್ನೂ ತಿಳಿಸಲಾಗಿದೆ. ಚೆನ್ನ ವೀರೇಶ್ವರರಿಂದ ರಚಿತವಾದ 'ಚೆನ್ನವೀರ ಶತಕ'ವು ವೀರಶೈವ ತತ್ತ್ವಜ್ಞಾನವನ್ನು ಸ್ವಲ್ಪದರಲ್ಲಿಯೇ ಸ್ವಾರಸ್ಯಪೂರ್ಣವಾಗಿ ನಿರೂಪಿಸುತ್ತದೆ. ಅಲ್ಲಲ್ಲಿ ಉತ್ತಮ ಸಾದೃಶ್ಯ ಗಳನ್ನು ಕೊಟ್ಟು ವಿಷಯವನ್ನು ಹೆಚ್ಚು ಸ್ಪಷ್ಟಗೊಳಿಸಲಾಗಿದೆ. ಗುರು, ಲಿಂಗ, ಜಂಗಮ ಈ ಮೂರನ್ನು ಒಂದೇ ಎಂದು ಭಾವಿಸಿ ಪೂಜಿಸಿದಾಗ ಅವನು ಭವ ಬಂಧನದಿಂದ ಮುಕ್ತನಾಗಿ ಲಿಂಗೈಕ್ಯನಾಗುವನು ಎಂಬುದನ್ನೂ ಗುರು, ಲಿಂಗ, ಜಂಗಮರ ಹಿರಿಮೆ, ಶಿವಮಂತ್ರ ಮಹತ್ವ, ಲಿಂಗಧಾರಣೆಯ ಮಹತ್ವ, ಶಿವದೀಕ್ಷೆ ಯಿಂದಾಗುವ ಫಲ ಮೊದಲಾದವುಗಳನ್ನೂ ವಿವರಿಸಲಾಗಿದೆ.

ಅಮರನಾಥ ಶಾಸ್ತ್ರಿಗಳ 'ಶ್ರೀ ರುದ್ರಮುನೀಶ್ವರ ಶತಕ'ದಲ್ಲಿ ಶಿವನ ನಾನಾ ರೀತಿಯ ವರ್ಣನೆಗಳು, ಅಷ್ಟಾವರಣದ ಮಹತ್ವ, ಪಂಚಾಕ್ಷರೀ ಮಂತ್ರ ಸ್ವರೂಪ, ಪಾದ ಮಹಿಮೆ ಮೊದಲಾದ ವೀರಶೈವ ಮತಕ್ಕೆ ಸಂಬಂಧಿಸಿದ ವಿಚಾರಗಳ ವಿವರವಿದೆ. ಇದೇ ಕವಿಯ, 'ಶ್ರೀ ಜಗದ್ಗುರು ರೇಣುಕಾಚಾರ್ಯ ಶತಕ'ದಲ್ಲಿ ಅಷ್ಟಾವರಣ, ಷಟ್‌ಸ್ಥಲಾದಿಗಳ ಸ್ವರೂಪ, ಸನ್ಯಾಸಾಶ್ರಮ ಪದ್ಧತಿ, ಮತ್ತು ಮತಾಚಾರ್ಯರ ಸಮಗ್ರ ಸ್ವರೂಪಗಳನ್ನೂ. ಭಸ್ಮ, ರುದ್ರಾಕ್ಷಿ ಮಂತ್ರ ಮಹಿಮೆ, ಲಿಂಗಾರ್ಚನಾ ಫಲಗಳನ್ನು ನಿರೂಪಿಸಲಾಗಿದೆ.

ಶ್ರೀ ಮತ್ಸಚ್ಚಿದಾನಂದ ಗುರು ಅನ್ನದಾನ ಸ್ವಾಮಿಗಳಿಂದ ರಚಿತವಾದ 'ರುದ್ರ ಗುರು ಪಾರ್ವತೀಶ್ವರ ಶತಕ'ದಲ್ಲಿ ಜ್ಞಾನೇಂದ್ರಿಯ, ಕರ್ಮೇಂದ್ರಿಯ, ಮಲತ್ರಯ, ಅಷ್ಟಮದ, ಷಡ್ವೈರಿಗಳು ಮೊದಲಾದ ವಿಚಾರವೂ, ಗುರುವಿನ ಮಹತ್ವ, ಶಿವ ಭಕ್ತಿಯ ಹಿರಿಮೆ ಮೊದಲಾದುವುಗಳೂ ವರ್ಣಿತವಾಗಿವೆ. 'ಮುತ್ತಿನ ಕಂಥೆ' ಶತಕದಲ್ಲಿ (ಇದರ ಕರ್ತೃ ಯಾರೆಂದು ತಿಳಿದಿಲ್ಲ) ವೀರಶೈವ ಧರ್ಮದ ಗುರು, ಲಿಂಗ, ಜಂಗಮಗಳ ಮಹತ್ವದ ನಿರೂಪಣೆಯಿದೆ. ಇದೇ ರೀತಿ 'ನಿಜಾನುಭವ ಶತಕ', 'ಪಾರಮಾರ್ಥ ಶತಕ' 'ಲಘುವರಣ ಶತಕ', 'ರಾಮನಾಥ ಶತಕ' ಮೊದಲಾದುವು ಗಳಲ್ಲಿ ವೀರಶೈವ ತತ್ವ, ಸಿದ್ಧಾಂತಗಳು ಪ್ರತಿಪಾದಿತವಾಗಿವೆ.

ಹತ್ತೊಂಬತ್ತನೆಯ ಶತಮಾನದಲ್ಲಿದ್ದ ವೀರಶೈವ ಕವಿಯಾದ ಮಹಾಂತ ದೇಶಿಕನು 'ರಾಮೇಶ್ವರ ಶತಕ' ಮತ್ತು 'ವೇಣುಗೋಪಾಲ ಶತಕ'ಗಳನ್ನೂ, ವೀರನಗೆರೆ ಪುಟ್ಟಣ್ಣನು 'ಚಾಮರಾಜೇಂದ್ರ ಶತಕ'ವನ್ನೂ, ತಂಬಳಬೀಡು ಪರ್ವತಯ್ಯನು

'ಖೈರೂಪಳಿ ವೀರಭದ್ರ ಶತಕ'ವನ್ನೂ ರಚಿಸಿರುವರು. ಇವಲ್ಲದೆ ವೀರಶೈವ ಕವಿಗಳಿಂದ ರಚಿತವಾದ ಇನ್ನೂ ಕೆಲವು ಶತಕಗಳಿದ್ದರೂ ಅವು ಅಷ್ಟು ಮುಖ್ಯವಾದವುಗಳಲ್ಲ.

ವಸ್ತು, ಶೈಲಿ ಹಾಗೂ ಛಂದಸ್ಸುಗಳ ದೃಷ್ಟಿಯಿಂದ ಕೆಲವು ವೀರಶೈವ ಶತಕಗಳು ಕನ್ನಡ ಶತಕ ಸಾಹಿತ್ಯದ ಅಗ್ರಪಂಕ್ತಿಯಲ್ಲಿ ನಿಲ್ಲುತ್ತವೆ. ಭಕ್ತಿ, ಜ್ಞಾನ, ವೈರಾಗ್ಯ, ನೀತಿ, ಮತತತ್ತ್ವ ಮುಂತಾದುವುಗಳನ್ನು ನಿರೂಪಿಸುವ ಹರಿಹರನ 'ಪಂಪಾ ಶತಕ', 'ರಕ್ಷಾ ಶತಕ'ಗಳು, ಮೊಗ್ಗೆಯ ಮಾಯಿದೇವನ 'ಶತಕತ್ರಯ'. ಪುಲಿಗೆರೆ ಸೋಮನ 'ಸೋಮೇಶ್ವರ ಶತಕ', ವೀರಭದ್ರ ರಾಜನ ಶತಕಗಳು, ಚಂದ್ರ ಕವಿಯ 'ಶಂಕರ ಶತಕ', ಶಂಕರ ದೇವನ 'ಗುರು ಶಂಕರೇಶ್ವರ ಶತಕ', ಗುಮ್ಮಟಾರ್ಯನ 'ಅರ್ಧೇಂದುಮೌಳಿ ಶತಕ', ನಿಜಲಿಂಗಾರಾಧ್ಯನ 'ನಿಜಲಿಂಗ ಶತಕ ಮುಂತಾದ ಕೃತಿಗಳು ಉತ್ತಮ ಗುಣಮಟ್ಟದ ಶತಕಗಳಾಗಿವೆ. ವೀರಶೈವ ಶತಕಗಳಲ್ಲಿ ವೃತ್ತ ಕಂದ ಹಾಗೂ ಷಟ್ಪದಿ ಮುಂತಾದ ಛಂದಸ್ಸುಗಳ ಬಳಕೆಯಾಗಿದೆ. ಒಟ್ಟಿನಲ್ಲಿ ಕನ್ನಡದ ವೀರಶೈವ ಶತಕ ಸಾಹಿತ್ಯವು ಮಹತ್ವಪೂರ್ಣವೂ, ಮೌಲಿಕವೂ ಆದುದಾಗಿದೆ ಎಂಬುದರಲ್ಲಿ ಸಂದೇಹವಿಲ್ಲ.





# ಶರಣರ ದೃಷ್ಟಿಯಲ್ಲಿ ಭಕ್ತಿ

ಡಾ|| ವೀರಣ್ಣ ರಾಜೂರ

## ಭಕ್ತಿ

ಭಕ್ತಿ ಮಾನವ ಸಂಸ್ಕೃತಿಯ ಜೀವನಾಡಿ. ಭಾರತೀಯ ಸಂಸ್ಕೃತಿಯಲ್ಲಂತೂ ಅದಕ್ಕೆ ಅಗ್ರಪ್ರಾಶಸ್ತ್ಯ. ಎಲ್ಲ ಧರ್ಮ ಸಿದ್ಧಾಂತಗಳಲ್ಲಿ ಅದಕ್ಕೆ ಪ್ರಮುಖ ಸ್ಥಾನ. ಪ್ರತಿಯೊಬ್ಬ ಧರ್ಮಸ್ಥಾಪಕ, ದ್ರಷ್ಟಾರ, ಅನುಭಾವಿ ತನ್ನ ತಾತ್ವಿಕ ಅಡಿಪಾಯಕ್ಕೆ ಭಕ್ತಿಯನ್ನೇ ಮೂಲದ್ರವ್ಯವನ್ನಾಗಿ ಬಳಸಿಕೊಂಡಿದ್ದಾನೆ. ಒಬ್ಬೊಬ್ಬರಲ್ಲಿಯೂ ತತ್ವ-ಸಿದ್ಧಾಂತ, ದೃಷ್ಟಿ-ಧೋರಣೆಗಳ ವಿಷಯದಲ್ಲಿ ಭಿನ್ನಾಭಿಪ್ರಾಯಗಳು ಕಂಡುಬಂದರೂ ಭಕ್ತಿಯ ವಿಷಯದಲ್ಲಿ ಮಾತ್ರ ಏಕಾಭಿಪ್ರಾಯ ಎದ್ದು ಕಾಣುತ್ತದೆ. ಮುಕ್ತಿ ಸಾಮ್ರಾಜ್ಯ ವನ್ನು ತಲುಪಲು ಭಕ್ತಿ ಸುಲಭ ಸಾಧನ ಮಾರ್ಗ ಎಂದು ಎಲ್ಲರೂ ಒಪ್ಪುತ್ತಾರೆ.

'ಮುಕ್ತಿಸಾಧಕೋಪಾಯಗಳಲ್ಲಿ ಭಕ್ತಿಯೇ ಶ್ರೇಷ್ಠವಾದುದು',1 'ಭಕ್ತಿಯು ಕರ್ಮ-ಜ್ಞಾನಯೋಗಗಳಿಗಿಂತಲೂ ಅಧಿಕವಾದುದು2; 'ನಾನು ಅನನ್ಯ ಭಕ್ತಿಯಿಂದಲೇ ವಶನಾಗಬಲ್ಲೆನು',3 'ಭಕ್ತಿಯು ಮುನಿಗಳಿಗೂ ಕೂಡ ದುರ್ಲಭವಾದುದು'4, 'ಮುಕ್ತ್ಯಾನಂದ ಭಕ್ತ್ಯಾನಂದ ಸಮುದ್ರದ ಒಂದು ಕಣ'5 ಎಂಬ ಅನುಭಾವಿಗಳ ಈ ಮಾತುಗಳು ಭಕ್ತಿಯ ಹಿರಿಮೆಯನ್ನು ಸಾರುತ್ತವೆ.

'ಭಕ್ತಿ' ಎಂಬ ಪದ ಶ್ರದ್ಧೆ, ನಿಷ್ಠೆ, ಪ್ರೀತಿ, ಅನುರಾಗ ; ಸೇವೆ, ಆರಾಧನೆ, ವಿಶ್ವಾಸ, ನಂಬಿಕೆ7 ; ಗೌರವ8 ; ಆಸಕ್ತಿ, ಉಪಚಾರ, ಹಿರಿಯರಲ್ಲಿ ತೋರಿಸುವ ಪ್ರೇಮ9 ; ಉಪಾಸನೆ10 ; ಪೂಜ್ಯಭಾವ, ಒಲವು, ಸಮರ್ಪಣಭಾವ, ಮಧುರಭಾವ, ಭಾವ ಪರವಶತೆ, ತಲ್ಲೀನತೆ11 ; devotion, devotedness, attachment, loyalty, lovingfaith, love, affection, fondness for, reverence, homage, worship ; 12 Service, zeal, piety, faith, belief13 ಎಂದು ಮುಂತಾಗಿ ಅನೇಕ ಅರ್ಥಗಳನ್ನು ಒಳಗೊಂಡಿದೆ.

ಭಕ್ತಿಯ ಸ್ವರೂಪವನ್ನು ಕುರಿತು ಪೂರ್ವಕಾಲದಿಂದಲೂ ಜಿಜ್ಞಾಸೆ ನಡೆಯುತ್ತ ಬಂದಿದೆ. ಒಬ್ಬೊಬ್ಬರು ಒಂದೊಂದು ದೃಷ್ಟಿಯಿಂದ ಅದನ್ನು ವ್ಯಾಖ್ಯಾನಿಸಲು ಪ್ರಯತ್ನಿಸಿದ್ದಾರೆ. 'ಲಿಂಗಪೂಜಾದಿಗಳಲ್ಲಿರುವ ಅನುರಾಗವೇ ಭಕ್ತಿ'14 ಎಂದು ಪರಾಶರನ ಮಗನಾದ ವ್ಯಾಸನು ಅಭಿಪ್ರಾಯಪಟ್ಟರೆ, 'ಶಿವಕಥೆ ಹಾಗೂ ಶಿವಕೀರ್ತನಾದಿಗಳಲ್ಲಿರುವ ಪ್ರೀತಿಯೇ ಭಕ್ತಿ'15 ಎಂದು ಗಾರ್ಗ್ಯಮುನಿ, 'ಪರಮಾತ್ಮ ವಿಷಯಕವಾದ ಪರಮಾನುರಾಗವೇ ಭಕ್ತಿ'16 ಎಂದು ಶಾಂಡಿಲ್ಯಋಷಿ ಹೇಳಿದ್ದಾರೆ. 'ಭಕ್ತಿಯು ಪರಮ ಪ್ರೇಮ ರೂಪವು ಹಾಗೂ ಅಮೃತ ಸ್ವರೂಪವೂ ಆಗಿರುವದು'17 ಎಂದು ನಾರದ ಭಕ್ತಿಸೂತ್ರ ನಿರೂಪಿಸುತ್ತದೆ. 'ಪ್ರಜ್ವಲಿಸುವ ಬೆಂಕಿಯು ಕಟ್ಟಿಗೆಗಳನ್ನೆಲ್ಲ ಸುಟ್ಟು ಬೂದಿಮಾಡು ವಂತೆ ನನ್ನ ಭಕ್ತಿಯು ಸಮಸ್ತ ಪಾಪಗಳನ್ನು ನಾಶ ಮಾಡಿಬಿಡುವುದು. ನನ್ನ ಪ್ರಾಪ್ತಿಗಾಗಿ ಭಕ್ತಿಯೇ ಬೇಕು. ಯೋಗ, ಸಾಂಖ್ಯ, ಧರ್ಮ, ಸ್ವಾಧ್ಯಾಯ, ತಪ, ತ್ಯಾಗ ಮೊದಲಾದ ಯಾವುದೂ ಭಕ್ತಿಗೆ ಸಮಾನವಾಗವು ಎಂದು ಭಾಗವತದಲ್ಲಿ ಭಗವಂತ ಉದ್ಧವನಿಗೆ ಭಕ್ತಿಯ ಮಹಿಮೆಯನ್ನು ವಿವರಿಸುತ್ತಾನೆ. ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ 'ತಪಸ್ವಿಗಳಿಗಿಂತ, ಜ್ಞಾನಿಗಳಿಗಿಂತ, ಅಗ್ನಿಹೋತ್ರಾದಿ ಕರ್ಮಿಗಳಿಗಿಂತ ಯೋಗಿಯೇ ಅಧಿಕನಾದವನು ; ಆ ಯೋಗಿಗಳಿಗಿಂತ ಭಕ್ತನೇ ಶ್ರೇಷ್ಠನಾದವನು'19 ಎಂದು ಬೋಧಿಸಿದ್ದಾನೆ. ಪತಂಜಲಿಯು ಯೋಗ ಸೂತ್ರದಲ್ಲಿ 'ಈಶ್ವರ ಭಕ್ತಿಯಿಂದಲೇ ಸಮಾಧಿ ಸಿದ್ಧಿಸುವುದು'20 ಎಂದು ಹೇಳಿದ್ದಾನೆ. ನಾರದನು 'ಭಕ್ತರಲ್ಲಿ (ಭಕ್ತಿಯಲ್ಲಿ) ಜಾತಿ, ವಿದ್ಯಾ, ರೂಪ, ಕುಲ, ಧನ ಹಾಗೂ ಕ್ರಿಯಾ ಮುಂತಾದ ಯಾವ ಭೇದವನ್ನು ಗಣಿಸಲಾಗದು'21 ಎಂದು ನುಡಿದಿದ್ದಾನೆ. 'ಭಕ್ತಿ ಮಾರ್ಗವು ನಿರುಪದ್ರವವಾದುದು' ಎಂದು ಯೋಗಾಚಾರ್ಯರು, 'ಭಕ್ತಿಯು ನಿಷ್ಕಾಮ ಕರ್ಮ ಜ್ಞಾನ ಯೋಗಗಳ ಸುಂದರ ಸಮನ್ವಯಾತ್ಮಕವಾದುದು'23 ಎಂದು ಅನುಭಾವಿಗಳು ಅಭಿಮತ ವ್ಯಕ್ತಪಡಿಸಿದ್ದಾರೆ.

ಭಕ್ತಿ ಎಂಬ ಪದ ಮೊದಲು ಪರಮಾತ್ಮನ ಮೇಲಿನ ಪ್ರೀತಿ, ವಿಶ್ವಾಸ, ಗೌರವ, ಶ್ರದ್ಧೆ, ನಿಷ್ಠೆ ಎಂಬ ಅರ್ಥಗಳಲ್ಲಿ ಬಳಕೆಯಾಗತೊಡಗಿ, ಮುಂದೆ ಈ ದೈವಭಕ್ತಿಯ ಜೊತೆಗೆ ಮಾತೃಭಕ್ತಿ, ಪಿತೃಭಕ್ತಿ, ಗುರುಭಕ್ತಿ, ದೇಶಭಕ್ತಿ, ಸ್ವಾಮಿಭಕ್ತಿ–ಎಂದು ಮುಂತಾಗಿ ತನ್ನ ಅರ್ಥಸಂಪತ್ತಿಯನ್ನು ವಿಸ್ತರಿಸಿಕೊಳ್ಳುತ್ತ ಸಾಗಿಬಂದಿದೆ. ಪರಮಾತ್ಮನ ಮೇಲೆ ವ್ಯಕ್ತಿ ತೋರುವ ಭಕ್ತಿಯ ಉದ್ದೇಶ, ಗುರಿ ಒಂದೇ ಆಗಿದ್ದರೂ ಸಾಧನೆಯ ಮಾರ್ಗದಲ್ಲಿ ಅನುಸರಿಸುವ ರೀತಿ, ವಿಧಾನ ಒಂದೊಂದು ಮತಸ್ಥಾಪಕರ ದೃಷ್ಟಿಯಲ್ಲಿಯೂ ಭಿನ್ನವಾಗಿವೆ. ಈ ಭಿನ್ನತೆ ಕಾರಣವಾಗಿ ಭಕ್ತಿಯಲ್ಲಿ ಹಲವು ಪ್ರಕಾರಗಳು ಹುಟ್ಟಿಕೊಂಡಿದೆ.

## ಭಕ್ತಿ ಪ್ರಭೇದಗಳು

ಭಕ್ತಿಯು ರಚನಾತ್ಮಕ ದೈವೀಶಕ್ತಿ. ಅದು ವಿಶ್ವದ ಎಲ್ಲ ಜೀವಿಗಳಲ್ಲಿಯೂ ಪ್ರೇಮ

ಸ್ನೇಹ ಮೊದಲಾದ ರೂಪದಲ್ಲಿ ಸ್ವಾಭಾವಿಕವಾಗಿ ಇರುತ್ತದೆ. ಆದರೆ ಅದನ್ನು ಯೋಗ್ಯಮಾರ್ಗದಲ್ಲಿ ಹರಿಸುವ ಪ್ರಜ್ಞೆ ಮಾತ್ರ ವಿವೇಕಿಯಾದ ಮಾನವನಿಗಿದೆ. ಈಶಾನುಗ್ರಹದ ಸುಪರಿಣಾಮವಾಗಿ ಪರಿಶುದ್ಧವಾದ ಹೃದಯದಲ್ಲಿ ಶಿವನ ಹ್ಲಾದಿನೀಶಕ್ತಿಯು ರತ್ಯಾತ್ಮಕ ಭಕ್ತಿಯ ರೂಪದಲ್ಲಿ ಅರಳಿ ನಿಂತುಕೊಳ್ಳುತ್ತದೆ. ಅದೇ ಮಹಾನುಭಾವದ ಜನನಿಯೆನಿಸುವುದು. ಕಾರ್ಯಕಾರಣಗಳಲ್ಲಿ ಅಭೇದವಿರುವುದರಿಂದ ಭಕ್ತಿರತಿಯನ್ನೇ ಮಹಾನುಭಾವವೆಂದು ಶಿವಾಗಮಗಳಲ್ಲಿ ಹೇಳಲಾಗಿದೆ.24

ಭಕ್ತ್ಯಾತ್ಮಕ ರತಿಯು ನಾಲ್ಕು ವಿಧವಾಗಿದೆ : ಶುದ್ಧರತಿ, ಕಾಮಜರತಿ, ಸಂಬಂಧರತಿ ಮತ್ತು ಭಯಜರತಿ. ಯಾವ ವೈಶೇಷಿಕ ಕಾಮನೆಗಳಿಗೂ ಹೃದಯದಲ್ಲಿ ಅವಕಾಶ ಕೊಡದೆ ಶಿವನ ಅನಂತ ಪರಮಾನಂದದಾಯಕ ಗುಣವಿಶೇಷಗಳ ಆಕರ್ಷಣ ಪರವಶತೆಯಿಂದ ಉದಯಿಸುವುದು 'ಶುದ್ಧರತಿ' ಎನಿಸಿದರೆ, ರಮಣೇಚ್ಛೆಯಿಂದ ಹುಟ್ಟುವುದು 'ಕಾಮಜರತಿ' ಎನಿಸುತ್ತದೆ. 'ಸಂಬಂಧರತಿ' ಸಂಬಂಧ ಭಾವನೆಯಿಂದ ಉದಿಸುತ್ತದೆ. ಇದು ವಾತ್ಸಲ್ಯರತಿ, ಸಖ್ಯರತಿ ಎಂದು ಎರಡು ವಿಧವಾಗಿದೆ. ದೇವನನ್ನು ಪುತ್ರರೂಪದಲ್ಲಿ ಭಾವಿಸುವ ಭಕ್ತನಲ್ಲಿ ಪಾಲ್ಯ-ಪಾಲಕ ರೂಪದ ವಾತ್ಸಲ್ಯರತಿ, ದೇವನನ್ನು ಮಿತ್ರರೂಪದಲ್ಲಿ ಭಾವಿಸುವ ಭಕ್ತನಲ್ಲಿ ಸಖ್ಯರತಿ ಜನಿಸುತ್ತವೆ. ಸೇವ್ಯನ ಸೇವೆಯಲ್ಲಿ ತೊಡಗಿದ ಸೇವಕನಿಗೆ ತನ್ನ ಸೇವೆಯಲ್ಲಿ ಎಲ್ಲಿ ತೃಪ್ತಿಯುಂಟಾಗುವುದೋ ಎಂಬ ಶಂಕೆಯಿಂದ ಭಯ ಉಂಟಾಗುವಂತೆ, ಶಿವನ ಸೇವೆಯಲ್ಲಿ ತೊಡಗಿದ ಭಕ್ತನಿಗೆ ಉಂಟಾಗುವ ರತಿ 'ಭಯಜರತಿ' ಎನಿಸುತ್ತದೆ.

ಭಕ್ತಿಯಲ್ಲಿ ಎರಡರಿಂದ ಮೂವತ್ತಾರರವರೆಗೆ ಪ್ರಭೇದಗಳನ್ನು ಕಲ್ಪಿಸಲಾಗಿದೆ. ಸಾಂಖ್ಯರು ಅಪರಾಭಕ್ತಿ ಪರಾಭಕ್ತಿ ಎಂದು ಎರಡು ಪ್ರಕಾರಗಳನ್ನು ಹೇಳಿದರೆ, ಛಾಂದೋಗ್ಯೋಪನಿಷತ್ತಿನಲ್ಲಿ ಪ್ರಸ್ತಾವ,;ಉದ್ಗೀಥ, ಪ್ರತೀಹಾರ ಎಂಬ ಮೂರು ವಿಧ; ಹಿಂಕಾರ, ಪ್ರಸ್ತಾವ, ಉದ್ಗೀಥ, ಪ್ರತಿಹಾರ, ನಿಧನ-ಎಂಬ ಐದು ವಿಧ ಮತ್ತು ಗಾಯತ್ರಿ, ರಥಂತರ, ವಾಮದೇವ್ಯ, ಬೃಹತ್, ವೈರೂಪ, ವೈರಾಜ, ಶಕ್ವಲಿ, ರೇವತಿ, ಯಜ್ಞಾಯಜ್ಞೀಯ, ರಾಜನ ಎಂಬ ಹತ್ತು ವಿಧ ಭಕ್ತಿಗಳನ್ನು ತಿಳಿಸಲಾಗಿದೆ. ನಾರದ ಭಕ್ತಿಸೂತ್ರಗಳಲ್ಲಿ ಗುಣಮಹಾತ್ಮ್ಯಾಸಕ್ತಿ, ರೂಪಾಸಕ್ತಿ, ಪೂಜಾಸಕ್ತಿ, ಸ್ಮರಣಾಸಕ್ತಿ, ದಾಸ್ಯಾಸಕ್ತಿ, ಸಖ್ಯಾಸಕ್ತಿ, ಕಾಂತಾಸಕ್ತಿ, ವಾತ್ಸಲ್ಯಾಸಕ್ತಿ, ಆತ್ಮನಿವೇದನಾಸಕ್ತಿ, ತನ್ಮಯಾಸಕ್ತಿ ಹಾಗೂ ಪರಮವಿರಹಾಸಕ್ತಿ ಎಂಬ ಹನ್ನೊಂದು ವಿಧ ಭಕ್ತಿಗಳ ವಿವರ ಬರುತ್ತದೆ. ಬುದ್ಧನು ಮಂತ್ರ, ಧ್ಯಾನ, ಜಪ, ಸ್ತೋತ್ರ ಎಂಬ ನಾಲ್ಕು ವಿಧ ಭಕ್ತಿಗಳನ್ನು ಪ್ರಸ್ತಾಪಿಸಿದರೆ, 'ಜೈನರು ನಾಮ, ಸ್ಥಾಪನಾ, ದ್ರವ್ಯ, ಭಾವ, ಕ್ಷೇತ್ರ, ಕಾಲ ಎಂಬ ಷಡ್ವಿಧ ಭಕ್ತಿಗಳನ್ನು, ಆವಾಹನ, ಪಾದ್ಯ, ಆಸನ, ಅರ್ಚನ, ವಂದನ, ಮನಶ್ಶುದ್ಧಿ, ವಾಕ್‌ಶುದ್ಧಿ, ಕಾಯಶುದ್ಧಿ, ವಿಷಣಾಶುದ್ಧಿ ಎಂಬ ನವವಿಧ ಭಕ್ತಿಗಳನ್ನು ಅಂಗೀಕರಿಸಿದ್ದಾರೆ. ಶಬ್ದರತ್ನಾಕರದಲ್ಲಿ ಭಾಗವತ ವಾತ್ಸಲ್ಯ ಭಗವತ್ಕಥಾಶ್ರವಣೇಚ್ಛೆ

ಸ್ವರನೇತ್ರಾಂಗವಿಕಾರ, ಸಂತತ ಭಗವದನುಸ್ಮರಣ, ಅಮಾಂಸ ಭಕ್ಷಣ ಎಂಬ ಅಷ್ಟವಿಧ ಭಕ್ತಿಗಳ ಉಲ್ಲೇಖ ಬಂದರೆ, ಭಾಗವತದಲ್ಲಿ ಶ್ರವಣ, ಕೀರ್ತನ, ಸ್ಮರಣ, ಪಾದಸೇವನ ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ ಎಂಬ ನವವಿಧ ಭಕ್ತಿಗಳ ವರ್ಣನೆ ಬರುತ್ತದೆ. ವಿವೇಕಚಿಂತಾಮಣಿಯಲ್ಲಿ ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಅವಧಾನಭಕ್ತಿ, ಅನುಭಾವಭಕ್ತಿ, ಆನಂದಭಕ್ತಿ, ಸಮರಸಭಕ್ತಿ ಎಂಬ ಷಡ್ವಿಧ ಭಕ್ತಿಗಳನ್ನು ಮತ್ತು ಶಿವಭಕ್ತಜನ ವಾತ್ಸಲ್ಯ, ಶಿವಪೂಜಾರತಿ, ಶಿವಾರ್ಚನೆ, ಶಿವಾರ್ಥವಾದ ವ್ಯಾಪಾರ, ಶಿವಕಥಾಶ್ರವಣೇಚ್ಛೆ, ಶಿವಧ್ಯಾನ, ಶಿವಕಥಾನುಕೂಲತೆ, ಪರಮಸಾತ್ವಿಕತೆ ಎಂಬ ಅಷ್ಟವಿಧ ಭಕ್ತಿಗಳನ್ನು ವಿವರಿಸಲಾಗಿದೆ.[25] ಇವಲ್ಲದೆ ಬಾಹ್ಯ, ಅನನ್ಯ, ಏಕಾಂತ ಎಂದೂ ಸಕಾಮ, ನಿಷ್ಕಾಮ, ಸಂತಜ ಎಂದೂ ಭಕ್ತಿಯನ್ನು ಮೂರು ವಿಧವಾಗಿ ವಿಂಗಡಿಸಲಾಗುತ್ತದೆ.[26] ವಚನಕಾರರು (ಶರಣರು) ತ್ರಿವಿಧ, ಷಡ್ವಿಧ, ನವವಿಧ, ಷೋಡಶ ವಿಧ ಹಾಗೂ ಮೂವತ್ತಾರು ವಿಧ ಭಕ್ತಿಗಳನ್ನು ಹೇಳಿದ್ದಾರೆ.[27]

ಸಾಂಖ್ಯರು ಕಲ್ಪಿಸಿದ ಅಪರಾಭಕ್ತಿ ಮತ್ತು ಪರಾಭಕ್ತಿಗಳಲ್ಲಿ ವಿಕಾಸವನ್ನು ಉಂಟುಮಾಡಿದ ಭಕ್ತಾಚಾರ್ಯರು ಒಂದರಲ್ಲಿ ನವವಿಧ ಭಕ್ತಿಗಳನ್ನು, ಮತ್ತೊಂದರಲ್ಲಿ ಷಡ್ವಿಧ ಭಕ್ತಿಗಳನ್ನು ಕಂಡುಕೊಂಡರು. ಅಪರಾಭಕ್ತಿ ದ್ವೈತಾತ್ಮಿಕವಾದುದು. ಉಪಾಸಕನಾದ ಜೀವನು ಉಪಾಸ್ಯನಾದ ದೇವನಿಂದ ಸದಾ ಭಿನ್ನನು ಎಂದು ತಿಳಿದು ಮಾಡುವುದು ಈ ಭಕ್ತಿಯ ವೈಶಿಷ್ಟ್ಯ. ದ್ವೈತ ಭಕ್ತನು ಇಲ್ಲಿ ತನ್ನ ಉಪಾಸ್ಯ ಮೂರ್ತಿಯನ್ನು ಸದಾ ಏಕದೇಶದಲ್ಲಿಯೇ ಕಾಣುವನು. ಈ ಭಕ್ತಿಯ ಕೊನೆಯ ಪರಿಣಾಮ ಸಾಯುಜ್ಯ. ಉಪಾಸಕನ ವೃತ್ತಿ ಪ್ರವೃತ್ತಿಗನುಸಾರವಾಗಿ ಇದರಲ್ಲಿ ಒಂಬತ್ತು ಪ್ರಕಾರಗಳನ್ನು ಮಾಡಲಾಗುವುದು : ಶ್ರವಣಭಕ್ತಿ, ಕೀರ್ತನಭಕ್ತಿ, ಸ್ಮರಣಭಕ್ತಿ, ಪಾದಸೇವನಭಕ್ತಿ, ಅರ್ಚನಭಕ್ತಿ, ವಂದನಭಕ್ತಿ, ದಾಸ್ಯಭಕ್ತಿ, ಸಖ್ಯ ಭಕ್ತಿ ಮತ್ತು ಆತ್ಮನಿವೇದನ ಭಕ್ತಿ.*

ಪರಾಭಕ್ತಿ ಅದ್ವೈತಾತ್ಮಿಕವಾದುದು. ಉಪಾಸಕನಾದ ಜೀವನಿಗೂ ಉಪಾಸ್ಯ ನಾದ ದೇವನಿಗೂ ಅತ್ಯಂತಿಕವಾದ ಭೇದವಿಲ್ಲವೆಂದು ತಿಳಿದು ಮಾಡುವುದು ಈ ಭಕ್ತಿಯ ವಿಶೇಷತೆ. ಅದ್ವೈತಭಕ್ತನು ಇಲ್ಲಿ ತನ್ನ ಉಪಾಸ್ಯಮೂರ್ತಿಯನ್ನು ಪ್ರಾರಂಭದಲ್ಲಿ ಏಕದೇಶವರ್ತಿಯನ್ನಾಗಿ ಕಂಡರೂ ಬರುಬರುತ್ತ ಅವನನ್ನು ಸರ್ವತ್ರ ಕಾಣತೊಡಗುತ್ತಾನೆ. ಅಷ್ಟೇ ಅಲ್ಲ ತನ್ನನ್ನೂ ಸಹ ಶಿವರೂಪದಲ್ಲಿಯೇ ಕಂಡು ಅನುಸಂಧಾನ ಮಾಡತೊಡಗುತ್ತಾನೆ. ಈ ಭಕ್ತಿಯ ಕೊನೆಯ ಪರಿಣಾಮ ಸಾಮರಸ್ಯ. ಉಪಾಸಕನ ವೃತ್ತಿ ಪ್ರವೃತ್ತಿಗನುಸಾರವಾಗಿ ಇದರಲ್ಲಿ ಆರು ಪ್ರಕಾರ ಗಳನ್ನು ಮಾಡಲಾಗಿದೆ : ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಅವಧಾನಭಕ್ತಿ, ಅನುಭಾವ ಭಕ್ತಿ, ಆನಂದಭಕ್ತಿ ಮತ್ತು ಸಮರಸಭಕ್ತಿ.

ಅಪರಾಭಕ್ತಿ ಕೇವಲ ಪುರುಷಾರ್ಥಕವಾಗಿದ್ದರೆ, ಪರಾಭಕ್ತಿಯು ಸ್ವಯಂ ಪುರುಷಾರ್ಥರೂಪವಾಗಿರುವುದು. ಮೋಕ್ಷ ಎಂಬುದು ಅಪರಾಭಕ್ತಿಯಲ್ಲಿ ಬಂಧ, ದುಃಖ ನಿವೃತ್ತಿ ಮಾತ್ರವಾಗಿದ್ದರೆ, ಪರಾಭಕ್ತಿಯಲ್ಲಿ ಅದು ಶಿವತತ್ತ್ವದೊಡನೆ ಒಂದಾಗಿ ಉಚ್ಚತಮವಾದ ಸಮರಸ ಸುಖರೂಪವಾಗಿರುವುದು. ಸಮರಸಸುಖ ರೂಪವಾದ ಈ ಪರಾಭಕ್ತಿಯನ್ನೇ ಶಿವಶರಣರು ಅಂಗೀಕರಿಸಿದ್ದಾರೆ.

**ಶರಣರ ದೃಷ್ಟಿಯಲ್ಲಿ ಭಕ್ತಿ :**

ಶಿವಶರಣರು ತಮ್ಮ ತಾತ್ವಿಕ ಸಿದ್ಧಾಂತಗಳಿಗೆ ಭಕ್ತಿಯನ್ನೇ ಮೂಲ ಅಡಿಪಾಯ ವನ್ನಾಗಿ ಸ್ವೀಕರಿಸಿದ್ದಾರೆ. ಅವರ ಷಟ್‌ಸ್ಥಲಸಿದ್ಧಾಂತ ಭಕ್ತಿಯ ಸೋಪಾನದ ಮೇಲೆಯೇ ಕಟ್ಟಲ್ಪಟ್ಟಿದೆ. ಲಿಂಗಾಂಗಸಾಮರಸ್ಯಕ್ಕೆ, ಶಿವಯೋಗ ಸಿದ್ಧಿಗೆ ಭಕ್ತಿ ಮಾರ್ಗ ಅತ್ಯಂತ ಸುಲಭ ಹಾಗೂ ಸಹಜವಾದುದೆಂದು ಅವರು ನಂಬಿದ್ದಾರೆ.

ವೀರಶೈವ ಪ್ರಥಮ ಕವಿ ಎನಿಸಿದ ಕೊಂಡಗುಳಿ ಕೇಶಿರಾಜ ಭಕ್ತಿಯ ಮಹತಿ ಯನ್ನು ತನ್ನ 'ಶೀಲಮಹತ್ವದ ಕಂದ' ಎಂಬ ಕೃತಿಯಲ್ಲಿ ಕೆಳಗಿನಂತೆ ವರ್ಣಿಸಿದ್ದಾನೆ :

ಭಕ್ತರಿಗೆ ಮೂಲಧನ ಶಿವ
ಭಕ್ತಿಯೆ ಭಕ್ತಂಗೆ ಕುಲವುಂ ಭಕ್ತಿಯೆ
ಭಕ್ತಿಯೆ ನೆಲನುಂ ಜಲಮುಂ
ಭಕ್ತಿಯೇ ಭಾಂಡಾರ ಭಕ್ತರಿಗೆ ಸಿರಿ ತಾನುಂ :28

ಶರಣರು 'ಮನವು ಮಹವನಿಂಬುಗೊಂಬುದೆ ಭಕ್ತಿ',29 'ಭಾನುವಿನಂತಿಪ್ಪುದು ಜ್ಞಾನ ಭಾನುಕಿರಣದಂತಿಪ್ಪುದು ಭಕ್ತಿ'30 'ದಯವೇ ಭಕ್ತರಿಗೆ ಬೀಜ, ಭಕ್ತಿಯೇ ಮುಕ್ತಿಗೆ ಬೀಜ'31, 'ಭಕ್ತಿಯನರಿಯಬೇಕು, ಸತ್ಯದಲ್ಲಿ ನಡೆಯಬೇಕು'32 'ಅನುಭಾವ ವಿಲ್ಲದ ಭಕ್ತಿ ಅನುವಿಂಗೆ ಬಾರದು'33, 'ಭಕ್ತಿಯ ಹೊತ್ತಲ್ಲಿ ನಿಜ ನಿಶ್ಚಯವಿರಬೇಕು'34 'ಭಕ್ತಿಸ್ಥಲ ಬ್ರಹ್ಮನಾಶನ'35 'ಭಕ್ತಿಯುಳ್ಳನ್ನಕ್ಕ ಇಷ್ಟಲಿಂಗದ ಹಂಗು ಬೇಕು'36 'ಭಕ್ತಿಯಿಲ್ಲದವರಲ್ಲಿ ಯುಕ್ತಿಯಿಲ್ಲ ; ಯುಕ್ತಿಯಿಲ್ಲದವರಲ್ಲಿ ಮುಕ್ತಿಯಿಲ್ಲ'37 'ಬ್ರಹ್ಮ ಚಾರಿಗಲ್ಲದೆ ಭಕ್ತ್ಯಾಚಾರವಳವಡದು'38 'ಭಕ್ತಿಯೆಂಬ ನಿಧಾನವ ಸಾಧಿಸುವಡೆ ಶಿವಪ್ರೇಮವೆಂಬ ಅಂಜನವ ನೆಚ್ಚಿಕೊಂಬುದು'39 ಎಂದು ಮುಂತಾಗಿ ಭಕ್ತಿಯ ಹಿರಿಮೆಯನ್ನು ಕೊಂಡಾಡಿದ್ದಾರೆ.

ಭಕ್ತಿ ವೀರಶೈವ ತಾತ್ತ್ವಿಕ ಶ್ರೋತದೊಂದಿಗೆ ಅವಿನಾಭಾವ ಸಂಬಂಧ ಹೊಂದಿ ಸಾಗಿ ಬಂದಿದೆ. ಅದರ ಸೈದ್ಧಾಂತಿಕ ನೆಲಗಟ್ಟಿಗೆ ಮೂಲದ್ರವ್ಯವಾಗಿ, ಅದರ ಆಧ್ಯಾತ್ಮಿಕ ಉನ್ನತಿಗೆ ಜೀವವಾಹಿನಿಯಾಗಿ ನಿಂತಿದೆ.

ಶಕ್ತಿ ವಿಶಿಷ್ಟವಾದ ಶಿವತತ್ತ್ವ, ಮೂಲದಲ್ಲಿ ಒಂದೇ ಆಗಿದ್ದು, ಶಕ್ತಿಯ ಚಲನೆಯಿಂದ ಅಂಗ–ಲಿಂಗ ಎಂದು ಎರಡಾಗುತ್ತದೆ. ಅಂಗವೇ ಜೀವ ; ಲಿಂಗವೇ ಶಿವ. ಒಂದು ಉಪಾಸಕ, ಇನ್ನೊಂದು ಉಪಾಸ್ಯ. 'ರಸೋ ವೈ ಸಃ' ಎಂಬ ಉಪನಿಷತ್ತಿನ ವಾಕ್ಯಾನುಸಾರ ಶಿವನು ರಸರೂಪನು. ಶಿವನ ಅಂಗವಾಗಿದ್ದ ಕಾರಣ ಜೀವನೂ ರಸರೂಪನೇ. ಆದರೆ ಶಿವನು ಅಪರಿಚ್ಛಿನ್ನ ರಸರೂಪನಾಗಿದ್ದರೆ, ಜೀವನು ಪರಿಚ್ಛಿನ್ನ ರಸರೂಪನಾಗಿದ್ದಾನೆ. ಇಂಥ ಅವಸ್ಥೆಯಲ್ಲಿಯೇ ಜೀವನು ಜನನ ಮರಣ ರೂಪ ಸಂಸಾರ ಬಂಧಕ್ಕೊಳಗಾಗಿ ಅನಂತ ತೊಂದರೆಗಳ ಅನುಭವ ಪಡೆಯುತ್ತಾನೆ. ಹೀಗೆ ಗತಿಸುತ್ತಿರುವಾಗ ಜನ್ಮ ಜನ್ಮಾಂತರದ ಪುಣ್ಯಪ್ರಭಾವಕ್ಕೊಳಗಾದ ಅವನು ಪ್ರತ್ಯಕ್ಷ ಶಿವನೆನಿಸಿದ ಗುರುವಿನ ಕಾರುಣ್ಯಕ್ಕೊಳಗಾಗಿ ಶಿವಸಂಸ್ಕಾರ ಪಡೆದು, ಅಂಗಸಂಜ್ಞಿಕನಾಗಿ ವಿಷಯಾಭಿಮುಖ ಸ್ಥಿತಿಯಿಂದ ಲಿಂಗಾಭಿಮುಖ ಸ್ಥಿತಿಯನ್ನು ಹೊಂದಿ ತನ್ನಲ್ಲಿ ಸ್ವಾಭಾವಿಕವಾಗಿದ್ದ ಭಕ್ತಿಶಕ್ತಿಯನ್ನು ಅರಳಿಸಿಕೊಳ್ಳುತ್ತ ಮುಂದೆ ಸಾಗಿ, ಕೊನೆಗೆ ತಾನೂ ಅಪರಿಚ್ಛಿನ್ನ ರಸರೂಪನೇ ಆಗುತ್ತಾನೆ. ಆಗ ಶಿವರಸ ಜೀವರಸ ಇವೆರಡರಲ್ಲಿಯೂ ಯಾವ ಭೇದವೂ ಉಳಿಯದೆ ಎರಡೂ ಸಮರಸರೂಪವಾಗುವುದೇ ಲಿಂಗಾಂಗಸಾಮರಸ್ಯವೆನಿಸುವುದು. ಅಗಲಿದ್ದು ಕೂಡುವುದು, ಕೂಡಿ ಅಗಲದಿರುವುದು ಸಮರಸದ ಸಲ್ಲಕ್ಷಣ.40

ಶಿವತತ್ತ್ವ ಅಂಗ–ಲಿಂಗ ಎಂದು ಎರಡಾದಂತೆ, ಶಿವನಲ್ಲಿ ಅಡಗಿ ಬೇರಾಗಿ ನಿಂತ ಶಕ್ತಿಯೂ ಕಲಾಶಕ್ತಿ–ಭಕ್ತಿಶಕ್ತಿ ಎಂದು ಎರಡು ಬಗೆಯಾಗಿ ಪರಿಣಮಿಸುತ್ತದೆ. ಕಲಾಶಕ್ತಿಯನ್ನು 'ಶಕ್ತಿ' ಎಂದೂ, ಭಕ್ತಿಶಕ್ತಿಯನ್ನು 'ಭಕ್ತಿ' ಎಂದೂ ಕರೆಯಲಾಗುತ್ತದೆ. ಶಿವತತ್ತ್ವದಲ್ಲಿನ ಲಿಂಗವನ್ನು ಶಕ್ತಿ ಆಶ್ರಯಿಸಿದರೆ, ಅಂಗವನ್ನು ಭಕ್ತಿ ಆಶ್ರಯಿಸುತ್ತದೆ. ಲಿಂಗಗತ ಶಕ್ತಿ ಪ್ರವೃತ್ತಿಪರವೆನಿಸಿದರೆ, ಅಂಗಗತ ಭಕ್ತಿ ನಿವೃತ್ತಿಪರವೆನಿಸುತ್ತದೆ. ಲಿಂಗಗತ ಶಕ್ತಿಯಿಂದ ಪ್ರಪಂಚ ಸೃಷ್ಟಿಯಾದರೆ, ಅಂಗಗತ ಭಕ್ತಿಯಿಂದ ಪ್ರಪಂಚದ ವಿಲಯವಾಗುತ್ತದೆ. ಲಿಂಗಗತ ಶಕ್ತಿ ಅಧೋಮುಖಿ, ಅಂಗಗತ ಭಕ್ತಿ ಊರ್ಧ್ವಮುಖಿ. ಲಿಂಗಗತ ಶಕ್ತಿ ಮಾಯೆ ; ಅಂಗಗತ ಭಕ್ತಿ ನಿರ್ಮಾಯೆ. ಪ್ರವೃತ್ತಿಪರವಾದ ಶಕ್ತಿ ಪ್ರಪಂಚ ಸೃಷ್ಟಿಯತ್ತ ಧಾವಿಸಿದರೆ, ನಿವೃತ್ತಿಪರವಾದ ಭಕ್ತಿ ಅಂಗನನ್ನು ಮುಕ್ತಿಯ ಕಡೆಗೆ ನಡೆಸಿ ಸಾಮರಸ್ಯದ ಪರಮಸಿದ್ಧಿಯನ್ನು ಪಡೆಯಲು ಕಾರಣವಾಗುತ್ತದೆ. ಅದಕ್ಕಾಗಿ ಶಕ್ತಿಗಿಂತ ಭಕ್ತಿಯೇ ಶ್ರೇಷ್ಠವಾದುದು ಎಂದು ಅನುಭಾವಿಗಳು ಅಭಿಪ್ರಾಯಪಟ್ಟಿದ್ದಾರೆ. "ಪ್ರವೃತ್ತೌ ಶಕ್ತಿರಾಖ್ಯಾತಾ ನಿವೃತ್ತೌ ಭಕ್ತಿರುಚ್ಯತೇ"41 ಎಂಬ ಶಿವಾಗಮೋಕ್ತಿ ಇದಕ್ಕೆ ನಿದರ್ಶನ.

ಶಿವನಿಂದ ಎರಡಾದ ಅಂಗ ಮತ್ತು ಲಿಂಗಗಳು ಒಂದೊಂದು ಮೂರಾಗಿ, ಮತ್ತೆ ಆ ಮೂರರಲ್ಲಿ ಒಂದೊಂದಕ್ಕೆ ಎರಡಾಗಿ ಒಟ್ಟು ಆರು ಅಂಗಸ್ಥಲಗಳು, ಆರು ಲಿಂಗಸ್ಥಲಗಳು ಹುಟ್ಟಿಕೊಳ್ಳುತ್ತವೆ. ಆರು ಅಂಗಸ್ಥಲಗಳಿಗೆ ಆರು ವಿಧ ಭಕ್ತಿಗಳು,

ಆರು ಅಂಗಸ್ಥಲಗಳಿಗೆ ಆರು ವಿಧ ಶಕ್ತಿಗಳು ಹೊಂದಿಕೊಳ್ಳುತ್ತವೆ. ಇದರ ವಿಕಾಸ ಕ್ರಮವನ್ನು ತೋಂಟದ ಸಿದ್ಧಲಿಂಗ ಯತಿಗಳು ತಮ್ಮ ಈ ಕೆಳಗಿನ ವಚನದಲ್ಲಿ ಹೀಗೆ ವಿವರಿಸಿದ್ದಾರೆ.

"ನಿಃಕಲ ಶಿವತತ್ವ ತಾನೊಂದೆ ತನ್ನ ಶಕ್ತಿಯ ಚಲನೆಮಾತ್ರದಿಂದ
ಒಂದೆರಡಾಯಿತ್ತು ನೋಡಾ
ಅದರೊಳಗೊಂದು ಲಿಂಗಸ್ಥಲ ; ಮತ್ತೊಂದು ಅಂಗಸ್ಥಲ.
ಹೀಗೆ ಅಂಗಲಿಂಗವೆಂದು, ಉಪಾಸ್ಯ ಉಪಾಸಕರೆಂದು
ವರ್ತಿಸುತ್ತಿಹುದು ನೋಡಾ.
ಆ ಪರಶಿವನ ಚಿತ್‌ಶಕ್ತಿಯು ತಾನೆ ಎರಡು ತೆರನಾಯಿತ್ತು.
ಲಿಂಗಸ್ಥಲವನಾಶ್ರಯಿಸಿ ಶಕ್ತಿ ಎನಿಸಿತ್ತು.
ಅಂಗಸ್ಥಲವನಾಶ್ರಯಿಸಿ ಭಕ್ತಿ ಎನಿಸಿತ್ತು.
ಶಕ್ತಿಯೇ ಪ್ರವೃತ್ತಿ ಎನಿಸಿತ್ತು.
ಶಕ್ತಿ-ಭಕ್ತಿ ಎರಡು ತೆರನಾಯಿತ್ತು.
ಲಿಂಗ ಆರು ತೆರನಾಯಿತ್ತು ; ಅಂಗ ಆರು ತೆರನಾಯಿತ್ತು.
ಅದು ಹೇಗೆಂದಡೆ :
ಮೊದಲಲ್ಲಿ ಲಿಂಗ ಮೂರು ತೆರನಾಯಿತ್ತು.
ಅದು ಹೇಗೆಂದೊಡೆ :
ಭಾವಲಿಂಗವೆಂದು, ಪ್ರಾಣಲಿಂಗವೆಂದು, ಇಷ್ಟಲಿಂಗವೆಂದು
ಮೂರು ತೆರನಾಯಿತ್ತು.
ಆ ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗವೆಂಬ ಲಿಂಗತ್ರಯವು
ಒಂದೊಂದು ಲಿಂಗ ಎರಡೆರಡಾಗಿ ಆರು ತೆರನಾಯಿತ್ತು.
ಅದು ಹೇಗೆಂದೊಡೆ :
ಭಾವಲಿಂಗವು ಮಹಾಲಿಂಗವೆಂದು, ಪ್ರಸಾದಲಿಂಗವೆಂದು
ಎರಡು ತೆರನಾಯಿತ್ತು
ಪ್ರಾಣಲಿಂಗವು ಜಂಗಮಲಿಂಗವೆಂದು, ಶಿವಲಿಂಗವೆಂದು
ಎರಡು ತೆರನಾಯಿತ್ತು.
ಇಷ್ಟಲಿಂಗವು ಗುರುಲಿಂಗವೆಂದು, ಆಚಾರಲಿಂಗವೆಂದು
ಎರಡು ತೆರನಾಯಿತ್ತು.
ಹೀಗೆ ಒಬ್ಬ ಶಿವನು ಆರು ತೆರನಾದನು.
ಶಾಂತ್ಯಾತೀತೋತ್ತರವೆಂಬ ಕಲಾಪರಿಯಾಯವನುಳ್ಳ ಚಿತ್‌ಶಕ್ತಿ

ಶಾಂತ್ಯಾತೀತವೆಂಬ ಕಲಾಪರಿಯಾಯವನುಳ್ಳ ಶಕ್ತಿ,
ಶಾಂತಿ ಎಂಬ ಕಲಾಪರಿಯಾಯವನುಳ್ಳ ಪರಾಶಕ್ತಿ,
ವಿದ್ಯಾ ಕಲಾಪರಿಯಾಯವನುಳ್ಳ ಜ್ಞಾನಶಕ್ತಿ
ಪ್ರತಿಷ್ಠಾ ಕಲಾಪರಿಯಾಯವನುಳ್ಳ ಇಚ್ಛಾಶಕ್ತಿ
ನಿವೃತ್ತಿ ಕಲಾಪರಿಯಾಯವನುಳ್ಳ ಕ್ರಿಯಾಶಕ್ತಿ
ಈ ಒಂದೇ ಶಕ್ತಿ ಆರು ತೆರನಾಗಿ
ಷಟ್‌ಪ್ರಕಾರವಾಹಂತಪ ಲಿಂಗಕ್ಕೆ ಅಂಗರೂಪಾಯಿತ್ತು.
ಇದು ಲಿಂಗ ಷಟ್‌ಸ್ಥಲ.
ಇನ್ನು ಒಂದಂಗ ಮೂರು ತೆರನಾಯಿತ್ತು.
ಅದು ಹೇಗೆಂದೊಡೆ :
ಯೋಗಾಂಗ, ಭೋಗಾಂಗ, ತ್ಯಾಗಾಂಗವೆಂದು
ಮೂರು ಪ್ರಕಾರವಾಯಿತ್ತು.
ಈ ತ್ರ್ಯಂಗವೇ ಒಂದೊಂದು ಎರಡೆರಡಾಗಿ ಆರು ತೆರನಾಯಿತ್ತು.
ಅದು ಹೇಗೆಂದೊಡೆ :
ಯೋಗಾಂಗವೇ ಐಕ್ಯನೆಂದು, ಶರಣನೆಂದು
ಎರಡು ತೆರನಾಯಿತ್ತು.
ಭೋಗಾಂಗವೇ ಪ್ರಾಣಲಿಂಗಿ, ಪ್ರಸಾದಿ ಎಂದು
ಎರಡು ತೆರನಾಯಿತ್ತು.
ತ್ಯಾಗಾಂಗವೇ ಮಹೇಶ್ವರನೆಂದು, ಭಕ್ತನೆಂದು
ಎರಡು ತೆರನಾಯಿತ್ತು.
ಹೀಗೆ ಒಬ್ಬ ಶರಣನು ಆರು ತೆರನಾದನು.
ಸಮರಸಭಕ್ತಿ, ಆನಂದಭಕ್ತಿ, ಅನುಭಾವಭಕ್ತಿ,
ಅವಧಾನಭಕ್ತಿ, ನೈಷ್ಠಿಕಾಭಕ್ತಿ, ಸದ್ಭಕ್ತಿ (ಶ್ರದ್ಧಾಭಕ್ತಿ) ಎಂದು
ಮಹಾಘನ ಅನುಪಮ ಭಕ್ತಿ ತಾನೇ ಆರು ತೆರನಾಗಿ
ಷಟ್‌ಪ್ರಕಾರವಾದ ಶರಣಂಗೆ ಅಂಗರೂಪವಾಯಿತ್ತು.
ಇದು ಅಂಗ ಷಟ್‌ಸ್ಥಲ..."42

ಇದನ್ನು ರೇಖಾಚಿತ್ರದ ಮೂಲಕ ಹೀಗೆ ತೋರಿಸಬಹುದು :-



ಮೇಲಿನ ವಿವರಣೆಯಿಂದ ಭಕ್ತಿ ಎಲ್ಲ ಸ್ಥಳಗಳಲ್ಲಿಯೂ ಸ್ಥಾಯಿಯಾಗಿರುವುದು ಕಂಡುಬರುತ್ತದೆ. ಒಂದೊಂದು ಸ್ಥಳದಲ್ಲಿಯೂ ಸಾಧಕ ಒಂದೊಂದು ವಿಧದ ಭಕ್ತಿಯಿಂದ ಒಂದೊಂದು ಲಿಂಗವನ್ನು ಅರ್ಚಿಸುತ್ತ ಲಿಂಗಾಂಗ ಸಾಮರಸ್ಯ ಪಥವನ್ನು ಕ್ರಮಿಸುತ್ತಾನೆ. ಭಕ್ತಸ್ಥಲದಲ್ಲಿ ಕ್ರಿಯಾಶಕ್ತಿ ಸಮನ್ವಿತವಾದ ಆಚಾರಲಿಂಗವನ್ನು ಗುರುಲಿಂಗವನ್ನು ನಿಷ್ಠಾಭಕ್ತಿಯಿಂದ ಆರಾಧಿಸುತ್ತಾನೆ. ಪ್ರಸಾದಿ ಸ್ಥಲದಲ್ಲಿ ಇಚ್ಛಾಶಕ್ತಿಯಿಂದ ಕೂಡಿದ ಶ್ರದ್ಧಾಭಕ್ತಿಯಿಂದ ಅರ್ಚಿಸಿದರೆ, ಮಾಹೇಶ್ವರ ಸ್ಥಲದಲ್ಲಿ ಜ್ಞಾನಶಕ್ತಿಯಿಂದ ಕೂಡಿದ ಶಿವಲಿಂಗವನ್ನು ಅವಧಾನಭಕ್ತಿಯಿಂದ, ಪ್ರಾಣಲಿಂಗಸ್ಥಲದಲ್ಲಿ ಆದಿಶಕ್ತಿಯಿಂದ ಕೂಡಿದ ಜಂಗಮಲಿಂಗವನ್ನು ಅನುಭಾವಭಕ್ತಿಯಿಂದ, ಶರಣಸ್ಥಲದಲ್ಲಿ ಪರಾಶಕ್ತಿಯೊಡನೆ ಬೆರೆತ ಪ್ರಸಾದಲಿಂಗವನ್ನು ಆನಂದಭಕ್ತಿಯಿಂದ ಹಾಗೂ ಐಕ್ಯಸ್ಥಲದಲ್ಲಿ ಚಿತ್‌ಶಕ್ತಿಯೊಡನೆ ಕೂಡಿದ ಮಹಾಲಿಂಗವನ್ನು ಸಮರಭಕ್ತಿಯಿಂದ ಪೂಜಿಸಿ ಸಮರಸಾನಂದವನ್ನು ಹೊಂದುತ್ತಾನೆ. ಹೀಗಾಗಿ ಷಟ್‌ಸ್ಥಲಗಳಲ್ಲಿ ಭಕ್ತಿ ಜೀವವಾಹಿನಿಯಾಗಿ ಹರಿಯುತ್ತಿರುವುದು ವೇದ್ಯವಾಗುತ್ತದೆ.

ಶರಣರು ತ್ರಿವಿಧಭಕ್ತಿ, ಪಂಚವಿಧಭಕ್ತಿ, ಷಡ್ವಿಧಭಕ್ತಿ, ನವವಿಧಭಕ್ತಿ, ಷೋಡಶವಿಧಭಕ್ತಿ ಮೂವತ್ತಾರು ವಿಧಭಕ್ತಿಗಳನ್ನು ಕುರಿತು ಹೇಳಿದ್ದಾರೆ. ಆದರೆ ಷಡ್ವಿಧಭಕ್ತಿಗೆ ಹೆಚ್ಚಿನ ಮನ್ನಣೆ ಇತ್ತಿದ್ದಾರೆ.

1. ಗುರುಭಕ್ತಿ, ಲಿಂಗಭಕ್ತಿ, ಜಂಗಮಭಕ್ತಿ,—ಇವು ತ್ರಿವಿಧಭಕ್ತಿಗಳು ಇವುಗಳ ವಿವರ ಹೆಚ್ಚಾಗಿ ಎಲ್ಲ ಶರಣರ ವಚನಗಳಲ್ಲಿ ಬರುತ್ತದೆ.
2. ನೀತಿಭಕ್ತಿ, ಕ್ರಿಯಾಭಕ್ತಿ, ಭಾವಭಕ್ತಿ, ಸದ್ಭಾವಭಕ್ತಿ, ಜ್ಞಾನಭಕ್ತಿ—ಇವು ಪಂಚವಿಧ ಭಕ್ತಿಗಳು. ಅವಸರದ ರೇಕಣ್ಣ ಇವುಗಳನು ಹೇಳುತ್ತಾನೆ.43
3. ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಅವಧಾನಭಕ್ತಿ, ಅನುಭಾವಭಕ್ತಿ, ಆನಂದಭಕ್ತಿ, ಸಮರಸಭಕ್ತಿ—ಇವು ಷಡ್ವಿಧಭಕ್ತಿಗಳು.44 ಇವುಗಳ ವಿವರವೂ ಹೆಚ್ಚಿನ ಶರಣರ ವಚನಗಳಲ್ಲಿ ಬರುತ್ತದೆ. ಚೆನ್ನಬಸವಣ್ಣ ಇವುಗಳ ಜೊತೆಗೆ ಇನ್ನೊಂದು ವಿಧಧ ಆರು ಭಕ್ತಿಗಳನ್ನು ಕುರಿತು ಹೇಳುತ್ತಾನೆ. ಅವು : ಆಚಾರಲಿಂಗಭಕ್ತಿ, ಗುರುಲಿಂಗಭಕ್ತಿ, ಶಿವಲಿಂಗಭಕ್ತಿ, ಜಂಗಮಲಿಂಗಭಕ್ತಿ,45 ಪ್ರಸಾದಲಿಂಗಭಕ್ತಿ, ಮಹಾಲಿಂಗಭಕ್ತಿ, ಇವು ಷಡ್ವಿಧಲಿಂಗಗಳಿಗೆ ಸಂಬಂಧಿಸಿದ ಭಕ್ತಿಗಳು.
4. ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಸಾವಧಾನಭಕ್ತಿ, ಅನುಭಾವಭಕ್ತಿ, ಆನಂದಭಕ್ತಿ, ಸಮರಸಭಕ್ತಿ, ಪರಿಪೂರ್ಣಭಕ್ತಿ, ಅಪ್ರಮಾಣಭಕ್ತಿ, ನಿರವಯಭಕ್ತಿ—ಇವು ನವವಿಧಭಕ್ತಿಗಳು.46
5. ಮಜ್ಜನ, ವಸ್ತ್ರ, ಪರಿಮಳ, ಅಕ್ಷತೆ, ಪುಷ್ಪ, ಧೂಪ, ಆರತಿ, ಮೃಷ್ಟಾನ್ನ, ಪಾನ, ಹಸ್ತಪ್ರಕ್ಷಾಲನ, ತಾಂಬೂಲ, ಆಸನ, ಸಂಗೀತವಾದ್ಯ, ಆಭರಣ, ವಾಹನ,

ಗೃಹ—ಈ ಹದಿನಾರು ವಸ್ತುಗಳಿಂದ ಅರ್ಚಿಸುವುದನ್ನು ಷೋಡಶವಿಧಭಕ್ತಿ ಎಂದು ಕರೆಯಲಾಗುತ್ತದೆ.47

6. ಶ್ರದ್ಧಾಭಕ್ತಿಯೊಳಗಣ ಶ್ರದ್ಧಾಭಕ್ತಿ, ಶ್ರದ್ಧಾಭಕ್ತಿಯೊಳಗಣ ನಿಷ್ಠಾಭಕ್ತಿ, ಶ್ರದ್ಧಾಭಕ್ತಿಯೊಳಗಣ ಅವಧಾನಭಕ್ತಿ, ಶ್ರದ್ಧಾಭಕ್ತಿಯೊಳಗಣ ಅನುಭಾವಭಕ್ತಿ, ಶ್ರದ್ಧಾಭಕ್ತಿಯೊಳಗಣ ಆನಂದಭಕ್ತಿ, ಶ್ರದ್ಧಾಭಕ್ತಿಯೊಳಗಣ ಸಮರಸಭಕ್ತಿ, ನಿಷ್ಠಾಭಕ್ತಿಯೊಳಗಣ ನಿಷ್ಠಾಭಕ್ತಿ, ನಿಷ್ಠಾಭಕ್ತಿಯೊಳಗಣ ಶ್ರದ್ಧಾಭಕ್ತಿ, ನಿಷ್ಠಾಭಕ್ತಿಯೊಳಗಣ ಅವಧಾನಭಕ್ತಿ, ನಿಷ್ಠಾಭಕ್ತಿಯೊಳಗಣ ಅನುಭಾವಭಕ್ತಿ, ನಿಷ್ಠಾಭಕ್ತಿಯೊಳಗಣ ಆನಂದಭಕ್ತಿ, ನಿಷ್ಠಾಭಕ್ತಿಯೊಳಗಣ ಸಮರಸಭಕ್ತಿ, ಅವಧಾನಭಕ್ತಿಯೊಳಗಣ ಅವಧಾನಭಕ್ತಿ, ಅವಧಾನಭಕ್ತಿಯೊಳಗಣ ಶ್ರದ್ಧಾಭಕ್ತಿ, ಅವಧಾನಭಕ್ತಿಯೊಳಗಣ ನಿಷ್ಠಾಭಕ್ತಿ, ಅವಧಾನಭಕ್ತಿಯೊಳಗಣ ಅನುಭಾವ ಭಕ್ತಿ, ಅವಧಾನಭಕ್ತಿಯೊಳಗಣ ಆನಂದಭಕ್ತಿ, ಅವಧಾನಭಕ್ತಿಯೊಳಗಣ ಸಮರಸಭಕ್ತಿ; ಅನುಭಾವಭಕ್ತಿಯೊಳಗಣ ಅನುಭಾವಭಕ್ತಿ, ಅನುಭಾವಭಕ್ತಿಯೊಳಗಣ ಶ್ರದ್ಧಾಭಕ್ತಿ, ಅನುಭಾವಭಕ್ತಿಯೊಳಗಣ ನಿಷ್ಠಾಭಕ್ತಿ, ಅನುಭಾವ ಭಕ್ತಿಯೊಳಗಣ ಅವಧಾನಭಕ್ತಿ, ಅನುಭಾವಭಕ್ತಿಯೊಳಗಣ ಆನಂದಭಕ್ತಿ, ಅನುಭಾವ ಭಕ್ತಿಯೊಳಗಣ ಸಮರಸಭಕ್ತಿ; ಆನಂದಭಕ್ತಿಯೊಳಗಣ ಆನಂದಭಕ್ತಿ, ಆನಂದಭಕ್ತಿಯೊಳಗಣ ಶ್ರದ್ಧಾಭಕ್ತಿ, ಆನಂದಭಕ್ತಿಯೊಳಗಣ ನಿಷ್ಠಾಭಕ್ತಿ, ಆನಂದಭಕ್ತಿಯೊಳಗಣ ಅವಧಾನಭಕ್ತಿ, ಆನಂದಭಕ್ತಿಯೊಳಗಣ ಅನುಭಾವಭಕ್ತಿ, ಆನಂದಭಕ್ತಿಯೊಳಗಣ ಸಮರಸಭಕ್ತಿ ; ಸಮರಸಭಕ್ತಿಯೊಳಗಣ ಸಮರಸಭಕ್ತಿ, ಸಮರಸಭಕ್ತಿಯೊಳಗಣ ಶ್ರದ್ಧಾಭಕ್ತಿ, ಸಮರಸಭಕ್ತಿಯೊಳಗಣ ನಿಷ್ಠಾಭಕ್ತಿ, ಸಮರಸಭಕ್ತಿಯೊಳಗಣ ಅವಧಾನಭಕ್ತಿ, ಸಮರಸಭಕ್ತಿಯೊಳಗಣ ಅನುಭಾವ ಭಕ್ತಿ, ಸಮರಸಭಕ್ತಿಯೊಳಗಣ ಆನಂದಭಕ್ತಿ—ಇವು ಮೂವತ್ತಾರು ವಿಧ ಭಕ್ತಿಗಳು.

**ಷಡ್ವಿಧಭಕ್ತಿಗಳು :**

ಶರಣರು ರೂಪಿಸಿದ ಷಟ್‌ಸ್ಥಲತತ್ವ ಈ ಷಡ್ವಿಧಭಕ್ತಿಗಳ ಮೇಲೆ ನಿಂತಿದೆ ಎಂಬುದನ್ನು ಹಿಂದೆ ಹೇಳಲಾಗಿದೆ. ಇಲ್ಲಿ ಇವುಗಳನ್ನು ಸ್ವಲ್ಪ ವಿವರವಾಗಿ ನೋಡ ಬಹುದು.

**ಶ್ರದ್ಧಾಭಕ್ತಿ :**

ಶ್ರದ್ಧೆ ಎಂದರೆ ನಂಬಿಕೆ ಅಥವಾ ವಿಶ್ವಾಸ. ಲಿಂಗವನ್ನು ಬಿಟ್ಟು ಇತರ ವಿಷಯ ಗಳಲ್ಲಿ ಹರಿಯದಂಥ ದೃಢವಾದ, ಅಚಲವಾದ ಸಾತ್ವಿಕ ಮನೋವೃತ್ತಿ. ಇದು ಪ್ರತ್ಯಕ್ಷ ಶಿವರೂಪಿಯಾದ ಗುರುವಿನಿಂದ ಸುಸಂಸ್ಕೃತನಾದ ಜೀವಿಯಲ್ಲಿ ಅಂಕುರಿಸುವುದು. ಅದರ

ಪರಿಣಾಮವಾಗಿ ಮೊದಲು ವಿಷಯಾಭಿಮುಖವಾಗಿದ್ದ ಅವನ ಇಂದ್ರಿಯಪ್ರವೃತ್ತಿಗಳೆಲ್ಲ ಲಿಂಗಾಭಿಮುಖವಾಗುವವು. ಲಿಂಗದ ಮೇಲೆ ಶ್ರದ್ಧೆಯುಳ್ಳವನೆ ಭಕ್ತನೆನಿಸುತ್ತಾನೆ. ಅವನು ಆಚಾರಾತ್ಮಕ ಲಿಂಗಮೋಹಿಯಾಗಿ ಉಪಾಸನೆ ಮಾಡಹತ್ತುವನು. ಅಂಗದಲ್ಲಿ ಲಿಂಗಕ್ರಿಯೆಗಳನ್ನು ಅಳವಡಿಸಿಕೊಳ್ಳುವ ಪ್ರಕ್ರಿಯೆಯರೂಪವೇ ಆಚಾರಲಿಂಗೋಪಾಸನೆ ಎನ್ನಿಸುತ್ತದೆ. ಅದರಿಂದ ಜಡಕಾಯಗುಣಗಳೆಲ್ಲ ನಾಶವಾಗಿ ಪರಿಶುದ್ಧತೆ ನೆಲೆಗೊಳ್ಳಲು ಅವಕಾಶ ದೊರೆಯುತ್ತದೆ.

**ನಿಷ್ಠಾಭಕ್ತಿ :**

ಶ್ರದ್ಧೆ ಬಲಿದು ನಿಷ್ಠೆಯಾಗುತ್ತದೆ. ಅಚಲವೂ ಪ್ರಬಲವೂ ಆದ ಶ್ರದ್ಧೆಯೆ ನಿಷ್ಠೆ, ನಿಷ್ಠೆಯಿಂದ ಗುರುಲಿಂಗವನ್ನು ಆರಾಧಿಸುವ ಭಕ್ತಿಸಂಪನ್ನನು ಮಹೇಶನೆನಿಸುತ್ತಾನೆ. ಅವನು ತನ್ನ ಕರಣಗಳ ಮೇಲೆ ಪ್ರಭುತ್ವ ಸ್ಥಾಪಿಸಿ ಅವುಗಳ ಗುಣಗಳನ್ನೆಲ್ಲ ಇಲ್ಲವಾಗಿ ಸುವನು. ಅದಕ್ಕಾಗಿ ಅವನ ಕರಣಂಗಳಿಗೆ ಲಿಂಗೇತರ ವಿಷಯಗಳಲ್ಲಿ ಹರಿಯಲು ಎಳ್ಳಷ್ಟೂ ಅವಕಾಶ ದೊರೆಯುವುದಿಲ್ಲ. ಆಗ ಅರಿವಿನ ಕಣ್ತೆರೆದು ಗುರುಲಿಂಗ ಪೂಜೆ ಯನ್ನು ಮಾಡುತ್ತಾನೆ. ಗುರುಲಿಂಗ ಪೂಜೆಯೆಂದರೆ ಆಚಾರಕ್ಕೆ ಸಂಬಂಧ ಮಾಡುವ ಪ್ರಕ್ರಿಯೆ. ಶ್ರದ್ಧಾಭಕ್ತಿ ಮತ್ತು ನಿಷ್ಠಾಭಕ್ತಿಗಳೆರಡೂ ಸ್ಥೂಲತನುವಿಗೆ ಸಂಬಂಧಿಸಿದವು.

**ಅವಧಾನ ಭಕ್ತಿ :**

ನಿಷ್ಠಾಭಕ್ತಿಯ ವಿಕಾಸವೇ ಅವಧಾನ ಭಕ್ತಿ. ಅವಧಾನ ಎಂದರೆ ಏಕಾಗ್ರತೆ. ಇದು ಮನಸ್ಸಿಗೆ ಸಂಬಂಧಿಸಿದ್ದು. ಈ ಭಕ್ತಿಯ ಪ್ರತಿನಿಧಿ ಪ್ರಸಾದಿ. ಅವನ ಮನಸ್ಸು ಸದಾ ಪ್ರಸನ್ನವಾಗಿರುತ್ತದೆ. ಪರಮಾತ್ಮನ ಅರಿವಿನಲ್ಲಿ ಜಾಗ್ರತವಾಗಿರುತ್ತದೆ. ಅದರ ಪರಿಣಾಮವಾಗಿಯೇ ಅವನು ಲಿಂಗಾರ್ಪಿತವಲ್ಲದ ಪ್ರಸಾದವನ್ನು ಅಂಗ ಸ್ವೀಕರಿಸ ದಂತೆ ಎಚ್ಚರವಹಿಸುವನು. ಇಲ್ಲಿ ಇಚ್ಛಾಶಕ್ತಿ ಸಮೇತನಾದ ಶಿವಲಿಂಗದ ಆರಾಧನೆ ನಡೆಯುತ್ತದೆ. ಇಚ್ಛಾಶಕ್ತಿ ಅವಧಾನ ಭಕ್ತಿ ಎರಡೂ ಒಂದಾಗಿ ಲಿಂಗರೂಪ ತಾಳುವವು. ಅಂಗಕರಣಂಗಳನೆಲ್ಲ ಲಿಂಗಕರಣಂಗಳನ್ನಾಗಿ ಪರಿವರ್ತಿಸಿಕೊಂಡು ಸದಾ ಲಿಂಗ ಪ್ರಸಾದ ವನ್ನು ಸ್ವೀಕರಿಸುತ್ತಿರುವುದು ಪ್ರಸಾದಿಯ ವೈಶಿಷ್ಟ್ಯ.

**ಅನುಭಾವಭಕ್ತಿ :**

ಅವಧಾನ ಭಕ್ತಿಯ ಬೆಳವಣಿಗೆಯೇ ಅನುಭಾವಭಕ್ತಿ. ಇಲ್ಲಿ ಅವಧಾನಭಕ್ತಿ ಬಲಿತು ಶಿವಲಿಂಗದೊಳಗಿನ ಇಚ್ಛಾಶಕ್ತಿಯೊಡನೆ ಬೆರೆತು ಅನುಭಾವವಾಗಿ, ಸಾಧಕನು ಪ್ರಾಣಲಿಂಗಸ್ಥಲವನ್ನೈದುವನು. ಪ್ರಾಣನ ಪೂರ್ವಾಶ್ರಯವಳಿದು ಲಿಂಗದ ನೆನಹು ಸಂಬಂಧಿಸುವುದು. ಲಿಂಗವೇ ಪ್ರಾಣವಾಗಿ, ಪ್ರಾಣವೇ ಲಿಂಗವಾಗಿ ಭಕ್ತನು ಪ್ರಾಣ

ಲಿಂಗಿಯೆನಿಸುವನು. ಮನಸ್ಸಿನಲ್ಲಿ ಏಕಾಗ್ರತೆಯುಂಟಾಗಲು ಅಂತರಂಗದ ಕ್ರಿಯೆಗಳನ್ನು ಸರಿಯಾಗಿ ನಡೆಸುವ ಯೋಗ್ಯತೆ ಉಂಟಾಗುತ್ತದೆ. ಜೀವನ ಈ ಸ್ಥಿತಿಯೇ ಅನುಭಾವ ಭಕ್ತಿಯು. ಇಲ್ಲಿ ಅಂತರಂಗ ಬಹಿರಂಗವೆರಡೂ ಪರಸ್ಪರತ್ವವನ್ನು ಹೊಂದಿ ಕಾರ್ಯ ಮಾಡುತ್ತವೆ. ಇಲ್ಲಿ ಆದಿಶಕ್ತಿ ಸಮೇತನಾದ ಜಂಗಮಲಿಂಗದ ಆರಾಧನೆ ನಡೆಯುತ್ತದೆ. ಪ್ರಾಣಲಿಂಗ ಜ್ಞಾನದ ಪರಿಪಕ್ವ ಸ್ಥಿತಿಯೆನಿಸಿದ ಅನುಭವವನ್ನು ಮೈಗೂಡಿಸಿಕೊಂಡಿರುವುದರಿಂದ ಅವನನ್ನು ಕಾಲ–ಕರ್ಮಗಳು, ಮಾಯಾ–ಮೋಹಗಳು, ಭವ–ಭಾವಗಳು ಸರ್ವಥಾ ಮುಟ್ಟಲಾರವು. ತನುಗುಣಗಳನ್ನು ದೂಡಿ ಪರಮಾರ್ಥಗುಣಗಳನ್ನು ಅಳವಡಿಸಿಕೊಂಡು ಆತ್ಯಂತಿಕ ಸುಖಾನುಭವವನ್ನು ಪಡೆವ ಭಾಗ್ಯವಂತನಿವನು. ಅವಧಾನ ಭಕ್ತಿ ಮತ್ತು ಅನುಭಾವಭಕ್ತಿಗಳೆರಡೂ ಸೂಕ್ಷ್ಮತನುವಿಗೆ ಸಂಬಂಧಿಸಿದವು.

**ಆನಂದಭಕ್ತಿ :**

ಅಂಗದ ಮಧ್ಯದಲ್ಲಿ ಗುರುವ ನಿಲ್ಲಿಸಿ, ಆತ್ಮನಲ್ಲಿ ಲಿಂಗವ ನಿಲ್ಲಿಸಿ, ಪ್ರಾಣದಲ್ಲಿ ಜಂಗಮವ ನಿಲ್ಲಿಸಿ, ಇಂದ್ರಿಯಂಗಳಿಗೆ ಚಿದ್ವಿಭೂತಿಯ ಧರಿಸಿ, ವಿಷಯಂಗಳಿಗೆ ಚಿದ್ರುದ್ರಾಕ್ಷಿಯ ಧಾರಣವ ಮಾಡಿ, ಶರಣಂಗಳನೆಲ್ಲವ ಮಂತ್ರಮಯವೆನಿಸಿ ಚಿತ್ಪಾದೋದಕ ಪ್ರಸಾದವೆಂದೆನಿಸಿದಂಥ ಪೂರ್ಣದರುಹೇ ಆನಂದಭಕ್ತಿ ಎನಿಸುತ್ತದೆ. ಈ ಭಕ್ತಿಯನ್ನು ಅಳವಡಿಸಿಕೊಂಡವನು ಶರಣನೆನಿಸುತ್ತಾನೆ. ಅವನು ತಾನು ಸತಿಯಾಗಿ, ಲಿಂಗವು ಪತಿಯಾಗಿ-ಪರಶಕ್ತಿಯುಕ್ತವಾದ ಪ್ರಸಾದಲಿಂಗವನ್ನು ಆನಂದ ಭಕ್ತಿಯಿಂದ ಆರಾಧಿಸುತ್ತಾನೆ. ಶರಣಾಂಗನು ಸತಿರೂಪದಲ್ಲಿ ಲಿಂಗಪತಿಯೊಡನೆ ಕೂಡಿಕೊಂಡು ಅನುಭವಿಸುವ ಆನಂದವು ವಾಗತೀತವಾದುದು. ಅದು ಲೌಕಿಕ ದಾಂಪತ್ಯದಲ್ಲಿ ಸಂಭವಿಸುವ ಆನಂದದಂತೆ ಕ್ಷಣಿಕವಾದುದಲ್ಲ ; ಅಕ್ಷಯವಾದುದು ; ಅನಂತವಾದುದು. ಈ ಭಕ್ತಿಯುಳ್ಳವನು ಪೂರ್ಣ ಅನುಭವವನ್ನು ಹೊಂದಿರುತ್ತಾನೆ. ಅವನಲ್ಲಿ ಕ್ರಿಯಾಜ್ಞಾನಗಳ ಭೇದ ಉಳಿಯುವುದಿಲ್ಲ.

**ಸಮರಸಭಕ್ತಿ :**

ಆನಂದ ಭಕ್ತಿಯ ಮುಂದಿನ ಹೆಜ್ಜೆಯೆ ಸಮರಸ ಭಕ್ತಿ. ಇದು ಮನುಷ್ಯನ ಎಲ್ಲ ಶರೀರಗಳಲ್ಲಿ ಉಂಟಾಗುವ ಎಲ್ಲ ತರದ ಅನುಭವಗಳಲ್ಲಿ ಸಾಮರಸ್ಯವನ್ನುಂಟು ಮಾಡುತ್ತದೆ. ಈ ಭಕ್ತಿಯನ್ನಾಶ್ರಯಿಸಿದವನು ಐಕ್ಯನು. ಐಕ್ಯಾಂಗನು ಸ್ವಯಂ ಆನಂದ ರೂಪನಾಗಿರುತ್ತಾನೆ. ಅವನು ಲಿಂಗದೊಡನೆ ಬೆರೆತು ಬೇರಿಲ್ಲದಂತಾಗುವ ಸ್ಥಿತಿಗೇರುತ್ತಾನೆ. ಅದೇ ಲಿಂಗಾಂಗಸಾಮರಸ್ಯವೆನಿಸುತ್ತದೆ. ಆನಂದ ಭಕ್ತಿ ಮತ್ತು ಸಮರಸಭಕ್ತಿಗಳೆರಡೂ ಕಾರಣ ತನುವಿಗೆ ಸಂಬಂಧಪಡುತ್ತವೆ.

ಹೀಗೆ ಭಕ್ತಸ್ಥಲದಿಂದ ಐಕ್ಯಸ್ಥಲದವರೆಗೆ ಭಕ್ತ ಬೇರೆ ಬೇರೆ ಭಕ್ತಿಯಿಂದ ಲಿಂಗ

ವನ್ನು ಪೂಜಿಸುತ್ತ, ಅದರಿಂದ ದೊರೆಯುವ ಆನಂದವನ್ನು ಅನುಭವಿಸುತ್ತ ಸಾಗುತ್ತಾನೆ. ಅವನ ಭಕ್ತಿ ಕ್ರಿಯೆ–ಜ್ಞಾನ ಅನುಭಾವ ಸಮೇತವಾದುದು. ಇದು ಸರ್ವರಿಗೂ ಸುಲಭ ಸಾಧ್ಯವಾದ ಸಾಧನ ಮಾರ್ಗ. ಶರಣರ 'ಸಕಲಜೀವಾತ್ಮರಿಗೆ ಲೇಸ ಬಯಸಬೇಕು' 'ಜನ ಬದುಕಬೇಕು' ಎಂಬ ಉದಾತ್ತ ದೃಷ್ಟಿ ಈ ಭಕ್ತಿಯ ಆಚರಣೆಯಲ್ಲಿಯೂ ಅಡಕವಾಗಿದೆ. ಇದರಿಂದ ಅವರು ತಾವು ಕಂಡ ವ್ಯಕ್ತಿ–ಸಮಾಜ–ರಾಷ್ಟ್ರದ ಏಕತೆಯ ಕನಸನ್ನು ಬಹುಮಟ್ಟಿಗೆ ನನಸಾಗಿಸಿಕೊಂಡರು.

ಶರಣರ ದೃಷ್ಟಿಯಲ್ಲಿ ಭಕ್ತಿ ಒಂದು ಶೀಲ. ಅದು ಹಿರಿದಾದ ಜೀವನಮೌಲ್ಯ. ಮಾನವನ ವ್ಯಕ್ತಿತ್ವ ವಿಕಾಸಕ್ಕೆ ಅತಿ ಮುಖ್ಯವಾದ ಮೌಲ್ಯ. ಇದನ್ನು ಅವರು ತಮ್ಮ ಬದುಕಿನ ಪ್ರತಿ ಆಚರಣೆಯಲ್ಲೂ ಮೈಗೂಡಿಸಿಕೊಂಡು ಬಂದರು. ಜೀವನ ಸಿದ್ಧಿಗೆ ಪರಮ ಸಾಧನವನ್ನಾಗಿ ಬಳಸಿಕೊಂಡರು. ಅವರ ಶಿವಯೋಗ ಸಾಧನೆಗೂ ಭಕ್ತಿಯೇ ಮೂಲವಾಗಿ ನಿಂತಿದೆ. 'ಭಕ್ತಿ-ಜ್ಞಾನ-ವೈರಾಗ್ಯ ಇವು ವೀರಶೈವ ದರ್ಶನದಲ್ಲಿ ಮುಪ್ಪುರಿಗೊಂಡಿವೆ. ಲಿಂಗಾರ್ಪಣ ಭಾವದಿಂದ ಸಕಲ ಸುಖವನ್ನು ಭೋಗಿಸುವುದು ಭಕ್ತಿಯಿಂದ ಮಾತ್ರ ಸಾಧ್ಯ. ಏಕದೇವೋಪಾಸನೆಯನ್ನು ಸಾಮಾನ್ಯ ಮಾನವನು ಭಕ್ತಿಯಿಂದ ಮಾಡಿ ಮುಕ್ತಿ ಪಡೆಯಬಹುದು. ಇದು ಶರಣರು ಅನುಸರಿಸಿದ ಭಕ್ತಿಯ ವೈಶಿಷ್ಟ್ಯ.

**ಅಡಿ ಟಿಪ್ಪಣಿಗಳು :**

1. 'ಮುಕ್ತಿಸಾಧನ ಸಾಮಗ್ರ್ಯಾಂ ಭಕ್ತಿರೇವ ಗರೀಯಸಿ'—ಶಂಕರಾಚಾರ್ಯ.
2. 'ಸಾತು ಕರ್ಮಜ್ಞಾನ ಯೋಗೇಭ್ಯೋಽಪಿ ಅಧಿಕತರಾ ಭಕ್ತಿ'—ನಾರದಭಕ್ತಿಸೂತ್ರ.
3. 'ಭಕ್ತ್ಯಾತ್ವನನ್ಯಯಾ ಶಕ್ಯ ಅಹಮೇವಂ ವಿಧೋಽರ್ಜುನ'—ಭಗವದ್ಗೀತೆ.
4. 'ಭಕ್ತಿರ್ಮುನೀನಾಮಪಿ ದುರ್ಲಭಾ'—ಉದ್ಧವ (ಭಾಗವತ).
5. ಅನುಭವೋಕ್ತಿ ಈ ಸಂಸ್ಕೃತ ಉಕ್ತಿಗಳನ್ನು 'ನವವಿಧಭಕ್ತಿ—ಷಡ್ವಿಧಭಕ್ತಿ' ಎಂಬ ಪಂ. ನಾಗಭೂಷಣ ಶಾಸ್ತ್ರಿಗಳ ಲೇಖನದಿಂದ ಎತ್ತಿಕೊಳ್ಳಲಾಗಿದೆ. (ಸಿದ್ಧಗಂಗಾ ಶ್ರೀ ಪು.599).
6. ಕನ್ನಡ ಸಾಹಿತ್ಯ ಪರಿಷತ್ತಿನ ಸಂಕ್ಷಿಪ್ತ ಕನ್ನಡ ನಿಘಂಟು—ಪು. 622
7. ಕಸ್ತೂರೀಕೋಶ : ಪಂ. ಚೆ. ಎ. ಕವಲಿ ಪು. 695
8. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ರತ್ನಕೋಶ : ಪು. 177
9. ಸಿರಿಗನ್ನಡ ಅರ್ಥಕೋಶ : ಡಾ. ಶಿವರಾಮಕಾರಂತ ಪು. 395
10. ಸಂಸ್ಕೃತ ಕನ್ನಡ ಶಬ್ದಕೋಶ : ಗು. ಛೀ. ಜೋಶಿ ಪು. 528
11. ನಾನಾರ್ಥ ಪದಕೋಶ : ಜೆ. ಎಂ. ಹನಸೋಗೆ ಪು. 117
12. ಕಿಟೆಲ್ ಕೋಶ (1982) : ಪು. 1161
13. ವಿಲಿಯಂ ರೀವ್ಸ್ ಡಿಕ್ಷನರಿ (1832) : ಪು. 1051

14. 'ಪೂಜಾದಿಷ್ವನುರಾಗ : ಇತಿ ಪಾರಾಶರ್ಯಃ'—ನಾರದ ಭಕ್ತಿಸೂತ್ರ.
15. 'ಕಥಾದಿಷ್ವಿತಿ-ಗರ್ಗಃ'—ನಾರದಭಕ್ತಿಸೂತ್ರ.
16. 'ಸಾಪರಾನುರಕ್ತಿರೀಶ್ವರೇ'—ಶಾಂಭವಭಕ್ತಿ ಸೂತ್ರ.
17. 'ಸಾತ್ವಸ್ಮಿನ್ ಪರಮಪ್ರೇಮರೂಪಾ ಅಮೃತಸ್ವರೂಪಾ'—ನಾರದಭಕ್ತಿ ಸೂತ್ರ.
18. 'ಯಥಾಗ್ನಿಃ ಸಮೃದ್ಧಾರ್ಚಿಃ ಕರೋತ್ಯೇಧಾಂಸಿ ಭಸ್ಮಸಾತ್ !
ತಥಾಮದ್ವಿಷಯಾ ಭಕ್ತಿರುದ್ಧ ವೈನಾಂಸಿ ಕೃತ್ಸ್ನಶಃ ॥
ನ ಸಾಧಯತಿ ಮಾಂ ಯೋಗೋ ನ ಸಾಂಖ್ಯಂ ಧರ್ಮ ಉದ್ಧವ ।
ನ ಸ್ವಾಧ್ಯಾಯಸ್ತಪಸ್ತ್ಯಾಗೋ ಯಥಾಭಕ್ತಿರ್ಮಮೋರ್ಜಿತಾ ॥'—ಭಾಗವತ.
19. 'ತಪಸ್ವಿಭ್ಯೋಧಿಕೋ ಯೋಗೀ ಜ್ಞಾನಿಭ್ಯೋಪಿ ಮತೋಧಿಕಃ ।
ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥
ಯೋಗಿ ನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।
ಶ್ರದ್ಧಾವಾನ್ ಭಜತೇಯೋ ಮಾಂ ಸಮೇ ಯುಕ್ತ ತಮೋಮತಃ'—ಭಗವದ್ಗೀತೆ.
20. 'ಈಶ್ವರ ಪ್ರಣಿಧಾನಾತ್'—ಯೋಗಸೂತ್ರ
21. 'ನಾಸ್ತಿತೇಷು ಜಾತಿ ವಿದ್ಯಾರೂಪ ಕುಲಧನಾದಿ ಕ್ರಿಯಾಭೇದಃ'—ನಾರದಭಕ್ತಿ ಸೂತ್ರ.
22. 'ಭಕ್ತಿಯೋಗೋ ನಿರುಪದ್ರವಃ'—ಸಿದ್ಧಗಂಗಾಶ್ರೀ ಪು. 600
23. ಅದೇ ಪು. 600,
24. ನವವಿಧಭಕ್ತಿ-ಷಡ್ವಿಧಭಕ್ತಿ-ಪಂ. ನಾಗಭೂಷಣಶಾಸ್ತ್ರಿ (ಸಿದ್ಧಗಂಗಾಶ್ರೀ ಪು.600-601)
25. ಇವುಗಳ ಆಕರ ವಿವರಗಳಿಗಾಗಿ ನೋಡಿ 'ಶ್ರೀವತ್ಸ ನಿಘಂಟು' : ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರಿ ಪು. 262 ಮತ್ತು 299ರಿಂದ 300.
26. ಸಿದ್ಧಗಂಗಾಶ್ರೀ ಪು. 602.
27. ಇವುಗಳ ವಿವರ ಮುಂದೆ ಬರುತ್ತದೆ.

* ವೈಷ್ಣವ ಪಂಥದಲ್ಲಿ ಈ ಭಕ್ತಿಗಳಿಗೆ ಮಾನ್ಯತೆ ದೊರೆತಿದೆ.

28. ಕೊಂಡಗುಳಿ ಕೇಶರಾಜನ ಕೃತಿಗಳು : ಸಂ. ಡಾ॥ ಎಂ. ಎಂ. ಕಲಬುರ್ಗಿ ಪು. 73
29. ಚೆನ್ನಬಸವಣ್ಣನವರ ವಚನಗಳು : ಡಾ॥ ಆರ್. ಸಿ. ಹಿರೇಮಠ ವ. 1370
30. ಮಹಾದೇವಿಯಕ್ಕನ ವಚನಗಳು : ಡಾ॥ ಆರ್ ಸಿ. ಹಿರೇಮಠ ವ. 1೭2
31. ಮೋಳಿಗೆ ಮಾರಯ್ಯನ ವಚನ (ಸಕಲ ಪುರಾತನರ ವಚನಗಳು ಸಂ. 1-ವಚನ 2281)
32. ಡಕ್ಕೆಯ ಬೊಮ್ಮಣ್ಣನ ವಚನ (ಸಕಲಪುರಾತನರ ವಚನಗಳು ಸಂ. ವ. 1-ವಚನ 882)
33. ಬಸವಣ್ಣನವರ ವಚನಗಳು : ಸಂ. ಡಾ॥ ಆರ್. ಸಿ. ಹಿರೇಮಠ ವಚನ
34. ಮೆರೆಮಿಂಡದೇವರ ವಚನ (ಸಕಲಪುರಾತನರ ವಚನಗಳು ಸಂ. 1-ವಚನ 326)
35. ಮೋಳಿಗೆಮಾರಯ್ಯನ ವಚನ (ಸಕಲಪುರಾತನರ ವಚನಗಳು ಸಂ. 1-ವಚನ 1940)
36. ಅದೇ ವಚನ 1967
37. ಚೆನ್ನಬಸವಣ್ಣನವರ ವಚನಗಳು : ಸಂ. ಡಾ॥ ಆರ್. ಸಿ. ಹಿರೇಮಠ ವಚನ 352
38. ಅದೇ ವಚನ 530
39. ಬಸವಣ್ಣನವರ ವಚನಗಳು : ಸಂ. ಡಾ॥ ಆರ್. ಸಿ. ಹಿರೇಮಠ ವಚನ 243
40. ಸಿದ್ಧಗಂಗಾಶ್ರೀ : ಪು 603

41. ಅದೇ ಪು. 603
42. ಷಟ್‌ಸ್ಥಲ ಜ್ಞಾನಸಾರಾಮೃತ : ಸಂ. ಡಾ॥ ಆರ್. ಸಿ. ಹಿರೇಮಠ ವ. 39
43. ಸಕಲಪುರಾತನರ ವಚನಗಳು (ಸಂಪುಟ-2) : ಸಂ. ಡಾ॥ ಎಂ. ಎಸ್. ಸುಂಕಾಪುರ ವಚನ 27
44. ಇವುಗಳ ವಿವರ ಮುಂದೆ ಕೊಡಲಾಗಿದೆ (ಚೆನ್ನಬಸವಣ್ಣನವರ ವಚನಗಳು—201, 343, 1417)
45. ಚೆನ್ನಬಸವಣ್ಣನವರ ವಚನಗಳು : ಸಂ. ಡಾ॥ ಆರ್. ಸಿ. ಹಿರೇಮಠ ವಚನ 149
46. ಶಿವಾನುಭವ ಶಬ್ದಕೋಶ—ಡಾ। ಫ. ಗು. ಹಳಕಟ್ಟಿ ಪು. 326 ; ಅದಯ್ಯನ ವಚನಗಳು (ಸಪುವ-2 ವ. 328)
47. ಚೆನ್ನಬಸವಣ್ಣನವರ ವಚನಗಳು : ವ. 516, 542 ; ಮಹಾದೇವಿಯಕ್ಕನ ವಚನಗಳು : 185

# ವೈಯಾಕರಣಿಯರಿಬ್ಬರ ಗೋಳು !

---

ಡಾ. ಕೆ. ಸುಬ್ರಹ್ಮಣ್ಯ ಭಟ್ಟ

ವೈಯಾಕರಣರ ಬಗೆಗೆ ಪಂಡಿತ ಮಂಡಲಿಯಲ್ಲಿಯೂ ಅಷ್ಟೊಂದು ಅತ್ಯಾದರ ಕಂಡುಬರುತ್ತಿಲ್ಲ. ಸಾಮಾನ್ಯವಾಗಿ ವೈಯಾಕರಣರನ್ನು "ಶುಷ್ಕವೈಯಾಕರಣ"ರೆಂದೇ ಹೇಳುವುದು ರೂಢಿ. ಇದೇ ಸಾಲಿನಲ್ಲಿ ನಿಲ್ಲತಕ್ಕವರು ನೈಯಾಯಿಕರು, ವೇದಾಧ್ಯಾಯಿಗಳು. ವೇದಾಭ್ಯಾಸಜಡರೆಂದೋ, ಛಾಂದಸರೆಂದೋ ಇವರಿಗೆ ಸಂದ ಬಿರುದು ಬಾವಲಿ. ಆನಂದವರ್ಧನನೇನೋ 'ಪ್ರಥಮೇಹಿ ವಿದ್ವಾಂಸೋ ವೈಯಾಕರಣಾಃ, ವ್ಯಾಕರಣ ಮೂಲತ್ವಾತ್ ಸರ್ವವಿದ್ಯಾನಾಂ' ಎಂದು ವ್ಯಾಕರಣವನ್ನು ಶ್ಲಾಘಿಸಿದ. ಸುಭಾಷಿತಕಾರನೊಬ್ಬ "ನಿಘಂಟುನಾ ವಿನಾವೈದ್ಯಃ ವಿದ್ವಾನ್ ವ್ಯಾಕರಣಂ ವಿನಾ । ಅನಭ್ಯಾಸೇನ ಧಾನುಷ್ಕಃ ತ್ರಯೋಹಾಸ್ಯಸ್ಯಭಾಜನಂ"॥ ಎಂದು ಕೈವಾರಿಸಿದ. ಮತ್ತೊಬ್ಬ, ಬಹುಶಃ ಹಸಿವಿನ ದಾಂದಲೆಗೆ ತುತ್ತಾದವ, ತುತ್ತಿಗಾಗಿ ಸುತ್ತಿ ಬಳಲಿದವ "ಬುಭುಕ್ಷಿತೈಃ ವ್ಯಾಕರಣಂ ನ ಭುಜ್ಯತೇ, ಪಿಪಾಸಿತೈಃ ಕಾವ್ಯರಸೋ ನ ಪೀಯತೇ॥ ನ ವಿದ್ಯಯಾ ಕೇನಚಿದುದ್ಧೃತಂ ಕುಲಂ ಹಿರಣ್ಯ ಮೇವಾರ್ಜಯ ನಿಷ್ಫಲಾಃ ಕಲಾಃ ॥ ಎಂದೇ ಉದ್ಘೋಷಿಸಿದ. ಶಬ್ದಮಣಿ ದರ್ಪಣಕಾರನಾದ ಕೇಶಿರಾಜ–

ವ್ಯಾಕರಣದಿಂದೆ ಪದಮಾ
ವ್ಯಾಕರಣದಪದದಿನರ್ಥಮರ್ಥದೆ ತತ್ತ್ವಾ ।
ಲೋಕಂ, ತತ್ತ್ವಾಲೋಕದಿ
ನಾಕಾಂಕ್ಷಿಪ ಮುಕ್ತಿಯಕ್ಕುಮದೆ ಬುಧರ್ಗೆ ಫಲಂ ॥

ಎಂದು ಮೋಕ್ಷಲಾಭದವರೆಗೂ ವ್ಯಾಕರಣದ ಫಲದಲ್ಲಿ ಆಶಾವಾದಿಯಾದ 'ಮುಖಂ ವ್ಯಾಕರಣಂ ಸ್ಮೃತಂ' ಎಂದು ಒಂದೆಡೆ ಶ್ಲಾಘನೆ, 'ಪ್ರಧಾನ ಆಚಾರ್ಯಾಃ ವೈಯಾಕರಣಾಃ' ಎಂಬ ಸ್ತುತಿ ಮತ್ತೊಂದೆಡೆ, ಕಲಿಯಬೇಕಾದ ವಿದ್ಯೆಗಳೆರಡೇ ; ಅವು

ಶಬ್ದವಿದ್ಯೆ (ವ್ಯಾಕರಣ), ಬ್ರಹ್ಮವಿದ್ಯೆ (ಮೋಕ್ಷವಿದ್ಯೆ) ಎಂದರು ಕೆಲರು. "ಸರ್ವವಿದ್ಯಾನಾಂ ಪ್ರದೀಪಭೂತಂ ವಾಙ್ಮಲಾನಾಂ ಚಿಕಿತ್ಸಿತರೂಪಂ ಪ್ರಸಿದ್ಧ್ಯರ್ಥ ನಿರ್ಣಯ ತತ್ತ್ವಜ್ಞಾನದ್ವಾರಾ ನಿಶ್ರ್ಶ್ರೇಯಸ ಸಾಧನಂ ಚ ನಾಪರಂ ಲೋಕೇ ವ್ಯಾಕರಣಾತ್" ಎನ್ನುವುದು ಭಟ್ಟಾಕಳಂಕನ ಅಂಬೋಣ, ಭರ್ತೃಹರಿ, ವಾಕ್ಯಪದೀಯದಲ್ಲಿ,

ತದ್ದ್ವಾರ ಮಪವರ್ಗಸ್ಯ ವಾಙ್ಮಲಾನಾಂ ಚಿಕಿತ್ಸಿತಂ ।
ಪವಿತ್ರಂ ಸರ್ವವಿದ್ಯಾನಾಂ ಅಧಿವಿದ್ಯಂ ಪ್ರಕಾಶತೇ ॥
ಇದಮಾದ್ಯಂ ಪದಸ್ಥಾನಂ ಸಿದ್ಧಿಸೋಪಾನಪರ್ವಣಾಂ ।
ಇಯಂ ಸಾ ಮೋಕ್ಷಮಾಣಾನಾಮ ಜಿಹ್ಮಾರಾಜ ಪದ್ಧತಿಃ ॥ "
– (ವೆಂಕಟಾಧ್ವರಿ)

ಎಂದು ತಿಳಿಸಿದ. ಕವಿಯೊಬ್ಬ

ಅಸ್ವೀಕೃತವ್ಯಾಕರಣೌಷಧಾನಾಂ
ಅಪಾಟವಂ ವಾಚಿ ಸುಗೂಢಮಾಸ್ತೇ ।
ಕಸ್ಮಿಂಶ್ಚಿದುಕ್ತೇ ತು ಪದಂ ಕಥಂಚಿತ್
ಸ್ವೈರಂ ವಪುಃ ಸ್ವಿದ್ಯತಿ ವೇಪತೇ ಚ ॥

ಎಂದು ಎಚ್ಚರಿಸಿದ. ತಂದೆಯೊಬ್ಬ ತನ್ನ ಮಗನಿಗೆ –

ಯದ್ಯಪಿ ಬಹುನಾಧೀಷೇ ತಥಾಪಿ ಪಠ ಪುತ್ರ ವ್ಯಾಕರಣಂ ।
ಸ್ವಜನಃ ಶ್ವಜನೋ ಮಾ ಭೂತ್ ಸಕಲಂ ಶಕಲಂ ಸಕೃತ್ ಶಕೃತ್"॥

ಎಂಬ ಕಿವಿಮಾತನ್ನು ಸುರಿದ. ಗುರುವೊಬ್ಬ 'ಮಹಾಭಾಷ್ಯಂ ವಾ ಪಠನೀಯಂ ಮಹಾರಾಜ್ಯಂ ವಾ ಶಾಸನೀಯಮ್, ತಸ್ಮಾತ್ – ಸರ್ವತ್ರಯತ್ನೇನ ವ್ಯಾಕರಣ ಪಟುರ್ಭವ' ಎಂದು ಆಶೀರ್ವದಿಸಿದ. ಕನ್ನಡದ ಆದಿಕವಿ ನಾಡೋಜ ಪಂಪ–

"ಇರುಮುರುಳೆ ಶುಷ್ಕ ವೈಯಾ
ಕರಣಂಗಂ ಶುಷ್ಕ ತಾರ್ಕಿಕಂಗಂ ಬೆಳ್ಳ ।
ಕ್ಕರಿಗಂಗಂ ವಿಷಯಮೆ ಕಾ
ವ್ಯರತ್ನಮತಿ ಚತುರ ಕವಿಕದಂಬಕವಿಷಯಂ ॥

ಎಂದರೂ, ವ್ಯಾಕರಣದ ಪರಾಕಾಷ್ಠೆಯು ನೀರಸತೆ ಮಾತ್ರಬೇಡ ಎಂದನಲ್ಲದೆ ವ್ಯಾಕರಣದ ಬಗೆಗೆ ಒಲವಿಲ್ಲದ ಮಾತು ಅದಲ್ಲ; ಕವಿಯ ವ್ಯಾಜಸ್ತುತಿ ಇದು. 'ಶಬ್ದ' ವೆಂಬ ಜ್ಯೋತಿಗೆ ಎಲ್ಲಿಲ್ಲದ ಗೌರವ ದಂಡಿಯಲ್ಲಿ ; –

ಇದಮಂಧಂ ತಮಂಕೃತ್ಸ್ನಂ ಜಾಯೇತ ಭುವನತ್ರಯಂ ।
ಯದಿ ಶಬ್ದಾಹ್ವಯಂ ಜ್ಯೋತಿಃ ಆಸಂಸಾರಂ ನ ದೀಪ್ಯತೇ ॥

ಎಂದು ಶಬ್ದ (ತನ್ಮೂಲಕ ವ್ಯಾಕರಣದ)ದ ಅಪರಿಹಾರ್ಯತೆಯನ್ನು ಶ್ರುತಪಡಿಸಿದ. 'ಸಂಸ್ಕಾರವತ್ಯೇವ ಗಿರಾ ಮನೀಷೀ' ಎಂದು ಕಾಳಿದಾಸ ವ್ಯಾಕರಣ ವಿದ್ಯೆಯನ್ನು ಸಂಸ್ತುತಿಸಿದ. ವೆಂಕಟಾಧ್ವರಿಯ ವಿಶ್ವಾವಸು ಮಹ್ಯಾಭರಣೇಷು ವೈಯಾಕರಣೇಷು ಭವಾನ್ ಮಾ ಸ್ಮ ಕಲಯತು ದೋಷ ಶಕಲವ್ ಯತಃ,

'ಕೃತದುರಿತ ನಿರಾಕರಣಂ ವ್ಯಾಕರಣಂ ಚತುರಧೀರ ಧೀಯಾನಃ ।
ಬುಧಜನಗಣನಾವಸರೇ ಕನಿಷ್ಠಿಕಾಯಾಂ ಪರಂ ಜಯತಿ ॥

ಎಂದು ಕೈವಾರಿಸಿದರೆ, ಕೃಶಾನು,

"ಟಿಡ್ಢಾಣಞ ದ್ವಯಸಚ್ಚಟೂ ಜಸಿ ಜಸ್ತೋಸ್ತಿಪ್ ತಸ್‌ಝಿ ಸಿಪ್ ಥಸ್ ಥ ಮಿಬ್
ವಸ್‌ಮಸ್ ತಾನಚಿ ಚ ಷ್ಟುನಾಷ್ಟುರತ ಇಞ ಶಶ್ಚೋಽಟ್ಯಚೋಽಂತ್ಯಾದಿ ಟಿ ।
ಲೋಪೋವ್ಯೋರ್ವಲಿ ವೃದ್ಧಿರೇಚಿ ಯಚಿ ಭಂ ದಾಧಾ ಘ್ವದಾಮ್ನಾಜ್ಝಲಾ
ವಿತ್ಯೇತೇ ದಿವಸಾನ್ನಯಂತಿ ಕತಿಚಿಚ್ಛಬ್ದಾನ್ ರಟಂತಃ ಕಟೂನ್ ॥
ಎಂದು ದೂಷಿಸುವ ದೋಷೈಕದೃಷ್ಟಿಯಾದ.

'ಶಿಕ್ಷಾ ಘ್ರಾಣಂತು ವೇದಸ್ಯ ಮುಖಂ ವ್ಯಾಕರಣಂ ಸ್ಮೃತಂ' ಎಂದೂ, 'ರಕ್ಷೋಹಾಗಮಲಘ್ವ ಸಂದೇಹಾಃ ಪ್ರಯೋಜನಂ'; 'ಏಕಃ ಶಬ್ದಃ ಸಮ್ಯಗ್ಜ್ಞಾತಃ ಸಮ್ಯಕ್ ಪ್ರಯುಕ್ತಃ ಸ್ವರ್ಗೇಲೋಕೇ ಕಾಮಧುಗ್ ಭವತಿ' ಎಂಬುದಾಗಿ ಪತಂಜಲಿ ಮಹರ್ಷಿಗಳು ವ್ಯಾಕರಣದ ಬಗೆಗೆ ಹೇಳಿದರು.

ವ್ಯಾಕರಣವನ್ನರಿಯದ ಅಪಪ್ರಯೋಗಗಳನ್ನು ಮಾಡಿದ 'ಮಹನೀಯ'ರನ್ನೂ ನಾವು ವೀಕ್ಷಿಸಬಹುದು. ಮಹಾಕವಿ ಪ್ರಯೋಗಗಳೆಂದು ಕೆಲವು 'ಅಲ್ಲ'–'ಸಲ್ಲ' ಪ್ರಯೋಗಗಳಿಗೆ 'ಮಾನ್ಯತೆ'ಯೂ ಲಭಿಸಿದ್ದಿದೆ. ಅಪಾಣಿನೀಯಂ ಎಂದು ಗುರುತಿಸಲ್ಪಟ್ಟರೂ ಇವುಗಳಿಗೆ ವಾಙ್ಮಯದಲ್ಲಿ ಸ್ಥಾನಮಾನ ಸಂದಿದೆ. ಆದರೆ, 'ಮೋದಕೇನ ತಾಡಯ' (ಮಾಉದಕೇನ ತಾಡಯ) ಎಂದು ಹೇಳಿದ ತನ್ನ ರಾಣಿಗೆ ಜಲಕೇಳಿಯ ಸಂದರ್ಭದಲ್ಲೇ ಮೋದಕಗಳಿಂದ ಹೊಡೆಸಿದ ರಾಜ ಶಿಖಾಮಣಿಗೂ ನಮ್ಮಲ್ಲಿ ಕೊರತೆ ಇಲ್ಲ. "ದಧಿಮಾನಯ" ಎಂದು ಮೊಸರನ್ನು ಬಯಸಿದ ಗಂಡನಿಗೆ (ದಧಿ ಆನಯ)

ಬಯಕೆಗೆ ವಿರುದ್ಧವಾದರೂ, ಮಾನವನ್ನುಳಿಸಲೋಸುಗ 'ದಧಿ ಮಾ ಆನಯ', ಮೊಸರನ್ನು ತರಬೇಡ, ಎಂದು ಅರ್ಥವಾಗುವಂತೆ ಪ್ರಸಂಗಾವಧಾನತೆಯಿಂದ ತಿದ್ದಿದ ವೈಯಾಕರಣಪಟು ಭಾರ್ಯೆಯ ಉಲ್ಲೇಖವೂ ನಮ್ಮಲ್ಲಿದೆ, ಕರ್ಮದಾಸಿಯೊಬ್ಬಳ ಭಾಂಡಭಾರವನ್ನು ಊಹಿಸಿದ 'ವೈಯಾಕರಣಂಮನ್ಯ'ನೊಬ್ಬ 'ಭಾರಃ ಬಾಧತಿ ನಕಿಂ' ಎಂದುದಕ್ಕೆ ಆಕೆ ಭಾರವು ಯಥಾ ಬಾಧತಿ ಬಾಧತೇ' ಎಂದಳಂತೆ. ಬಾಧತೇ ಎಂಬಲ್ಲಿ ಬಾಧತಿ ಎಂಬ ಅಪಪ್ರಯೋಗ ಬಾಧಿಸುವಷ್ಟು ಭಾರವು ಭಾರವಲ್ಲ ಎಂದಳಂತೆ ಆ ಅಬಲೆ. ಇನ್ನೊಬ್ಬ ಸಂಸ್ಕೃತ ಭಾಷಾಭಿಮಾನಿ ದಾರಿಹೋಕನೊಡನೆ, ಒಮ್ಮೆ ದಾರಿಯಲ್ಲಿ ನಿರ್ಭೀತಿಯೇ ಎಂದರಿಯಲು "ವ್ಯಾಘ್ರಭಯಃ ಅಸ್ತಿವಾ ?" ಎಂದಾಗ ('ಭಯಂ' ಎಂದಾಗಬೇಕು') ಅದಕ್ಕೆ ಆತ 'ಭಯಃ ಶಬ್ದೋಽಪಿನಾಸ್ತಿ' (ಭಯಃ ಎಂಬ ಶಬ್ದವಾದರೂ ಇಲ್ಲ) ಎಂದನಂತೆ. ವಕ್ತೃವಿನ ಮನಸ್ಸಿನಲ್ಲಿ ಭಯಃ ಎಂಬ ಅಪಶಬ್ದ ಇಲ್ಲ. ಶ್ರೋತೃ ಅದನ್ನು ಹೆದರಿಕೆಯಿಲ್ಲ ಎಂದು ತಿಳಿದುಕೊಂಡ. ಮುಂದೆ ದಾರಿಯಲ್ಲಿ ಹುಲಿಯ ಬಾಯಿಗೆ ತುತ್ತಾದ ! ಹೇಗಿದೆ ಸಂಸ್ಕೃತಾಭಿಮಾನಿಯ ದುರಂತ ? ಅಂತೆಯೆ 'ಮನಸ್', ಶಬ್ದ ನಪುಂಸಕಲಿಂಗ, ಈ ವ್ಯಾಜವನ್ನು ಕವಿ–

"ನಪುಂಸಕಮಿತಿ ಜ್ಞಾತ್ವಾ ಪ್ರಿಯಾಯೈ ಪ್ರೇಷಿತಂ ಮನಃ ।
ತತ್ತು ತತ್ರೈವ ರಮತೇ ಹತಾಃ ಪಾಣಿನಿನಾ ವಯಂ ॥"

ಎಂದು ಉದ್ಗರಿಸಿದ.

ಈ ರೀತಿ ಅನೇಕ ವ್ಯಾಕರಣ ಸಂಬಂಧಿ ವಿನೋದಗಳು ನಮಗೆ ಅಲ್ಲಲ್ಲಿ ದೊರೆಯುತ್ತಿವೆ. ಕೆಲವರ ವಾದದಂತೆ ಪ್ರಾಚೀನ ಭಾರತದಲ್ಲಿ ಸ್ತ್ರೀಯರು ಸಾಹಿತ್ಯ, ಶಾಸ್ತ್ರಾದಿ ವಿದ್ಯೆಗಳಿಂದ ವಂಚಿತರಾಗಿದ್ದರೆಂದು ತಿಳಿಯುತ್ತೇವೆ. ಆದರೆ, ವಿಜ್ಜಿಕೆ, ಕಂತಿಯರಂತಹ ಸಾಹಿತ್ಯ ನಿಪುಣೆಯರನ್ನೂ ; ಮೈತ್ರೇಯಿ, ಭಾರತಿ ಮುಂತಾದ ಶಾಸ್ತ್ರ ಪಾರಂಗತೆಯರನ್ನು ನಾವು ಕೇಳಿಯೇ ಇದ್ದೇವೆ. ಕನ್ನಡದ ಆದಿ ಕವಿ ಪಂಪ, ಆದಿ ಪುರಾಣದಲ್ಲಿ ಬ್ರಾಹ್ಮಿಸುಂದರಿಯರ ವಿದ್ಯಾಭ್ಯಾಸ ಪ್ರಸಂಗವನ್ನು ತಿಳಿಸುತ್ತ – "ಮತ್ತಂ ಸ್ವಾಯಂಭುವಾಭಿಧಾನ ಪದವಿದ್ಯಾ (ವ್ಯಾಕರಣ) – ಛಂದೋವಿಚಿತಿ – ಅಲಂಕಾರಗಳೆಂಬ ಮೂಱುಂ ಪೆಸರ್ವಡೆದ ವಾಙ್ಮಯಮುಮಂ" ಎಂದು ಸ್ತ್ರೀವಿದ್ಯಾಭ್ಯಾಸದಲ್ಲಿ ವ್ಯಾಕರಣ ಶಾಸ್ತ್ರದ ಸರ್ವಪ್ರಾಥಮ್ಯವನ್ನು ತಿಳಿಸಿದ್ದಾನೆ. ಮುಂದೆ ಕಲಾಕಲಾಪಾದಿಗಳ ವಿವರಣೆಯಿದೆ. ಹಾಗಾಗಿ ಸ್ತ್ರೀಯರು ವಿದ್ಯಾಭ್ಯಾಸಾದಿಗಳಿಂದ ವಂಚಿತರೆಂದಾಗಲೀ, ವ್ಯಾಕರಣಾದಿ ಶಾಸ್ತ್ರ ಪ್ರವೀಣೆಯರಲ್ಲವೆಂದು ವಾದಿಸುವುದಾಗಲೀ ಸಲ್ಲ. ಆಚಾರ್ಯಾ ಸ್ವಯಂ ವ್ಯಾಖ್ಯಾತ್ರೀ' ಎಂದು ಅಧ್ಯಾಪಿಕೆಯ ಉಲ್ಲೇಖ ಪಾಣಿನಿಯಲ್ಲಿದೆ. ಬರಿದೆ ಆಚಾರ್ಯ ಪತ್ನಿಯಾಗಿದ್ದಲ್ಲಿ ಆಕೆಗೆ 'ಆಚಾರ್ಯಾನೀ' ಎಂಬಷ್ಟೇ ಬಿರುದು. ಆದುದರಿಂದ ಎಲ್ಲ ಬಲ್ಲ ವಿದ್ವತ್ಶಿಖಾಮಣಿಗಳೆನಿಸಿದ ಲಬ್ಧವರ್ಣೆಯರು ಪ್ರಾಚೀನ

ಭಾರತದಲ್ಲಿದ್ದರೆಂಬುದು ನಿರ್ವಿವಾದ. ಈ ರೀತಿ ಅಪ್ರತಿಹತ ಬುದ್ಧಿಗಳಾದ ಪ್ರಬುದ್ಧೆಯರಿಗೆ ಕೆಲವೊಮ್ಮೆ ವಿವಾಹದ ತೊಡಕಾದುದಿದೆ. (ಈಗಲೂ ಡಾ ; ಎಂ.ಎ; ಎಂ.ಎಸ್ಸಿ ಪಿಹೆಚ್.ಡಿ. ಪದವೀಧರೆಯರಿಗೂ (-ಧರರಿಗೂ) ಕೆಲವೊಮ್ಮೆ ಈ ಸಮಸ್ಯೆ ಇದಿರಾಗುವುದಿಲ್ಲವೇ?) ಸ್ಥಾನಮಾನಾದಿಗಳಲ್ಲಿ, ಆಸಕ್ತಿ ಅಭಿರುಚಿಗಳಲ್ಲಿ ವಿದ್ಯಾಬುದ್ಧಿಗಳಲ್ಲಿ ಧನ ಕನಕಾದಿಗಳಲ್ಲಿ ಶಾರೀರಿಕ ಮಾನಸಿಕ ವಿಚಾರಗಳಲ್ಲಿ, ಬಣ್ಣ, ಗಾತ್ರ, ತೂಕಾದಿಗಳಲ್ಲಿ ಸಮಾನ (ವಿವಾಹಶ್ಚ ವಿವಾದಶ್ಚ ಸಮಯೋ ರೇವ ಶೋಭತೇ ಎಂದಿದ್ದರೂ-) ಎನಿಸುವ ಜೋಡಿ, ಸಾವಿರಕ್ಕೊಂದು ಸಿಗದೆಂಬ ಕಟು ಸತ್ಯ ನಮ್ಮೆಲ್ಲರ ಅನುಭವಕ್ಕೆ ಬಂದ ವಿಚಾರ, ಕಣ್ಣಿಗೆ ಕಂಡ ವಿಷಯ ತಾನೇ ?

ಹೀಗಾಯಿತಂತೆ ; – ವಿಕಟನಿತಂಬೆಗೆ (ಅಬ್ಬ ಹೆಸರೆ !) ತಂದೆ ತಾಯಂದಿರ ಕನ್ಯಾಸೆರೆಯ ವಿಮುಕ್ತಿಗಾಗಿ ಗಂಡೊಬ್ಬನ ಕೊರಳಿಗೆ ಪುಷ್ಪಮಾಲೆಯನ್ನು ಸೂಡಿದಾಗ ! ಮದುವೆಯ ಹೊಸದರಲ್ಲಿ ಮದು ಮಗನಿಗೆ ತನ್ನ ವಧುವಿನೊಡನೆ ಮಾತನಾಡುವ ಚಾಪಲ್ಯ ! ಬಾಯ್ದೆರೆದು ಗಳಪಿದ ! ಅದರ ಬಗೆಯೆಂತೆಂದು ವಿಕಟನಿತಂಬೆಯಿಂದಲೇ ಕೇಳಿ–

'ಕಾಲೇ ಮಾಷಂ ಸಸ್ಯೇ ಮಾಸಂ
ವದತಿ ಶಕಾಸಂ ಯಚ್ಚ ಸಕಾಶಂ ।
ಉಷ್ಟ್ರೇಲುಂಪತಿ ರಂವಾ ಷಂ ವಾ
ತಸ್ಮೈ ದತ್ತಾ ವಿಕಟನಿತಂಬಾ ॥

ಕಲಾರ್ಥಕವಾದ ಮಾಸ ಎನ್ನ ಬೇಕಾದಲ್ಲಿ ಮಾಷ (ಉದ್ದು) ಎಂದೂ ಸಕಾಶಂ ಎನ್ನ ಬೇಕಾದಲ್ಲಿ ಸ-ಶ ಭೇದವರಿಯದೆ ಶಕಾಸಂ ಎಂದೂ ಹೇಳುತ್ತಿದ್ದನಂತೆ ! (ಈಗಲೂ 'ಕಲ್ಲು ಸಕ್ಕರೆ ಕೊಳ್ಳಿರೊ' ಎಂಬುದನ್ನು 'ಕಳ್ಳು ಶಕ್ಕರೆ ಕೊಲ್ಲಿರೊ' ಎಂದೋ 'ಹರಿಸ್ಮರಣೆ ಮಾಡೊ ನಿರಂತರಾ' ಎಂಬುದನ್ನು 'ಅರಿಷ್ಮರನೆ ಮಾಢೋ ನಿರಂಥರಾ' ಎಂದೋ ಹೇಳುವುದಿಲ್ಲವೇ ? ಹಾಗೆ ;) ಇನ್ನು ಆಸನ ಮತ್ತು ಹಾಸನಗಳ ಅದಲು ಬದಲು, ಹಳ್ಳಿಯನ್ನು ಹಲ್ಲಿ, ಅನ್ನವನ್ನು ಅಣ್ಣ ಎಂದೆಲ್ಲ ಉಚ್ಚರಿಸುವ 'ಕುರಿತೋದದೆಯುಂ ಪದಪ್ರಯೋಗ ಪರಿಣತಮತಿಗಳು, ನಮ್ಮಲ್ಲಿ ಎಷ್ಟು ಮಂದಿ ತಾನೇ ಇಲ್ಲ ! ಷ, ಟ, ರ ಮುಂತಾದ ಮೂರ್ಧನ್ಯಾಕ್ಷರ ಸಂಯುಕ್ತ ಪದ 'ಉಷ್ಟ್ರ' ಮುಂತಾದುವನ್ನು ಉಚ್ಚರಿಸುವಾಗ ರಕಾರಲೋಪವಾಗಿ 'ಉಷ್ಟ' ಎಂದೋ, 'ಉಟ್ರ' ಎಂದು ಷಕಾರಲೋಪವಾಗಿ ಉಚ್ಚರಿಸಲ್ಪಡುತ್ತಿತ್ತಂತೆ ವಿಕಟನಿತಂಬೆಯ ಪತಿದೇವನಿಂದ! ಇಂತಹವನಿಗೆ ವಿಕಟನಿತಂಬೆಯು ದತ್ತಾ (ಕೊಡಲ್ಪಟ್ಟಳು) ಎಂದು ಮನೋವ್ಯಥೆಯಿಂದ ನುಡಿದಿದ್ದಾಳೆ. ವ್ಯಾಕರಣ ಪಟುವಾದ ಆಕೆ ಇಂತಹ ಮೌಲಿಕ ಅಬದ್ಧ

ಗಳನ್ನು ಹೇಗೆ ಸಹಿಸಿಕೊಂಡಳೋ ? ಇದು ಮದುವೆಯಾದಾಕೆಯೊಬ್ಬಳ ಮಾನಸಿಕ ಅಳಲು.

ವ್ಯಾಕರಣ ಪಟುವೊಬ್ಬಳನ್ನು ಮದುವೆಯಾಗಲು ಬಯಸಿದ ಅವೈಯಾಕರಣ ವರಮಹಾಶಯನೊಬ್ಬ ನಡೆಸಿದ ಸಂಭಾಷಣೆಯನ್ನು ಗಮನಿಸಿ ವಧು ತನ್ನ ಮನೋಗತವನ್ನು ಸ್ಪಷ್ಟವಾಗಿಯೇ ನಿಂತ ಹಜ್ಜೆಯಲ್ಲೇ ಹೀಗೆ ನುಡಿದಳಂತೆ :

"ಯಸ್ಯ ಷಷ್ಠೀ ಚತುರ್ಥೀ ಚ
ವಿಹಸ್ಯ ಚ ವಿಹಾಯ ಚ ।
ಅಹಂ ಕಥಂ ದ್ವಿತೀಯಾ ಸ್ಯಾತ್
ದ್ವಿತೀಯಾ ಸ್ಯಾಮಹಂ ಕಥಮ್ ॥"

ಷಷ್ಠೀ, ಚತುರ್ಥೀ ವಿಭಕ್ತಿ ರೂಪಗಳಂತೆ ಭ್ರಾಂತಿಹುಟ್ಟಿಸಬಹುದಾದ, ವಿಹಸ್ಯ, ವಿಹಾಯ ಎಂಬ ಪದಗಳಿವೆ. ಇವು ವಸ್ತುತಃ ಅವ್ಯಯಗಳು. ಈ ವಿವೇಕವಿಲ್ಲದ ಸಾಮಾನ್ಯ ವ್ಯಕ್ತಿಗೆ ಲಿಂಗ, ವಚನ, ವಿಭಕ್ತಿಗಳಿಲ್ಲದ ಅವ್ಯಯಗಳು ಸುಬಂತಗಳಂತೆ ಭಾಸವಾಗುವುದು. ಅಂತೆಯೆ 'ಅಹಂ' ಪದವು ಆತ್ಮಾರ್ಥಕ ಸರ್ವನಾಮಪದ ; ಪ್ರಥಮೈಕವಚನದಲ್ಲಿದೆ. ಇದು ಸಾದೃಶ್ಯದಿಂದ ಹೇಳುವುದಾದರೆ ಅಕಾರಾಂತ ಪುಲ್ಲಿಂಗ ಶಬ್ದದ ದ್ವಿತೀಯಾ ಏಕವಚನದಂತೆ (ರಾಮಂ ಎಂದಂತೆ) ಭಾಸವಾಗುತ್ತದೆ. ಕಥಂ ಎಂದೇ ರೂಪವುಳ್ಳ ಪ್ರಶ್ನಾರ್ಥಕ ಅವ್ಯಯವು ಕೂಡ ಅಕಾರಾಂತ ಪುಲ್ಲಿಂಗ ದ್ವಿತೀಯಾ ಏಕವಚನದ ಭ್ರಮೆಯನ್ನು ಹುಟ್ಟಿಸೀತು. ನಮ್ಮ ಪ್ರಕೃತ ವರಮಹಾಶಯನಿಗೆ ಹಾಗಾಗಿದೆ. ಆತನಿಗೆ ಅಹಂ, ಕಥಂ, ಶಬ್ದಗಳು ದ್ವಿತೀಯಾ ವಿಭಕ್ತಿಯ ಶಬ್ದಗಳೇ ! ಇಂತಹವನಿಗೆ ನಾನು ದ್ವಿತೀಯಾ (ಸಹಧರ್ಮಿಣೀ, ಹೆಂಡತಿ) ಹೇಗಾಗಲಿ ? ಎಂದಳಂತೆ ವಿಷಮ ದಾಂಪತ್ಯವನ್ನು ಒಲ್ಲದ ವಿದುಷಿ ಕನ್ಯಾಮಣಿ. ಮದುವೆಯಾಯಿತೋ ಇಲ್ಲವೋ ಆ ವಿಚಾರಕ್ಕೆ ನಾವೇಕೆ ತಲೆಕೆಡಿಸಿಕೊಳ್ಳಬೇಕು ? ಆ ಸಂದರ್ಭದ ಬಿಗುವನ್ನು ಪರಾಂಬರಿಸಿದರೆ ಸಾಲದೇ ?

ಹಿರಿಯರ ಒತ್ತಾಯಕ್ಕೋ, ಪರಿಸ್ಥಿತಿಯ ವಿಕೋಪಕ್ಕೋ ವರ (ವಧು) ದಕ್ಷಿಣೆಗಳ ಆಮಿಷಕ್ಕೊ, ವಸ್ತು, ಒಡವೆ, ವಾಹನ, ಹುದ್ದೆಗಳ ಆಕರ್ಷಣೆಗೋ ಒಲ್ಲದ ಮದುವೆ ಯಾಗಿ ಬವಣೆ ಪಡುತ್ತಿರುವವರನ್ನು ನಾವು ಈಗಲೂ ಕಾಣುತ್ತಿಲ್ಲವೇ ? ಇದನ್ನು ಗಮನಿಸಿಯೇ ಕವಿಯೊಬ್ಬ

"ಇವಳ್ದಿರೊಳಮಿದಿರಂ ಪಿಕೃತ ರೂಪರಂ ಕೊಡುವಂ
ತವಶ್ಯಮನುರೂಪ ರೂಪರನೆ ಕೂಡಲೇಂ ಕೂಡದೋ ॥

ಎಂದು ಸವಿಸ್ಮಯ ಪ್ರಶ್ನೆಯನ್ನೇ ಕೇಳಿದ್ದಾನೆ. 'ಚಿತ್ರಮಪಾತ್ರೇ ರಮತೇ ನಾರೀ' ಎಂದು ಜನ್ನ ಹೇಳಿದ್ದರೂ ನಾವು ಗಮನಿಸಿದ ಇಬ್ಬರು ಕನ್ನೆಯರೂ 'ಅಪಾತ್ರೇ ರಮತೇ' ಎನ್ನಿಸಿಕೊಂಡಿಲ್ಲ !

"ವ್ಯಾಕರಣಾತ್ ಪದಶುದ್ಧಿಃ ಪದಶುದ್ಧೇರರ್ಥ ನಿರ್ಣಯೋ ಭವತಿ ।
ಅರ್ಥಾತ್ತತ್ತ್ವಜ್ಞಾನಂ ತತ್ತ್ವಜ್ಞಾನಾತ್ಪರಂ ಶ್ರೇಯಃ ॥

ಎಂಬುದನ್ನು ಅರಿತು ನಮ್ಮ ನಾರಿಯರು ನಡೆದರೆ ನಮ್ಮ ನುಡಿ ಅದೆಷ್ಟು ಪವಿತ್ರ ವಾದೀತು ! ನಾವು ಉಣ್ಣುವ ಆಹಾರ ಶುಚಿರುಚಿಯಾಗಿರಬೇಕು, ವಾಸಿಸುವ ಮನೆ ಸ್ವಚ್ಛವಾಗಿ ಒಪ್ಪಓರಣವಾಗಿರಬೇಕು ; ತೊಡುವ ಉಡುಗೆ ತೊಡುಗೆಗಳು ಅಂದ, ಆಕರ್ಷಕವಾಗಿರಬೇಕೆಂದು ಹೌಹಾರುವ ನಾವು, ನಾವು ಮಾತಾಡುವ ಭಾಷೆ ಸ್ವಚ್ಛ ಸುಂದರ, ಸುಸ್ಪಷ್ಟ, ಶಾಸ್ತ್ರೀಯ ವ್ಯಾಕರಣನಿಬದ್ಧವಾಗಿರಬೇಕೆಂಬ ಪಣತೊಡ ಬಾರದೇಕೆ ? ಮಾತೃಭಾಷೆಯನ್ನು ಕಲಿಸುವ, ಮನೆಯೇ ಪ್ರಥಮ ಪಾಠಶಾಲೆ–ಅಲ್ಲಿಯ ಗುರುಗಳಾದ ಮಾತೆಯರು ಶುದ್ಧ ಮಾತುಬಲ್ಲ ವೈಯಾಕರಣಿ (ವಿದುಷಿ)ಯರಾಗಲಿ ; ಅಂಥವರ ಸಂತತಿ ಸಾವಿರವಾಗಲೆಂಬ ಸದಾಶಯಗಳನ್ನು ನಾವು ಧಾರಾಳವಾಗಿ ಹೊಂದುವಂತಾಗಲಿ. 'ಕಥಂ' ಎಂದಂತೆ 'ಯಥಂ' ಆಗದೆ 'ಯಥಾ' ಎಂಬ 'ಯಥಾರ್ಥ ಜ್ಞಾನ' ನಮಗೆಲ್ಲ ಬರಲಿ. 'ಇಕ್ಷ್ವಾಕೂಣಾಂ' ಸಾದೃಶ್ಯದಿಂದ 'ಅಸ್ಮಾಕೂಣಾಂ' ಎನ್ನುವ ಧಾರ್ಷ್ಟ್ಯ ಖಂಡಿತ ಬಾರದಿರಲಿ. "ಖರ್ಚಿಗಾಗುವಷ್ಟಾದರೂ" ಎನ್ನುವಂತೆ ನಿತ್ಯ ವ್ಯವಹಾರಕ್ಕಾದರೂ ಬೇಕಾದಷ್ಟು ವ್ಯಾಕರಣವನ್ನು, ತಲೆಯೊಗೆಯದೆ ಎಲ್ಲರೂ ಕಲಿತು ಬಳಸುವಂತಾಗಲಿ. ಭಾಷೆ ತನ್ನ ಸ್ವಚ್ಛತೆಯನ್ನೂ ಅಚ್ಚುಕಟ್ಟುತನವನ್ನೂ ಶಾಸ್ತ್ರೀಯವಾಗಿ, 'ಯೋಗಾದ್ರೂಢಿರ್ಬಲೀಯಸೀ'–ಎಂದಿದ್ದರೂ ; ಉಳಿಸಿಕೊಳ್ಳು ವಂತಾಗಲಿ. ವ್ಯಾಕರಣದ ಬಗೆಗೆ ಅವಜ್ಞೆ ಸರ್ವಥಾ ಸಲ್ಲದು.

# ಶುಭ ಹಾರೈಕೆ

ಜಿ. ನಾರಾಯಣ

ಶ್ರೀ ಕೆ. ಸಿ. ಪುಟ್ಟನರಸಯ್ಯನವರು ಹಳ್ಳಿಯ ಪರಿಸರದಲ್ಲಿ ಹುಟ್ಟಿ ಬಡತನದಲ್ಲಿ ಬೆಳೆದು ಕರ್ನಾಟಕ ಸರ್ಕಾರದ ಆಡಳಿತ ಸೇವೆಯಲ್ಲಿ ಉನ್ನತ ಹುದ್ದೆಯಲ್ಲಿ ಕಾರ್ಯ ನಿರ್ವಹಿಸಿ ಪ್ರಸಿದ್ಧರಾದವರು. ಸಾರ್ವಜನಿಕ ಬದುಕಿನಲ್ಲಿ ಶ್ರದ್ಧೆ ಉತ್ಸಾಹಗಳನ್ನು ತೋರಿ ಬೆಂಗಳೂರಿನ ಪ್ರಮುಖ ವಿದ್ಯಾಸಂಸ್ಥೆಯಾದ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯನ್ನು ಬೆಳೆಸಿದವರು. ಶೇಷಾದ್ರಿಪುರದ ನೆಹರು ಸಹಕಾರ ಬ್ಯಾಂಕನ್ನು ಸ್ಥಾಪಿಸಿದವರು. ಅನೇಕ ದೇವಸ್ಥಾನಗಳ ಜೀರ್ಣೋದ್ಧಾರ ಕಾರ್ಯವನ್ನು ಮಾಡಿರುವವರು. ಸಾಹಿತ್ಯ ರಂಗದಲ್ಲೂ ಸಹೃದಯರಾಗಿ ಸಕ್ರಿಯವಾಗಿ ಕಾರ್ಯ ನಿರ್ವಹಿಸಿದಂತಹವರು. ಇವರ ಸಾರ್ಥಕ ಬದುಕಿನ 81ನೇ ಸಂವತ್ಸರ ತುಂಬಿದ ಶುಭ ಸಂದರ್ಭದಲ್ಲಿ **'ಕೃತಾರ್ಥ'** ಎಂಬ ಅಭಿನಂದನಾ ಗ್ರಂಥ ಹೊರಬರುತ್ತಿರುವುದು ತುಂಬಾ ಸಂತೋಷದ ಸಂಗತಿ. ಸರಳರೂ, ಸಜ್ಜನರೂ, ಸಾತ್ವಿಕರೂ, ದೈವಭೀರುಗಳೂ, ಜನಾನುರಾಗಿಗಳೂ ಆದ, ಅರ್ಥಪೂರ್ಣವಾದ ಬದುಕು ನಡೆಸಿದ ಇವರ ಸಾಧನೆ ಮುಂದಿನ ಪೀಳಿಗೆಗೆ ಆದರ್ಶವಾಗಿರಲೆಂದು ಹೃತ್ಪೂರ್ವಕವಾಗಿ ಹಾರೈಸಿ, ಅವರಿಗೆ ಭಗವಂತನು ಸನ್ಮಂಗಳವನ್ನುಂಟುಮಾಡಲೆಂದು ಪ್ರಾರ್ಥಿಸುತ್ತೇನೆ.

# ಸಮರ್ಥ ಸೇವೆಯ ಸಭ್ಯತಾ ಮೂರ್ತಿ

ಎನ್. ಎಂ. ಕೆ. ಸೋಗಿ

"ಈಗಿನ ಪ್ರಪಂಚದಲ್ಲಿ ಏನುಬೇಕಾದರೂ ಸುಲಭವಾಗಿ ಸಿಗಬಹುದು. ಆದರೆ ಸರ್ವರೀತಿಯಲ್ಲೂ ಉತ್ತಮನಾದ ವ್ಯಕ್ತಿ ಸಿಗುವುದು ಬಹಳ ದುರ್ಲಭ, ವಿರಳ" ಎಂದು ಒಬ್ಬ ತತ್ವಜ್ಞಾನಿ ಹೇಳಿದ್ದಾನೆ. ಇನ್ನೊಬ್ಬ ತತ್ವಜ್ಞಾನಿ, ಎಲ್ಲಾ ರೀತಿ ಉತ್ತಮನಾದ ವ್ಯಕ್ತಿಗಾಗಿ ಹಗಲು ಹೊತ್ತಿನಲ್ಲಿಯೇ ದೀಪಹಚ್ಚಿ ಹುಡುಕುತ್ತಿದ್ದನಂತೆ. ಅಂತಹ ದುರ್ಲಭವಾದ, ವಿರಳವಾದ, ಅಪರೂಪವಾದ ವ್ಯಕ್ತಿಗಳಲ್ಲಿ ಶ್ರೀ ಕೆ. ಸಿ. ಪುಟ್ಟನರಸಯ್ಯನವರು ಒಬ್ಬರು. ಹೀಗೆಂದು ಹೇಳಿದರೆ ಅತಿಶಯೋಕ್ತಿಯೇನೂ ಅಲ್ಲ ; ಅದು ನನ್ನ ಪ್ರಾಮಾಣಿಕ ಅನಿಸಿಕೆ.

ಸಾಹಸದ ಬುದ್ಧಿಯಲ್ಲಿ, ಸೌಹಾರ್ದ ಭಾವದಲ್ಲಿ
ಎಲ್ಲವನು ಗೆಲುವಂಥ **'ಖ್ಯಾತಿ'** ಬೇಕು
ಎಲ್ಲ ಕಡೆ ಎಲ್ಲ ಬಗೆ ಒಳ್ಳಿತನೆ ಮಾಡುತ್ತ
ಎಲ್ಲರೊಳು ಸಲುವಂಥ **'ನೀತಿ'** ಬೇಕು.

ಶ್ರೀ ಪುಟ್ಟನರಸಯ್ಯನವರಲ್ಲಿ ಈ **'ಖ್ಯಾತಿ'** ಮತ್ತು **'ನೀತಿ'**ಗಳು ಸಮೃದ್ಧವಾಗಿವೆ. ಅಂತೆಯೇ ಅವರ ಜೀವನ ಸಾರ್ಥಕತೆಯ ಯಶೋಸೌಧವಾಗಿದೆ. ಸತ್ಕೀರ್ತಿಯ ದುಂದುಭಿಯಾಗಿದೆ, ಸರ್ವಜನ ಪ್ರಿಯತೆಯ ಸುಮಧುರ ಪರಿಮಳದ ಮಂದಾರ ಪುಷ್ಪವಾಗಿದೆ.

ಕಾವ್ಯಶಾಸ್ತ್ರ ವಿನೋದೇನ, ಕಾಲೋಗಚ್ಛತಿ ಧೀಮತಾಂ।
ವ್ಯಸನೇವಚ ಮೂರ್ಖಾಣಾಂ, ನಿದ್ರಯಾ ಕಲಹೇನವಾ॥

(ಧೀಮಂತರು ಕಾವ್ಯಶಾಸ್ತ್ರ ವಿನೋದದಲ್ಲಿ ಕಾಲ ಕಳೆಯುತ್ತಾರೆ. ಮೂರ್ಖರು ದುರ್ವ್ಯಸನ ನಿದ್ರೆ ಮತ್ತು ಕಲಹದಲ್ಲಿ ಕಾಲ ಕಳೆಯುತ್ತಾರೆ.)

ಸಂಸಾರ ವಿಷ ವೃಕ್ಷಸ್ಯ ದ್ವೇ ಫಲೇ ಅಮೃತೋಪಮೇ ।
ಕಾವ್ಯಾಮೃತ ರಸಾಸ್ವಾದ । ಆಲಾಪಃ ಸಜ್ಜನೈ ಸಹ ॥

(ಸಂಸಾರವೆಂಬ ವಿಷವೃಕ್ಷದಲ್ಲಿ ಕೇವಲ ಎರಡು ಅಮೃತ ಫಲಗಳಿವೆ. ಒಂದು ಕಾವ್ಯಾಮೃತ ರಸಾಸ್ವಾದ, ಇನ್ನೊಂದು ಸಜ್ಜನ ಸಲ್ಲಾಪ.)

ಈ ಎರಡು ಅಮೃತಫಲಗಳು ಶ್ರೀ ಪುಟ್ಟನರಸಯ್ಯನವರಲ್ಲಿ ಯಾವಾಗಲೂ ಇವೆ. ಏಕೆಂದರೆ ಕಾವ್ಯಾಮೃತ ರಸಾಸ್ವಾದದಲ್ಲಿ, ಸಜ್ಜನರೊಡನೆ ಸಲ್ಲಾಪದಲ್ಲಿ ಅವರಿಗೆ ವಿಶೇಷ ಆಸಕ್ತಿ.

''Government is there not to rule, but to serve the people'' (ಸರಕಾರ ಇರುವುದು ಜನರನ್ನು ಆಳುವುದಕ್ಕಲ್ಲ, ಜನರ ಸೇವೆ ಮಾಡುವುದಕ್ಕೆ) ಎಂಬುದು ಇವರ ಆಡಳಿತ ತತ್ವವಾಗಿತ್ತು. ಇವರು ತಮ್ಮ ಆಡಳಿತ ಕಾಲದಲ್ಲಿ ಗ್ರಾಮೀಣ ಪ್ರದೇಶದ ಹಿಂದುಳಿದ ಜನರಿಗೆ ಬಡವರಿಗೆ ನಿರ್ಗತಿಕರಿಗೆ, ವಿದ್ಯಾಸಂಸ್ಥೆಗಳಿಗೆ, ಧರ್ಮಸಂಸ್ಥೆಗಳಿಗೆ, ದೇವಸ್ಥಾನಗಳಿಗೆ ನಿಸ್ಪೃಹ ನಿಷ್ಠಾವಂತ ಸೇವಾಸಂಸ್ಥೆಗಳಿಗೆ ಧಾರಾಳವಾಗಿ ಸಹಾಯ ಮಾಡಿದರು.

ಈ ಸಂಸ್ಥೆಯ ಅದ್ಭುತ ಪ್ರಗತಿಗೆ, ಉಜ್ವಲ ಯಶಸ್ಸಿಗೆ, ಇದರ ಅಧ್ಯಕ್ಷರಾದ ಸನ್ಮಾನ್ಯ ಶ್ರೀ ಕೆ. ಎಂ. ನಂಜಪ್ಪನವರ ಮುಂದಾಳ್ತನ, ಮಾರ್ಗದರ್ಶನ ಹಾಗೂ ಪ್ರಧಾನ ಕಾರ್ಯದರ್ಶಿಗಳಾದ ಪುಟ್ಟನರಸಯ್ಯನವರ ಸರ್ವಸಮರ್ಪಣಾಭಾವದ ಶ್ರದ್ಧಾಪೂರ್ಣ ಸೇವಾ ತತ್ಪರತೆಗಳೇ ಕಾರಣವೆಂದು ಹೇಳಬಹುದು. ಇವರಿಗೆ ಈ ಸಂಸ್ಥೆಯ ಎಲ್ಲಾ ವರ್ಗದ ಜನರ ಅಂದರೆ ಆಡಳಿತ ಮಂಡಳಿಯ ಸದಸ್ಯರು, ಶಿಕ್ಷಕರು, ಸಿಬ್ಬಂದಿ ವರ್ಗದವರು, ವಿದ್ಯಾರ್ಥಿಗಳ ಪಾಲಕರು, ಪೋಷಕರು—ಎಲ್ಲರ ಎಲ್ಲಾ ಕಾಲದ, ಪ್ರೀತಿ ಪುರಸ್ಸರವಾದ ಸರ್ವರೀತಿಯ ಸಹಕಾರ ಇದ್ದೇ ಇದೆ. ಇದನ್ನು ಧಾರಾಳವಾಗಿ ಪಡೆಯುವಲ್ಲಿ ಶ್ರೀ ಪುಟ್ಟನರಸಯ್ಯನವರು ತುಂಬಾ ಯಶಸ್ವಿಯಾಗಿದ್ದಾರೆ.

ಒಬ್ಬ ತತ್ವಜ್ಞಾನಿ ಹೇಳಿದ್ದಾನೆ, ''It should be the aim of every human being to contribute something of his/her own might to make the world better and happier (ಈ ಪ್ರಪಂಚವು ಉತ್ತಮವಾಗುವುದಕ್ಕೆ, ಹೆಚ್ಚು ಸಂತೋಷದಾಯಕವಾಗಲಿಕ್ಕೆ ಪ್ರತಿಯೊಬ್ಬರೂ ತಮ್ಮಿಂದಾದ ಕಾಣಿಕೆ ಸಲ್ಲಿಸಬೇಕು.) ಈ ತತ್ತ್ವದಂತೆ ಶ್ರೀ ಪುಟ್ಟನರಸಯ್ಯನವರು ಸಮಾಜದ ಒಳಿತಿಗಾಗಿ ಧಾರಾಳವಾಗಿ ತಮ್ಮ ಸೇವಾಕಾಣಿಕೆ ಸಲ್ಲಿಸುತ್ತಿದ್ದಾರೆ.

ಎಮರ್ಸನ್ ಎನ್ನುವ ತತ್ತ್ವಜ್ಞಾನಿಯ ಅಪೇಕ್ಷೆ ಹೀಗಿದೆ.

''Be such a man, live such as you and every life like yours, this earth would be a paradise'' (ನೀನು ಹೇಗಿರಬೇಕು, ಎಂತಹ ಜೀವನ

ಸಾಗಿಸಬೇಕೆಂದರೆ, ಎಲ್ಲರೂ ನಿನ್ನಂತೆ ಇರುವುದಾದರೆ, ಎಲ್ಲರೂ ನಿನ್ನಂತೆ ಬಾಳುವುದಾದರೆ, ಈ ಭೂಮಿ ಸ್ವರ್ಗವೇ ಆದೀತು.)

ಇಂತಹ ಅಪರೂಪದ, ಆದರ್ಶವಕ್ತಿಗಳಾದ ಶ್ರೀ ಕೆ. ಸಿ. ಪುಟ್ಟನರಸಯ್ಯನವರು ಆಯುರಾರೋಗ್ಯವನ್ನೂ, ಸುಖಸಮೃದ್ಧಿಯನ್ನೂ ಪಡೆದು ನೂರುವರ್ಷ ಮೀರಿ ಬಾಳಲೆಂದು ಮನದುಂಬಿ ಹಾರೈಸುತ್ತೇನೆ.

ಭಾರತೀಯ ತತ್ತ್ವಶಾಸ್ತ್ರದ ಪ್ರಕಾರ ಚತುರ್ವಿಧ ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲಿ, ಮೊದಲಿನ ಮೂರನ್ನು ಪಡೆದು ಸಾರ್ಥಕ ಜೀವಿಗಳಾದ ಶ್ರೀಯುತರು ಕೊನೆಗೆ ಮೋಕ್ಷವನ್ನಂತೂ ಪಡೆದೇ ಪಡೆಯುತ್ತಾರೆ ಎಂದು ಗ್ಯಾರಂಟಿಯಾಗಿ ಹೇಳಬಹುದು, ಏಕೆಂದರೆ ''A well-spent life is the only passport to heassen'' (Pope--Leo) (ಉತ್ತಮವಾಗಿ ಬಾಳಿದ ಜೀವನವೊಂದೇ ಸ್ವರ್ಗಕ್ಕೆ ರಹದಾರಿ.)

ಕೊಡಿಗೇಹಳ್ಳಿಯಂಥ ಸಣ್ಣಹಳ್ಳಿಯಲ್ಲಿ ಜನಿಸಿ, ಬೆಳೆದು, ವಿಧಾನಸೌಧದವರೆಗೆ ಉನ್ನತಮಟ್ಟದ ಸರಕಾರೀ ಸೇವೆ ಸಲ್ಲಿಸಿ, ಇಂದು ಬೆಂಗಳೂರು ನಗರದ ಪ್ರತಿಷ್ಠಿತ, ಗೌರವಾನ್ವಿತ ವ್ಯಕ್ತಿಗಳಲ್ಲೊಬ್ಬರಾಗಿರುವುದು ಶ್ರೀ ಪುಟ್ಟನರಸಯ್ಯನವರ ಮಹತ್ಸಾಧನೆ.

ಜೀವನದಲ್ಲಿ ಎಲ್ಲವೂ ಅಸ್ಥಿರ ; ಧರ್ಮ ಮತ್ತು ಕೀರ್ತಿಗಳು ಮಾತ್ರ ಸ್ಥಿರವಾದುವೆಂದು ಸುಭಾಷಿತಕಾರ ಹೇಳುತ್ತಾನೆ.

ಅಸ್ಥಿರೇ ಜೀವಿತೆ ಲೋಕೇ, ಅಸ್ಥಿರೇ ಧನ ಯೌವನೇ ।
ಅಸ್ಥಿರೇ ಪುತ್ರದಾರಾಶ್ಚ, ಧರ್ಮಕೀರ್ತಿದ್ವಯಂ ಸ್ಥಿರಂ ॥

(ಲೋಕದಲ್ಲಿ ಜೀವನವೇ ಅಸ್ಥಿರ ; ಧನ, ಯೌವನ, ಹೆಂಡತಿ ಮಕ್ಕಳು ಅಸ್ಥಿರ, ಆದರೆ ಸ್ಥಿರವಾದುವೆಂದರೆ ಎರಡೇ ಎರಡು, ಧರ್ಮ ಮತ್ತು ಕೀರ್ತಿ) ಇಂತಹ ಸ್ಥಿರ ಸಂಪತ್ತಾದ **ಧರ್ಮ** ಮತ್ತು ಕೀರ್ತಿಗಳನ್ನು ಶ್ರೀ ಪುಟ್ಟನರಸಯ್ಯನವರು ಧಾರಾಳವಾಗಿ ಸಂಪಾದಿಸಿದ್ದಾರೆ.





# ಮಹಾಚೇತನ-ಮಾರ್ಗದರ್ಶಕ

ಎಂ. ಶ್ರೀರಾಮಯ್ಯ

ನಾನೊಬ್ಬ ಶೂನ್ಯ. ಸೇವೆಯಲ್ಲಿ ಶ್ರದ್ಧೆ, ನಿಷ್ಠೆ, ಆಸಕ್ತಿ, ವಿಧೇಯತೆ ಹಾಗೂ ಅರ್ಪಿತ ಮನೋಭಾವಗಳನ್ನು ಮೈಗೂಡಿಸಿಕೊಂಡು ಜೀವದಲ್ಲಿ ಗುರಿಮುಟ್ಟುವ ರಹಸ್ಯವನ್ನು ಕಲಿಸಿದ ಗುರು ಇವರು. ಬಾಳಿನಲ್ಲಿ ಅಂಬೆಗಾಲಿಟ್ಟಾಗಿನಿಂದ ನನ್ನ ಬದುಕಿಗೆ ದಾರಿ ತೋರಿಸಿ ಸನ್ಮಾರ್ಗದಲ್ಲಿ ಮುನ್ನಡೆಸಿದ ಮಹಾತ್ಮರು. ಶೂನ್ಯವನ್ನು ಸಂಖ್ಯೆಯನ್ನಾಗಿಸುವ ಮಾಂತ್ರಿಕ ಶಕ್ತಿ ಇವರದು. ಜೀವನವೆಂಬ ಮಹಾಸಾಗರದಲ್ಲಿ ಪರಿಪಕ್ವವಾದ ಅನುಭವ ಪಡೆದಿರುವ ಇವರು ಆಡಳಿತ ದಕ್ಷರು, ಅನನ್ಯ ಆದರಣೀಯ ಮೇರುಪುರುಷರು. ಇವರೊಡನೆ ಕೆಲಸಮಾಡುವ ಸೌಭಾಗ್ಯ ನನಗೆ ಲಭಿಸಿದ್ದು ನನ್ನ ಪೂರ್ವ ಜನ್ಮದ ಪುಣ್ಯದ ಫಲವೆಂದು ಸ್ಮರಿಸುತ್ತೇನೆ.

ನನ್ನ ಇವರ ಸುಮಾರು 19 ವರ್ಷಗಳ ಒಡನಾಟದಲ್ಲಿ ಇವರನ್ನು ನೋಡದೇ ಇರುವ ದಿನಗಳೇ ಇಲ್ಲ. ರಜಾದಿನಗಳಲ್ಲಿಯೂ ಸಹ ಯಾವುದಾದರೊಂದು ಕಾರ್ಯದ ನಿಮಿತ್ತ ಇವರಲ್ಲಿಗೆ ಹೋಗಿರುತ್ತೇನೆ. ಇವರು ಸದಾ ಕ್ರಿಯಾಶೀಲರು. ಚೈತನ್ಯದ ಚಿಲುಮೆ ಇವರಲ್ಲಿ ಸದಾ ಉಕ್ಕಿ ಹರಿಯುತ್ತದೆ. ಇಂತಹ ಮಹಾಚೇತನ ನಮ್ಮಂತಹ ಕಿರಿಯರಿಗೆ ಒಂದು ಅಧ್ಯಯನ ಹಾಗೂ ಮಾರ್ಗದರ್ಶನ. ಎಷ್ಟೋ ಸಂದರ್ಭಗಳಲ್ಲಿ ಬೆಳಿಗ್ಗೆ 7-30 ಗಂಟೆಗೆ ಕೆಲಸಕ್ಕೆ ಬಂದ ನನಗೆ ರಾತ್ರಿ 10 ಗಂಟೆಯಾದರೂ ಲೆಕ್ಕಿಸದೆ ಅಂದು ಮಾಡಬೇಕಾದ ನಿರ್ದಿಷ್ಟ ಕೆಲಸಗಳನ್ನು ನಾಳೆಗೆ ಮಾಡಲು ಬಿಡುತ್ತಿರಲಿಲ್ಲ. ಅವರು ಪ್ರತಿಯೊಂದು ಕೆಲಸದಲ್ಲೂ ತೋರುವ ಉತ್ಸಾಹ, ಜಾಣ್ಮೆ, ಸಮಯಪ್ರಜ್ಞೆ ಅಮೋಘವಾದುದು.

ಅರ್ಹತೆ, ಅನುಭವ ಪರಿಣತಿಗಳು ಯಾವನೇ ವ್ಯಕ್ತಿಗೆ ಕೇವಲ ಕಷ್ಟ, ಕಣ್ಣೀರು ಹಾಗೂ ಬೆವರುಗಳಿಂದ ಮಾತ್ರ ಲಭಿಸುತ್ತವೆ. ಅಲ್ಲದೆ ಗುರುವಿನ ಗುಲಾಮನಾಗಿ ಪರಿಶ್ರಮ ಪಡಯದೆ ಹೋದರೆ ಜೀವನದಲ್ಲಿ ಗುರಿ ಮುಟ್ಟುವುದು ಯಾವೊಬ್ಬನಿಗೂ ಸಾಧ್ಯವಾಗುವುದಿಲ್ಲ ಎಂಬುದನ್ನು ತೋರಿಸಿಕೊಟ್ಟವರು ಶ್ರೀ ಪುಟ್ಟನರಸಯ್ಯನವರು. ಇಂತಹ ಪರಿಪಕ್ವ ಅನುಭವ ಬುತ್ತಿಯ ಮೇಧಾವಿ ಹಾಗೂ ಮಹಾನ್‌ದೇವ ಭಕ್ತರು, ತ್ರಿಕರಣಶುದ್ಧರು, ನಿಷ್ಕಲ್ಮಷ ಚಾರಿತ್ರ್ಯವುಳ್ಳವರು, ಸಾದಾತನ ಮತ್ತು ಸರಳತೆಯ

ಮೂರ್ತಿಯಾದ ಇವರನ್ನು ಹೋಲಿಸುವುದಾದರು ಹೇಗೆ? "ಸೂರ್ಯನಿಗೆ ಸೂರ್ಯನೇ ಹೋಲಿಕೆ ಚಂದ್ರನಿಗೆ ಚಂದ್ರನೇ ಹೋಲಿಕೆ ಇವರನ್ನು ಹೋಲಿಸಲು ಜಗತ್ತಲ್ಲಿ ಯಾವ ಸ್ವತ್ತಾಗಲಿ, ವಸ್ತುವಾಗಲಿ ಇಲ್ಲ.

"ಸೇವಾಧರ್ಮವು ಅಷ್ಟು ಸುಲಭವಾದ ಕಾರ್ಯವಲ್ಲ" ಎಂಬ ಮಾತನ್ನು ನೀತಿ ಮಂಜರಿ ಹೇಳುತ್ತದೆ. ಆದರೆ ಶ್ರೀ ಕೆ. ಸಿ. ಪುಟ್ಟನರಸಯ್ಯನವರಿಗೆ ಯಾವುದೂ ಕಷ್ಟವೂ ಅಲ್ಲ ಕ್ಲಿಷ್ಟವೂ ಅಲ್ಲ. ಇವರು ತಮ್ಮ ಕಾಯಕವನ್ನು ನಿರ್ವಹಿಸುವ ರೀತಿ ನೀತಿಗಳೇ ಇವರಿಗೆ ಬದುಕಿನಲ್ಲಿ ಯಶಸ್ಸು, ಕೀರ್ತಿಗಳನ್ನು ತಂದುಕೊಟ್ಟಿವೆ. ಅವರ ಯಶಸ್ವೀ ಕಾರ್ಯದಕ್ಷತೆಗೆ ಅವರು ಅಳವಡಿಸಿಕೊಂಡಿರುವ ತತ್ವವು ನಾನು ಕಂಡಿರುವಂತೆ

ಸಹಸಾ ವಿದದೀತ ನಕ್ರಿಯಾಂ
ಅವಿವೇಕಃ ಪರಮಾಪದಂ ಪದಾಂ।
ಋೃಣತೇ ವಿಮೃಶ್ಯಕಾರಿಣಾಂ
ಗುಣಲುಬ್ಧಃ ಸ್ವಯಮೇವ ಸಂಪದಃ ॥ —(ಕಿರಾತಾರ್ಜುನೀಯ)

ಅಂದರೆ, ಯಾವುದೇ ಒಂದು ಕೆಲಸವನ್ನು ಯುಕ್ತಾ ಯುಕ್ತಾ ಯೋಚಿಸದೆ ದುಡುಕಿ ಅವಿವೇಕದಿಂದ ಕೈ ಹಾಕಬೇಡ, ಅದರಿಂದ ಆಪತ್ತು, ವಿಪತ್ತು ಒದಗುತ್ತವೆ. ಬದಲಾಗಿ ಗುಣಗ್ರಾಹಿಯಾಗಿ ವಿವೇಕದಿಂದ ಯೋಚಿಸಿ ಮುನ್ನಡೆದರೆ ಘನತೆ, ಗೌರವ, ಕೀರ್ತಿಗಳು ತನ್ನಷ್ಟಕ್ಕೆ ತಾನೇ ಲಭಿಸುತ್ತವೆ" ಎಂದು. ಇದೇ ನೀತಿಯನ್ನು ಬಸವಣ್ಣನವರು ತಮ್ಮ ವಚನದಲ್ಲಿ ಹೀಗೆ ಹೇಳುತ್ತಾರೆ :

"ಅದು ಬೇಕು ಇದು ಬೇಕು ಎಂಬ ಎದೆಗುದಿಬೇಡ
ಸುದೈವನಾದೊಡೆ ಸಾಕು ಸಕಲ ಪಡಿಪದಾರ್ಥಗಳು
ಸಗನಾಣ್ಯಗಳು ಇದ್ದೆಡೆಗೆ ಬರುವವು ಎಂದು"

ಹಲವಾರು ಘಟ್ಟಗಳಲ್ಲಿ ವಿಶಿಷ್ಟ ಅನುಭವಗಳನ್ನು ಪಡೆದಿರುವ ಶ್ರೀಯುತರ ಬದುಕು ಬಹುಮುಖ ವ್ಯಕ್ತಿತ್ವವುಳ್ಳದು. ವೈವಿಧ್ಯಮಯವಾದ ಇವರ ಬದುಕಿನಲ್ಲಿ ಪರಿಪೂರ್ಣತೆ ಮೈತುಂಬಿ ಅರ್ಥವಂತಿಕೆಯಲ್ಲಿ ಹಿರಿಯರಾಗಿರುತ್ತಾರೆ.

ತಮ್ಮ 81ನೇ ವಯಸ್ಸಿನಲ್ಲೂ ಇವರಂತೆ ದೃಢಕಾಯರೂ ಸದಾ ಕ್ರಿಯಾಶೀಲರೂ ಆಶಾನ್ವಿತರೂ ತರುಣರೂ, ನವಜೀವನ ಕುತೂಹಲಿಗಳೂ ಆದವರು ಜಗತ್ತಿನಲ್ಲಿ ಬಹಳ ಮಂದಿ ಇರಲಾರರು.

ಭಗವಂತನು ಶ್ರೀಯುತರಿಗೂ ಮತ್ತು ಧರ್ಮಪತ್ನಿಯವರಿಗೂ ನೂರು ಸಂವತ್ಸರಗಳನ್ನು ದಾಟಿ ನಮ್ಮೊಡನಿರುವ ಆಯುಸ್ಸನ್ನು ದಯಪಾಲಿಸಲಿ, ಸದಾ ಹಸನ್ಮುಖದ ಚೈತನ್ಯ ಚಿಲುಮೆಯನ್ನು ಕರುಣಿಸಲಿ, ಆನಂದದಾಯಕವಾದ ಆರೋಗ್ಯ ಭಾಗ್ಯವನ್ನು ಕೊಡಲಿ ಎಂದು ಪ್ರಾರ್ಥಿಸುತ್ತೇನೆ.

# ನಾನು ಕಂಡ ಶಿಸ್ತಿನ ಸಿಪಾಯಿ

ಎಂ. ಗೋಪಾಲಕೃಷ್ಣ

ಎತ್ತರವಾದ ನಿಲವು, ಸದಾ ಸೂಟ್ ಧರಿಸಿ (ಬೇಸಿಗೆ, ಛಳಿಗಾಲವೆನ್ನದೆ) ಎಲ್ಲರ ಪ್ರೀತಿವಿಶ್ವಾಸಗಳಿಗೆ ಪಾತ್ರರಾಗಿ, ತಮ್ಮ ಕೈಗೆ ಬಂದಿರುವ ಕೆಲಸವನ್ನು ಅಚ್ಚುಕಟ್ಟಾಗಿ ಮಾಡಿ, ಯಾರ ಮನಸ್ಸನ್ನೂ ನೋಯಿಸದ ಶ್ರೀಯುತರು "ನಾಳಿನ ಕೆಲಸ ಇಂದು ಮಾಡು ಇಂದಿನ ಕೆಲಸ ಈಗಲೇ ಮಾಡು" ಎಂಬ ನಾಣ್ಣುಡಿಯಂತೆ ಅಂದಿನ ಕೆಲಸ ಅಂದೇ ಮಾಡುವ ಜಾಯಮಾನದವರು.

ಶ್ರೀಯುತರು ತಮ್ಮ 81ನೇ ಇಳಿ ವಯಸ್ಸಿನಲ್ಲಿಯೂ ಸಹ ಸದಾ ಹಸನ್ಮುಖಿಯಾಗಿ, ಲವಲವಿಕೆಯಿಂದ ತಾವು (ಟ್ರಸ್ಟ್) ನಡೆಸುತ್ತಿರುವ ವಿವಿಧ ಶಿಕ್ಷಣ ಸಂಸ್ಥೆಗಳ ಆಗುಹೋಗುಗಳನ್ನು ಬಹಳ ತಾಳ್ಮೆಯಿಂದ, ಎಚ್ಚರದಿಂದ, ಯಾರ ಮನಸ್ಸಿಗೂ ನೋವಾಗದಂತೆ ಎಲ್ಲರೂ ಮೆಚ್ಚುವಂತೆ, ಕಾರ್ಯಸಾಧಿಸುತ್ತಿದ್ದಾರೆ.

ಇಂಗ್ಲಿಷ್ ಹಾಗೂ ಕನ್ನಡ ಎರಡು ಭಾಷೆಗಳಲ್ಲಿಯೂ ಚೆನ್ನಾಗಿ ಬರೆಯುವ, ಅಧಿಕಾರಯುತವಾಗಿ ಮಾತನಾಡುವ ಕಲೆ ಇದೆ. ಶ್ರೀಯುತರು ಅತೀವ ದೈವ ಭಕ್ತರು. ರಾಮಾಯಣ, ಮಹಾಭಾರತ, ಇವುಗಳ ಬಗ್ಗೆ ತಿಳಿದುಕೊಂಡಿರುವ ಇವರಿಗೆ ಹರಿಶ್ಚಂದ್ರ ಕಾವ್ಯದ ಬಗ್ಗೆ ಹೆಚ್ಚು ಆಸಕ್ತಿ.

ಮುಖ್ಯವಾಗಿ ಶ್ರೀಯುತರಿಗೆ ಯಾರಲ್ಲಿಯಾದರೂ ಒಂದು ಸಲ ನಂಬಿಕೆ ಬಂತೆಂದರೆ ಸಂಪೂರ್ಣವಾಗಿ ನಂಬುವಂತಹ ವ್ಯಕ್ತಿ. ನಾನು ಕಳೆದ 15 ವರ್ಷಗಳಿಂದಲೂ ಸಹ ಆಫೀಸ್ ಅಸಿಸ್ಟೆಂಟ್ ಆಗಿ, ಅವರ ಆಪ್ತ ಸಹಾಯಕನಾಗಿ, ತೀರ ಹತ್ತಿರದಿಂದ ಕಂಡಿರುವ, ಅವರಲ್ಲಿ ಹಲವಾರು ಸದ್ಗುಣಗಳೆಂದರೆ, ಶಿಸ್ತಿಗೆ ಆದ್ಯತೆ, ದಕ್ಷತೆ, ಬಡವರಿಗೆ ಸಹಾಯ, ಯಾರ ಮನಸ್ಸನ್ನೂ ನೋಯಿಸದೆ ಎಲ್ಲರಿಗೂ ಸಮಾಧಾನವಾಗುವಂತೆ ಸಮಸ್ಯೆಗಳ ಪರಿಹಾರ, ಇವು ಹಲವು.

ಇಂತಹ ಧೀಮಂತ ವ್ಯಕ್ತಿಗೆ ಭಗವಂತನು ಅವರಿಗೆ ದೀರ್ಘ ಆಯುಸ್ಸನ್ನು ಕೊಡಲೆಂದೂ, ಇನ್ನೂ ಹೆಚ್ಚು ಹೆಚ್ಚು ಇಂತಹ ಒಳ್ಳೆಯ ಕೆಲಸಗಳನ್ನು ಮಾಡಲು ಪರಮಾತ್ಮನು ಅವರಿಗೆ ಸರ್ವಶಕ್ತಿಯನ್ನು ನೀಡಲೆಂದೂ ಭಗವಂತನನ್ನು ಪ್ರಾರ್ಥಿಸುತ್ತೇನೆ.

# ದಕ್ಷ ಹಾಗೂ ಪ್ರಾಮಾಣಿಕ ವ್ಯಕ್ತಿ

ಡಬ್ಲ್ಯೂ. ಹೆಚ್. ಹನುಮಂತಪ್ಪ

ಬೆಂಗಳೂರು ಮಹಾನಗರದ ಶಿಕ್ಷಣ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಾ ಸಾಧನೆಯ ಪಥದಲ್ಲಿರುವ ಕೆಲವೇ ಕೆಲವರಲ್ಲಿ ಶ್ರೀಮಾನ್ ಕೆ. ಸಿ. ಪುಟ್ಟನರಸಯ್ಯನವರು ಅಗ್ರ ಗಣ್ಯರು. ಇದಕ್ಕೆ ನಿದರ್ಶನವಾಗಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಆಶ್ರಯದಲ್ಲಿ, ನಡೆಯುತ್ತಿರುವ ಶಾಲಾ ಕಾಲೇಜುಗಳೇ ಪ್ರತ್ಯಕ್ಷ ಸಾಕ್ಷಿ. ಶಿಕ್ಷಣಕ್ಕೆ ಪೂರ್ಣ ಅರ್ಥ ಕೊಡಲು ಸಹಾಯಕವಾಗುವ ಎಲ್ಲಾ ತಾಂತ್ರಿಕ ಸೌಲಭ್ಯಗಳನ್ನು ಒದಗಿಸಿ ಸಿಬ್ಬಂದಿ ವರ್ಗದವರಲ್ಲೂ, ವಿದ್ಯಾರ್ಥಿಗಳಲ್ಲೂ, ನವ ಚೇತನವನ್ನು ಮೂಡಿಸುತ್ತಾ ಎಂಬತ್ತು ವರ್ಷದಲ್ಲೂ ಯುವಕರಂತೆ ಕೆಲಸ ನಿರ್ವಹಿಸುತ್ತಿರುವ ಶ್ರೀಯುತರು ಎಲ್ಲರ ಪ್ರೀತಿ ಗೌರವಕ್ಕೆ ಪಾತ್ರರಾಗಿದ್ದಾರೆ.

ಈ ಸಂದರ್ಭದಲ್ಲಿ ಈಗಿನ ನಗರದ ‹ಶೇಷಾದ್ರಿಪುರಂ›ನಲ್ಲಿರುವ ಶೇಷಾದ್ರಿಪುರಂ ಶಾಲಾ ಕಾಲೇಜಿನ ನಿವೇಶನವನ್ನು ನಮ್ಮ ತಂದೆಯವರು ಬೆಂಗಳೂರು ನಗರ ಮುನಿಸಿಪಲ್ ಕೌನ್ಸಿಲರ್ ಮತ್ತು ನಗರ ಅಭಿವೃದ್ಧಿ ಕಮಿಟಿ (ಸಿಟಿ ಇಪ್ರೂವ್‌ಮೆಂಟ್ ಕಮಿಟಿ) ಛೇರ್‌ಮನ್ ಆಗಿದ್ದಾಗ ತಾವೇ ಮುಂದಾಳತ್ವವನ್ನು ವಹಿಸಿ, ಆ ನಿವೇಶನವನ್ನು ಮುಫತ್ತಾಗಿ ಮುನಿಸಿಪಾಲಿಟಿ ಮತ್ತು ಸರ್ಕಾರದಿಂದ ಕೊಡಿಸಿದರೆಂದು ತಿಳಿಸಲು ಹರ್ಷಿಸುತ್ತೇವೆ.

ಶ್ರೀಯುತರ ಬಗ್ಗೆ ಕಿರುಪರಿಚಯ ಮಾಡುತ್ತಾ ಬೆಂಗಳೂರಿನ ನಾಗರಿಕರು ಹಾಗೂ ಶೇಷಾದ್ರಿಪುರ ಶಿಕ್ಷಣ ದತ್ತಿಯ ಎಲ್ಲಾ ಕಾರ್ಯಕರ್ತರೂ ಸಿಬ್ಬಂದಿವರ್ಗದವರು ಹಾಗೂ ನೆಹರೂನಗರ ಕೋ-ಆಪರೇಟಿವ್ ಬ್ಯಾಂಕಿನ ಸಿಬ್ಬಂದಿ ವರ್ಗದವರು ಶ್ರೀಯುತರನ್ನು ದಿನಾಂಕ 10-10-93 ರಂದು ಮನಸಾರೆ, ಸನ್ಮಾನಿಸಲು ಏರ್ಪಾಡು ಮಾಡಿರುವುದು ಸೂಕ್ತ, ಹಾಗೂ ಸ್ವಾಗಾತಾರ್ಹ. ಶ್ರೀಯುತರಿಗೆ ದೇವರು ದೀರ್ಘ ಆಯುಸ್ಸು, ಶಕ್ತಿ, ಸಾಮರ್ಥ್ಯಗಳನ್ನು ಕೊಟ್ಟು ಶತಾಯಿಷಿಗಳಾಗಿ ಬಾಳಲಿ ಎಂದು ಹಾರೈಸುತ್ತಾ ಶ್ರೀಯುತರ ಅಭಿನಂದನಾ ಸಮಾರಂಭವನ್ನು ತುಂಬು ಹೃದಯದಿಂದ ಸ್ವಾಗತಿಸುತ್ತೇನೆ.

# ಸೇವಾಧುರೀಣ

ಡಬ್ಲ್ಯು. ಹೆಚ್. ಪುಟ್ಟಯ್ಯ

ಬೆಂಗಳೂರು ನಗರದಲ್ಲಿ ನೆಹರೂನಗರ ಕೋ ಆಪರೇಟಿವ್ ಬ್ಯಾಂಕ್ ಎಂಬ ಸಹಕಾರಿ ಬ್ಯಾಂಕನ್ನು ಶ್ರೀ ಎಸ್. ವಿ. ಕೆ. ರಾಜನ್ ಹಾಗೂ ಇತರರು ನೆಹರೂನಗರ ದಲ್ಲಿ 1966 ರಲ್ಲಿ ಸ್ಥಾಪಿಸಿದ್ದರು. ಆದರೆ ಆ ಸಂಸ್ಥೆಗೆ ದಕ್ಷ ಆಡಳಿತಗಾರರಿಲ್ಲದೆ ಮುಚ್ಚುವ ಪರಿಸ್ಥಿತಿಗೆ ಬಂದಿತ್ತು. ಅದನ್ನು ಶ್ರೀ ರಾಜನ್‌ರವರು ನನ್ನ ಅಣ್ಣನವರಾದ ಶ್ರೀ ಡಬ್ಲ್ಯೂ. ಹೆಚ್. ಹನುಮಂತಪ್ಪನವರಲ್ಲಿ ನಿವೇದಿಸಿಕೊಂಡು ಆ ಸಂಸ್ಥೆಗೆ ಹೊಸ ಚೇತನ ಮೂಡಿಸಬೇಕೆಂದು ಮನವಿ ಮಾಡಿದರು. ಆಗ ನನ್ನ ಅಣ್ಣನವರು ನನ್ನ ಮತ್ತು ನನ್ನ ತಮ್ಮ ಡಿ॥ ಡಬ್ಲ್ಯೂ. ಹೆಚ್. ಗೋಪಾಲ್‌ನೊಡನೆ ವಿಷಯ ಚರ್ಚಿಸಿ ಆ ಸಂಸ್ಥೆಗೆ ಚೇತನ ತುಂಬಲು ಶ್ರೀ ಕೆ. ಸಿ. ಪುಟ್ಟನರಸಯ್ಯನವರೇ ಸರಿಯಾದ ವ್ಯಕ್ತಿಯೆಂದು ತೀರ್ಮಾನಿಸಿ ಅವರನ್ನು ಕಂಡು ಮಾತನಾಡಿ ಈ ಜವಾಬ್ದಾರಿಯನ್ನು ವಹಿಸಿಕೊಳ್ಳ ಬೇಕೆಂದು ಕೇಳಿಕೊಂಡ ಮೇಲೆ ಅವರು ಒಪ್ಪಿ ಆ ಬ್ಯಾಂಕಿನ ಆಡಳಿತ ವಹಿಸಿಕೊಂಡರು. ಆಗ ಆ ಸಂಸ್ಥೆಯಲ್ಲಿ ಬರುವುದಕ್ಕಿಂತ ಕೊಡುವುದೇ ಜಾಸ್ತಿಯಾಗಿದ್ದು, ಒಂದು ಬಾಡಿಗೆ ಕಟ್ಟಡದಲ್ಲಿ ವ್ಯವಹಾರ ನಡೆಸುತ್ತಿತ್ತು. ಅವರು ಬ್ಯಾಂಕಿನ ನಿರ್ವಹಣೆ ಜವಾಬ್ದಾರಿ ವಹಿಸಿಕೊಂಡ ಮೇಲೆ ಹಗಲು-ರಾತ್ರಿ ಎನ್ನದೆ ತಮ್ಮ ಸ್ನೇಹಿತರುಗಳು, ಬಂಧುಗಳು ಮತ್ತು ಕುಲಬಾಂಧವರುಗಳ ಮನೆಗೆಲ್ಲಾ ಹೋಗಿ ಸಾಕಷ್ಟು ಶೇರುಧನ ಮತ್ತು ಮೂಲ ಧನಗಳನ್ನು ಕ್ರೋಢಿಕರಿಸಿದರು. ಈಗ ಅದು ಒಂದು ಬೃಹತ್ ಸಂಸ್ಥೆಯಾಗಿ ತನ್ನ ಸ್ವಂತ ಕಟ್ಟಡದಲ್ಲಿ ಬೆಳೆದು ನಿಂತಿದೆ. ಈಗಲೂ ಅವರು ಆ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ನನಗೂ ಸಹ ಕೆಲವು ವರ್ಷಗಳ ಕಾಲ ಆ ಬ್ಯಾಂಕಿನ ನಿರ್ದೇಶಕನಾಗಿ ಇವರೊಡನೆ ಕೆಲಸ ಮಾಡುವ ಸದವಕಾಶ ದೊರಕಿತ್ತು. ನನ್ನ ನಂತರ ನನ್ನ ಮಕ್ಕಳಾದ ಚಿ॥ ಡಬ್ಲ್ಯೂ ಪಿ. ಶಿವಕುಮಾರ್ ಮತ್ತು ಚಿ॥ ಡಬ್ಲ್ಯೂ. ಪಿ. ಕೃಷ್ಣ ಇವರುಗಳೂ ಸಹ ಅವರೊಂದಿಗೆ ನಿರ್ದೇಶಕರಾಗಿ ಕೆಲಸ ಮಾಡುವ ಅವಕಾಶ ದೊರಕಿದೆ. ಇದು ಒಂದು ಸುಯೋಗ ಎಂದು ಭಾವಿಸಿದ್ದೇನೆ.

ನೆಹರೂನಗರ ಕೋ-ಆಪರೇಟಿವ್ ಬ್ಯಾಂಕ್, ಆಚಾರ್ಯ ಪಾಠಶಾಲಾ ದತ್ತಿ, ಕೋಟೆ ವೆಂಕಟರಮಣ ಸ್ವಾಮಿ ದೇವಸ್ಥಾನ ಮುಂತಾದ ಅನೇಕ ಸಂಘ ಸಂಸ್ಥೆಗಳಲ್ಲಿ ತಮ್ಮ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ, ಸಲ್ಲಿಸುತ್ತಿದ್ದಾರೆ. ತಮ್ಮ ಹುಟ್ಟೂರಿನಲ್ಲಿ ಇತ್ತೀಚೆಗೆ ತಮ್ಮ ಕುಲದೇವರ ಗುಡಿಯ ಜೀರ್ಣೋದ್ಧಾರ ಕಾರ್ಯದ ಜವಾಬ್ದಾರಿ ಯನ್ನು ಹೊತ್ತು, ಯಶಸ್ವಿಯಾಗಿ ನಿರ್ವಹಿಸಿದ್ದಾರೆ.

ತಮ್ಮ 81 ರ ಇಳಿವಯಸ್ಸಿನಲ್ಲೂ ನಿಸ್ವಾರ್ಥ ಸೇವೆ ಸಲ್ಲಿಸುತ್ತಿರುವ ಪೂಜ್ಯ ಪುಟ್ಟ ನರಸಯ್ಯನವರಿಗೆ ದೇವರು ಆಯುರಾರೋಗ್ಯ ಕೊಡಲೆಂದು ಪ್ರಾರ್ಥಿಸುತ್ತೇನೆ.

# ಕರ್ಮಯೋಗಿ

ಅನ್ನದಾನಯ್ಯ ಪುರಾಣಿಕ

ಶ್ರೀ ಕೆ. ಸಿ. ಪುಟ್ಟನರಸಯ್ಯನವರದು ಬಹುಮುಖಿ ವ್ಯಕ್ತಿತ್ವ. ಇವರು ದಕ್ಷ ಆಡಳಿತಗಾರರು, ಸಮರ್ಥ ಸಂಘಟಕರು, ಪ್ರಿಯರು, ಶಿಕ್ಷಣ ಪ್ರೇಮಿಗಳು, ಸ್ನೇಹ ಜೀವಿಗಳು, ಪ್ರತಿಭಾಸಂಪನ್ನರು, ದೈವಭಕ್ತರು, ಕರ್ಮಕುಶಲರು, ಕುಶಾಗ್ರಮತಿಗಳು ಹಾಗೂ ನಾಡುನುಡಿಗಳ ಉಜ್ವಲ ಅಭಿಮಾನಿಗಳು, ಓರ್ವ ವ್ಯಕ್ತಿಯಲ್ಲಿ ಇಷ್ಟೊಂದು ಗುಣ ವಿಶೇಷಣಗಳು ಇರುವುದು ಅಪರೂಪ. ಇವರ ವ್ಯಕ್ತಿತ್ವದ ಸಂಪೂರ್ಣ ದರ್ಶನ ದೀರ್ಘಲೇಖನವಾಗಬಹುದು.

ಶ್ರೀ ಪುಟ್ಟನರಸಯ್ಯನವರು ಕರ್ಮವೀರರು, ಕರ್ಮವೇ ಅವರ ದೇವರು. ಕರ್ಮದಲ್ಲಿ ನಿರತರಾಗಿರುವುದೇ ಅವರಿಗೆ ಜಪ ತಪ. ಕರ್ಮ ಮಾಡುವುದರಲ್ಲಿಯೇ ಅವರು ಕೈಲಾಸ ಸುಖವನ್ನು ಸವಿಯುವರು, ಕೆಲವರಿಗೆ ಕೆಲಸವೆಂದರೆ ಬೇಸರ, ಶ್ರೀ ಪುಟ್ಟನರಸಯ್ಯ ನವರಿಗೆ ಕೆಲಸವಿಲ್ಲದಿದ್ದರೆ ಬೇಸರ, ರಜೆ ಬಂದರೆ ಇವರಿಗೆ ಖುಷಿಯಾಗುವುದಿಲ್ಲ, ಬೇಸರ ವಾಗುತ್ತದೆ. ಕಾರ್ಯದಲ್ಲಿ ತೊಡಗಿದರೆ ಇವರು ಮಡದಿ ಮಕ್ಕಳನ್ನೇ ಮರೆತು ಬಿಡುತ್ತಾರೆ.

ಶ್ರೀ ಪುಟ್ಟನರಸಯ್ಯನವರು ಸ್ನೇಹಜೀವಿಗಳು, ಇವರ ಸ್ನೇಹ ಕೃತಕವಲ್ಲ; ವ್ಯಾಪಾರಿ ಬುದ್ಧಿಯದಲ್ಲ. ಅದು ಸಹಜ, ಸ್ನಿಗ್ಧ ಮತ್ತು ಶಾಶ್ವತ. ಇವರು ಸ್ನೇಹಿತರನ್ನು ಎಂದೂ ಮರೆಯುವುದಿಲ್ಲ. ಇಂಥ ಸ್ನೇಹಜೀವಿಗಳು ಇಂದಿನ ಯುಗದಲ್ಲಿ ಕಾಣಸಿಗುವುದು ಅಪರೂಪ. ಇವರಂಥ ಸ್ನೇಹಿತರನ್ನು ಪಡೆದಿರುವ ನಾನು ಭಾಗ್ಯಶಾಲಿ.

ಬಹುಮುಖ ಪ್ರತಿಭಾಸಂಪನ್ನರಾದ ಶ್ರೀ ಪುಟ್ಟನರರಯ್ಯನವರನ್ನು ಅವರ ಎಂಬತ್ತೊಂದನೇ ಇಳಿ ವಯಸ್ಸಿನಲ್ಲಿ ಅವರ ಸ್ನೇಹಿತರು ಹಾಗೂ ಅಭಿಮಾನಿಗಳು ಸರ್ ಪುಟ್ಟಣ್ಣಚೆಟ್ಟಿ ಪುರಭವನದಲ್ಲಿ ಸನ್ಮಾನಿಸಿ ಅವರಿಗೆ ಅಭಿನಂದನ ಗ್ರಂಥವನ್ನು ಸಮರ್ಪಿಸುತ್ತಿರುವುದು ನಿಜವಾಗಿಯೂ ಸುತ್ತ್ಯಾರ್ಹ ಕ್ರಮ. ಈ ಮಂಗಳ ಸಮಾರಂಭದಲ್ಲಿ ಭಾಗವಹಿಸಿ ಶ್ರೀ ಪುಟ್ಟನರಸಯ್ಯನವರಿಗೆ ಮತ್ತು ಕುಟುಂಬ ವರ್ಗದವರಿಗೆ ಸಮಸ್ತ ಸ್ವಸಂಗಳವನ್ನು ಕೋರುವುದು ನನ್ನ ಸಂತಸದ ಕರ್ತವ್ಯವಾಗಿದೆ. ಈ ಧೀಮಂತ ವ್ಯಕ್ತಿಯು ಬಹುಕಾಲ ಆರೋಗ್ಯದಿಂದ ಬಾಳಿ ನಾಡು ನುಡಿಗಳಿಗೆ ಇನ್ನೂ ಹೆಚ್ಚಿನ ಸೇವೆಯನ್ನು ಸಲ್ಲಿಸಲೆಂದು ನಾನು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

# ವ್ಯಕ್ತಿ-ಅಲ್ಲ-ಶಕ್ತಿ

ಎಲ್. ರಂಗೇಗೌಡ

ಪ್ರತಿವರ್ಷ ಏಪ್ರಿಲ್ ಮೇ ತಿಂಗಳುಗಳಲ್ಲಿ ಬೆಂಗಳೂರು ನಗರದಲ್ಲಿ ಅಷ್ಟೇಕೆ ಇಡೀ ಕರ್ನಾಟಕದಲ್ಲೇ ವಿದ್ಯಾರ್ಥಿಗಳಿಗೆ ಅವರ ಮಾತಾ ಪಿತೃಗಳಿಗೆ ಸಡಗರವ ಸುದ್ದಿಯೋ ಸುದ್ದಿ. ಅದೇನೆಂದರೆ ಎಸ್. ಎಸ್. ಎಲ್. ಸಿ. ಮತ್ತು ಪಿ. ಯು. ಸಿ. ಪರೀಕ್ಷೆಗಳ ಫಲಿತಾಂಶ, ರ್‍ಯಾಂಕ್ ವಿಜೇತರ ಪಟ್ಟಿ ಪ್ರಕಟಣೆ. ಈ ಒಂದು ಸಡಗರದಲ್ಲಿ ನಮ್ಮ ಶೇಷಾದ್ರಿಪುರಂ ವಿದ್ಯಾಸಂಸ್ಥೆಯೂ ಸೇರುತ್ತದೆ. ಶೇಕಡಾ 90-95 ಫಲಿತಾಂಶ ಎರಡು ಮೂರು ರ್‍ಯಾಂಕ್‌ಗಳು ಅದರಲ್ಲಿ ಪ್ರಥಮ ಶ್ರೇಣಿಯ ಪಾಸುಗಳ ಸುರಿಮಳೆ. ಈ ಪ್ರಗತಿಗೆ ಕಾರಣರಾದವರೆಂದರೆ ಶ್ರೇಷ್ಠ ದರ್ಜೆಯ ಬೋಧಕರು, ಶಿಕ್ಷಣವೇತ್ತರೂ ಮತ್ತು ಉತ್ತಮ ಆಡಳಿತಗಾರರು ಎಲ್ಲರೂ ಸೇರಿದ್ದಾರೆ. ಇಡೀ ಶೇಷಾದ್ರಿಪುರಂ ವಿದ್ಯಾ ಸಂಸ್ಥೆಯ ಮಹಾಶಿಲ್ಪಿಗಳಾದ ಶ್ರೀಮಾನ್ ಕೊಡಿಗೇಹಳ್ಳಿ ಚಿಕ್ಕಣ್ಣ ಪುಟ್ಟನರಸಯ್ಯ ನವರ ದಕ್ಷ ಆಡಳಿತ, ಸೇವೆ ಹಾಗೂ ಪ್ರೋತ್ಸಾಹವೇ ಮುಖ್ಯ ಕಾರಣವಾಗಿದೆ.

ಶ್ರೀಮಾನ್ ಕೆ. ಸಿ. ಪುಟ್ಟನರಸಯ್ಯನವರು ವ್ಯಕ್ತಿ ಅಲ್ಲ ಶಕ್ತಿ ಆಗಿದ್ದಾರೆ. ಇವರು ಸೇವಾ ನಿಷ್ಠರಲ್ಲದೆ ವಿಶೇಷ ರೀತಿಯ ಸಾಹಿತ್ಯ ಪ್ರೇಮಿಗಳಾಗಿದ್ದಾರೆ. ಇವರ ಅದಮ್ಯ ಚೇತನ ಜೀವನದ ಎಲ್ಲಾ ಕ್ಷೇತ್ರಗಳ ಅನುಭವ ವ್ಯವಹಾರ ಚಾಣಾಕ್ಷತನ ದಕ್ಷತೆಯ ಜಾಣತನಗಳಿಂದ ಬೆಂಗಳೂರು ಮತ್ತು ಯಲಹಂಕಗಳಲ್ಲಿ ನಮ್ಮ ಶೇಷಾದ್ರಿಪುರಂ ವಿದ್ಯಾ ಸಂಸ್ಥೆ ಹೆಮ್ಮರವಾಗಿ ಬೆಳೆಯಲು ಕಾರಣರಾಗಿದ್ದಾರೆ. ಇವರು ಮಹಾ ದೈವ ಭಕ್ತರೂ ಮಾನವೀಯ ಪ್ರೇಮಿಗಳು ಮತ್ತು ಮಹಾ ಕರ್ಮಯೋಗಿಗಳಾಗಿದ್ದಾರೆ. ಭಕ್ತಿಭಂಡಾರಿ ಬಸವಣ್ಣನವರ ಕಾಯಕವೇ ಕೈಲಾಸವೆಂಬ ತತ್ವಾನುಸಾರ ಕರ್ತವ್ಯದ ತಜಸ್ವಿಗಳಾಗಿದ್ದಾರೆ. ಇವರು ಶಿಸ್ತಿನ ಸಿಪಾಯಿಗಳೂ ಹೌದು, ಸಂಯಮ ಶೀಲರೂ ಹೌದು. ಇವರಿಗೆ ಈಗ 81 ವರ್ಷಗಳು ತುಂಬಿವೆ. ಭಗವಂತನು ಇವರಿಗೆ ಪೂರ್ಣ ಆರೋಗ್ಯ ಆಯುಸ್ಸುಗಳನ್ನು ಕೊಟ್ಟು ಶತಾಯುಷಿಗಳಾಗಿ ಬಾಳಿ ನಮ್ಮೆಲ್ಲರ ಹೃನ್ಮನ ಗಳಲ್ಲಿ ಸ್ಥಿರಸ್ಥಾಯಿಯಾಗಿ ನಿಲ್ಲಲೆಂದು ಹಾರೈಸೋಣ. ಪೂಜ್ಯ ಕೆ. ಸಿ. ಪುಟ್ಟನರಸಯ್ಯ ನವರಿಗೆ ನನ್ನ ನೂರೊಂದು ನಮನಗಳು.

# ನನ್ನ ಆತ್ಮೀಯ ಅಭಿಮಾನೀ ಬಂಧು

ಬಿ. ಗಂಗಣ್ಣ

"ಇತರರಿಗಾಗಿ ಬದುಕಿರುವವರು ಮಾತ್ರ ಬದುಕಿರುತ್ತಾರೆ. ತಮಗಾಗಿಯೇ ಬದುಕಿರುವವರು ಬದುಕಿಯೂ ಸತ್ತಂತೆ" ಎಂದು ಸ್ವಾಮಿ ವಿವೇಕನಂದರು ಹೇಳಿದ್ದಾರೆ.

ಕರ್ನಾಟಕ ಸರ್ಕಾರದ ಗೌರವಾನ್ವಿತ, ನಿಷ್ಠಾವಂತ, ನಿಸ್ವಾರ್ಥ ಕಂದಾಯ ಇಲಾಖೆಯ ನಿವೃತ್ತ ಅಧೀನ ಕಾರ್ಯದರ್ಶಿಗಳೂ ಮತ್ತು ಹಿರಿಯ ಸಮಾಜ ಸೇವಕರೂ ಆದ ಮತ್ತು ಅತ್ಯುನ್ನತ ವಿದ್ಯಾದಾನಿಗಳೂ ಆಗಿರುವ ಸನ್ಮಾನ್ಯ ಕೆ. ಸಿ. ಪುಟ್ಟನರಸಯ್ಯನವರ ಅಭಿನಂದನ ಸಮಾರಂಭವನ್ನು ಅವರ ಅಪಾರ ಸಂಖ್ಯೆಯ ಅಭಿಮಾನಿಗಳು ವ್ಯವಸ್ಥೆಗೊಳಿಸಿರುವುದು ನನಗೆ ಅಪಾರ ಸಂತೋಷ ಉಂಟು ಮಾಡಿದೆ. ಇದು ಇವರ ನಿಷ್ಕಾಮ ಕರ್ಮಕ್ಕೆ ಸಂದ ಗೌರವವಾಗಿದೆ. "ಕಾಯಕವೆ ಕೈಲಾಸ" ಮತ್ತು ಪರೋಪಕಾರಾರ್ಥ ಶರೀರಂ ಇದಂ" ಎಂಬಂತೆ ಬಾಳಿದ್ದಾರೆ.

ನನ್ನ ಮತ್ತು ಅವರ ಖಾಸಗೀ ಜೀವನದಲ್ಲಿ ನನ್ನನ್ನು ಅವರ ಕುಟುಂಬದ ಸದಸ್ಯನನ್ನಾಗಿ ಪರಿಗಣಿಸಿಕೊಂಡು ಅವರ ಸಲಹೆ ಸಹಕಾರಗಳ ಅಗತ್ಯ ಬಿದ್ದಾಗ ಉತ್ತಮ ರೀತಿಯ ಹಿತಚಿಂತಕರಾಗಿಯೂ, ಮಾರ್ಗದರ್ಶಿಗಳಾಗಿಯೂ ನಡೆದು ಕೊಳ್ಳುತ್ತಿರುವುದಕ್ಕೆ ಅವರ ಪೂಜ್ಯ ವ್ಯಕ್ತಿತ್ವವೇ ಕಾರಣ. ಇವರು ಆಡಳಿತ ಕ್ಷೇತ್ರದಲ್ಲಿ ವೈಯಕ್ತಿಕ ಜೀವನದಲ್ಲೂ ಮತ್ತು ಸಾಮಾಜಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಸಲ್ಲಿಸಿರುವ ಗಣನೀಯ ಸೇವೆಗಳು ಅಮರ. ಅವರ ವ್ಯಕ್ತಿತ್ವದ ನೆನಪಿಗೂ ಮತ್ತು ಅವರನ್ನು ಅಭಿನಂದಿಸಲೂ ಅಪಾರ ಸಂಖ್ಯೆಯ ಅವರ ಹಿತೈಷಿಗಳು ಹಮ್ಮಿಕೊಂಡಿರುವ ಕಾರ್ಯಕ್ರಮವು ಅತ್ಯಂತ ಭಾವನಾತ್ಮಕವಾದದ್ದು, ಔಚಿತ್ಯ ಪೂರ್ಣವಾದದ್ದು, ಪ್ರಶಂಶನೀಯವಾದದ್ದು.

ಕೆಲವರಿಗೆ ಹುದ್ದೆಯಿಂದ ಗೌರವದೊರೆತರೆ ಇವರು ಹುದ್ದೆಗೇ ಗೌರವ ತಂದವ ರಾಗಿದ್ದಾರೆ. ಇವರ ಅಭಿನಂದನೆಯಸಮಾರಂಭದ ನೆನಪು ಇತಿಹಾಸದ ಪುಟಗಳಲ್ಲಿ ಚಿರಸ್ಮರಣೀಯವಾಗಿ ಉಳಿದಿರಲೆಂದು ಹಾರೈಸಿ ಭಗವಂತನು ಈ ಪೂಜ್ಯರಿಗೆ ಆಯುರಾರೋಗ್ಯವನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತೇನೆ.

# ಸಾಹಿತ್ಯ ಪ್ರೇಮಿ

ಎಸ್. ನಾಗೇಶರಾವ್

ಸರ್ಕಾರದ ಅಧಿಕಾರಿಗಳು ತಮ್ಮ ಉದ್ಯೋಗದ ಅವಧಿಯಲ್ಲಿ, ತಮಗೆ ವಿಧಾಯಕವಾದ ಕರ್ತವ್ಯಗಳ ನಿರ್ವಹಣೆ, ಸಂಬಳ ಮತ್ತು ಅಧಿಕಾರಸ್ಥಾನಗಳ ಬಡ್ತಿ, ಮಕ್ಕಳ ವಿದ್ಯಾಭ್ಯಾಸ, ವಿರಾಮ ವೇತನ, ಈ ವಿಷಯಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡುತ್ತಾರೆ. ಇನ್ನು ಉದ್ಯೋಗದಿಂದ ನಿವೃತ್ತರಾದ ಮೇಲೆ ಇದ್ದೇ ಇದೆ. ವೃದ್ಧಾಪ್ಯ, ನಿಶ್ಶಕ್ತಿ ನರಗಳ ದೌರ್ಬಲ್ಯ, ರಕ್ತದ ಒತ್ತಡ, ಮಲಬದ್ಧತೆ, ಇವುಗಳ ಬಗೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡುತ್ತಾರೆ. ಇದು ಸ್ವಾಭಾವಿಕ ಮತ್ತು ಸಾಮಾನ್ಯವಾಗಿ ಎಲ್ಲ ಸರ್ಕಾರಿ ನೌಕರರಿಗೂ ಅನ್ವಯಿಸುತ್ತದೆ. ಆದರೆ ಕೆಲವು ಮಂದಿ ಅಧಿಕಾರಿಗಳು ಮಾತ್ರ ತಮ್ಮ ಕರ್ತವ್ಯ ನಿರ್ವಹಣೆ, ಕುಟುಂಬ ರಕ್ಷಣೆಯ ಜತೆಗೆ, ತಾವು ಕೆಲಸ ಮಾಡುತ್ತಿದ್ದ ಪ್ರದೇಶದ ಜನರೊಡನೆ ಪ್ರೀತಿ ವಿಶ್ವಾಸಗಳಿಂದ ನಡೆದುಕೊಂಡು ಅವರ ಕಷ್ಟ ಕಾರ್ಪಣ್ಯಗಳ ಬಗೆಗೆ ಅನುಕಂಪವನ್ನು ತೋರಿ, ಅವರ ಕಷ್ಟ ನಿವಾರಣೆಗಾಗಿ ತಮ್ಮ ಕೈಲಾದ ಸಹಾಯ ಮಾಡುತ್ತಾ ಕ್ರಮೇಣ ಆ ಜನಜೀವನದೊಡನೆ ಬೆರೆತು ಹೋಗುತ್ತಾರೆ. ಅಂತಹ ಅಧಿಕಾರಿಗಳು ಪುಣ್ಯವಂತರು. "ಬೆಲ್ಲ ಸಕ್ಕರೆಯಾಗು ದೀನ ದುರ್ಬಲರಿಂಗೆ ಎಲ್ಲರೊಳಗೊಂದಾಗು" ಎಂಬ ಡಿ.ವಿ.ಜಿ.ಯವರ ನುಡಿಯಂತೆ ಆ ಅಧಿಕಾರಿಗಳು ಎಲ್ಲರೊಳಗೊಂದಾಗಿ ಬಿಡುತ್ತಾರೆ. ಇಂತಹವರನ್ನು ಜನ ಕೃತಜ್ಞತೆಯಿಂದ ಸ್ಮರಿಸಿ ಹರಸುತ್ತಾರೆ. ಇದು ಅವರಿಗೆ ಸರ್ಕಾರದಿಂದ ವಿಧಾಯಕವಾದ ಕರ್ತವ್ಯವೇನೂ ಅಲ್ಲ, ಇದೊಂದು ಬಗೆಯ ಅರ್ಪಣಾ ಮನೋಭಾವ. ಒಂದು ಬಗೆಯ ಚಿತ್ತವೃತ್ತಿ. ಈ ಚಿತ್ತವೃತ್ತಿಯನ್ನು ಚೆನ್ನಾಗಿ ಬೆಳೆಯಿಸಿಕೊಂಡಿದ್ದ ಅಧಿಕಾರಿಗಳಲ್ಲಿ ಶ್ರೀ ಪುಟ್ಟನರಸಯ್ಯನವರು ಒಬ್ಬರು.

ನಾನು ಶ್ರೀ ಪುಟ್ಟನರಸಯ್ಯನವರನ್ನು ನೋಡಿದುದು 1955ರ ಸುಮಾರಿನಲ್ಲಿ. ನಾನು ಕೆಲಸ ಮಾಡುತ್ತಿದ್ದ ಡೆವಲಪ್‌ಮೆಂಟ್ ಇಲಾಖೆಯ ನನ್ನ ಸಹೋದ್ಯೋಗಿಗಳ ಮೂಲಕ ಇವರ ಪರಿಚಯವಾಯಿತು. ಇವರ ನಗೆ ಮುಖ, ಉದಾತ್ತ ಭಾವನೆಗಳು, ಸ್ನೇಹಪರತೆ ಇವು ನನ್ನನ್ನು ಬೇಗನೇ ಇವರಡೆಗೆ ಸೆಳೆದುವು. ಬಹಳ ಬೇಗನೆ ಆತ್ಮೀಯರಾದ ಗೆಳೆಯರಾದೆವು. ಶ್ರೀ ಪುಟ್ಟನರಸಯ್ಯನವರಿಗೆ ಕನ್ನಡ ಸಾಹಿತ್ಯದ ಬಗೆಗೆ

ಅಪರಿಮಿತ ಪ್ರೇಮ. ಅವರು ಕನ್ನಡದ ದಿವ್ಯಕಾವ್ಯಗಳಾದ ತೊರವೆ ರಾಮಾಯಣ, ಭಾಗವತ, ಶ್ರೀ ಕುವೆಂಪುರವರ ಮೇರುಕೃತಿಯಾದ ಶ್ರೀ ರಾಮಾಯಣದರ್ಶನ, ಜೈಮಿನಿ ಭಾರತ, ಸರ್ವಜ್ಞನ ಪದಗಳು, ಕುಮಾರವ್ಯಾಸ ಭಾರತ, ಇವುಗಳನ್ನು ಚನ್ನಾಗಿ ಓದಿಕೊಂಡಿದ್ದರು. ಭೇಟಿಯಾದಾಗಲೆಲ್ಲಾ ಆ ಕಾವ್ಯಗಳ ವಿಚಾರವಾಗಿ ಮಾತನಾಡುತ್ತಿದ್ದೆವು. ಕುಮಾರವ್ಯಾಸ ಭಾರತವೆಂದರೆ ಇವರಿಗೆ ಬಹಳ ಪ್ರೀತಿ. "ವಿರಾಮ ದೊರೆತಾಗಲೆಲ್ಲಾ ಭಾರತವನ್ನು ಓದುತ್ತೇನೆ. ಮನಸ್ಸಿಗೆ ಆನಂದವಾಗುತ್ತದೆ" ಎನ್ನುತ್ತಿದ್ದರು. ಬೇಜಾರಾದಾಗ ನೆರೆಹೊರೆಯ ಮಿತ್ರರನ್ನು ಕರೆದು ಕೂರಿಸಿಕೊಂಡು ಭಾರತವನ್ನು ಓದುತ್ತಿದ್ದರೆಂದೂ ನನಗೆ ತಿಳಿಯಿತು.

ತಮ್ಮ ಸಹಸ್ರಾರು ಕೆಲಸ ಕಾರ್ಯಗಳ ನಡುವೆ ಪುರಸತ್ತು ಮಾಡಿಕೊಂಡು ಕನ್ನಡ ಸಾಹಿತ್ಯ ಗ್ರಂಥಗಳು—ಅದರಲ್ಲೂ ಭಾರತದ ಭಾರತವಾಚನ ಮಾಡಿ ತಮ್ಮ ಸುತ್ತಮುತ್ತಲಿನವರಿಗೆ ಆನಂದವನ್ನು ಕೊಡುತ್ತಿರುವುದು ಸಾಹಿತ್ಯ ಸೇವೆಯಲ್ಲವೆ? ಇಂತಹ ಸಾಹಿತ್ಯ ಸೇವಕರಿಂದಲೇ ನಮ್ಮ ಕಾರ್ಯಗಳು ಜನರಿಗೆ ಮುಟ್ಟಿ ಜನಜೀವನವು ತಿಳಿಯಾಗುತ್ತಿದೆ. ಇವರ ಸಾಹಿತ್ಯ ಪ್ರೇಮವೇ ವ್ಯಕ್ತಿತ್ವಕ್ಕೆ ಮೆರಗು ಕೊಟ್ಟಿದೆ. ಇದರಿಂದಲೇ ಇವರು ಇಷ್ಟು ಜನಾದರಣೀಯರಾಗಿರುತ್ತಾರೆಂದು ನನ್ನ ದೃಢವಾದ ನಂಬಿಕೆ. ಇಂತಹ ದೈವಭಕ್ತ, ಸದ್ದುಗದ್ದಲವಿಲ್ಲದೆ ದುಡಿಯುವ ನಿಸ್ವಾರ್ಥಿ ಸತ್ಯನಿಷ್ಠ, ಸಮಾಜ ಸೇವಕ ನಮ್ಮೊಡನಿರುವುದು ನಮಗೆ ದೊಡ್ಡ ಹೆಮ್ಮೆ ಮಾತ್ರವೇ ಅಲ್ಲ ನಾಡಿನ ಸುದೈವ. ಇವರ ಸಾಹಿತ್ಯ ಪ್ರೇಮ, ಇವರ ದೈವಭಕ್ತಿ ಇವರನ್ನು ಜನತೆಗೆ ಇನ್ನೂ ಹೆಚ್ಚಿನ ಸೇವೆಯನ್ನು ಮಾಡಲು ಪ್ರೇರೇಪಿಸುತ್ತಲೇ ಇರುತ್ತದೆ. ಇಂತಹ ಸಾಹಿತ್ಯ ಪ್ರೇಮಿ ಮತ್ತು ಪ್ರಜಾಸೇವಕ ವ್ಯಕ್ತಿಯ ಸ್ನೇಹವು ನನಗೆ ಲಭ್ಯವಾದುದು ನನ್ನ ಸುಕೃತವೆಂದೇ ಭಾವಿಸಿರುತ್ತೇನೆ.

ಒಳ್ಳೆಯ ಸಾಹಿತ್ಯಪ್ರೇಮಿ ಸ್ನೇಹಪರ ಮತ್ತು ವೀರನಾರಾಯಣನ ಭಕ್ತರಾದ ಶ್ರೀ ಪುಟ್ಟನರಸಯ್ಯನವರಿಗೂ ಅವರ ಕುಟುಂಬ ವರ್ಗದವರಿಗೂ ಆಯುರಾರೋಗ್ಯವನ್ನು ದಯಪಾಲಿಸಲಿ ಮತ್ತು ಇನ್ನೂ ಹಲವಾರು ಕಾಲ ಇವರ ನಿಸ್ವಾರ್ಥಪರವಾದ ಸೇವೆಯು ನಾಡಿನ ಜನತೆಗೆ ದೊರೆಯುತ್ತಿರಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

# ಸವಿ ನೆನಪು

ಎಂ. ಟಿ. ಜಯಣ್ಣ

ಹಳೆಯ ನೆನಪೊಂದು ನೆನೆದಾಗಲೆಲ್ಲ ಸಂತೋಷ ತರುತ್ತದೆ. ನಾನಿನ್ನೂ ನಿಕ್ಕರ್ ಹಾಕುವ ಅಭ್ಯಾಸ ಪ್ರಾರಂಭವಾಗಿ ಕೆಲವೇ ವರ್ಷಗಳಾಗಿದ್ದುವು. ಮಗು ಎನ್ನುವಂತಿಲ್ಲ ಹುಡುಗ ಎಂದು ಒಪ್ಪುವಂತಿಲ್ಲ. ಅಂತಹ ಸಂದಿಗ್ಧ ವಯಸ್ಸು ! ನಮ್ಮೂರಿಗೆ ಒಬ್ಬ ಅಧಿಕಾರಿ ಆಗಾಗ್ಗೆ ಬರುತ್ತಿದ್ದರು. ಹತ್ತಿ ಬಟ್ಟೆಯ ಸೂಟು ಮತ್ತು ಹ್ಯಾಟು ಧರಿಸುತ್ತಿದ್ದರು. ತೆಳುವಾದ ಸಾಧಾರಣ ಎತ್ತರ. ಸ್ವರವೂ ಸ್ವಲ್ಪ ತೆಳುವೆ. ತಾನೊಬ್ಬ ಅಧಿಕಾರಿ ಎಂಬ ಅಹಂಕಾರ ಸುತರಾಂ ಇರಲಿಲ್ಲ. ಯಾವಾಗಲೂ ಬೈಸಿಕಲ್ ಸವಾರಿ. ಆಗಿನ ಕಾಲಕ್ಕೆ ಅದೇ ಬಹಳ ಅಪರೂಪದ ವಾಹನ. ಅವರು ಸೈಕಲ್ ಹತ್ತುವುದು ಮೆಲ್ಲಗೆ ಮುಂದೆ ಸಾಗುವುದು ಇಳಿಯುತ್ತಿದ್ದ ರೀತಿ ಈಗಲೂ ನೆನೆದು ಆನಂದಿಸಬಲ್ಲೆನೇ ಹೊರತು ವಿವರಿಸಲು ತಿಳಿಯೆ. ಊರಿಗೆ ಬಂದರೆ ಒಂದು ಕಡೆ ಕೂತು ಬೇಕಾದವರನ್ನು ಕರೆಸುತ್ತಿರಲಿಲ್ಲ. ಬೀದಿ ಬೀದಿಗೆ ಹೋಗಿ ಬೇಕಾದವರನ್ನು ಕಂಡು ಬಂದ ಕೆಲಸ ಮುಗಿಸುತ್ತಿದ್ದುದಷ್ಟೆ ಅಲ್ಲ ಉಳಿದವರನ್ನ "ಏನು ತಿಮ್ಮಪ್ಪ ಚನ್ನಾಗಿದ್ದೀಯ ?" "ಏನು ರಂಗಣ್ಣ ಬಿತ್ತನೆ ಎಲ್ಲಾ ಆಯ್ತೊ ?" "ಏನು ಚಿಕ್ಕಣ್ಣಪ್ಪ ಮನೆಯವರ ಆರೋಗ್ಯ ಹೆಂಗಿದೆ ?" ಮುಂತಾಗಿ ಇಡೀ ಗ್ರಾಮವನ್ನೆ ಅದರ ಕಷ್ಟ ಸುಖವನ್ನೆ ವಿಚಾರಿಸುತ್ತಿದ್ದರು. ಅವರು ಊರಿಗೆ ಬಂದರೆ ಊರಿಗೆ ಒಬ್ಬ ನೆಂಟ ಬಂದಷ್ಟು ಆನಂದ. ಅನೇಕರು ಅವರನ್ನು ಊಟಕ್ಕೆ ಬರಬೇಕೆಂದು ಒತ್ತಾಯಿಸುತ್ತಿದ್ದರು. ಬಡವ ಬಲ್ಲಿದರೆನ್ನದೆ ಹೋಗಿ ಒಂದೆಡೆ ಊಟ ಮಾಡಿ ಬರುತ್ತಿದ್ದರು. ಅದೆಷ್ಟೋ ಜನಕ್ಕೆ ಅದೆಂತದೊ ಉಪಕಾರವನ್ನು ಮಾಡಿದ ಪುಣ್ಯಾತ್ಮರು. ಆ ಕಾಲದವರು ಇಂದಿಗೂ ಅವರನ್ನು ನೆನೆಯುತ್ತಾರೆ. ಒಮ್ಮೆ ಅವರಿಗೆ ವರ್ಗವಾಯಿತು. ಹೋಬಳಿ ಗಣ್ಯರೆಲ್ಲಾ ಸೇರಿ ಅಮಲ್ದಾರ ಸಾಹೇಬರಲ್ಲಿ ವಿನಂತಿಸಿ ರದ್ದು ಮಾಡಿಸಿದರು. ಮತ್ತೊಮ್ಮೆ ವರ್ಗವಾಗಿ ಹೋಗಲೇಬೇಕಾದಾಗ ಇಡೀ ಹೋಬಳಿಯಲ್ಲೆಲ್ಲ ಅದೇ ಮಾತು. ಮಗಳನ್ನು ಕಳುಹಿಸಿದ ತೌರಿನಂತೆ ಜನ ಮರುಗಿದರು. ಅವರು ನಿವೃತ್ತಿಯಾದಾಗ ನಮ್ಮ ಕಡೆ ಅನೇಕರು ಅಯ್ಯೊ ರಿಟೈರ್ಡ್ ಆಗಿಬಿಟ್ಟರಂತೆ ಎಂದು ನಿಟ್ಟುಸಿರುಬಿಟ್ಟರು.

ಅವರು ಊರಿಗೆ ಬಂದರೆಂದರೆ ನನ್ನಂಥ ಮಕ್ಕಳಿಗೆ ಕಿಂದರಜೋಗಿ ಬಂದಂತೆ. ನಮ್ಮ ಮನೆಗೂ ಬರುತ್ತಿದ್ದರು. ನಮ್ಮ ತಂದೆಗೆ ಅವರೆಂದರೆ ಪಂಚಪ್ರಾಣ. ಅವರು

ಊರಿನಿಂದ ಹೊರಡುವಾಗ ಮಕ್ಕಳ ದಂಡು ಕಿಂದರಜೋಗಿಯ ಹಿಂದೆ ಸಾಗುತ್ತಿತ್ತು. ಅವರಲ್ಲಿ ಕೆಲವರಿಗಾದರು ಒಂದೊಂದು ಮೂರು ಕಾಸಿನ ದಮ್ಮಡಿ ಕೊಡುತ್ತಿದ್ದರು. ಉಳಿದವರಿಗೆ ಮತ್ತೊಂದು ಸಾರಿ ಬಂದಾಗ ಕೊಡುತ್ತೇನೆಂದು ಸಂತೈಸುತ್ತಿದ್ದರು. ಬೈಸಿಕಲ್ ಹತ್ತಿ ಹೊರಟರೆ ಅವರ ಕ್ಯಾರಿಯರ್ ಹಿಡಿದು ಕೆಲವರು ಮತ್ತೆ ಕೆಲವರು ಹಿಂದೆ ಅಷ್ಟು ದೂರದವರೆಗೂ ಹೋಗುತ್ತಿದ್ದೆವು. ಅಷ್ಟು ದೂರ ಹೋದ ಮೇಲೆ "ಸಾಕು ಹೋಗ್ರೊ" ಎಂದು ಹೇಳಿ ಹಿಂದಿರುಗಿಸುತ್ತಿದ್ದರು. ಅವರ ನೆನಪೆ ಒಂದು ಆನಂದ. ಅವರೆ ನಮ್ಮ ನೆಚ್ಚಿನ ಶ್ರೀ ಕೆ. ಸಿ. ಪುಟ್ಟನರಸಯ್ಯನವರು. ನಮ್ಮ ಹೋಬಳಿಯಲ್ಲಿ ಬಹಳ ಕಾಲ ರೆವಿನ್ಯೂ ಇನ್ಸ್‌ಪೆಕ್ಟರಾಗಿದ್ದರು.

ಸುಮಾರು ನಾಲ್ಕು ದಶಕಗಳ ನಂತರ ಇತ್ತೀಚಿಗೆ ಅವರನ್ನು ಭೇಟಿ ಮಾಡುವ ಅವಕಾಶ ದೊರೆಯಿತು. ಅಂದು ಹುಡುಗನಾಗಿದ್ದ ನಾನೆ ಇಂದು ನಿವೃತ್ತನಾಗಿ ತಾತ ಅನಿಸಿಕೊಳ್ಳುವಂತಹ ಸ್ಥಿತಿ ತಲುಪಿದ್ದೇನೆ. ಆದರೆ ಅವರು ಇಂದಿಗೂ ಬಹುಮಟ್ಟಿಗೆ ಹಾಗೇ ಇರುವುದನ್ನ ಕಂಡು ಆಶ್ಚರ್ಯವೂ ಆನಂದವೂ ಆಯಿತು. ಅದು ಅವರ ಸ್ವಚ್ಛ ಜೀವನದ ಸಂಕೇತ.

ಭಗವಂತ ಇನ್ನೂ ಸೂರ್‍ಕಾಲ ಅವರನ್ನ ಹಾಗೆ ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ. ನಾನು ಪರಿಚಯ ಮಾಡಿಕೊಂಡ ಕೂಡಲೆ ನಮ್ಮ ತಂದೆ ತಾಯಿ, ಸಹೋದರರು ಗ್ರಾಮದ ಮತ್ತಿತರ ಕೆಲವರ ಹೆಸರು ಹೇಳುತ್ತ ಕ್ಷೇಮ ಸಮಾಚಾರ ವಿಚಾರಿಸಿದರು.

"ನಾನು ಮತ್ತೆ ಈ ದಾರಿಯಲ್ಲಿ ಬರುತ್ತೇನೊ ಇಲ್ಲವೊ ತಿಳಿಯೆ. ಆದುದರಿಂದ ಏನಾದರು ಒಳ್ಳೆಯ ಕೆಲಸ ಮಾಡುವುದಿದ್ದರೆ ಅದನ್ನ ಇಂದೇ ಮಾಡಿ ಮುಗಿಸಬೇಕು" ಎಂಬ ಒಂದು ಆರ್ಯೋಕ್ತಿ ಇದೆ. ಹಿರಿಯರು, ಪೂಜ್ಯರು, ಕರ್ಮಯೋಗಿಗಳೂ ಆದ ನಮ್ಮ ನೆಚ್ಚಿನ ಶ್ರೀ ಕೆ. ಸಿ. ಪುಟ್ಟನರಸಯ್ಯನವರು ಈ ಸುಭಾಷಿತದ ಗುಂಪಿಗೆ ಸೇರಿದವರು. ಅವರ ಆಯುರಾರೋಗ್ಯಕ್ಕೆ ಭಗವಂತನನ್ನು ಪ್ರಾರ್ಥಿಸುತ್ತೇನೆ.



# ನಮ್ಮ ಲೇಖಕರು

**ಶ್ರೀ ಕೆ. ಸಿ. ಪುಟ್ಟನರಸಯ್ಯನವರು**
172, 1ನೇ ಮುಖ್ಯರಸ್ತೆ, ಶೇಷಾದ್ರಿಪುರಂ, ಬೆಂಗಳೂರು–20

**ಡಾ॥ ಪಿ. ವಿ. ನಾರಾಯಣ**
'ತಂಗಾಳಿ', 30, ಆರ್.ಬಿ.ಐ. ಕಾಲೊನಿ
ಜಯನಗರ 3ನೇ ಬ್ಲಾಕ್ (ಪೂರ್ವ)
ಬೆಂಗಳೂರು–11

**ಡಾ॥ ಎಚ್. ಎಲ್. ನಾಗೇಗೌಡ**
8, ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನದ ರಸ್ತೆ
5ನೇ ಕ್ರಾಸ್, 4ನೇ ಬ್ಲಾಕ್,
ಕೆ.ಪಿ. (ಪಶ್ಚಿಮ), ಬೆಂಗಳೂರು–20

**ಡಾ॥ ಬಿ. ಎಸ್. ರಾಮಪ್ರಸಾದ್**
41, 6ನೇ ತಿರುವು
ಪ್ರಶಾಂತನಗರ
ಬೆಂಗಳೂರು–79

**ಡಾ॥ ಜಿ. ಎಸ್. ಭಟ್ಟ**
ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ
ಮೈಸೂರು–6

**ಡಾ॥ ವೈ. ಸಿ. ಭಾನುಮತಿ**
ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ
ಮೈಸೂರು–6

**ಡಾ॥ ಜಯಲಕ್ಷ್ಮಿ ಸೀತಾಪುರ**
ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ
ಮೈಸೂರು–6

**ಡಾ॥ಕೆ. ಎಲ್. ಗೋಪಾಲಕೃಷ್ಣಯ್ಯ**
2273, 22ನೇ ಕ್ರಾಸ್
ಬನಶಂಕರಿ ಎರಡನೇ ಹಂತ
ಬೆಂಗಳೂರು–70

**ಶ್ರೀಮತಿ ಜಯಾರಾಜಶೇಖರ್**
33, 15ನೇ ಕ್ರಾಸ್
3ನೇ ಬ್ಲಾಕ್, ಜಯನಗರ
ಬೆಂಗಳೂರು–11

**ಡಾ॥ ಜೀ. ಶಂ. ಪರಮಶಿವಯ್ಯ**
ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ
ಮೈಸೂರು–6

**ಡಾ॥ ಸಿ. ಪಿ. ಕೃಷ್ಣಕುಮಾರ್**
2295/19, 'ಭಾರತಿ', 6ನೇ ಕ್ರಾಸ್
2ನೇ ಮೇನ್, ವಿನಾಯಕನಗರ
ಮೈಸೂರು–12

**ಡಾ|| ಕೆ. ವಿ. ಶ್ರೀನಿವಾಸಮೂರ್ತಿ**
ಕನ್ನಡ ವಿಭಾಗ
ವಿಜಯ ಕಾಲೇಜು, ಬೆಂಗಳೂರು–4

**ಡಾ|| ಎಸ್. ವಿದ್ಯಾಶಂಕರ್**
ಪ್ರಿಯದರ್ಶಿನಿ ಪ್ರಕಾಶನ
138, 17ನೇ 'ಸಿ' ಮೇನ್
ವಿಜಯನಗರ ಎರಡನೇ ಹಂತ
ಬೆಂಗಳೂರು–40

**ಡಾ|| ಬಿ. ಎಸ್. ಸ್ವಾಮಿ**
'ಮಾದೇಶ್ವರ ನಿಲಯ'
7ನೇ 'ಎ' ಮೇನ್, ವಿಜಯನಗರ
ಎರಡನೇ ಹಂತ, ಬೆಂಗಳೂರು–40

**ಪ್ರೊ|| ಡಿ. ಲಿಂಗಯ್ಯ**
690, 1ನೇ 'ಬಿ' ಮುಖ್ಯರಸ್ತೆ
7ನೇ ಬ್ಲಾಕ್, ಬನಶಂಕರಿ 3ನೇ ಘಟ್ಟ
ಬೆಂಗಳೂರು–85

**ಡಾ|| ಉಷಾಕಿರಣ್**
ಡಿ–15, ಕೃಷಿ ವಿಶ್ವವಿದ್ಯಾಲಯ ವಸತಿಗೃಹ
ಹೆಬ್ಬಾಳ, ಬೆಂಗಳೂರು–24

**ಡಾ|| ಡಿ. ಕೆ. ರಾಜೇಂದ್ರ**
ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ, ಮೈಸೂರು–6

**ಪ್ರೊ|| ಕೆ. ಎಸ್. ನಾರಾಯಣಾಚಾರ್**
ವೇದವಿದ್ಯಾ ಪ್ರಕಾಶನ
"ಮಾಲೋಲ" ರೈಲ್ವೆ ಗೂಡ್ಸ್ ಷಡ್‌ಸ
ಹಿಂಭಾಗ, ಕಲ್ಯಾಣನಗರ,
ಧಾರವಾಡ–7

**ಡಾ|| ಎಂ. ಎಂ. ಕಲಬುರ್ಗಿ**
'ಸೌಜನ್ಯ'
ಕಲ್ಯಾಣನಗರ, ಧಾರವಾಡ–7

**ಡಾ|| ಜಿ. ಎಸ್ ಶಿವರುದ್ರಪ್ಪ**
867, 'ಚೈತ್ರ', 18ನೇ ಮೇನ್
ಬನಶಂಕರಿ ಎರಡನೇ ಹಂತ
ಬೆಂಗಳೂರು–70

**ಡಾ|| ಅಂಬಳಿಕೆ ಹಿರಿಯಣ್ಣ**
ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ, ಮೈಸೂರು–6

**ಡಾ|| ಜಿ. ಎಸ್. ಆಮೂರ**
'ಜಾನಕಿ', ನವೋದಯನಗರ
ಧಾರವಾಡ–3

**ಡಾ|| ನರಹಳ್ಳಿ ಬಾಲಸುಬ್ರಹ್ಮಣ್ಯ**
76, 1ನೇ ಕ್ರಾಸ್, ನಾಗಪ್ಪ ಬ್ಲಾಕ್
ಶ್ರೀರಾಮಪುರಂ, ಬೆಂಗಳೂರು–21

**ಡಾ|| ಕೃಷ್ಣಭಟ್ ಅರ್ತಿಕಜೆ**
ಮುಖ್ಯಸ್ಥರು, ಕನ್ನಡ ವಿಭಾಗ
ಮದ್ರಾಸ್ ವಿಶ್ವವಿದ್ಯಾಲಯ
ಮರೀನಾ, ಮದ್ರಾಸ್–5

**ಡಾ|| ವೀರಣ್ಣ ರಾಜೂರ**
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–3

**ಡಾ|| ಕೆ. ಸುಬ್ರಹ್ಮಣ್ಯಭಟ್ಟ**
ಕನ್ನಡ ವಿಭಾಗ
ಮಂಗಳೂರು ಗಂಗೋತ್ರಿ
ಮಂಗಳೂರು–99

**ಶ್ರೀ ಜಿ. ನಾರಾಯಣ**
ಅಧ್ಯಕ್ಷರು
ಕನ್ನಡ ಅಭಿವೃದ್ಧಿ ಪ್ರಾಧಿಕಾರ
ವಿಧಾನಸೌಧ, ಬೆಂಗಳೂರು–1

**ಶ್ರೀ ಎಸ್. ಎಂ. ಕೆ. ಸೋಗಿ**
ಮಾಜಿ ವಿದ್ಯಾಮಂತ್ರಿಗಳು
664, 10ನೇ ಕ್ರಾಸ್
ವೆಸ್ಟ್ ಆಫ್ ಕಾರ್ಡ್ ರೋಡ್
ರಾಜಾಜಿನಗರ 5ನೇ ಹಂತ
ಬೆಂಗಳೂರು–10

**ಶ್ರೀ ಎಂ. ಶ್ರೀರಾಮಯ್ಯ**
2744, ಮೊದಲನೆ ಮಹಡಿ
12ನೇ ಮುಖ್ಯರಸ್ತೆ
'ಇ' ಬ್ಲಾಕ್ 2ನೇ ಹಂತ, ರಾಜಾಜಿನಗರ
ಬೆಂಗಳೂರು–10

**ಶ್ರೀ ಎಂ. ಗೋಪಾಲಕೃಷ್ಣ**
63/ಬಿ, 1ನೇ ಬ್ಲಾಕ್
ಟಿ. ಆರ್. ನಗರ, ಬೆಂಗಳೂರು–18

**ಶ್ರೀ ಡಬ್ಲ್ಯು. ಹೆಚ್. ಹನುಮಂತಪ್ಪ**
17, ಕನ್ನಿಂಗ್‌ಹ್ಯಾಮ್ ರಸ್ತೆ
ಬೆಂಗಳೂರು–52

**ಶ್ರೀ ಡಬ್ಲ್ಯು. ಹೆಚ್. ಪುಟ್ಟಯ್ಯ**
30/ಎ, 8ನೇ 'ಎ' ಮುಖ್ಯರಸ್ತೆ
ರಾಜಮಹಲ್ ವಿಲಾಸ್ ಬಡಾವಣೆ
ಬೆಂಗಳೂರು–80

**ಶ್ರೀ ಅನ್ನದಾನಯ್ಯ ಪುರಾಣಿಕ**
'ಶ್ರೀ ಮೃತ್ಯುಂಜಯ ಕೃಪಾ'
19(298/ಎ–16), 38ನೇ ಕ್ರಾಸ್
10ನೇ ಮೇನ್, 5ನೇ ಬ್ಲಾಕ್
ಜಯನಗರ, ಬೆಂಗಳೂರು–41

**ಶ್ರೀ ಎಲ್. ರಂಗೇಗೌಡ**
791, 'ರಾಮರಸಾಯನ'
2ನೇ 'ಇ' ಕ್ರಾಸ್, 8ನೇ ಮೆಯಿನ್
3ನೇ ಹಂತ, 9ನೇ ಬ್ಲಾಕ್
ಬಸವೇಶ್ವರನಗರ
ಬೆಂಗಳೂರು–79

**ಶ್ರೀ ಬಿ. ಗಂಗಣ್ಣ**
ಮಾಜಿ ಶಾಸಕರು
ಬೆಳ್ಳಾರ
ಚಿಕ್ಕನಾಯಕನಹಳ್ಳಿ ತಾಲ್ಲೂಕು

**ಶ್ರೀ ಎಸ್. ನಾಗೇಶ್‌ರಾವ್**
ಅಧೀನ ಕಾರ್ಯದರ್ಶಿಗಳು (ನಿವೃತ್ತ)
ಎನ್. ಆರ್. ಕಾಲೊನಿ
ಬೆಂಗಳೂರು–19

**ಶ್ರೀ ಎಂ. ಟಿ. ಜಯಣ್ಣ**
ರಾಷ್ಟ್ರ ಪ್ರಶಸ್ತಿ ವಿಜೇತರು
ಸಹ ಸಂಪಾದಕರು 'ಆದಿಚುಂಚನಗಿರಿ'
ಸಿ.ಎ. 17, 1ಬಿ ಮುಖ್ಯರಸ್ತೆ
ವಿಜಯನಗರ, ಬೆಂಗಳೂರು–40

ಹಳೆಯ ಮೈಸೂರು ಸಂಸ್ಥಾನದ ರೆವಿನ್ಯೂ ಇಲಾಖೆಯಲ್
ದಕ್ಷ ಮತ್ತು ಪ್ರಾಮಾಣಿಕರೆಂದು ಹೆಸರು ಮಾಡಿದ
ಮೊದಲ ಮನ್ನಣೆಯ ಅಧಿಕಾರಿಗಳ ಸಾಲಿನಲ್
ಶ್ರೀ ಕೆ.ಸಿ.ಪುಟ್ಟನರಸಯ್ಯನವರು ಎದ್ದು ಕಾಣುತ್ತಾ
ಮೇಲಧಿಕಾರಿಗಳ ಪ್ರಶಂಸೆ, ಸಹೋದ್ಯೋಗಿಗಳ ವಿಶ್ವಾ
ಮತ್ತು ಗ್ರಾಮ ಬಂಧುಗಳ ಮನ್ನಣೆಗಳಿಸಿ ದುಡಿ
ಶ್ರೀಪುಟ್ಟನರಸಯ್ಯನವರು ಸರ್ಕಾರೀ ಸೇವೆಯ ಆದರ್
ಪ್ರತಿನಿಧಿ. ವಹಿಸಿಕೊಂಡ ಕೆಲಸ ತೃಣವಿರಲಿ, ಘನವಿರ
ಅದನ್ನು ಮನಮುಟ್ಟಿ ಶ್ರದ್ಧೆ ಮತ್ತು ಆಸಕ್ತಿಯಿಂದ ಮಾ
ಮುಗಿಸುವ ಅವರ ವೃತ್ತಿ ಪ್ರೇಮ ಅನನ್ಯವಾದುದು
ಅಪರೂಪವಾದುದು.

ಬದುಕಿನಲ್ಲಿ ಒದಗಿಬಂದ ಸೇವಾ ಅವಕಾಶವನ್
ಒಂದು ಪುಣ್ಯ ವಿಶೇಷವೆಂದು ಸ್ವೀಕರಿಸಿ, ಗ್ರಾಮ ಬಂಧುಗಳಿ
ತಮ್ಮ ಕೈಲಾದ ನೆರವು, ನಿರ್ದೇಶನವನ್ನು ಶಕ್ತಿ ಮೀ
ನೀಡಿದ ಅವರ ಜನ್ಮ ಸಾರ್ಥಕವಾಗಿದೆ, ಬದುಕ
ಆದರ್ಶವಾಗಿದೆ. ಈ ಸಾರ್ಥಕ್ಯವೇ ಅವರನ್ನು ಈ ಇ
ವಯಸ್ಸಿನಲ್ಲೂ ನೆಮ್ಮದಿ ಮತ್ತು ಲವಲವಿಕೆಯಿಂ
ಇಟ್ಟಿರುವುದರ ರಹಸ್ಯ.

■ ಸಿ.ಕೆ.ಪರಶುರಾಮಯ





ವ್ಯಕ್ತಿಗೆ ಅಧಿಕಾರ ಬರುತ್ತೆ, ಹೋಗುತ್ತೆ. ಅಧಿಕಾರ ಹೋದ ಮೇಲೂ ಎಲ್ಲರ ಹೃದಯದಲ್ಲೂ ಯಾರು ಉಳಿಯುತ್ತಾರೊ ಅವರು ಶ್ರೇಷ್ಠರು. ಅಂತಹ ಶ್ರೇಷ್ಠ ಪುರುಷರತ್ನಗಳಲ್ಲಿ ಶ್ರೀಯುತ ಕೆ.ಸಿ.ಪುಟ್ಟನರಸಯ್ಯನವರು ಒಬ್ಬರು.

ಇವರನ್ನು ದಕ್ಷ ಅಧಿಕಾರಿ ಎನ್ನಲೆ, ವಿಖ್ಯಾತ ಶಿಕ್ಷಣ ತಜ್ಞ ಎನ್ನಲೆ, ಪ್ರಾಮಾಣಿಕ ಬ್ಯಾಂಕ್ ವ್ಯವಸ್ಥಾಪಕ ಎನ್ನಲೆ? ಆಧ್ಯಾತ್ಮಿಗಳ ಆತ್ಮಬಂಧು ಎನ್ನಲೆ? ಸಹೃದಯ ಸಾಹಿತಿ ಎನ್ನಲೆ? ಬಡವರ ಬಾಗ್ಯದೇವತೆ ಎನ್ನಲೆ? ಬಣ್ಣನೆಗೆ ಮಾತು ಸೋತಾವು! ಇವರಿಗೆ ಸೇವೆಯೇ ಪೂಜೆ, ಪ್ರೀತಿಯೇ ಮಂತ್ರ, ಔದಾರ್ಯವೇ ಪ್ರಸಾದ. ಇವರನ್ನು ಅರ್ಥಮಾಡಿಕೊಂಡು ಬದುಕುತ್ತಿರುವ ಶ್ರೀಮತಿ ಮೀನಾಕ್ಷಮ್ಮ ಪ್ರೀತಿಯಿಂದ ಬಾಳಿಸುತ್ತಿರುವ ಕೊಡಿಗೇಹಳ್ಳಿ ಚಿಕ್ಕಣ್ಣಪುಟ್ಟನರಸಯ್ಯ ಇವರ ದಾಂಪತ್ಯ ಜೀವನ ಸದಾ ನಂದನವಾಗಿರಲಿ ಎಂದು ಹಾರ್ದಿಕವಾಗಿ ಹಾರೈಸುತ್ತೇನೆ.

■ ಡಾ|| ಸಾ.ಶಿ.ಮರುಳಯ್ಯ.